ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

## ಬ್ರಹ್ಮಖಂಡ

## ೧

## ಶ್ರೀ ಸೇತುಮಾಹಾತ್ಮ್ಯ

ಉತ್ತರಭಾಗ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
...ರು ರೋಡು, ಬೆಂಗಳೂರು ಸಿಟಿ
೧೯೪೭

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ಬ್ರಹ್ಮಖಂಡ

## ೧

## ಶ್ರೀಸೇತುಮಾಹಾತ್ಮ್ಯ

### ಉತ್ತರಭಾಗ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ವೋಟೆಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೩

# ಅರಿಕೆ

ಈ ಹನ್ನೊಂದನೆಯ ಸಂಪುಟದಲ್ಲಿ ಶ್ರೀಸ್ಕಾಂದಮಹಾಪುರಾಣದ ತೃತೀಯ ಮೂಲಖಂಡವಾದ ಬ್ರಹ್ಮಖಂಡದ ಮೊದಲನೆಯ ಭಾಗವಾದ ಶ್ರೀಸೇತು ಮಾಹಾತ್ಮ್ಯದ ಉತ್ತರಭಾಗವು ಮುಗಿದಿರುತ್ತದೆ. ಇಲ್ಲಿಗೆ ಶ್ರೀಸೇತು ಮಾಹಾತ್ಮ್ಯವು ಸಂಪೂರ್ಣವಾಯಿತು.

ಬ್ರಹ್ಮಖಂಡದಲ್ಲಿ ಮೂರು ಭಾಗಗಳು: ಶ್ರೀಸೇತು (ರಾಮೇಶ್ವರ) ಮಾಹಾತ್ಮ್ಯ, ಧರ್ಮಾರಣ್ಯಖಂಡ ಮತ್ತು ಬ್ರಹ್ಮೋತ್ತರಖಂಡ. ಶ್ರೀ ಸೇತು (ರಾಮೇಶ್ವರ) ಮಾಹಾತ್ಮ್ಯದಲ್ಲಿ ದಕ್ಷಿಣಭಾರತದ ಸುಪ್ರಸಿದ್ಧ ಯಾತ್ರಾಸ್ಥಳವಾದ ಶ್ರೀ ರಾಮೇಶ್ವರಕ್ಷೇತ್ರ ಮಾಹಾತ್ಮ್ಯವೇ ಅಲ್ಲದೆ, ಧನುಷ್ಕೋಟಿ (ಸೇತು) ಮಾಹಾತ್ಮ್ಯವೂ ಸಮಗ್ರವಾಗಿ ವರ್ಣಿತವಾಗಿರುತ್ತದೆ. ಈ ಮಾಹಾತ್ಮ್ಯದ ಪಠನಪಾರಾಯಣಗಳಿಂದ ಮಾನವರಿಗೆ ಶ್ರೀ ಸೇತು (ರಾಮೇಶ್ವರ) ಯಾತ್ರಾ ಫಲವು ದೊರಕುವುದರಲ್ಲಿ ಸಂಶಯವಿಲ್ಲವೆಂದು ಈ ಗ್ರಂಥದಲ್ಲಿಯೇ ಹೇಳಿದೆ; ಅಲ್ಲದೆ ಈ ಕ್ಷೇತ್ರದ ಯಾತ್ರಾವಿಧಾನವೆಲ್ಲವೂ ಬಹು ಸುಲಭವಾಗಿ ಮನದಟ್ಟಾಗುವುದು.

ಈ ಬ್ರಹ್ಮಖಂಡದ ಅನುವಾದಕಾರ್ಯದಲ್ಲಿ ನನ್ನ ಮಾನ್ಯಮಿತ್ರರಾದ ಸಾಹಿತ್ಯವಿದ್ವಾನ್ ಶ್ರೀ॥ ಕೆ. ನರಸಿಂಹಾಚಾರ್ಯರವರು ಸಹಭಾಗಿಗಳು; ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಿಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



# ವಿಷಯಾನುಕ್ರಮಣಿಕೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಸೇತುಮಾಹಾತ್ಮ್ಯಂ

(ಉತ್ತರಾರ್ಧಃ)

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಮಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥೈಕೋನತ್ರಿಂಶೋಽಧ್ಯಾಯಃ

### ಸರ್ವತೀರ್ಥಪ್ರಶಂಸನಂ

ಶ್ರೀ ಸೂತ ಉವಾಚ :—

ಸ್ನಾತ್ವಾ ಸಾಧ್ಯಾಮೃತೇ ತೀರ್ಥೇ ನೃಪಶಾಪವಿಮೋಕ್ಷಣೇ ।
ಸರ್ವತೀರ್ಥಂ ತತೋ ಗಚ್ಛೇನ್ಮನುಜೋ ನಿಯಮಾನ್ವಿತಃ ॥ ೧ ॥
ಸರ್ವತೀರ್ಥಂ ಮಹಾಪುಣ್ಯಂ ಮಹಾಪಾತಕನಾಶನಂ ।
ಮಹಾಪಾತಕಯುಕ್ತೋ ವಾಽಯುಕ್ತೋ ವಾ ಸರ್ವಪಾತಕೈಃ ॥ ೨ ॥
ಶುದ್ಧ್ಯೇತ ತತ್ಕ್ಷಣಾದೇವ ಸರ್ವತೀರ್ಥನಿಮಜ್ಜನಾತ್ ।
ತಾವತ್ಸರ್ವಾಣಿ ಪಾಪಾನಿ ದೇಹೇ ತಿಷ್ಠಂತಿ ಸುವ್ರತಾಃ ॥ ೩ ॥

---

### ಕನ್ನಡದ ಅನುವಾದ

#### ಸರ್ವತೀರ್ಥಪ್ರಶಂಸನ

೧-೮. ಶ್ರೀಸೂತನು ಹೇಳುತ್ತಾನೆ:—ಪುರೂರವನ ಶಾಪವನ್ನು ಪರಿಹರಿಸಿದ ಸಾಧ್ಯಾಮೃತತೀರ್ಥದಲ್ಲಿ ಮಿಂದ ಬಳಿಕ ಮನುಷ್ಯನು ನಿಯಮದಿಂದ ಅತಿ ಪುಣ್ಯಕರವೂ, ಮಹಾಪಾತಕನಾಶಕವೂ ಆದ ಸರ್ವತೀರ್ಥಕ್ಕೆ ಹೋಗಬೇಕು ನರನು ಮಹಾಪಾತಕದಿಂದ ಸಹಿತನಾಗಿರಲಿ, ಇಲ್ಲದಿರಲಿ ಸರ್ವತೀರ್ಥದಲ್ಲಿ ಮಿಂದಕೂಡಲೆ ಶುದ್ಧನಾಗುವನು. ಈ ತೀರ್ಥದಲ್ಲಿ ಸ್ನಾನಮಾಡುವವರೆಗೆ ನರನ

ನ ಯಾವತ್ಸರ್ವತೀರ್ಥೇಽಸ್ಮಿನ್ನಿಮಜ್ಜೇತ್ಪಾಪಪೂರುಷಃ ।
ಸ್ನಾನಾರ್ಥಂ ಸರ್ವತೀರ್ಥೇಽಸ್ಮಿನ್ ದೃಷ್ಟ್ವಾಯಾಂತಂ ದ್ವಿಜಾ ನರಂ ॥ ೪ ॥
ವೇಪಂತೇ ಸರ್ವಪಾಪಾನಿ ನಾಶೋಽಸ್ಮಾಕಂ ಭವೇದಿತಿ ।
ಗರ್ಭವಾಸಾದಿದುಃಖಾನಿ ತಾವದ್ಯಾತಿ ನರೋ ಭುವಿ ॥ ೫ ॥
ನ ಸ್ನಾಯಾತ್ಸರ್ವತೀರ್ಥೇಽಸ್ಮಿನ್ಯಾವದ್ಬ್ರಾಹ್ಮಣಪುಂಗವಾಃ ।
ಅನುಷ್ಠಿತೈರ್ಮಹಾಯಾಗೈಸ್ತಥಾ ತೀರ್ಥನಿಷೇವಣೈಃ ॥ ೬ ॥
ಗಾಯತ್ರ್ಯಾದಿ ಮಹಾಮಂತ್ರಜಪೈರ್ನಿಯಮಪೂರ್ವಕಂ ।
ಚತುರ್ಣಾಮಪಿ ವೇದಾನಾಮಾವೃತ್ತ್ಯಾ ಶತಸಂಖ್ಯಯಾ ॥ ೭ ॥
ಶಿವವಿಷ್ಣ್ವಾದಿದೇವಾನಾಂ ಪೂಜಯಾ ಭಕ್ತಿಪೂರ್ವಕಂ ।
ಏಕಾದಶ್ಯಾದಿ ತಿಥಿಷು ತಥೈವಾಽನಶನೇನ ಚ ।
ಯತ್ಫಲಂ ಲಭತೇ ಮರ್ತ್ಯಸ್ತಲ್ಲಭೇದತ್ರ ಮಜ್ಜನಾತ್ ॥ ೮ ॥

ಋಷಯ ಊಚುಃ:—

ಸರ್ವತೀರ್ಥಮಿತಿ ಖ್ಯಾತಿಃ ಸೂತಾಽಸ್ಯ ಕಥಮಾಗತಾ ।
ಬ್ರೂಹ್ಯಸ್ಮಾಕಮಿದಂ ಪುಣ್ಯಂ ವಿಸ್ತರಾಚ್ಛೃಣ್ವತಾಂ ಮುನೇ ॥ ೯ ॥

ಶ್ರೀ ಸೂತ ಉವಾಚ:—

ಪುರಾ ಸುಚರಿತೋ ನಾಮ ಮುನಿರ್ನಿಯಮಸಂಯುತಃ ॥ ೧೦ ॥

---

ದೇಹದಲ್ಲಿ ಪಾಪಗಳು ನೆಲೆಸಿರುತ್ತವೆ. ಎಲೈ ಬ್ರಾಹ್ಮಣರೆ! ಸರ್ವತೀರ್ಥದಲ್ಲಿ ಸ್ನಾನಮಾಡುವುದಕ್ಕಾಗಿ ಹೋಗುತ್ತಿರುವ ಮನುಷ್ಯನನ್ನು ನೋಡಿ ಸಕಲ ಪಾಪಗಳೂ ನಮಗೆ ವಿನಾಶಕಾಲವೊದಗಿತೆಂದು ನಡುಗುವುವು. ಈ ತೀರ್ಥದಲ್ಲಿ ಸ್ನಾನಮಾಡುವವರೆಗೆ ಮನುಷ್ಯನನ್ನು ಗರ್ಭವಾಸಾದಿ ದುಃಖಗಳು ಹಿಂಬಾಲಿಸುವುವು. ಸರ್ವತೀರ್ಥದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಮಹಾಯಾಗಗಳ ಅನುಷ್ಠಾನದಿಂದಲೂ, ಇತರ ತೀರ್ಥಗಳ ಸೇವನೆಯಿಂದಲೂ, ನಿಯಮಪೂರ್ವಕವಾಗಿ ಗಾಯತ್ರ್ಯಾದಿ ಮಹಾಮಂತ್ರಗಳನ್ನು ಜಪಿಸುವುದರಿಂದಲೂ, ನಾಲ್ಕು ವೇದಗಳನ್ನು ನೂರುಸಾರಿ ಪಾರಾಯಣಮಾಡುವುದರಿಂದಲೂ, ಭಕ್ತಿಯಿಂದ ಶಿವವಿಷ್ಣ್ವಾದಿ ದೇವತೆಗಳನ್ನು ಪೂಜೆಗೈಯುವುದರಿಂದಲೂ, ಏಕಾದಶಿಯೆ ಮೊದಲಾದ ದಿನಗಳಲ್ಲಿ ಉಪವಾಸ ಮಾಡುವುದರಿಂದಲೂ ಹೊಂದುವ ಪುಣ್ಯವನ್ನು ಪಡೆಯುತ್ತಾನೆ.

೯. ಋಷಿಗಳು ಕೇಳುತ್ತಾರೆ:—ಎಲೈ ಸೂತಮುನಿಯೆ! ಈ ತೀರ್ಥಕ್ಕೆ ಸರ್ವತೀರ್ಥವೆಂದು ಪ್ರಸಿದ್ಧಿಯು ಹೇಗೆ ಬಂದಿತು? ಪುಣ್ಯಕರವಾದ ಈ ವೃತ್ತಾಂತವನ್ನು ಪ್ರಶ್ನಿಸುತ್ತಿರುವ ನಮಗೆ ವಿಸ್ತಾರವಾಗಿ ಹೇಳು.

೧೦–೧೬. ಶ್ರೀಸೂತನು ಹೇಳುತ್ತಾನೆ:—ಹಿಂದೆ ಭೃಗುವಂಶೋತ್ಪನ್ನನೂ

ಭೃಗುವಂಶಸಮುದ್ಭೂತೋ ಜಾತ್ಯಂಧೋ ಜರಯಾತುರಃ ।
ಅಶಕ್ತಸ್ತೀರ್ಥಯಾತ್ರಾಯಾಂ ನೇತ್ರಾಽಭಾವೇನ ಸ ದ್ವಿಜಾಃ ॥ ೧೧ ॥
ಸರ್ವೇಷಾಮೇವ ತೀರ್ಥಾನಾಂ ಸ್ನಾತುಕಾಮೋ ಮಹಾಮುನಿಃ ।
ದಕ್ಷಿಣಾಂಬುನಿಧೌ ಪುಣ್ಯಂ ಗಂಧಮಾದನಪರ್ವತಂ ॥ ೧೨ ॥
ಗತ್ವಾ ಶಂಕರಮುದ್ದಿಶ್ಯ ತಪಸ್ತೇಪೇ ಸುದುಷ್ಕರಂ ।
ತ್ರಿಕಾಲಮರ್ಚಯನ್ಶಂಭುಮುಪವಾಸೀ ಜಿತೇಂದ್ರಿಯಃ ॥ ೧೩ ॥
ತಥಾ ತ್ರಿಷವಣಸ್ನಾನಾತ್ತಥೈವಾಽತಿಥಿಪೂಜಕಃ ।
ಶಿಶಿರೇ ಜಲಮಧ್ಯಸ್ಥೋ ಗ್ರೀಷ್ಮೇ ಪಂಚಾಽಗ್ನಿಮಧ್ಯಗಃ ॥ ೧೪ ॥
ವರ್ಷಾಸ್ವಾಸಾರಸಹನ ಅಬ್ಭಕ್ಷ್ಯೋ ವಾಯುಭೋಜನಃ ।
ಉದ್ಧೂಲನಂ ತ್ರಿಪುಂಡ್ರಂ ಚ ಭಸ್ಮನಾ ಧಾರಯನ್ಸದಾ ॥ ೧೫ ॥
ಜಾಬಾಲೋಪನಿಷದ್ರೀತ್ಯಾ ತಥಾ ರುದ್ರಾಕ್ಷಧಾರಕಃ ।
ಏವಮುಗ್ರಂ ತಪಶ್ಚಕ್ರೇ ದಶಸಂವತ್ಸರಂ ದ್ವಿಜಃ ॥ ೧೬ ॥
ತಪಸಾ ತಸ್ಯ ಸಂತುಷ್ಟಃ ಶಂಕರಶ್ಚಂದ್ರಶೇಖರಃ ।
ಪ್ರಾದುರಾಸೀನ್ಮುನೇಸ್ತಸ್ಯ ದ್ವಿಜಾಃ ಸುಚರಿತಸ್ಯ ವೈ ॥ ೧೭ ॥
ಸಮಾರುಹ್ಯ ಮಹೋಕ್ಷಾಣಂ ಭೂತವೃಂದನಿಷೇವಿತಃ ।
ಗಿರಿಜಾಽರ್ಧವಪುಃ ಶೂಲೀ ಸೂರ್ಯಕೋಟಿಸಮಪ್ರಭಃ ॥ ೧೮ ॥

---

ಮುಪ್ಪಿನಿಂದ ವ್ಯಥೆಗೊಂಡವನೂ, ಅಶಕ್ತನೂ ಆದ ಸುಚರಿತನೆಂಬ ಮುನಿಯಿದ್ದನು. ಅವನು ಕುರುಡನಾದುದರಿಂದ ಸಮಸ್ತ ತೀರ್ಥಗಳಲ್ಲಿಯೂ ಸ್ನಾನಮಾಡಬಯಸಿ ದಕ್ಷಿಣಸಮುದ್ರದಲ್ಲಿರುವ ಗಂಧಮಾದನಗಿರಿಗೆ ತೆರಳಿ ಶಂಕರನನ್ನು ಉದ್ದೇಶಿಸಿ ಅಸಾಧ್ಯವಾದ ತಪಸ್ಸನ್ನು ಆಚರಿಸಿದನು. ಅವನು ಮೂರು ಕಾಲಗಳಲ್ಲಿಯೂ ಶಿವನನ್ನಾರಾಧಿಸುತ್ತ ಉಪವಾಸವನ್ನು ಮಾಡುತ್ತ ಜಿತೇಂದ್ರಿಯನೂ, ಮೂರು ಕಾಲಗಳಲ್ಲಿಯೂ ಸ್ನಾನಮಾಡುವವನೂ, ಅತಿಥಿಗಳನ್ನು ಪೂಜಿಸುವವನೂ, ಶಿಶಿರರ್ತುವಿನಲ್ಲಿ ನೀರಿನಲ್ಲಿ ನಿಂತವನೂ, ಗ್ರೀಷ್ಮರ್ತುವಿನಲ್ಲಿ ಪಂಚಾಗ್ನಿಯ ನಡುವೆ ಇರುವವನೂ, ಮಳೆಗಾಲದಲ್ಲಿ ನೀರಿನ ಧಾರೆಯನ್ನು ಸಹಿಸುವವನೂ, ಗಾಳಿ ನೀರುಗಳು ಮಾತ್ರವೇ ಆಹಾರವಾಗಿರುವವನೂ, ಯಾವಾಗಲೂ ಭಸ್ಮಲಿಪ್ತನೂ, ತ್ರಿಪುಂಡ್ರಧಾರಿಯೂ, ಜಾಬಾಲೋಪನಿಷತ್ತಿನಲ್ಲಿ ಹೇಳಿರುವಂತೆ ರುದ್ರಾಕ್ಷಿಯನ್ನು ಧರಿಸಿದವನೂ ಆಗಿ ಹತ್ತು ವರ್ಷಗಳ ಕಾಲ ಘೋರ ತಪಸ್ಸನ್ನಾಚರಿಸಿದನು.

೧೭–೩೧. ಅವನ ತಪಸ್ಸಿನಿಂದ ಸಂತುಷ್ಟನಾದ ಚಂದ್ರಮೌಳೀಶ್ವರನು ವೃಷಭವನ್ನೇರಿ ಪ್ರಮಥಗಣಗಳಿಂದ ಸೇವಿತನೂ, ತ್ರಿಶೂಲಧಾರಿಯೂ, ಕೋಟಿ ಸೂರ್ಯರಂತೆ ಕಂಗೊಳಿಸುವವನೂ, ತನ್ನ ಕಾಂತಿಯಿಂದಲೇ ದಿಕ್ಕುಗಳ ಕತ್ತಲೆ

ಸ್ವಭಾಸಾ ಭಾಸಯನ್ಸರ್ವಾ ದಿಶೋ ವಿತಿಮಿರಾಸ್ತದಾ ।
ಭಸ್ಮಪಾಂಡುರಸರ್ವಾಂಗೋ ಜಟಾಮಂಡಲಮಂಡಿತಃ ॥ ೧೯ ॥
ಅನಂತಾದಿಮಹಾನಾಗವಿಭೂಷಣವಿಭೂಷಿತಃ ।
ಪ್ರಾದುರ್ಭೂತಸ್ತತಃ ಶಂಭುಃ ಪ್ರಾದಾತ್ತಸ್ಯ ವಿಲೋಚನೇ ॥ ೨೦ ॥
ಆತ್ಮಾವಲೋಕನಾರ್ಥಾಯ ಶಂಕರೋ ಗಿರಿಜಾಪತಿಃ ।
ತತಃ ಸುಚರಿತೋ ವಿಪ್ರಾಃ ಶಂಭುನಾ ದತ್ತದೃಗ್ದ್ವಯಃ ।
ಆಲೋಕ್ಯ ಪರಮೇಶಾನಂ ಪ್ರತುಷ್ಟಾವ ಪ್ರಸನ್ನಧೀಃ ॥ ೨೧ ॥

ಸುಚರಿತ ಉವಾಚ :—

ಜಯ ದೇವ ಮಹೇಶಾನ ಜಯ ಶಂಕರ ಧೂರ್ಜಟೇ ॥ ೨೨ ॥
ಜಯ ಬ್ರಹ್ಮಾದಿಪೂಜ್ಯ ತ್ವಂ ತ್ರಿಪುರಘ್ನ ಯಮಾಂತಕ ।
ಜಯೋಮೇಶ ಮಹಾದೇವ ಕಾಮಾಂತಕ ಜಯಾಮಲ ॥ ೨೩ ॥
ಜಯ ಸಂಸಾರವೈದ್ಯ ತ್ವಂ ಭೂತಪಾಲ ಶಿವಾವ್ಯಯ ।
ತ್ರಿಯಂಬಕ ನಮಸ್ತುಭ್ಯಂ ಭಕ್ತರಕ್ಷಣ ದೀಕ್ಷಿತ ॥ ೨೪ ॥
ವ್ಯೋಮಕೇಶ ನಮಸ್ತುಭ್ಯಂ ಜಯ ಕಾರುಣ್ಯವಿಗ್ರಹ ।
ನೀಲಕಂಠ ನಮಸ್ತುಭ್ಯಂ ಜಯ ಸಂಸಾರಮೋಚಕ ॥ ೨೫ ॥

---

ಯನ್ನು ದೂರಮಾಡಿ ಪ್ರಕಾಶಗೊಳಿಸುವವನೂ, ಭಸ್ಮದಿಂದ ಬೆಳ್ಳಗಾದ ಸಕಲಾವಯವಗಳುಳ್ಳವನೂ, ಜಟೆಗಳಿಂದ ಅಲಂಕರಿಸಲ್ಪಟ್ಟವನೂ, ಅನಂತಾದಿ ಸರ್ಪಗಳ ಭೂಷಣವುಳ್ಳವನೂ ಆಗಿ ಪ್ರತ್ಯಕ್ಷನಾಗಿ ತನ್ನ ದರ್ಶನಕ್ಕಾಗಿ ಆ ಸುಚರಿತಮುನಿಗೆ ಜ್ಞಾನನೇತ್ರವನ್ನಿತ್ತನು. ಆ ಮುನಿಯು ಆಗ ಪರಮೇಶ್ವರನನ್ನು ಕಂಡು ಸಂತೋಷದಿಂದ ಸ್ತುತಿಸಿದನು.

೨೨. "ಮಹೇಶ್ವರನೂ, ಸುಖವನ್ನೀಯುವವನೂ ಆದ ಧೂರ್ಜಟಿಯೆ! ಭಕ್ತಸಂರಕ್ಷಣೆಗಾಗಿ ಜಯಶೀಲನಾಗು.

೨೩. ಬ್ರಹ್ಮಾದಿ ದೇವತೆಗಳಿಂದ ಪೂಜ್ಯನೂ, ತ್ರಿಪುರಸಂಹಾರಕನೂ, ಯಮನನ್ನು ದಂಡಿಸಿದವನೂ, ಪಾರ್ವತೀಪತಿಯೂ, ಮದನಾಂತಕನೂ, ನಿರ್ದೋಷಿಯೂ ಆದ ಓ ಮಹಾದೇವ! ಜಯಿಸು.

೨೪. ಸಂಸಾರರೋಗವನ್ನು ನಿವಾರಿಸುವ ವೈದ್ಯನೂ, ಭೂತಾಧಿಪನೂ, ವಿಕಾರರಹಿತನೂ, ಮುಕ್ಕಣ್ಣನೂ, ಭಕ್ತರಕ್ಷಣೆಯಲ್ಲಿ ದೀಕ್ಷೆಗೊಂಡವನೂ ಆದ ಓ ಶಂಕರ! ನಿನಗೆ ನಮಸ್ಕಾರವು; ಜಯಿಸು.

೨೫. ವ್ಯೋಮಕೇಶನೂ, ದಯಾಳುವೂ, ಸಂಸಾರವನ್ನು ಪರಿಹರಿಸುವವನೂ ಆದ ಓ ನೀಲಕಂಠ! ನಿನಗೆ ನಮಸ್ಕಾರವು; ಜಯಿಸು.

ಮಹೇಶ್ವರ ನಮಸ್ತುಭ್ಯಂ ಪರಮಾನಂದವಿಗ್ರಹ ।
ಗಂಗಾಧರ ನಮಸ್ತುಭ್ಯಂ ವಿಶ್ವೇಶ್ವರ ಮೃಡಾಽವ್ಯಯ ॥ ೨೬ ॥
ನಮಸ್ತುಭ್ಯಂ ಭಗವತೇ ವಾಸುದೇವಾಯ ಶಂಭವೇ ।
ಶರ್ವಾಯೋಗ್ರಾಯ ಗರ್ಭಾಯ ಕೈಲಾಸಪತಯೇ ನಮಃ ॥ ೨೭ ॥
ರಕ್ಷ ಮಾಂ ಕರುಣಾಸಿಂಧೋ ಕೃಪಾದೃಷ್ಟ್ಯಾವಲೋಕನಾತ್ ।
ಮಮ ವೃತ್ತಮನಾಲೋಚ್ಯ ತ್ರಾಹಿ ಮಾಂ ಕೃಪಯಾ ಹರ ॥ ೨೮ ॥
ಶ್ರೀಸೂತ ಉವಾಚ :—
ಇತಿ ಸ್ತುತೋ ಮಹಾದೇವಸ್ತಮೇನಮಿದಮಭ್ಯಧಾತ್ ।
ಮುನಿಂ ಸುಚರಿತಂ ವಿಪ್ರಾ ದಯೋದನ್ವಾನುಮಾಪತಿಃ ॥ ೨೯ ॥
ಮಹಾದೇವ ಉವಾಚ :—
ಮುನೇ ಸುಚರಿತಾಽದ್ಯ ತ್ವಂ ವರಂ ವರಯ ಕಾಂಕ್ಷಿತಂ ।
ವರಂ ದಾತುಂ ತವಾಯಾತಃ ಪುಣ್ಯೇಽಸ್ಮಿನ್ನಾಶ್ರಮೇ ಶುಭೇ ।
ಇತೀರಿತೋ ಮುನಿಃ ಪ್ರಾಹ ಮಹಾದೇವಂ ದಯಾನಿಧಿಂ ॥ ೩೦ ॥
ಸುಚರಿತ ಉವಾಚ :—
ಭಗವಂಸ್ತ್ವಂ ಪ್ರಸನ್ನೋ ಮೇ ಯದಿ ಸ್ಯಾಶ್ಚಂದ್ರಶೇಖರ ॥ ೩೧ ॥

---

೨೬. ಪರಮಾನಂದಸ್ವರೂಪನೂ, ಗಂಗೆಯನ್ನು ಹೊತ್ತವನೂ, ನಿತ್ಯನೂ ಆದ ಎಲೈ ಮಹೇಶ್ವರನೆ! ನಿನಗೆ ನಮಸ್ಕಾರವು.

೨೭. ಸರ್ವವ್ಯಾಪಿಯೂ, ಸುಖವನ್ನೀಯುವವನೂ, ಕೈಲಾಸಾಧಿಪತಿಯೂ ಆದ ಓ ಶರ್ವ! ನಿನಗೆ ನಮಸ್ಕಾರವು.

೨೮. ದಯಾಸಾಗರನಾದ ಎಲೈ ಶಂಕರನೆ! ಕೃಪಾದೃಷ್ಟಿಯಿಂದೀಕ್ಷಿಸಿ ನನ್ನನ್ನು ಕಾಪಾಡು. ನನ್ನ ಹಿಂದಿನ ನಡತೆಯನ್ನು ಆಲೋಚಿಸದೆ ಕೃಪೆಯಿಂದ ನನ್ನನ್ನು ಪಾಲಿಸು.''

೨೯. ಶ್ರೀಸೂತನು ಹೇಳುತ್ತಾನೆ:—ಹೀಗೆ ಸ್ತುತಿಸಲು ದಯಾಸಮುದ್ರನಾದ ಉಮಾಕಾಂತನು ಆ ಸುಚರಿತಮುನಿಯನ್ನು ಕುರಿತು ಇಂತೆಂದನು :

೩೦. ಮಹಾದೇವನು ಹೇಳುತ್ತಾನೆ:— “ಎಲೈ ಸುಚರಿತಮುನಿಯೆ! ಈಗ ನಾನು ನಿನಗೆ ವರವನ್ನನುಗ್ರಹಿಸಲೋಸುಗ ಈ ಪುಣ್ಯಾಶ್ರಮಕ್ಕೆ ಬಂದಿರುವೆನು. ನಿನಗಭೀಪ್ಸಿತವಾದ ವರವನ್ನು ಕೇಳಿಕೊ'' ಎಂದು ಹೇಳಲು, ಆ ಮುನಿಯು ದಯಾಳುವಾದ ಮಹಾದೇವನನ್ನು ಕುರಿತು ಹೀಗೆಂದನು :

೩೧–೩೨. ಸುಚರಿತನು ಕೇಳುತ್ತಾನೆ:—“ಚಂದ್ರಮೌಳೀಶ್ವರ! ಪೂಜ್ಯನಾದ ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ ನನಗಿಷ್ಟವಾದ ವರವನ್ನು ನಿನ್ನನ್ನು ಕೇಳಿ

ತರ್ಹಿ ತ್ವಾಂ ಪ್ರವೃಣೋಮ್ಯದ್ಯ ವರಂ ಮದಭಿಕಾಂಕ್ಷಿತಂ ।
ಜರಾಪಲಿತ ದೇಹೋಽಹಂ ಕುತ್ರಚಿದ್ಗಂತುಮಕ್ಷಮಃ ॥ ೩೨ ॥
ಸರ್ವತೀರ್ಥೇಷು ಚ ಸ್ನಾತುಮಾಕಾಂಕ್ಷಾ ಮಮ ವಿದ್ಯತೇ ।
ತಸ್ಮಾತ್ಸರ್ವೇಷು ತೀರ್ಥೇಷು ಸ್ನಾನೇನ ಮನುಜೋ ಹಿ ಯತ್ ।
ಫಲಂ ಪ್ರಾಪ್ನೋತಿ ಮೇ ಬ್ರೂಹಿ ತತ್ಫಲಾಽವಾಪ್ತಿಸಾಧನಂ ॥ ೩೩ ॥

ಮಹಾದೇವ ಉವಾಚ:—

ಅಹಮಾವಾಹಯಿಷ್ಯಾಮಿ ತೀರ್ಥಾನ್ಯತ್ರೈವ ಕೃತ್ಸ್ನಶಃ ॥ ೩೪ ॥
ರಾಮಸ್ಯ ಸೇತುನಾ ಪೂತೇ ನಗೇಽಸ್ಮಿನ್ಗಂಧಮಾದನೇ ।
ಇತ್ಯುಕ್ತ್ವಾ ಸ ಮಹಾದೇವಃ ಪರ್ವತೇ ಗಂಧಮಾದನೇ ॥ ೩೫ ॥
ತೀರ್ಥಾನ್ಯಾವಾಹಯಾಮಾಸ ಮುನಿಪ್ರೀತ್ಯರ್ಥಮುತ್ತಮಃ ।
ತತಃ ಸುಚರಿತಂ ಪ್ರಾಹ ಶಂಕರಃ ಕರುಣಾ ನಿಧಿಃ ॥ ೩೬ ॥
ಮುನೇ ಸುಚರಿತೇದಂ ತು ಮಹಾಪಾತಕನಾಶನಂ ।
ಸಾನ್ನಿಧ್ಯಾತ್ಸರ್ವತೀರ್ಥಾನಾಂ ಸರ್ವತೀರ್ಥಾಽಭಿಧಂ ಸ್ಮೃತಂ ॥ ೩೭ ॥
ಮಯಾಽತ್ರ ಸರ್ವತೀರ್ಥಾನಾಂ ಮನಸಾಕರ್ಷಣಾದಿಕಂ ।
ಮಾನಸಂ ತೀರ್ಥಮಿತ್ಯಾಖ್ಯಾಂ ಲಪ್ಸ್ಯತೇ ಭುಕ್ತಿಮುಕ್ತಿದಂ ॥ ೩೮ ॥

---

ಕೊಳ್ಳುವೆನು. ಮುಪ್ಪಿನಿಂದ ನರೆತ ದೇಹವುಳ್ಳ ನಾನು ಎಲ್ಲಿಗೂ ಹೋಗಲಸಮರ್ಥನಾಗಿರುವೆನು.

೩೩. ನಾನು ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡಬಯಸುವೆನು. ಆದುದರಿಂದ ಮನುಷ್ಯನು ಸಕಲ ತೀರ್ಥಗಳಲ್ಲಿ ಮಿಂದುದರಿಂದುಂಟಾಗುವ ಫಲವನ್ನು ಪಡೆಯಲು ಸಾಧನವಾವುದೆಂಬುದನ್ನು ನನಗೆ ಹೇಳು.''

೩೪–೩೬. ಮಹಾದೇವನು ಹೇಳುತ್ತಾನೆ:—'' ನಾನು ರಾಮಸೇತುವೆಯಿಂದ ಪರಿಶುದ್ಧವಾದ ಈ ಗಂಧಮಾದನಪರ್ವತದಲ್ಲಿ ಸಕಲ ತೀರ್ಥಗಳನ್ನು ಆವಾಹನೆ ಮಾಡುವೆನು.'' ಹೀಗೆಂದು ಆ ಮಹಾದೇವನು ಆ ಮುನಿಯ ಪ್ರೀತಿಗಾಗಿ ಗಂಧಮಾದನಪರ್ವತದಲ್ಲಿ ಸಮಸ್ತತೀರ್ಥಗಳನ್ನೂ ಆವಾಹನೆ ಮಾಡಿದನು. ಅನಂತರ ಅವನು ಸುಚರಿತನನ್ನು ಕುರಿತು ಹೀಗೆಂದನು.

೩೭. ''ಎಲೈ ಸುಚರಿತನೇ! ಮಹಾಪಾತಕಗಳನ್ನು ಪರಿಹರಿಸುವ ಈ ತೀರ್ಥವು ಸಮಸ್ತ ತೀರ್ಥಗಳ ಸನ್ನಿಧಾನದಿಂದ ಸರ್ವತೀರ್ಥವೆಂದು ಹೆಸರು ಪಡೆದಿದೆ.

೩೮. ನಾನು ಇಲ್ಲಿ ಸಕಲ ತೀರ್ಥಗಳನ್ನೂ ಮನಸ್ಸಿನಿಂದ ಆಕರ್ಷಿಸಿದ ಕಾರಣ ಇದು ಭುಕ್ತಿಮುಕ್ತಿಯನ್ನೀಯುವ ಮಾನಸತೀರ್ಥವೆಂಬ ಹೆಸರನ್ನು ಪಡೆಯುವುದು.

ಅತಃ ಸುಚರಿತಾಽತ್ರ ತ್ವಂ ಸ್ನಾಹಿ ಸದ್ಯೋ ವಿಮುಕ್ತಯೇ ।
ಮಹಾಪಾತಕಸಂಘಾನಾಂ ದೇವಾಽನಲಸಮುದ್ಯತೌ ॥ ೩೯ ॥
ಕಾಮ ಮೋಹ ಭಯ ಕ್ರೋಧ ಲೋಭ ರೋಗಾದಿ ನಾಶನೇ ।
ವಿನಾ ವೇದಾಂತವಿಜ್ಞಾನಂ ಸದ್ಯೋ ನಿರ್ವಾಣಕಾರಣೇ ॥ ೪೦ ॥
ಜನ್ಮಮೃತ್ಯ್ವಾದಿನಕ್ರೌಘ ಸಂಸಾರಾಽರ್ಣವ ತಾರಣೇ ।
ಕುಂಭೀಪಾಕಾದಿ ಸಕಲ ನರಕಾಽಗ್ನಿವಿನಾಶನೇ ॥ ೪೧ ॥
ಇತೀರಿತಃ ಸುಚರಿತಃ ಶಂಭುನಾ ಮದನಾಽರಿಣಾ ।
ಸಸ್ನೌ ವಿಪ್ರಾಃ ಸರ್ವತೀರ್ಥೇ ಮಹಾದೇವಸ್ಯ ಸನ್ನಿಧೌ ॥ ೪೨ ॥
ಸ್ನಾತ್ವೋತ್ಥಿತಃ ಸುಚರಿತೋ ದದೃಶೇಽಖಿಲಮಾನವೈಃ ।
ಜರಾಪಲಿತ ನಿರ್ಮುಕ್ತಸ್ತರುಣೋಽತೀವ ಸುಂದರಃ ॥ ೪೩ ॥
ದೃಷ್ಟ್ವಾ ಸ್ವದೇಹಸೌಂದರ್ಯಂ ತತಃ ಸುಚರಿತೋ ಮುನಿಃ ।
ಶ್ಲಾಘಯಾಮಾಸ ತತ್ತೀರ್ಥಂ ಬಹುಧಾಽನ್ಯೇ ಚ ತಾಪಸಾಃ ॥ ೪೪ ॥
ಮಹಾದೇವಃ ಸುಚರಿತಂ ಬಭಾಷೇ ತದನಂತರಂ ।
ಅಸ್ಯ ತೀರ್ಥಸ್ಯ ತೀರೇ ತ್ವಂ ವಸನ್ಸುಚರಿತ ದ್ವಿಜ ॥ ೪೫ ॥
ಸ್ನಾನಂ ಕುರುಷ್ವ ಸತತಂ ಸ್ಮರನ್ಮಾಂ ಮುಕ್ತಿದಾಯಕಂ ।
ದೇಶಾಂತರೀಯತೀರ್ಥೇಷು ಮಾ ವ್ರಜ ಬ್ರಾಹ್ಮಣೋತ್ತಮ ॥ ೪೬ ॥

---

೩೯–೪೧. ಓ ಸುಚರಿತ! ಆದುದರಿಂದ ನೀನು ಮಹಾಪಾತಕಗಳ ಸಮೂಹಕ್ಕೆ ಕಾಳ್ಕಿಚ್ಚಿನಂತಿರುವುದೂ, ಕಾಮ, ಮೋಹ, ಭಯ, ಕೋಪ, ಲೋಭ, ರೋಗ ಮೊದಲಾದುವುಗಳನ್ನು ಪರಿಹರಿಸುವುದೂ, ವೇದಾಂತಜ್ಞಾನ ವಿಲ್ಲದಿದ್ದರೂ ಕೂಡಲೆ ಮೋಕ್ಷವನ್ನೀಯುವುದೂ, ಹುಟ್ಟು ಸಾವುಗಳೆಂಬ ಮೊಸಳೆಗಳುಳ್ಳ ಸಂಸಾರಸಾಗರವನ್ನು ದಾಟಿಸುವುದೂ, ಕುಂಭೀಪಾಕ ಮೊದ ಲಾದ ನರಕಾಗ್ನಿಗಳನ್ನು ಅಡಗಿಸುವುದೂ ಆಗಿರುವ ಈ ತೀರ್ಥದಲ್ಲಿ ಕೂಡಲೆ ಮೋಕ್ಷವನ್ನು ಪಡೆಯುವುದಕ್ಕಾಗಿ ಸ್ನಾನಮಾಡು."

೪೨. ಎಲೈ ವಿಪ್ರರೆ! ಮದನಾಂತಕನಾದ ಶಂಭುವು ಹೀಗೆನ್ನಲು ಸುಚರಿತನು ಆ ಮಹಾದೇವನ ಮುಂದೆಯೆ ಸರ್ವತೀರ್ಥದಲ್ಲಿ ಮಿಂದನು.

೪೩. ಮಿಂದು ಮೇಲಕ್ಕೆದ್ದಕೂಡಲೆ ಸಮಸ್ತ ಜನರೂ, ಮುಪ್ಪಿಲ್ಲದೆ ಅತಿ ಸುಂದರ ತರುಣನಾದ ಆ ಸುಚರಿತನನ್ನು ಕಂಡರು.

೪೪–೪೬. ತರುವಾಯ ಆ ಸುಚರಿತಮುನಿಯು ತನ್ನ ದೇಹದ ಸೌಂದರ್ಯ ವನ್ನು ಕಂಡು ಆ ತೀರ್ಥವನ್ನು ಬಾಯಾರ ಹೊಗಳಿದನು. ಇತರ ಮುನಿಗಳೂ ಶ್ಲಾಘಿಸಿದರು. ಬಳಿಕ ಮಹಾದೇವನು ಆತನನ್ನು ಕುರಿತು ಇಂತೆಂದನು: "ಸುಚರಿತಾ! ನೀನು ಈ ತೀರ್ಥದ ದಡದಲ್ಲಿಯೆ ವಾಸಮಾಡುತ್ತ ಯಾವಾಗಲೂ

ಅಸ್ಯ ತೀರ್ಥಸ್ಯ ಮಾಹಾತ್ಮ್ಯಾನ್ಮಾಮಂತೇ ಪ್ರಾಪ್ಸ್ಯಸಿ ಧ್ರುವಂ ।
ಅನ್ಯೇಽಪಿ ಯೇತ್ರ ಸ್ನಾಸ್ಯಂತಿ ತೇಽಪಿ ಮಾಂ ಪ್ರಾಪ್ನುಯುರ್ದ್ವಿಜ ॥ ೪೭ ॥
ಇತ್ಯುಕ್ತ್ವಾ ಭಗವಾನೀಶಸ್ತತ್ರೈವಾಂತರಧೀಯತ ।
ತಸ್ಮಿನ್ನಂತರ್ಹಿತೇ ರುದ್ರೇ ತತಃ ಸುಚರಿತೋ ಮುನಿಃ ॥ ೪೮ ॥
ಅನೇಕ ಕಾಲಂ ನಿವಸನ್ಸರ್ವತೀರ್ಥಸ್ಯ ತೀರತಃ ।
ಸ್ನಾನಂ ಸಮಾಚರಂಸ್ತೀರ್ಥೇ ಮಾನಸೇ ನಿಯಮಾನ್ವಿತಃ ॥ ೪೯ ॥
ದೇಹಾಂತೇ ಶಂಕರಂ ಪ್ರಾಪ ಸರ್ವಬಂಧವಿಮೋಚಿತಃ ।
ಸಾಯುಜ್ಯಂ ಚಾಽಪಿ ಸಂಪ್ರಾಪ ಸರ್ವತೀರ್ಥಸ್ಯ ವೈಭವಾತ್ ॥ ೫೦ ॥
ಏವಂ ವಃ ಕಥಿತಂ ವಿಪ್ರಾಃ ಸರ್ವತೀರ್ಥಸ್ಯ ವೈಭವಂ ।
ಏತತ್ಪಠನ್ವಾ ಶೃಣ್ವನ್ವಾ ಮುಚ್ಯತೇ ಸರ್ವಪಾತಕೈಃ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಸರ್ವತೀರ್ಥಪ್ರಶಂಸನಂ" ನಾಮ್ನೈಕೋನತ್ರಿಂಶೋಽಧ್ಯಾಯಃ

---

ಮೋಕ್ಷಪ್ರದಾಯಕನಾದ ನನ್ನನ್ನು ಸ್ಮರಿಸುತ್ತ ಸ್ನಾನಮಾಡು. ಇತರ ದೇಶಗಳ ತೀರ್ಥಗಳಿಗೆ ಹೋಗಬೇಡ.

೪೭. ಎಲೈ ಬ್ರಾಹ್ಮಣನೆ! ಈ ತೀರ್ಥದ ಮಾಹಾತ್ಮ್ಯದಿಂದ ನೀನು ದೇಹಾವಸಾನದಲ್ಲಿ ನನ್ನನ್ನು ಸೇರುವೆ. ಇಲ್ಲಿ ಮಿಂದ ಇತರರೂ ನನ್ನನ್ನು ಸೇರುವರು."

೪೮–೫೦. ಪೂಜ್ಯನಾದ ಮಹೇಶ್ವರನು ಹೀಗೆಂದು ಹೇಳಿ ಅಲ್ಲಿಯೇ ಮಾಯವಾದನು. ಆ ಶಿವನು ಅಂತರ್ಧಾನವಾಗಲು ಸುಚರಿತಮುನಿಯು ಸರ್ವತೀರ್ಥದ ದಡದಲ್ಲಿಯೆ ಬಹುಕಾಲ ವಾಸಿಸುತ್ತಲೂ, ನಿಯಮದಿಂದ ಸ್ನಾನಮಾಡುತ್ತಲೂ ಸಕಲಬಂಧಮುಕ್ತನಾಗಿ ದೇಹಾವಸಾನದಲ್ಲಿ ಸರ್ವತೀರ್ಥದ ವೈಭವದಿಂದ ಶಂಕರನ ಸಾಯುಜ್ಯವನ್ನು ಪಡೆದನು.

೫೧. ಎಲೈ ಬ್ರಾಹ್ಮಣರೆ! ಹೀಗೆ ನಿಮಗೆ ಸರ್ವತೀರ್ಥದ ವೈಭವವನ್ನು ಹೇಳಿರುವೆನು. ಇದನ್ನು ಪಠಿಸುವವನು ಅಥವಾ ಕೇಳುವವನು ಸಮಸ್ತ ಪಾತಕಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಸರ್ವತೀರ್ಥಪ್ರಶಂಸನ"ವೆಂಬ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಂಶೋಽಧ್ಯಾಯಃ

## ಧನುಷ್ಕೋಟಿವೈಭವಕಥನವರ್ಣನಂ

ಶ್ರೀ ಸೂತ ಉವಾಚ :—

ವಿಹಿತಾಭಿಷವೋ ಮರ್ತ್ಯಃ ಸರ್ವತೀರ್ಥೇಽತಿಪಾವನೇ ।
ಬ್ರಹ್ಮಹತ್ಯಾದಿ ಪಾಪಘ್ನೀಂ ಧನುಷ್ಕೋಟಿಂ ತತೋ ವ್ರಜೇತ್ ॥ ೧ ॥
ಯಸ್ಯಾಃ ಸ್ಮರಣಮಾತ್ರೇಣ ಮುಕ್ತಸ್ಸ್ಯಾನ್ಮಾನವೋ ಭುವಿ ।
ಧನುಷ್ಕೋಟಿಂ ಪ್ರಪಶ್ಯಂತಿ ಸ್ನಾಂತಿ ವಾ ಕಥಯಂತಿ ಯೇ ॥ ೨ ॥
ಅಷ್ಟಾವಿಂಶತಿಭೇದಾಂಸ್ತೇ ನರಕಾನ್ನೋಪಭುಂಜತೇ ।
ತಾಮಿಸ್ರಮಂಧತಾಮಿಸ್ರಂ ಮಹಾರೌರವರೌರವೌ ॥ ೩ ॥
ಕುಂಭೀಪಾಕಂ ಕಾಲಸೂತ್ರಮಸಿಪತ್ರವನಂ ತಥಾ ।
ಕೃಮಿ ಭಕ್ಷೋಽಂಧಕೂಪಶ್ಚ ಸಂದಂಶಂ ಶಾಲ್ಮಲೀ ತಥಾ ॥ ೪ ॥
ಸೂರ್ಮಿರ್ವೈತರಣೀ ಪ್ರಾಣರೋಧೋ ವಿಶಸನಂ ತಥಾ ।
ಲಾಲಾಭಕ್ಷೋಽಪ್ಯವೀಚಿಶ್ಚ ಸಾರಮೇಯಾದನಂ ತಥಾ ॥ ೫ ॥
ತಥೈವ ವಜ್ರಕಣಕಂ ಕ್ಷಾರಕರ್ದಮಪಾತನಂ ।
ರಕ್ಷೋಗಣಾಶನಂಚಾಪಿ ಶೂಲಪ್ರೋತಂ ವಿಶೋದನಂ ॥ ೬ ॥
ದಂದಶೂಕಾಶನಂ ಚಾಪಿ ಪರ್ಯಾವರ್ತನಸಂಜ್ಞಿತಂ ।
ಶಿರೋಧಾನಾಭಿಧಂ ವಿಪ್ರಾಸ್ತಥಾ ಸೂಚೀಮುಖಾಭಿಧಂ ॥ ೭ ॥

---

## ಕನ್ನಡದ ಅನುವಾದ

### ಧನುಷ್ಕೋಟಿವೈಭವಕಥನವರ್ಣನ

೧. ಶ್ರೀಸೂತನು ಹೇಳುತ್ತಾನೆ:—ಮನುಷ್ಯನು ಅತ್ಯಂತ ಪರಿಶುದ್ಧವಾದ ಸರ್ವತೀರ್ಥದಲ್ಲಿ ಮಿಂದು ಅನಂತರ ಬ್ರಹ್ಮಹತ್ಯಾದಿ ಪಾಪಗಳನ್ನು ಪರಿಹರಿಸುವ ಧನುಷ್ಕೋಟಿಗೆ ಹೋಗಬೇಕು.

೨–೧೦. ಧನುಷ್ಕೋಟಿಯ ಸ್ಮರಣೆಯಿಂದಲೆ ಮಾನವನು ಮುಕ್ತನಾಗುವನು. ಧನುಷ್ಕೋಟಿಯನ್ನು ದರ್ಶನಮಾಡಿದವರೂ, ಅದರಲ್ಲಿ ಮಿಂದವರೂ, ಅದನ್ನು ವರ್ಣಿಸಿದವರೂ, ತಾಮಿಸ್ರ, ಅಂಧತಾಮಿಸ್ರ, ಮಹಾರೌರವ, ರೌರವ, ಕುಂಭೀಪಾಕ, ಕಾಲಸೂತ್ರ, ಅಸಿಪತ್ರವನ, ಕೃಮಿಭಕ್ಷ, ಅಂಧಕೂಪ, ಸಂದಂಶ, ಶಾಲ್ಮಲಿ, ಸೂರ್ಮಿರ್ವೈತರಣೀ, ಪ್ರಾಣರೋಧ, ವಿಶಸನ, ಲಾಲಾಭಕ್ಷ, ಅವೀಚಿ, ಸಾರಮೇಯಾದನ, ವಜ್ರಕಣಕ, ಕ್ಷಾರಕರ್ದಮಪಾತನ, ರಕ್ಷೋಗಣಾಶನ, ಶೂಲಪ್ರೋತ, ವಿಶೋದನ, ಪರ್ಯಾವರ್ತನ,

ಪೂಯಶೋಣಿತಭಕ್ಷ್ಯಂ ಚ ವಿಷಾಽಗ್ನಿಪರಿಪೀಡನಂ ।
ಅಷ್ಟಾವಿಂಶತಿ ಸಂಖ್ಯಾಕಮೇವಂ ನರಕಸಂಚಯಂ ॥ ೮ ॥
ನ ಯಾತಿ ಮನುಜೋ ವಿಪ್ರಾ ಧನುಷ್ಕೋಟೌ ನಿಮಜ್ಜನಾತ್ ।
ವಿತ್ತಾಪತ್ಯಕಲತ್ರಾಣಾಂ ಯೋಽನ್ಯೇಷಾಮುಪಹಾರಕಃ ॥ ೯ ॥
ಸ ಕಾಲಪಾಶನಿರ್ಬದ್ಧೋ ಯಮದೂತೈರ್ಭಯಾನಕೈಃ ।
ತಾಮಿಸ್ರನರಕೇ ಘೋರೇ ಪಾತ್ಯತೇ ಬಹುವತ್ಸರಂ ॥ ೧೦ ॥
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ।
ಯೋ ನಿಹತ್ಯತು ಭರ್ತಾರಂ ಭುಂಕ್ತೇ ತಸ್ಯ ಧನಾದಿಕಾನ್ ॥ ೧೧ ॥
ಪಾತ್ಯತೇ ಸೋಽಂಧತಾಮಿಸ್ರೇ ಮಹಾದುಃಖಸಮಾಕುಲೇ ।
ಸ್ನಾತಿ ಚೇದ್ಧನುಷಃ ಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ॥ ೧೨ ॥
ಭೂತ ದ್ರೋಹೇಣ ಯೋ ಮರ್ತ್ಯಃ ಪುಷ್ಣಾತಿ ಸ್ವಕುಟುಂಬಕಂ ।
ಸ ತಾನಿಹ ವಿಹಾಯಾಶು ರೌರವೇ ಪಾತ್ಯತೇ ಧ್ರುವಂ ॥ ೧೩ ॥
ವಿಷೋಲ್ಬಣಮಹಾಸರ್ಪಸಂಕುಲೇ ಯಮಪೂರುಷೈಃ ।
ಸ್ನಾತಿ ಚೇದ್ಧನುಷಃ ಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ॥ ೧೪ ॥

---

ತಿರೋಧಾನ, ಸೂಚೀಮುಖ, ಪೂಯಶೋಣಿತಭಕ್ಷ, ವಿಷಾಗ್ನಿಪರಿಪೀಡನ ಎಂಬ ಈ ಇಪ್ಪತ್ತೆಂಟು ನರಕಗಳಿಗೆ ಹೋಗುವುದಿಲ್ಲ. ಇತರರ ದ್ರವ್ಯ, ಮಕ್ಕಳು, ಹೆಂಡರು ಇವರನ್ನು ಅಪಹರಿಸಿದ ಮಾನವನನ್ನು ಭಯಂಕರರಾದ ಯಮ ದೂತರು ಕಾಲಪಾಶದಿಂದ ಬಿಗಿದು ಬಹಳ ವರ್ಷಗಳ ಕಾಲ ಭಯಂಕರವಾದ ತಾಮಿಸ್ರವೆಂಬ ನರಕದಲ್ಲಿ ಕೆಡಹುವರು.

೧೧–೧೨. ಧನುಷ್ಕೋಟಿಯಲ್ಲಿ ಮಿಂದರೆ ಯಮದೂತರು ಅವನನ್ನು ತಾಮಿಸ್ರನರಕದಲ್ಲಿ ಕೆಡಹುವುದಿಲ್ಲ. ತನ್ನ ಸ್ವಾಮಿಯನ್ನು ಕೊಂದು ಅವನ ದ್ರವ್ಯವೇ ಮೊದಲಾದುವುಗಳನ್ನು ಅನುಭವಿಸುವವನನ್ನು ಅತ್ಯಂತ ದುಃಖದಿಂದ ವ್ಯಾಪ್ತವಾದ ಅಂಧತಾಮಿಸ್ರನರಕದಲ್ಲಿ ಕೆಡಹುವರು. ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಕೆಡಹುವುದಿಲ್ಲ.

೧೩–೧೪. ಪ್ರಾಣಿಗಳಿಗೆ ದ್ರೋಹವನ್ನೆಸಗಿ ತನ್ನ ಕುಟುಂಬವನ್ನು ಪೋಷಿಸುವವನನ್ನು ಯಮದೂತರು ಆ ಕುಟುಂಬದಿಂದ ಬಿಡಿಸಿ ವಿಷದಿಂದ ಕ್ರೂರವಾದ ಘಟಸರ್ಪಗಳು ತುಂಬಿರುವ ರೌರವನರಕದಲ್ಲಿ ಹಾಕುವರು. ಅವನು ಈ ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಕೆಡಹು ವುದಿಲ್ಲ.

ಯಃ ಸ್ವದೇಹಂಭರೋ ಮರ್ತ್ಯೋ ಭಾರ್ಯಾಪುತ್ರಾದಿಕಂ ವಿನಾ ।
ಸ ಮಹಾರೌರವೇ ಘೋರೇ ಪಾತ್ಯತೇ ನಿಜಮಾಂಸಭುಕ್ ॥ ೧೫ ॥
ಸ್ನಾತಿ ಚೇದ್ಧನುಷಃ ಕೋಟೌ ತಸ್ಮಿನ್ನಾಸೌ ನಿಪಾತ್ಯತೇ ।
ಯಃ ಪಶೂನ್ಪಕ್ಷಿಣೋ ವಾಽಪಿ ಸಪ್ರಾಣಾನ್ನಿರುಣದ್ಧಿ ವೈ ॥ ೧೬ ॥
ಕೃಪಾಲೇಶವಿಹೀನಂ ತಂ ಕ್ರವ್ಯಾದೈರಪಿ ನಿಂದಿತಂ ।
ಕುಂಭೀಪಾಕೇ ತಪ್ತತೈಲೇ ಪಾತಯಂತಿ ಯಮಾನುಗಾಃ ॥ ೧೭ ॥
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಸೌ ನಿಪಾತ್ಯತೇ ।
ಮಾತರಂ ಪಿತರಂ ವಿಪ್ರಾನ್ಯೋ ದ್ವೇಷ್ಟಿ ಪುರುಷಾಧಮಃ ॥ ೧೮ ॥
ಸ ಕಾಲಸೂತ್ರನರಕೇ ವಿಸ್ತೃತಾಯುತಯೋಜನೇ ।
ಅಧಸ್ತಾದಗ್ನಿಸಂತಪ್ತ ಉಪರ್ಯರ್ಕಮರೀಚಿಭಿಃ ॥ ೧೯ ॥
ಖಲೇ ತಾಮ್ರಮಯೇ ವಿಪ್ರಾಃ ಪಾತ್ಯತೇ ಕ್ಷುಧಯಾರ್ದಿತಃ ।
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಸೌ ನಿಪಾತ್ಯತೇ ॥ ೨೦ ॥
ಯೋ ವೇದಮಾರ್ಗಮುಲ್ಲಂಘ್ಯ ವರ್ತತೇ ಕುಪಥೇ ನರಃ ।
ಸೋಽಸಿಪತ್ರವನೇ ಘೋರೇ ಪಾತ್ಯತೇ ಯಮಕಿಂಕರೈಃ ॥ ೨೧ ॥
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಸೌ ನಿಪಾತ್ಯತೇ ।
ಯೋ ರಾಜಾ ರಾಜಭೃತ್ಯೋ ವಾ ಹ್ಯದಂಡ್ಯೇ ದಂಡಮಾಚರೇತ್ ॥ ೨೨ ॥

---

೧೫–೨೦. ಪತ್ನೀಪುತ್ರರನ್ನು ತ್ಯಜಿಸಿ ತನ್ನ ದೇಹವನ್ನು ಮಾತ್ರ ಪೋಷಿಸಿಕೊಳ್ಳುವವನನ್ನು ತನ್ನ ಮಾಂಸವನ್ನೇ ತಿನ್ನಬೇಕಾಗಿರುವ ಘೋರವಾದ ಮಹಾರೌರವನರಕದಲ್ಲಿ ಕೆಡಹುವರು. ಅವನು ಈ ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಕೆಡಹುವುದಿಲ್ಲ. ಜೀವಸಹಿತವಾದ ಪಶುಗಳನ್ನಾಗಲಿ, ಪಕ್ಷಿಗಳನ್ನಾಗಲಿ ಬಂಧಿಸಿದ ದಯಾಹೀನನಾಗಿ ರಾಕ್ಷಸರಿಂದಲೂ ನಿಂದಿಸಲ್ಪಟ್ಟ ನರನನ್ನು ಯಮದೂತರು ಕಾದ ಎಣ್ಣೆಯುಳ್ಳ ಕುಂಭೀಪಾಕನರಕದಲ್ಲಿ ಕೆಡಹುವರು. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಕೆಡಹುವುದಿಲ್ಲ. ತಾಯಿಯನ್ನೂ, ತಂದೆಯನ್ನೂ, ಬ್ರಾಹ್ಮಣರನ್ನೂ ದ್ವೇಷಮಾಡಿದ ಪುರುಷಾಧಮನನ್ನು ಹತ್ತುಸಾವಿರಯೋಜನ ವಿಸ್ತಾರವಾಗಿಯೂ, ಕೆಳಗೆ ಬೆಂಕಿಯಿಂದ ಕಾದಿರುವುದೂ, ಮೇಲೆ ಸೂರ್ಯಕಿರಣಗಳಿಂದ ತಪ್ತವಾದುದೂ, ತಾಮ್ರಮಯವಾದ ಅಂಗಣವುಳ್ಳುದೂ ಆದ ಕಾಲಸೂತ್ರವೆಂಬ ನರಕದಲ್ಲಿ ಹಸಿವಿನಿಂದ ದುಃಖಗೊಳಿಸಿ ಕೆಡಹುವರು. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಕೆಡಹುವುದಿಲ್ಲ.

೨೧–೨೬. ವೇದಮಾರ್ಗವನ್ನುಲ್ಲಂಘಿಸಿ ದುರ್ಮಾರ್ಗದಲ್ಲಿ ನಡೆಯುವವನನ್ನು ಯಮದೂತರು ಘೋರವಾದ ಅಸಿಪತ್ರವನವೆಂಬ ನರಕದಲ್ಲಿ ಕೆಡಹು

ಶರೀರದಂಡಂ ವಿಪ್ರೇ ವಾ ಸಶೂಕರಮುಖೇ ದ್ವಿಜಾಃ ।
ಪಾತ್ಯತೇ ನರಕೇ ಘೋರೇ ಇಕ್ಷ್ವಿನದ್ಯಂತ್ರಪೀಡಿತಃ ॥ ೨೩ ॥
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಸೌ ನಿಪಾತ್ಯತೇ ।
ಈಶ್ವರಾಧೀನವೃತ್ತೀನಾಂ ಹಿಂಸಾಂ ಯಃ ಪ್ರಾಣಿನಾಂ ಚರೇತ್ ॥ ೨೪ ॥
ತೈರೇವ ಪೀಡ್ಯಮಾನೋಽಯಂ ಜಾತುಭಿಃ ಸ್ವೇನ ಪೀಡಿತೈಃ ।
ಅಂಧಕೂಪೇ ಮಹಾಭೀಮೇ ಪಾತ್ಯತೇ ಯಮಕಿಂಕರೈಃ ॥ ೨೫ ॥
ತತ್ರಾಂಧಕಾರ ಬಹುಲೇ ವಿನಿದ್ರೋ ನಿರ್ವೃತಶ್ಚರೇತ್ ।
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಸೌ ನಿಪಾತ್ಯತೇ ॥ ೨೬ ॥
ಯೋಽಶ್ನಾತಿ ಪಂಕ್ತಿಭೇದೇನ ಸಸ್ಯಸೂಪಾದಿಕಂ ನರಃ ।
ಅಕೃತ್ವಾ ಪಂಚಯಜ್ಞಂ ವಾ ಭುಂಕ್ತೇ ಮೋಹೇನ ಸ ದ್ವಿಜಾಃ ॥ ೨೭ ॥
ಪ್ರಪಾತ್ಯತೇ ಯಮಭಟೈರ್ನರಕೇ ಕೃಮಿಭೋಜನೇ ।
ಭಕ್ಷ್ಯಮಾಣಃ ಕೃಮಿಶತೈರ್ಭಕ್ಷಯನ್ಕೃಮಿಸಂಚಯಾನ್ ॥ ೨೮ ॥
ಸ್ವಯಂ ಚ ಕೃಮಿಭೂತಃ ಸಂಸ್ತಿಷ್ಠೇದ್ಯಾವದಘಕ್ಷಯಂ ।
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಸೌ ನಿಪಾತ್ಯತೇ ॥ ೨೯ ॥

---

ವರು.. ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಕೆಡಹುವುದಿಲ್ಲ. ಎಲೈ ದ್ವಿಜರೆ! ಶಿಕ್ಷೆಗೆ ಅನರ್ಹನಲ್ಲಿ ಶಿಕ್ಷೆಯನ್ನೂ, ಬ್ರಾಹ್ಮಣನಿಗೆ ಮರಣದಂಡನೆಯನ್ನೂ ಮಾಡಿದ ರಾಜನನ್ನು ಅಥವಾ ಆ ರಾಜನ ಸೇವಕನನ್ನು ಗಾಣಕ್ಕೆ ಕೊಟ್ಟ ಕಬ್ಬಿನಂತೆ ಸಜ್ಜುಗುಜ್ಜುಮಾಡುವ ಭಯಂಕರವಾದ ಶೂಕರಮುಖವೆಂಬ ನರಕದಲ್ಲಿ ಕೆಡಹುವರು. ಈ ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಕೆಡಹುವುದಿಲ್ಲ. ಈಶ್ವರನಿಗೆ ಅಧೀನವಾದ ಚಿತ್ತವೃತ್ತಿಯುಳ್ಳ ಪ್ರಾಣಿಗಳನ್ನು ಹಿಂಸೆಮಾಡಿದ ಮನುಷ್ಯನನ್ನು ಯಮಕಿಂಕರರು ಅವನು ಪೀಡಿಸಿದ ಪ್ರಾಣಿಗಳಿಂದಲೆ ಹಿಂಸೆಗೊಳಿಸಿ ಅತಿಭಯಂಕರವಾದ ಅಂಧಕೂಪವೆಂಬ ನರಕದಲ್ಲಿ ಬೀಳಿಸುವರು. ಅವನು ಆ ಕತ್ತಲೆಯ ನರಕದಲ್ಲಿ ನಿದ್ರೆಯಿಲ್ಲದೆ ದುಃಖಗೊಂಡು ಸಂಚರಿಸುವನು. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಕೆಡಹುವುದಿಲ್ಲ.

೨೭–೨೯. ಪಂಕ್ತಿಯಲ್ಲಿ ಕುಳಿತ ಇತರರನ್ನು ಬಿಟ್ಟು ತಾನೊಬ್ಬನೆ ತೊವ್ವೆ ಮೊದಲಾದುವುಗಳನ್ನು ತಿನ್ನುವವನನ್ನೂ, ಪಂಚಮಹಾಯಜ್ಞಗಳನ್ನು ಮಾಡದೆ ಅಜ್ಞಾನದಿಂದ ಭುಂಜಿಸುವವನನ್ನೂ ಯಮಭಟರು ಕೃಮಿಭೋಜನವೆಂಬ ನರಕಕ್ಕೆ ತಳ್ಳುವರು. ಅವನು ಅಲ್ಲಿ ಅನೇಕ ಕೃಮಿಗಳಿಂದ ತಿನ್ನಲ್ಪಡುವವನೂ, ಕೃಮಿಸಮೂಹಗಳನ್ನೇ ತಿನ್ನುತ್ತಿರುವವನೂ, ತಾನೂ ಕೃಮಿಯೂ ಆಗಿ ಪಾಪವು ಪರಿಹಾರವಾಗುವವರೆಗೆ ನೆಲಸಿರುವನು. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಕೆಡಹುವುದಿಲ್ಲ.

ಯೋ ಹರೇದ್ವಿಪ್ರವಿತ್ತಾನಿ ಸ್ತೇಯೇನ ಬಲತೋಽಪಿ ವಾ ।
ಅನ್ಯೇಷಾಮಪಿ ವಿತ್ತಾನಿ ರಾಜಾ ತತ್ಪುರುಷೋಽಪಿ ವಾ ॥ ೩೦ ॥
ಅಯಸ್ಮಯ್ಯಾಽಗ್ನಿ ಕುಂಡೇಷು ಸಂದಂಶೈಃ ಸೋಽತಿಪೀಡಿತಃ ।
ಸಂದಂಶೇ ನರಕೇ ಘೋರೇ ಪಾತ್ಯತೇ ಯಮಪೂರುಷೈಃ ॥ ೩೧ ॥
ಸ್ನಾತಿ ಚೇದ್ಧನುಷಃ ಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ।
ಅಗಮ್ಯಾಂ ಯೋಽಭಿಗಚ್ಛೇತ ಸ್ತ್ರಿಯಂ ವೈ ಪುರುಷಾಽಧಮಃ ॥ ೩೨ ॥
ಅಗಮ್ಯಂ ಪುರುಷಂ ಯೋಷಿದಭಿಗಚ್ಛೇತ ವಾ ದ್ವಿಜಾಃ ।
ತಾವಯಸ್ಮಯನಾರೀಂ ಚ ಪುರುಷಂ ಚಾಪ್ಯಯಸ್ಮಯಂ ॥ ೩೩ ॥
ತಪ್ತಾವಾಲಿಂಗ್ಯ ತಿಷ್ಠಂತೌ ಯಾವಚ್ಚಂದ್ರದಿವಾಕರೌ ।
ಸೂರ್ಮ್ಯಾಖ್ಯೇ ನರಕೇ ಘೋರೇ ಪಾತ್ಯೇತೇ ಬಹುಕಂಟಕೇ ॥ ೩೪ ॥
ಸ್ನಾತಿ ಚೇದ್ಧನುಷಃ ಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ।
ಬಾಧತೇ ಸರ್ವಜಂತೂನ್ಯೋ ನಾನೋಪಾಯೈರುಪದ್ರವೈಃ ॥ ೩೫ ॥
ಶಾಲ್ಮಲೀನರಕೇ ಘೋರೇ ಪಾತ್ಯತೇ ಬಹುಕಂಟಕೇ ।
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ॥ ೩೬ ॥
ರಾಜಾ ವಾ ರಾಜಭೃತ್ಯೋ ವಾ ಯಃ ಪಾಷಂಡಮನುವ್ರತಃ ।
ಭೇದಕೋ ಧರ್ಮಸೇತೂನಾಂ ವೈತರಣ್ಯಾಂ ನಿಪಾತ್ಯತೇ ॥ ೩೭ ॥

---

೩೦–೩೬. ಬ್ರಾಹ್ಮಣರ ದ್ರವ್ಯಗಳನ್ನೂ, ಇತರರ ದ್ರವ್ಯಗಳನ್ನೂ ಕಳ್ಳತನದಿಂದಲೋ ಅಥವಾ ಬಲಾತ್ಕಾರದಿಂದಲೋ ಅಪಹರಿಸಿದ ರಾಜನನ್ನು, ಅಥವಾ ಅವನ ಭೃತ್ಯನನ್ನು ಯಮಭಟರು ಕಬ್ಬಿಣದ ಬೆಂಕಿಯ ಕುಂಡಗಳಲ್ಲಿ ಇಕ್ಕಳಗಳಿಂದ ಹಿಡಿದುಕಾಯಿಸಿ ಸಂದಂಶವೆಂಬ ನರಕದಲ್ಲಿ ಹಾಕುವರು. ಈ ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ತಳ್ಳುವುದಿಲ್ಲ. ಅಗಮ್ಯಳಾದ ನಾರಿಯನ್ನು ಗಮನಮಾಡಿದ ಪುರುಷಾಧಮನನ್ನೂ, ಅಗಮ್ಯಪುರುಷನ ಸಂಗವನ್ನು ಮಾಡಿದ ಹೆಂಗಸನ್ನೂ ಕಾದ ಕಬ್ಬಿಣದ ಸ್ತ್ರೀಪುರುಷ ಪ್ರತಿಮೆಯನ್ನು ಆಲಿಂಗನೆ ಮಾಡಿಸಿ ಅನೇಕ ಮುಳ್ಳುಗಳುಳ್ಳ ಘೋರವಾದ ಸೂರ್ಮಿಯೆಂಬ ನರಕದಲ್ಲಿ ಬೀಳಿಸುವರು. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಕೆಡಹುವುದಿಲ್ಲ. ಅನೇಕ ಬಗೆಯ ಯುಕ್ತಿಗಳಿಂದ ಸಮಸ್ತ ಪ್ರಾಣಿಗಳನ್ನೂ ಪೀಡಿಸಿದ ಮಾನವನನ್ನು ಬಹಳ ಮುಳ್ಳುಗಳುಳ್ಳ ಘೋರವಾದ ಶಾಲ್ಮಲೀ ನರಕದಲ್ಲಿ ಬೀಳಿಸುವರು. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಈ ನರಕಕ್ಕೆ ತಳ್ಳುವುದಿಲ್ಲ.

೩೭–೪೦. ಪಾಷಂಡಮತವನ್ನನುಸರಿಸಿ ಧರ್ಮದ ಕಟ್ಟನ್ನು ಒಡೆದ ರಾಜನನ್ನೂ ಅಥವಾ ಅವನ ಭೃತ್ಯನನ್ನೂ ವೈತರಣಿಯೆಂಬ ನರಕದಲ್ಲಿ ತಳ್ಳುವರು.

ಸ್ನಾತಿ ಚೇದ್ಧನುಷಃ ಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ।
ವೃಷಲೀಸಂಗದುಷ್ಟೋ ಯಃ ಶೌಚಾದ್ಯಾಚಾರವರ್ಜಿತಃ ॥ ೩೮ ॥
ತ್ಯಕ್ತಲಜ್ಜಸ್ತ್ಯಕ್ತವೇದಃ ಪಶುಚರ್ಯಾರತಸ್ತಥಾ ।
ಸ ಪೂಯವಿಷ್ಠಾ ಮೂತ್ರಾಽಸೃಕ್ಶ್ಲೇಷ್ಮ ಪಿತ್ತಾದಿಪೂರಿತೇ ॥ ೩೯ ॥
ಅತಿಬೀಭತ್ಸನರಕೇ ಪಾತ್ಯತೇ ಯಮಕಿಂಕರೈಃ ।
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ॥ ೪೦ ॥
ಅಶ್ಮಭಿರ್ಮೃಗಯಾರ್ಹನ್ಯಾದ್ಬಾಣೈರ್ವಾ ಬಾಧತೇ ಮೃಗಾನ್ ।
ಸ ವಿಧ್ಯಮಾನೋ ಬಾಣೌಘೈಃ ಪರತ್ರ ಯಮಕಿಂಕರೈಃ ॥ ೪೧ ॥
ಪ್ರಾಣರೋಧಾಖ್ಯನರಕೇ ಪಾತ್ಯತೇ ಯಮಕಿಂಕರೈಃ ।
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ॥ ೪೨ ॥
ದಾಂಭಿಕೋಯಃ ಪಶೂನ್ಯಜ್ಞೇ ವಿಧ್ಯನುಷ್ಠಾನವರ್ಜಿತಃ ।
ಹಂತ್ಯಸೌ ಪರಲೋಕೇಷು ವೈಶಸೇ ನರಕೇ ದ್ವಿಜಾಃ ॥ ೪೩ ॥
ಕೃನ್ತ್ಯಮಾನೋ ಯಮಭಟೈಃ ಪಾತ್ಯತೇ ದುಃಖಸಂಕುಲೇ ।
ಸ್ನಾತಿ ಚೇದ್ಧನುಷಃ ಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ॥ ೪೪ ॥
ಆತ್ಮಭಾರ್ಯಾಂ ಸವರ್ಣಾಂ ಯೋ ರೇತಃ ಪಾಯಯತೇ ತು ಸಃ ।
ಪರತ್ರ ರೇತಃಪಾಯೀ ಸನ್ರೇತಃ ಕುಂಡೇ ನಿಪಾತ್ಯತೇ ॥ ೪೫ ॥

---

ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಬೀಳಿಸುವುದಿಲ್ಲ. ನಾಚಿಕೆಯಿಲ್ಲದೆ ವೇದವನ್ನು ತ್ಯಜಿಸಿ ಶೌಚವೇ ಮೊದಲಾದ ಆಚಾರವಿಲ್ಲದೆ ಪಶುಗಳ ನಡತೆಯುಳ್ಳವನಾಗಿ ಶೂದ್ರಸ್ತ್ರೀಸಂಗದಿಂದ ದುಷ್ಟನಾದವನನ್ನು ಯಮದೂತರು ಕೀವು, ಮಲ, ಮೂತ್ರ, ರಕ್ತ, ಕಫ, ಪಿತ್ತ ಮೊದಲಾದವುಗಳಿಂದ ತುಂಬಿದ ಅತಿಬೀಭತ್ಸನರಕದಲ್ಲಿ ಬೀಳಿಸುವರು. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಬೀಳಿಸುವುದಿಲ್ಲ.

೪೧–೪೨. ಕಲ್ಲುಗಳಿಂದ ಮೃಗಗಳನ್ನು ಕೊಲ್ಲುವ ಅಥವಾ ಬಾಣಗಳಿಂದ ವ್ಯಥೆಗೊಳಿಸುವ ಬೇಡನನ್ನು ಯಮಕಿಂಕರರು ಬಾಣಗಳಿಂದ ಹೊಡೆದು ಪ್ರಾಣರೋಧವೆಂಬ ನರಕದಲ್ಲಿ ಬೀಳಿಸುವರು. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕಕ್ಕೆ ತಳ್ಳುವುದಿಲ್ಲ.

೪೩–೪೪. ದಂಬಾಚಾರದಿಂದ ಯಜ್ಞದಲ್ಲಿ ಶಾಸ್ತ್ರವಿಧಿಯನ್ನನುಸರಿಸದೆ ಪಶುಗಳನ್ನು ಕೊಂದವನನ್ನು ಯಮಭಟರು ಪರಲೋಕದಲ್ಲಿ ಕತ್ತರಿಸಿ ದುಃಖಭೂಯಿಷ್ಠವಾದ ವೈಶಸವೆಂಬ ನರಕದಲ್ಲಿ ಹಾಕುವರು. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ಹಾಕುವುದಿಲ್ಲ.

೪೫–೪೬. ಸಮಾನಜಾತಿಯವಳಾದ ತನ್ನ ಪತ್ನಿಗೆ ರೇತಸ್ಸನ್ನು ಕುಡಿಸಿದವ

ಸ್ನಾತಿ ಚೇದ್ಧನುಷಃ ಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ।
ಯೋ ದಸ್ಯುಮಾರ್ಗಮಾಶ್ರಿತ್ಯ ಗರದೋ ಗ್ರಾಮದಾಹಕಃ ॥ ೪೬ ॥
ವಣಿಗ್ದ್ರವ್ಯಾಽಪಹಾರೀಚ ಸ ಪರತ್ರ ದ್ವಿಜೋತ್ತಮಾಃ ।
ವಜ್ರದಂಷ್ಟ್ರಾಹಿಕಾಽಭಿಖ್ಯೇ ನರಕೇ ಪಾತ್ಯತೇ ಚಿರಂ ॥ ೪೭ ॥
ಸ್ನಾತಿ ಚೇದ್ಧನುಷಃಕೋಟೌ ತಸ್ಮಿನ್ನಾಽಸೌ ನಿಪಾತ್ಯತೇ ।
ವಿದ್ಯಂತೇ ಯಾನಿ ಚಾಽನ್ಯಾನಿ ನರಕಾಣಿ ಪರತ್ರ ವೈ ॥ ೪೮ ॥
ತಾನಿ ನಾಪ್ನೋತಿ ಮನುಜೋ ಧನುಷ್ಕೋಟಿ ನಿಮಜ್ಜನಾತ್ ।
ಧನುಷ್ಕೋಟೌ ಸಕೃತ್ಸ್ನಾನಾದಶ್ವಮೇಧಫಲಂ ಲಭೇತ್ ॥ ೪೯ ॥
ಆತ್ಮವಿದ್ಯಾ ಭವೇತ್ತಾಸ್ಯ ಮುಕ್ತಿಶ್ಚಾಽಪಿ ಚತುರ್ವಿಧಾ ।
ನ ಪಾಪೇ ರಮತೇ ಬುದ್ಧಿರ್ನಭವೇದ್ದುಃಖಮೇವ ವಾ ॥ ೫೦ ॥
ಬುದ್ಧೇಃ ಪ್ರೀತಿರ್ಭವೇತ್ಸಮ್ಯಗ್ಧನುಷ್ಕೋಟೌ ನಿಮಜ್ಜನಾತ್ ।
ತುಲಾಪುರುಷದಾನೇನ ಯತ್ಫಲಂ ಲಭ್ಯತೇ ನರೈಃ ॥ ೫೧ ॥
ತತ್ಫಲಂ ಲಭ್ಯತೇ ಪುಂಭಿರ್ಧನುಷ್ಕೋಟೌ ನಿಮಜ್ಜನಾತ್ ।
ಗೋಸಹಸ್ರಪ್ರದಾನೇನ ಯತ್ಪುಣ್ಯಂ ಹಿ ಭವೇನ್ನೃಣಾಂ ॥ ೫೨ ॥
ತತ್ಪುಣ್ಯಂ ಲಭತೇ ಮರ್ತ್ಯೋ ಧನುಷ್ಕೋಟೌ ನಿಮಜ್ಜನಾತ್ ।
ಧರ್ಮಾರ್ಥಕಾಮಮೋಕ್ಷೇಷು ಯಂ ಯಮಿಚ್ಛತಿ ಪೂರುಷಃ ॥ ೫೩ ॥

---

ನನ್ನು ಪರಲೋಕದಲ್ಲಿ ರೇತಸ್ಸನ್ನು ಕುಡಿಸಿ ರೇತಃಕುಂಡದಲ್ಲಿ ತಳ್ಳುವರು. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕದಲ್ಲಿ ತಳ್ಳುವುದಿಲ್ಲ. ದ್ವಿಜವರ್ಯರೆ! ಸೇವಾವೃತ್ತಿಯನ್ನವಲಂಬಿಸಿ ವಿಷವನ್ನು ಕೊಟ್ಟವನೂ, ಗ್ರಾಮ ವನ್ನು ಸುಟ್ಟವನೂ, ವೈಶ್ಯನ ದ್ರವ್ಯವನ್ನು ಅಪಹರಿಸಿದವನೂ ಆದ ಮಾನವ ನನ್ನು ಯಮದೂತರು ವಜ್ರದಂಷ್ಟ್ರವೆಂಬ ನರಕದಲ್ಲಿ ಬಹಳಕಾಲ ಹಾಕುತ್ತಾರೆ.

೪೮–೪೯. ಅವನು ಧನುಷ್ಕೋಟಿಯಲ್ಲಿ ಮಿಂದರೆ ಅವನನ್ನು ಆ ನರಕ ದಲ್ಲಿ ಹಾಕುವುದಿಲ್ಲ. ಪರಲೋಕದಲ್ಲಿ ಇನ್ನೂ ಇತರ ನರಕಗಳಿವೆ. ಮಾನವನು ಈ ಧನುಷ್ಕೋಟಿಯಲ್ಲಿ ಮಿಂದರೆ ಆ ನರಕಗಳನ್ನು ಸೇರುವುದಿಲ್ಲ. ಈ ಧನು ಷ್ಕೋಟಿಯಲ್ಲಿ ಒಂದು ಸಾರಿ ಮಿಂದರೆ ನರನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

೫೦. ಆತ್ಮಜ್ಞಾನವನ್ನೂ, ನಾಲ್ಕುವಿಧಗಳಾದ ಮುಕ್ತಿಯನ್ನೂ ಹೊಂದು ವನು. ಅವನ ಮನಸ್ಸು ಪಾಪಕಾರ್ಯದಲ್ಲಿ ನಿರತವಾಗುವುದಿಲ್ಲ. ಅವನು ದುಃಖವನ್ನೂ ಹೊಂದುವುದಿಲ್ಲ.

೫೧–೬೦. ಅವನ ಬುದ್ಧಿಯು ಪ್ರಸನ್ನವಾಗುವುದು. ಅವನು ತುಲಾ ಪುರುಷದಾನದ ಫಲವನ್ನೂ, ಸಾವಿರ ಗೋದಾನದ ಪುಣ್ಯವನ್ನೂ ಪಡೆಯುವನು.

ತಂ ತಂ ಸದ್ಯಃ ಸಮಾಪ್ನೋತಿ ಧನುಷ್ಕೋಟೌ ನಿಮಜ್ಜನಾತ್ ।
ಮಹಾಪಾತಕಯುಕ್ತೋ ವಾಽಯುಕ್ತೋ ವಾ ಸರ್ವಪಾತಕೈಃ ॥ ೫೪ ॥
ಸದ್ಯಃ ಪೂತೋ ಭವೇದ್ವಿಪ್ರಾ ಧನುಷ್ಕೋಟೌ ನಿಮಜ್ಜನಾತ್ ।
ಪ್ರಜ್ಞಾ ಲಕ್ಷ್ಮೀರ್ಯಶಃ ಸಂಪದ್ಜ್ಞಾನಂ ಧರ್ಮೋ ವಿರಕ್ತತಾ ॥ ೫೫ ॥
ಮನಃ ಶುದ್ಧಿರ್ಭವೇನ್ನೄಣಾಂ ಧನುಷ್ಕೋಟಿನಿಮಜ್ಜನಾತ್ ।
ಬ್ರಹ್ಮಹತ್ಯಾಽಯುತಂ ಚಾಪಿ ಸುರಾಪಾನಾಽಯುತಂ ತಥಾ ॥ ೫೬ ॥
ಅಯುತಂ ಗುರುದಾರಾಣಾಂ ಗಮನಂ ಪಾಪಕಾರಣಂ ।
ಸ್ತೇಯಾಽಯುತಂ ಸುವರ್ಣಾನಾಂ ತತ್ಸಂಸರ್ಗಶ್ಚ ಕೋಟಿಶಃ ॥ ೫೭ ॥
ಶೀಘ್ರಂ ವಿಲಯಮಾಪ್ನೋತಿ ಧನುಷ್ಕೋಟೌ ನಿಮಜ್ಜನಾತ್ ।
ಬ್ರಹ್ಮಹತ್ಯಾಸಮಾನಾನಿ ಸುರಾಪಾನಸಮಾನಿ ಚ ॥ ೫೮ ॥
ಗುರುಸ್ತ್ರೀಗಮನೇನಾಽಪಿ ಯಾನಿ ತುಲ್ಯಾನಿ ಚಾಸ್ತಿಕಾಃ ।
ಸುವರ್ಣಸ್ತೇಯತುಲ್ಯಾನಿ ತತ್ಸಂಸರ್ಗಸಮಾನಿಚ ॥ ೫೯ ॥
ತಾನಿ ಸರ್ವಾಣಿ ನಶ್ಯಂತಿ ಧನುಷ್ಕೋಟಿನಿಮಜ್ಜನಾತ್ ।
ಉಕ್ತೇಷ್ವೇತೇಷು ಸಂದೇಹೋ ನ ಕರ್ತವ್ಯಃ ಕದಾಚನ ॥ ೬೦ ॥
ಜಿಹ್ವಾಗ್ರೇ ಪರಶುಂ ತಪ್ತಂ ಧಾರಯಾಮಿ ನ ಸಂಶಯಃ ।
ಅರ್ಥವಾದಮಿಮಂ ಸರ್ವಂ ಬ್ರುವನ್ಸ್ಯೈ ನಾರಕೀ ಭವೇತ್ ॥ ೬೧ ॥
ಸಂಕರಃ ಸ ಹಿ ವಿಜ್ಞೇಯಃ ಸರ್ವಕರ್ಮಬಹಿಷ್ಕೃತಃ ।
ಅಹೋ ಮೌರ್ಖ್ಯಮಹೋ ಮೌರ್ಖ್ಯಮಹೋ ಮೌರ್ಖ್ಯಂ ದ್ವಿಜೋತ್ತಮಾಃ

---

ಧರ್ಮಾರ್ಥಕಾಮಮೋಕ್ಷಗಳಲ್ಲಿ ಅವನು ಯಾವುದನ್ನು ಬಯಸಿದರೂ ಪಡೆಯುತ್ತಾನೆ. ಮಾನವನು ಮಹಾಪಾತಕ, ಅಥವಾ ಸಕಲ ಉಪಪಾತಕಗಳಿಂದ ಯುಕ್ತನಾದರೂ ಈ ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದ ಕೂಡಲೆ ಪವಿತ್ರನಾಗುವನು. ಪ್ರಜ್ಞೆ, ಸಂಪತ್ತು, ಕೀರ್ತಿ, ಜ್ಞಾನ, ಧರ್ಮ, ವೈರಾಗ್ಯ, ಮನಶ್ಶುದ್ಧಿಗಳು ಲಭಿಸುವುವು. ಹತ್ತುಸಾವಿರ ಬ್ರಹ್ಮಹತ್ಯೆಗಳೂ, ಸುರಾಪಾನಗಳೂ, ಗುರುತಲ್ಪಗಮನಗಳೂ, ಸುವರ್ಣಸ್ತೇಯಗಳೂ, ಕೋಟ್ಯಂತರ ಪಾತಕಿಸಂಸರ್ಗಗಳೂ ಕೂಡಲೆ ನಾಶವಾಗುವುವು. ಬ್ರಹ್ಮಹತ್ಯೆ, ಸುರಾಪಾನ, ಗುರುಸ್ತ್ರೀಗಮನ, ಸುವರ್ಣಸ್ತೇಯ, ಆ ಪಾತಕಿಗಳ ಸಹವಾಸ ಇವುಗಳಿಗೆ ಸಮಾನವಾದ ಪಾಪಗಳೆಲ್ಲವೂ ಪರಿಹಾರವಾಗುವುವು. ನಾನು ನುಡಿದ ವಿಷಯದಲ್ಲಿ ಒಂದುವೇಳೆಯೂ ಸಂದೇಹಗೊಳ್ಳಬಾರದು.

೬೧-೬೪. ಆ ಫಲಗಳು ದೊರೆಯದಿದ್ದರೆ ನಾನು ನಾಲಿಗೆಯ ಕೊನೆಯಲ್ಲಿ ಕಾದ ಕೊಡಲಿಯನ್ನು ಧರಿಸುವೆನು. ಈ ವಿಷಯದಲ್ಲಿ ಸಂದೇಹವಿಲ್ಲವು. ಇದೆಲ್ಲ ಅರ್ಥವಾದವೆಂದು ಹೇಳುವವನು ನರಕವನ್ನೈದುವನು. ಅವನು ಸರ್ವಕರ್ಮ

ಧನುಷ್ಕೋಟ್ಯಭಿಧೇ ತೀರ್ಥೇ ಸರ್ವಪಾತಕನಾಶನೇ ।
ಅದ್ವೈತಜ್ಞಾನದೇ ಪುಂಸಾಂ ಭುಕ್ತಿಮುಕ್ತಿಪ್ರದಾಯಿನಿ ॥ ೧೩ ॥
ಇಷ್ಟಕಾಮ್ಯಪ್ರದೇ ನಿತ್ಯಂ ತಥೈವಾಽಜ್ಞಾನ ನಾಶನೇ ।
ಸ್ಥಿತೇಽಪಿ ತಸ್ಮಿನ್ನಿಹಾಯಾಽಯಂ ರಮತೇಽನ್ಯತ್ರ ವೈ ಜನಃ ॥ ೧೪ ॥
ಅಹೋ ಮೋಹಸ್ಯ ಮಾಹಾತ್ಮ್ಯಂ ಮಯಾ ವಕ್ತುಂ ನ ಶಕ್ಯತೇ ।
ಸ್ನಾತಸ್ಯ ಧನುಷಃಕೋಟೌ ಸಾಽಂತಕಾದ್ಭಯಮಸ್ತಿ ವೈ ॥ ೧೫ ॥
ಧನುಷ್ಕೋಟಿಂ ಪ್ರಪಶ್ಯಂತಿ ತತ್ರ ಸ್ನಾಂತಿ ಚ ಯೇ ನರಾಃ ।
ಸ್ತುವಂತಿಚ ಪ್ರಶಂಸಂತಿ ಸ್ಪೃಶಂತಿ ಚ ನಮಂತಿ ಚ ।
ನ ಪಿಬಂತಿಹಿ ತೇ ಸ್ತನ್ಯಂ ಮಾತೄಣಾಂ ದ್ವಿಜಪುಂಗವಾಃ ॥ ೧೬ ॥

ಋಷಯ ಊಚುಃ—

ಧನುಷ್ಕೋಟ್ಯಭಿಧಾ ತಸ್ಯ ಕಥಂ ಸೂತ ಸಮಾಗತಾ ॥ ೧೭ ॥
ತತ್ಸರ್ವಂ ಬ್ರೂಹಿ ತತ್ತ್ವೇನ ವಿಸ್ತರಾನ್ಮುನಿಪುಂಗವ ।
ಇತಿ ಪೃಷ್ಟೋ ನೈಮಿಷೀಯೈರಾಹ ಸೂತಃ ಪುನಶ್ಚ ತಾನ್ ॥ ೧೮ ॥

ಶ್ರೀಸೂತ ಉವಾಚ:—

ರಾಮೇಣ ನಿಹತೇ ಯುದ್ಧೇ ರಾವಣೇ ಲೋಕಕಂಟಕೇ ।
ವಿಭೀಷಣೇ ಚ ಲಂಕಾಯಾಂ ರಾಜನಿ ಸ್ಥಾಪಿತೇ ತತಃ ॥ ೧೯ ॥

---

ಗಳಿಗೂ ಅನರ್ಹನಾದ ಸಂಕರಜಾತಿಯವನೆಂದು ತಿಳಿಯಬೇಕು. ಎಲೈ ದ್ವಿಜ ವರ್ಯರೆ! ಮೂಢತನವು ಆಶ್ಚರ್ಯಕರವಾಗಿದೆ. ಸಕಲ ಪಾಪಗಳನ್ನು ನೀಗಿಸುವುದೂ, ಅದ್ವೈತಜ್ಞಾನವನ್ನೀಯುವುದೂ, ಭುಕ್ತಿಮುಕ್ತಿಗಳನ್ನು ದೊರಕಿಸುವುದೂ, ಇಷ್ಟಾರ್ಥವನ್ನು ನೀಡುವುದೂ, ಅಜ್ಞಾನವನ್ನು ನಿವಾರಿಸುವುದೂ ಆದ ಈ ಧನುಷ್ಕೋಟಿಯಿರಲು ಜನರು ಅದನ್ನು ಬಿಟ್ಟು ಬೇರೆ ವಿಷಯಗಳಲ್ಲಿ ಆಸಕ್ತರಾಗಿದ್ದಾರೆ!

೧೫. ಅಜ್ಞಾನದ ವೈಭವವನ್ನು ನಾನು ಏನೆಂದು ಹೇಳಲಿ! ಧನುಷ್ಕೋಟಿಯಲ್ಲಿ ಮಿಂದವನಿಗೆ ಯಮನ ಭಯವಿಲ್ಲವೆಂಬುದು ಸತ್ಯ.

೧೬. ಧನುಷ್ಕೋಟಿಯನ್ನು ನೋಡಿದವರೂ, ಇದರಲ್ಲಿ ಮಿಂದವರೂ, ಇದನ್ನು ಸ್ತುತಿಸಿದವರೂ, ಶ್ಲಾಘಿಸಿದವರೂ, ಸ್ಪರ್ಶಗೈದವರೂ, ನಮಸ್ಕಾರ ಮಾಡಿದವರೂ ಮರಳಿ ತಾಯಿಯ ಸ್ತನ್ಯವನ್ನು ಪಾನಮಾಡುವುದಿಲ್ಲ.

೧೭–೧೮. ಋಷಿಗಳು ಕೇಳುತ್ತಾರೆ:—"ಎಲೈ ಸೂತನೆ! ಆ ತೀರ್ಥಕ್ಕೆ ಧನುಷ್ಕೋಟಿಯೆಂಬ ಹೆಸರು ಹೇಗೆ ಬಂದಿತು? ಎಲೈ ಮುನಿವರ್ಯನೆ! ಅದನ್ನೆಲ್ಲ ನಮಗೆ ವಿಸ್ತಾರವಾಗಿ ಹೇಳು." ಹೀಗೆ ನೈಮಿಷಾರಣ್ಯವಾಸಿಗಳಾದ ಮುನಿಗಳು ಪ್ರಶ್ನಿಸಲು, ಸೂತಪುರಾಣಿಕನು ಅವರನ್ನು ಕುರಿತು ಮರಳಿ ಇಂತೆಂದನು.

೧೯–೨೦. ಶ್ರೀಸೂತನು ಹೇಳುತ್ತಾನೆ:— ಶ್ರೀರಾಮನು ಯುದ್ಧದಲ್ಲಿ

ವೈದೇಹೀಲಕ್ಷ್ಮಣಯುತೋ ರಾಮೋ ದಶರಥಾತ್ಮಜಃ ।
ಸುಗ್ರೀವಪ್ರಮುಖೈರ್ವೀರೈರ್ವಾನರೈರಪಿ ಸಂವೃತಃ ॥ ೭೦ ॥
ಸಿದ್ಧಚಾರಣಗಂಧರ್ವದೇವವಿದ್ಯಾಧರರ್ಷಿಭಿಃ ।
ಅಪ್ಸರೋಭಿಶ್ಚ ಸತತಂ ಸ್ತೂಯಮಾನನಿಜಾಽದ್ಭುತಃ ॥ ೭೧ ॥
ಲೀಲಾವಿಧೃತಕೋದಂಡಸ್ತ್ರಿಪುರಘ್ನೋ ಯಥಾ ಶಿವಃ ।
ಸರ್ವೈಃ ಪರಿವೃತೋ ರಾಮೋ ಗಂಧಮಾದನಮನ್ವಗಾತ್ ॥ ೭೨ ॥
ತತ್ರ ಸ್ಥಿತಂ ಮಹಾತ್ಮಾನಂ ರಾಘವಂ ರಾವಣಾಂತಕಂ ।
ಪ್ರಾಂಜಲಿಃ ಪ್ರಾರ್ಥಯಾಮಾಸ ಧರ್ಮಜ್ಞೋಽಥ ವಿಭೀಷಣಃ ॥ ೭೩ ॥
ಸೇತುನಾಽನೇನ ತೇ ರಾಮ ರಾಜಾನಃ ಸರ್ವ ಏವಹಿ ।
ಬಲೋದ್ರಿಕ್ತಾಃ ಸಮಭ್ಯೇತ್ಯ ಪೀಡಯೇಯುಃ ಪುರೀಂ ಮಮ ॥ ೭೪ ॥
ಅತಃ ಸೇತುಮಿಮಂ ಭಿಂಧಿ ಧನುಷ್ಕೋಟ್ಯಾ ರಘೂದ್ವಹ ।
ಇತಿ ಸಂಪ್ರಾರ್ಥಿತಸ್ತೇನ ಪೌಲಸ್ತ್ಯೇನ ಸ ರಾಘವಃ ॥ ೭೫ ॥
ಬಿಭೇದ ಧನುಷಃ ಕೋಟ್ಯಾ ಸ್ವಸೇತುಂ ರಘುನಂದನಃ ।
ಅತೋ ದ್ವಿಜಾಸ್ತತಸ್ತೀರ್ಥಂ ಧನುಷ್ಕೋಟಿರಿತಿ ಶ್ರುತಂ ॥ ೭೬ ॥
ಶ್ರೀರಾಮಧನುಷಃ ಕೋಟ್ಯಾ ಯೋ ರೇಖಾಂ ಪಶ್ಯತೇ ಕೃತಾಂ ।
ಅನೇಕಕ್ಲೇಶಸಂಯುಕ್ತಂ ಗರ್ಭವಾಸಂ ನ ಪಶ್ಯತಿ ॥ ೭೭ ॥

---

ಲೋಕಕಂಟಕನಾದ ರಾವಣನನ್ನು ಕೊಂದು ಲಂಕಾರಾಜ್ಯದಲ್ಲಿ ವಿಭೀಷಣನನ್ನು ಸ್ಥಾಪಿಸಿ ಸೀತೆ, ಲಕ್ಷ್ಮಣರೊಡನೆಯೂ, ಸುಗ್ರೀವನೇ ಮೊದಲಾದ ವಾನರರೊಡನೆಯೂ, ಸಿದ್ಧರು, ಚಾರಣರು, ಗಂಧರ್ವರು, ದೇವತೆಗಳು, ವಿದ್ಯಾಧರರು, ಋಷಿಗಳು, ಅಪ್ಸರರೇ ಮೊದಲಾದವರಿಂದ ಸ್ತುತಿಸಲ್ಪಟ್ಟವನಾಗಿ ಲೀಲೆಗಾಗಿ ಬಿಲ್ಲನ್ನು ಹಿಡಿದ ತ್ರಿಪುರಾಂತಕನಾದ ಶಿವನಂತೆ ಕಂಗೊಳಿಸುತ್ತ ಗಂಧಮಾದನಪರ್ವತಕ್ಕೆ ಬಂದನು.

೭೩. ಅಲ್ಲಿ ಮಹಾತ್ಮನಾದ ರಾವಣಾಂತಕರಾಮನನ್ನು ಕುರಿತು ಧರ್ಮವನ್ನರಿತ ವಿಭೀಷಣನು ಕೈಮುಗಿದುಕೊಂಡು ಹೀಗೆ ಬೇಡಿಕೊಂಡನು.

೭೪. "ರಾಘವ! ಬಲದಿಂದ ಕೊಬ್ಬಿದ ಇತರ ರಾಜರು ಈ ಸೇತುವೆಯಿಂದ ಬಂದು ನನ್ನ ಪಟ್ಟಣವನ್ನು ಪೀಡಿಸಿಯಾರು.

೭೫–೭೭. ಆದುದರಿಂದ ಈ ಸೇತುವೆಯನ್ನು ನಿನ್ನ ಬಿಲ್ಲಿನ ಕೊನೆಯಿಂದ ಒಡೆದುಬಿಡು." ವಿಭೀಷಣನು ಹೀಗೆ ಬೇಡಿಕೊಳ್ಳಲು ರಾಮನು ತನ್ನ ಸೇತುವೆಯನ್ನು ಬಿಲ್ಲಿನ ತುದಿಯಿಂದ ಭೇದಿಸಿದನು. ಎಲೈ ಬ್ರಾಹ್ಮಣರೆ! ಆಗಿನಿಂದ ಈ ತೀರ್ಥವು ಧನುಷ್ಕೋಟಿಯೆಂದು ಪ್ರಸಿದ್ಧವಾಗಿದೆ. ಶ್ರೀರಾಮನ ಬಿಲ್ಲಿನ ಕೊನೆಯಿಂದ ಮಾಡಿದ ಈ ರೇಖೆಯನ್ನು ಕಂಡವನು ಅನೇಕ ದುಃಖಗಳಿಂದ ಕೂಡಿದ ಗರ್ಭವಾಸದುಃಖವನ್ನು ಅನುಭವಿಸುವುದಿಲ್ಲ.

ಧನುಷ್ಕೋಟ್ಯಾ ಕೃತಾ ರೇಖಾ ರಾಮೇಣ ಲವಣಾಂಬುಧೌ ।
ತದ್ದರ್ಶನಾದ್ಭವೇನ್ಮುಕ್ತಿರ್ನ ಜಾನೇ ಸ್ನಾನಜಂ ಫಲಂ ॥ ೭೮ ॥
ನರ್ಮದಾ ರೋಧಸಿ ತಪೋ ಮಹಾಪಾತಕನಾಶನಂ ।
ಗಂಗಾತೀರೇ ತು ಮರಣಮಪವರ್ಗಫಲಪ್ರದಂ ॥ ೭೯ ॥
ದಾನಂ ದ್ವಿಜಾಃ ಕುರುಕ್ಷೇತ್ರೇ ಬ್ರಹ್ಮಹತ್ಯಾದಿಶೋಧಕಂ ।
ತಪಶ್ಚ ಮರಣಂ ದಾನಂ ಧನುಷ್ಕೋಟೌ ಕೃತಂ ನರೈಃ ॥ ೮೦ ॥
ಮಹಾಪಾತಕನಾಶಾಯ ಮುಕ್ತ್ಯೈ ಚಾಽಭೀಷ್ಟಸಿದ್ಧಯೇ ।
ಭವೇತ್ಸಮರ್ಥಂ ವಿಪ್ರೇಂದ್ರಾ ನಾತ್ರ ಕಾರ್ಯಾ ವಿಚಾರಣಾ ॥ ೮೧ ॥
ತಾವತ್ಸಂಪೀಡ್ಯತೇ ಜಂತುಃ ಪಾತಕೈಶ್ಚೋಪಪಾತಕೈಃ ।
ಯಾವನ್ನಾಲೋಕ್ಯತೇ ರಾಮಧನುಷ್ಕೋಟಿರ್ವಿಮುಕ್ತಿದಾ ॥ ೮೨ ॥
ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಪಾಪಕರ್ಮಾಣಿ ಧನುಷ್ಕೋಟ್ಯವಲೋಕಿನಃ ॥ ೮೩ ॥
ದಕ್ಷಿಣಾಂಭೋನಿಧೌ ಸೇತೌ ರಾಮಚಂದ್ರೇಣ ನಿರ್ಮಿತಾ ।
ಯಾ ರೇಖಾ ಧನುಷಃ ಕೋಟ್ಯಾ ವಿಭೀಷಣಹಿತಾಯ ವೈ ॥ ೮೪ ॥

---

೭೮. ಶ್ರೀರಾಮನು ಲವಣಸಮುದ್ರದಲ್ಲಿ ಬಿಲ್ಲಿನ ಕೊನೆಯಿಂದ ಮಾಡಿದ ರೇಖೆಯನ್ನು ನೋಡುವುದರಿಂದಲೇ ಮುಕ್ತಿಯುಂಟಾದೀತು. ಇನ್ನು ಸ್ನಾನದಿಂದಾಗುವ ಫಲವನ್ನು ನಾನರಿಯೆನು.

೭೯. ನರ್ಮದಾನದಿಯ ದಡದಲ್ಲಿ ಮಾಡಿದ ತಪಸ್ಸು ಮಹಾಪಾತಕವನ್ನು ನಾಶಗೊಳಿಸುವುದು. ಗಂಗೆಯ ದಡದಲ್ಲಿ ಮರಣಹೊಂದಿದರೆ ಮೋಕ್ಷವು ಲಭಿಸುವುದು.

೮೦–೮೧. ಕುರುಕ್ಷೇತ್ರದಲ್ಲಿ ಮಾಡಿದ ದಾನವು ಬ್ರಹ್ಮಹತ್ಯೆಯನ್ನು ಪರಿಹರಿಸುವುದು. ಮಾನವರು ಧನುಷ್ಕೋಟಿಯಲ್ಲಿ ಮಾಡಿದ ತಪಸ್ಸು, ಮತ್ತು ಅವರ ಮರಣವು ಮಹಾಪಾತಕವನ್ನು ನಾಶಗೊಳಿಸಿ ಇಷ್ಟವನ್ನಿತ್ತು ಮೋಕ್ಷವನ್ನು ಕೊಡುವುದು. ಈ ವಿಷಯದಲ್ಲಿ ವಿಚಾರಮಾಡಕೂಡದು.

೮೨. ಮುಕ್ತಿಯನ್ನೀಯುವ ಈ ಧನುಷ್ಕೋಟಿಯನ್ನು ನೋಡುವವರೆಗೆ ಮಾತ್ರ ಪ್ರಾಣಿಯನ್ನು ಮಹಾಪಾತಕಗಳೂ, ಉಪಪಾತಕಗಳೂ ಪೀಡಿಸುವುವು.

೮೩. ಈ ಧನುಷ್ಕೋಟಿಯ ದರ್ಶನದಿಂದ ಹೃದಯಬಂಧನವು ಭಿನ್ನವಾಗುವುದು. ಸಮಸ್ತ ಸಂಶಯಗಳೂ ಪರಿಹಾರವಾಗುವುವು. ಪಾಪಕರ್ಮಗಳು ನಾಶವಾಗುವುವು.

೮೪–೮೫. ಶ್ರೀರಾಮನು ವಿಭೀಷಣನ ಹಿತಕ್ಕಾಗಿ ದಕ್ಷಿಣಸಮುದ್ರದಲ್ಲಿರುವ ಸೇತುವೆಯಲ್ಲಿ ಬಿಲ್ಲಿನ ತುದಿಯಿಂದ ನಿರ್ಮಿಸಿದ ರೇಖೆಯು ಕೈಲಾಸ,

ಸೈವ ಕೈಲಾಸಪದವೀಂ ವೈಕುಂಠಬ್ರಹ್ಮಲೋಕಯೋಃ ।
ಮಾರ್ಗಃ ಸ್ವರ್ಗಸ್ಯ ಲೋಕಸ್ಯ ನಾऽತ್ರ ಕಾರ್ಯಾ ವಿಚಾರಣಾ ॥ ೮೫ ॥
ತುಲ್ಯಂ ಯಜ್ಞಫಲೈಃ ಪುಣ್ಯೈರ್ಧನುಷ್ಕೋಟ್ಯವಗಾಹನಂ ।
ಸರ್ವಮಂತ್ರಾऽಧಿಕಂ ಪುಣ್ಯಂ ಸರ್ವದಾನಫಲಪ್ರದಂ ॥ ೮೬ ॥
ಕಾಯಕ್ಲೇಶಕರೈಃ ಪುಂಸಾಂ ಕಿಂ ತಪೋಭಿಃ ಕಿಮಧ್ವರೈಃ ।
ಕಿಂ ವೇದೈಃ ಕಿಮು ವಾ ಶಾಸ್ತ್ರೈರ್ಧನುಷ್ಕೋಟ್ಯವಲೋಕಿನಃ ॥ ೮೭ ॥
ರಾಮಚಂದ್ರಧನುಷ್ಕೋಟೌ ಸ್ನಾನಂ ಚೇಲ್ಲಭ್ಯತೇ ನೃಣಾಂ ।
ಸಿತಾऽಸಿತ ಸರಿತ್ಪುಣ್ಯವಾರಿಭಿಃ ಕಿಂ ಪ್ರಯೋಜನಂ ॥ ೮೮ ॥
ರಾಮಚಂದ್ರಧನುಷ್ಕೋಟಿದರ್ಶನಂ ಲಭ್ಯತೇ ಯದಿ ।
ಕಾಶ್ಯಾಂ ತು ಮರಣಾನ್ಮುಕ್ತಿಃ ಪ್ರಾರ್ಥ್ಯತೇ ಕಿಂ ವೃಥಾ ನರೈಃ ॥ ೮೯ ॥
ಅನಿಮಜ್ಯ ಧನುಷ್ಕೋಟಾವನುಪೋಷ್ಯ ದಿನತ್ರಯಂ ।
ಅದತ್ವಾ ಕಾಂಚನಂ ಗಾಂ ಚ ದರಿದ್ರಃ ಸ್ಯಾನ್ನ ಸಂಶಯಃ ॥ ೯೦ ॥
ಧನುಷ್ಕೋಟ್ಯವಗಾಹೇನ ಯತ್ಫಲಂ ಲಭತೇ ನರಃ ।
ಅಗ್ನಿಷ್ಟೋಮಾದಿಭಿರ್ಯಜ್ಞೈರಿಷ್ಟ್ವಾऽಪಿ ಬಹುದಕ್ಷಿಣೈಃ ॥ ೯೧ ॥

---

ವೈಕುಂಠ, ಬ್ರಹ್ಮಲೋಕ, ಸ್ವರ್ಗಲೋಕ ಮುಂತಾದ ಪುಣ್ಯಲೋಕಗಳ ದಾರಿಯು. ಈ ವಿಷಯದಲ್ಲಿ ವಿಚಾರಮಾಡಕೂಡದು.

೮೬. ಧನುಷ್ಕೋಟಿಯ ಸ್ನಾನವು ಪುಣ್ಯಕರವಾದ ಯಜ್ಞಫಲಗಳಿಗೆ ಸಮಾನವೂ, ಸಮಸ್ತ ಮಂತ್ರಗಳಿಗಿಂತ ಅಧಿಕ ಪುಣ್ಯಪ್ರದವೂ, ಸಕಲ ದಾನ ಫಲವನ್ನೀಯುವುದೂ ಆಗಿರುವುದು.

೮೭. ಧನುಷ್ಕೋಟಿಯ ದರ್ಶನಮಾಡಿದ ಮಾನವರಿಗೆ ದೇಹಕ್ಕೆ ಶ್ರಮವನ್ನುಂಟುಮಾಡುವ ತಪಸ್ಸುಗಳಿಂದಲೂ, ಯಾಗಗಳಿಂದಲೂ, ವೇದಶಾಸ್ತ್ರಗಳಿಂದಲೂ ಏನುಪ್ರಯೋಜನ?

೮೮. ಮನುಷ್ಯರಿಗೆ ರಾಮಚಂದ್ರ ಧನುಷ್ಕೋಟಿಯ ಸ್ನಾನವು ಲಭಿಸಿದರೆ ಗಂಗಾ ಯಮುನಾ ನದಿಗಳ ಪುಣ್ಯಕರವಾದ ನೀರಿನಿಂದತಾನೆ ಏನುಪ್ರಯೋಜನ?

೮೯. ಈ ಧನುಷ್ಕೋಟಿಯ ದರ್ಶನವು ಲಭಿಸಿದರೆ ಮನುಷ್ಯರು ಕಾಶೀ ಮರಣದಿಂದ ಮುಕ್ತಿಯನ್ನು ಬಯಸುವುದು ನಿಷ್ಫಲವು.

೯೦. ಧನುಷ್ಕೋಟಿಯಲ್ಲಿ ಸ್ನಾನ, ಮೂರು ದಿನ ಉಪವಾಸ ಸುವರ್ಣ ಮತ್ತು ಗೋದಾನಗಳನ್ನು ಮಾಡದಿದ್ದರೆ ಮನುಷ್ಯನು ನಿಶ್ಚಯವಾಗಿಯೂ ಬಡವನಾದಾನು.

೯೧–೯೩. ಧನುಷ್ಕೋಟಿಸ್ನಾನದಿಂದ ಲಭಿಸುವ ಪುಣ್ಯವು ಅಗ್ನಿಷ್ಟೋಮವೇ ಮೊದಲಾದ ಬಹಳ ದಕ್ಷಿಣೆ ಕೊಡಬೇಕಾದ ಯಜ್ಞಗಳಿಂದಲೂ ಲಭಿಸು

ನ ತತ್ಫಲಮವಾಪ್ನೋತಿ ಸತ್ಯಂ ಸತ್ಯಂ ವದಾಮ್ಯಹಂ ।
ಧನುಷ್ಕೋಟ್ಯಭಿಧಂ ತೀರ್ಥಂ ಸರ್ವತೀರ್ಥಾಧಿಕಂ ವಿದುಃ ॥ ೯೨ ॥
ದಶಕೋಟಿಸಹಸ್ರಾಣಿ ಸಂತಿ ತೀರ್ಥಾನಿ ಭೂತಲೇ ।
ತೇಷಾಂ ಸಾನ್ನಿಧ್ಯಮಸ್ತ್ಯತ್ರ ಧನುಷ್ಕೋಟೌ ದ್ವಿಜೋತ್ತಮಾಃ ॥ ೯೩ ॥
ಅಷ್ಟೌ ವಸವ ಆದಿತ್ಯಾ ರುದ್ರಾಶ್ಚ ಮರುತಸ್ತಥಾ ।
ಸಾಧ್ಯಾಶ್ಚ ಸಹ ಗಂಧರ್ವೈಃ ಸಿದ್ಧ ವಿದ್ಯಾಧರಾಸ್ತಥಾ ॥ ೯೪ ॥
ಏತೇ ಚಾನ್ಯೇ ಚ ಯೇ ದೇವಾಃ ಸಾನ್ನಿಧ್ಯಂ ಕುರ್ವತೇ ಸದಾ ।
ತೀರ್ಥೇಽತ್ರ ಧನುಷಃ ಕೋಟೌ ನಿತ್ಯಮೇವ ಪಿತಾಮಹಃ ॥ ೯೫ ॥
ಸನ್ನಿಧತ್ತೇ ಶಿವೋ ವಿಷ್ಣುರುಮಾ ಮಾ ಚ ಸರಸ್ವತೀ ।
ಧನುಷ್ಕೋಟೌ ತಪಸ್ತಪ್ತ್ವಾ ದೇವಾಶ್ಚ ಋಷಯಸ್ತಥಾ ॥ ೯೬ ॥
ವಿಪುಲಾಂ ಸಿದ್ಧಿಮಗಮಂಸ್ತತ್ಫಲೇನ ಮುನೀಶ್ವರಾಃ ।
ಸ್ನಾಯಾತ್ತತ್ರ ನರೋ ಯಸ್ತು ಪಿತೃದೇವಾಂಶ್ಚ ತರ್ಪಯೇತ್ ॥ ೯೭ ॥
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ।
ಅತ್ರೈಕಂ ಭೋಜಯೇದ್ವಿಪ್ರಂ ಯೋ ನರೋ ಭಕ್ತಿಸಂಯುತಃ ॥ ೯೮ ॥
ಇಹ ಲೋಕೇ ಪರತ್ರಾಪಿ ಸೋಽನಂತಸುಖಮಶ್ನುತೇ ।
ಶಾಕಮೂಲಫಲೈ ರ್ವೃತ್ತಿಂ ಯೋ ನ ವರ್ತಯತೇ ನರಃ ॥ ೯೯ ॥

---

ವುದಿಲ್ಲ. ಧನುಷ್ಕೋಟಿಯು ಸರ್ವತೀರ್ಥಗಳಿಗಿಂತಲೂ ಅಧಿಕವಾದುದೆಂದು ಪ್ರಾಜ್ಞರು ತಿಳಿಯುತ್ತಾರೆ.

೯೩. ಎಲೈ ದ್ವಿಜವರ್ಯರೇ! ಈ ಧನುಷ್ಕೋಟಿಯಲ್ಲಿ ಭೂಮಿಯಲ್ಲಿರುವ ಹತ್ತು ಕೋಟಿಸಾವಿರ ತೀರ್ಥಗಳ ಸನ್ನಿಧಾನವಿರುತ್ತದೆ.

೯೪-೧೦೪. ಈ ಧನುಷ್ಕೋಟಿಯಲ್ಲಿ ಅಷ್ಟವಸುಗಳೂ, ದ್ವಾದಶಾದಿತ್ಯರೂ, ಏಕಾದಶರುದ್ರರೂ, ಮರುತ್ತುಗಳೂ, ಸಾಧ್ಯರೂ, ಗಂಧರ್ವರೂ, ಸಿದ್ಧರೂ, ವಿದ್ಯಾಧರರೂ, ಇತರ ದೇವತೆಗಳೂ, ಬ್ರಹ್ಮ, ವಿಷ್ಣು, ಮಹೇಶ್ವರರೂ, ಪಾರ್ವತೀ ಲಕ್ಷ್ಮೀ ಸರಸ್ವತಿಯರೂ ಯಾವಾಗಲೂ ಸನ್ನಿಹಿತರಾಗಿರುವರು. ಇಲ್ಲಿ ದೇವತೆಗಳೂ, ಋಷಿಗಳೂ ತಪಸ್ಸನ್ನುಮಾಡಿ ಅದರ ಫಲದಿಂದ ಅತಿಶಯವಾದ ಸಿದ್ಧಿಯನ್ನು ಪಡೆದಿರುವರು. ಇಲ್ಲಿ ಮಿಂದು ಪಿತೃಗಳಿಗೂ, ದೇವತೆಗಳಿಗೂ ತರ್ಪಣಮಾಡಿದ ಮಾನವನು ಸಮಸ್ತ ಪಾಪಗಳಿಂದಲೂ ಮುಕ್ತನಾಗಿ ಬ್ರಹ್ಮ ಲೋಕದಲ್ಲಿ ಪೂಜ್ಯನಾಗುವನು. ಇಲ್ಲಿ ಒಬ್ಬ ಮನುಷ್ಯನನ್ನು ಭಕ್ತಿಯಿಂದ ಭೋಜನ ಮಾಡಿಸಿದವನು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಅನಂತ ಸುಖವನ್ನು ಪಡೆಯುವನು. ಸೊಪ್ಪು, ಗೆಣಸು, ಹಣ್ಣುಗಳನ್ನು ತಿಂದು ಜೀವಿಸುತ್ತ ಪುಣ್ಯವನ್ನು ಗಳಿಸಿದ ನರನು ಆ ಪುಣ್ಯವನ್ನು ಪಡೆಯುವುದಕ್ಕಾಗಿ ಧನುಷ್ಕೋಟಿ

ಸ ನರೋ ಧನುಷಃ ಕೋಟೌ ಸ್ನಾಯಾತ್ತತ್ಫಲಸಿದ್ಧಯೇ ।
ಅಶ್ವಮೇಧಕ್ರತುಂ ಕರ್ತುಂ ಶಕ್ತಿರ್ಯಸ್ಯ ನ ವಿದ್ಯತೇ ॥ ೧೦೦ ॥
ಧನುಷ್ಕೋಟೌ ಸಹಿ ಸ್ನಾಯಾತ್ತೇನ ತತ್ಫಲಮಶ್ನುತೇ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾಽಪಿ ಮುನೀಶ್ವರಾಃ ॥
ನಿಂದ್ಯಯೋನೌ ನ ಜಾಯಂತೇ ಧನುಷ್ಕೋಟ್ಯವಗಾಹನಾತ್ ।
ಮಕರಸ್ಥೇ ರವೌ ಮಾಘೇ ಧನುಷ್ಕೋಟೌ ತು ಯೋ ನರಃ ॥ ೧೦೨ ॥
ಸ್ನಾಯಾತ್ಪುಣ್ಯಂ ನಿಗದಿತುಂ ತಸ್ಯಾಽಹಂ ನಕ್ಷಮೋ ದ್ವಿಜಾಃ ।
ಮಾಘಮಾಸೇ ಧನುಷ್ಕೋಟಾವವಗಾಹೇತ ಯೋ ನರಃ ॥ ೧೦೩ ॥
ಸ ಸ್ನಾತಃ ಸರ್ವತೀರ್ಥೇಷು ಗಂಗಾದಿಷು ಮುನೀಶ್ವರಾಃ ।
ಪ್ರಾಪ್ನುಯಾದಕ್ಷಯಾಲ್ಲೋಕಾನ್ಮೋಕ್ಷಂ ಚಾಽಪಿ ಲಭೇತ ಸಃ॥ ೧೦೪ ॥
ಜನ್ಮಪ್ರಭೃತಿ ಯತ್ಪಾಪಂ ಸ್ತ್ರಿಯೋ ವಾ ಪುರುಷಸ್ಯ ವಾ ।
ತತ್ಸರ್ವಂ ಮಾಘಮಾಸೇಽತ್ರ ಮಜ್ಜನಾದ್ವಿಲಯಂ ವ್ರಜೇತ್ ॥ ೧೦೫ ॥
ಯಥಾ ಸುರಾಣಾಂ ಸರ್ವೇಷಾಮುತ್ತಮೋ ರಘುನಂದನಃ ।
ತಥೈವ ಚ ಧನುಷ್ಕೋಟಿಃ ಸರ್ವತೀರ್ಥೋತ್ತಮಾ ಸ್ಮೃತಾ ॥ ೧೦೬ ॥
ತತ್ರ ಸ್ನಾನಂ ಮಾಘಮಾಸೇ ಸರ್ವಾಽಭೀಷ್ಟಪ್ರದಾಯಕಂ ।
ತ್ರಿಂಶದ್ದಿನಂ ಮಾಘಮಾಸೇ ನಿಯತೋಽಪಿ ಜಿತೇಂದ್ರಿಯಃ ॥ ೧೦೭ ॥

---

ಯಲ್ಲಿ ಸ್ನಾನಮಾಡಬೇಕು. ಅಶ್ವಮೇಧಯಾಗವನ್ನು ಮಾಡಲು ಶಕ್ತಿಯಿಲ್ಲದ ಮನುಷ್ಯನು ಧನುಷ್ಕೋಟಿಯಲ್ಲಿ ಮಿಂದರೆ ಅವನು ಆ ಫಲವನ್ನು ಪಡೆಯುವನು. ಎಲೈ ಮುನಿವರ್ಯರೆ! ಈ ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದ ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ ನೀಚಜಾತಿಯಲ್ಲಿ ಹುಟ್ಟುವುದಿಲ್ಲ. ಮಾಘಮಾಸದಲ್ಲಿ ಸೂರ್ಯನು ಮಕರರಾಶಿಯಲ್ಲಿರಲು ಧನುಷ್ಕೋಟಿಯಲ್ಲಿ ಮಿಂದ ಮನುಷ್ಯನ ಪುಣ್ಯವನ್ನು ವರ್ಣಿಸಲು ನಾನು ಶಕ್ತನಲ್ಲ. ಮಾಘಮಾಸದಲ್ಲಿ ಧನುಷ್ಕೋಟಿಯಲ್ಲಿ ಮಿಂದ ಮಾನವನು ಗಂಗಾದಿ ಸಮಸ್ತ ತೀರ್ಥಗಳಲ್ಲಿಯೂ ಮಿಂದಂತಾಗುವನು. ಅವನು ಶಾಶ್ವತಲೋಕಗಳನ್ನೂ ಮೋಕ್ಷವನ್ನೂ ಪಡೆಯುವನು.

೧೦೫. ಹೆಂಗಸು ಅಥವಾ ಗಂಡಸು ಹುಟ್ಟಿದ ಮೊದಲ್ಗೊಂಡು ಗಳಿಸಿದ ಪಾಪವು ಮಾಘಮಾಸದಲ್ಲಿ ಈ ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದ ನಷ್ಟವಾಗುವುದು.

೧೦೬. ಸಕಲ ದೇವತೆಗಳಲ್ಲಿಯೂ ಶ್ರೀರಾಮಚಂದ್ರನು ಶ್ರೇಷ್ಠನಾಗಿರುವಂತೆ ಧನುಷ್ಕೋಟಿಯು ಸಕಲ ತೀರ್ಥಗಳಲ್ಲಿಯೂ ಉತ್ತಮವಾಗಿರುವುದು.

೧೦೭–೧೧೭. ಮಾಘಮಾಸದಲ್ಲಿ ಧನುಷ್ಕೋಟಿಯಲ್ಲಿ ಮಾಡಿದ ಸ್ನಾನವು

ಧನುಷ್ಕೋಟೌ ನರಃ ಸ್ನಾಯಾದಪುನರ್ಭವಸಿದ್ಧಯೇ ।
ಏಕಭುಕ್ತೋ ಜಿತಕ್ರೋಧೋ ಮಾಘಮಾಸೇತ್ರಯೋ ನರಃ ॥ ೧೦೮ ॥
ಸ್ನಾನಂ ಕರೋತಿ ವಿಪ್ರೇಂದ್ರಾ ಮುಚ್ಯತೇ ಬ್ರಹ್ಮಹತ್ಯಯಾ ।
ಶ್ರೀರಾಮ ಧನುಷಃ ಕೋಟೌ ಮಾಘಮಾಸೇ ನರಸ್ತು ಯಃ ॥ ೧೦೯ ॥
ಸ್ನಾತ್ವಾಂತೇ ಶಿವರಾತ್ರೌ ಚ ನಿರಾಹಾರೋ ಜಿತೇಂದ್ರಿಯಃ ।
ಕೃತ್ವಾ ಜಾಗರಣಂ ರಾತ್ರೌ ಪ್ರತಿಯಾಮಂ ವಿಶೇಷತಃ ॥ ೧೧೦ ॥
ರಾಮನಾಥಂ ಮಹಾದೇವಮಭ್ಯರ್ಚ್ಯ ವಿಧಿಪೂರ್ವಕಂ ।
ಪರೇದ್ಯುರುದಿತೇ ಸೂರ್ಯೇ ಧನುಷ್ಕೋಟೌ ನಿಮಜ್ಯ ಚ ॥ ೧೧೧ ॥
ಅನ್ಯೇಷ್ವಪಿಚ ತೀರ್ಥೇಷು ಸ್ನಾತ್ವಾ ನಿಯತಮಾನಸಃ ।
ನಿರ್ವರ್ತ್ಯ ನಿತ್ಯಕರ್ಮಾಣಿ ರಾಮನಾಥಂ ನಿಷೇವ್ಯ ಚ ॥ ೧೧೨ ॥
ಯಥಾಶಕ್ತಿ ದ್ವಿಜಾನನ್ನೈರ್ಭೋಜಯಿತ್ವಾ ದ್ವಿಜೋತ್ತಮಾಃ ।
ಭೂಮಿಂ ಗಾಂಚ ತಿಲಾನ್ಧಾನ್ಯಂ ದತ್ವಾ ವಿತ್ತಂ ಚ ಶಕ್ತಿತಃ ॥ ೧೧೩ ॥
ಬ್ರಾಹ್ಮಣೈರಪ್ಯನುಜ್ಞಾತಃ ಸ್ವಯಂ ಭುಂಜೀತ ವಾಗ್ಯತಃ ।
ಏವಂ ಕೃತವತಃ ಪುಂಸೋ ರಾಮನಾಥೋ ಮಹೇಶ್ವರಃ ॥ ೧೧೪ ॥
ವಿಮೋಚ್ಯ ಸರ್ವಪಾಪಾನಿ ಭುಕ್ತಿಂ ಮುಕ್ತಿಂ ಪ್ರಯಚ್ಛತಿ ।
ಅತಃ ಸರ್ವಪ್ರಯತ್ನೇನ ಮಾಘಮಾಸೇ ಮುನೀಶ್ವರಾಃ ॥ ೧೧೫ ॥

---

ಸಕಲೇಷ್ಟಾರ್ಥಗಳನ್ನೀಯುವುದು. ಮಾಘಮಾಸದಲ್ಲಿ ನರನು ಮೋಕ್ಷ ಸಿದ್ಧಿಗೋಸ್ಕರ ಜಿತೇಂದ್ರಿಯನಾಗಿ ಮೂವತ್ತು ದಿನಗಳು ಈ ಧನುಷ್ಕೋಟಿಯಲ್ಲಿ ಸ್ನಾನಮಾಡಬೇಕು. ಮಾಘಮಾಸದಲ್ಲಿ ಇಲ್ಲಿ ನರನು ಕೋಪವನ್ನು ಜಯಿಸಿ ಒಂದೇ ಊಟವನ್ನು ಮಾಡುತ್ತ ಮಿಂದರೆ ಬ್ರಹ್ಮಹತ್ಯೆಯಿಂದ ಮುಕ್ತನಾಗುವನು. ಮಾನವನು ಮಾಘಮಾಸದಲ್ಲಿಯೂ ಆ ಮಾಸದ ಅಂತ್ಯವಾದ ಶಿವರಾತ್ರಿಯಲ್ಲಿಯೂ ಮಿಂದು ಉಪವಾಸವಿದ್ದು ಇಂದ್ರಿಯಗಳನ್ನು ನಿಗ್ರಹಿಸಿ ರಾತ್ರಿಯಲ್ಲಿ ಪ್ರತಿ ಯಾಮದಲ್ಲಿಯೂ ಜಾಗರಣೆ ಮಾಡಿ ವಿಧಿಯಂತೆ ರಾಮೇಶ್ವರನನ್ನು ಪೂಜಿಸಿ ಮಾರನೆ ದಿನ ಸೂರ್ಯನುದಯಿಸಲು ಈ ಧನುಷ್ಕೋಟಿಯಲ್ಲಿಯೂ ಇತರ ತೀರ್ಥಗಳಲ್ಲಿಯೂ ಮಿಂದು ಮನಸ್ಸನ್ನು ನಿಗ್ರಹಿಸಿ ನಿತ್ಯಕರ್ಮಗಳನ್ನು ಪೂರೈಸಿ ರಾಮೇಶ್ವರನನ್ನು ಮರಳಿ ಸೇವಿಸಿ ಶಕ್ತ್ಯನುಸಾರ ಬ್ರಾಹ್ಮಣರನ್ನು ಅನ್ನದಿಂದ ಭೋಜನಮಾಡಿಸಿ ಭೂ, ಗೋವು, ಎಳ್ಳು, ಧಾನ್ಯ, ದ್ರವ್ಯ ಇವುಗಳನ್ನು ಶಕ್ತ್ಯನುಸಾರ ದಾನಮಾಡಿ ಬ್ರಾಹ್ಮಣರ ಅನುಮತಿಯನ್ನು ಪಡೆದು ತಾನು ಮೌನದಿಂದ ಭುಂಜಿಸಬೇಕು. ಹೀಗೆ ಮಾಡಿದ ಮನುಷ್ಯನ ಸಕಲ ಪಾಪಗಳನ್ನೂ ಪರಿಹರಿಸಿ ರಾಮೇಶ್ವರನು ಅವನಿಗೆ ಭುಕ್ತಿಮುಕ್ತಿಗಳನ್ನು ನೀಡುವನು. ಮುನಿವರ್ಯರೆ! ಆದುದರಿಂದ ಮೋಕ್ಷವನ್ನಪೇಕ್ಷಿಸುವ ಮಾನವರು ಧನು

ಸ್ನಾತವ್ಯಂ ಹಿ ಧನುಷ್ಕೋಟೌ ನರೈರತ್ರ ಮುಮುಕ್ಷುಭಿಃ ।
ಧನುಷ್ಕೋಟೌ ನರಃ ಸ್ನಾನಂ ಸೇತಾವರ್ಧೋದಯೇ ತು ಯಃ ॥ ೧೧೬ ॥
ಕರೋತಿ ತಸ್ಯ ಪಾಪಾನಿ ನಶ್ಯಂತ್ಯೇವ ಕ್ಷಣಾದ್ದ್ವಿಜಾಃ ।
ಸ್ನಾನಂ ಮಹೋದಯೇ ಚಾತ್ರ ಭುಕ್ತಿಮುಕ್ತಿ ಫಲಪ್ರದಂ ॥ ೧೧೭ ॥
ಯಃಸ್ನಾಯಾದ್ಧನುಷಃ ಕೋಟಾವರ್ಧೋದಯಮಹೋದಯೇ ।
ತಸ್ಯ ವಶ್ಯಾಸ್ತ್ರಯೋ ದೇವಾ ಬ್ರಹ್ಮ ವಿಷ್ಣು ಮಹೇಶ್ವರಾಃ ॥ ೧೧೮ ॥
ಧನುಷ್ಕೋಟೌ ದ್ವಿಜಾಃ ಸ್ನಾನಂ ಅರ್ಧೋದಯಮಹೋದಯೇ ।
ವಿನಾಽಪ್ಯದ್ವೈತವಿಜ್ಞಾನಂ ಸಾಯುಜ್ಯಪ್ರಾಪ್ತಿಕಾರಣಂ ॥ ೧೧೯ ॥
ತತ್ರ ಸ್ನಾನಂ ದ್ವಿಜಾಃ ಪುಂಸಾಮರ್ಧೋದಯ ಮಹೋದಯೇ ।
ಮನ್ವಾದ್ಯುಕ್ತಂ ವಿನಾ ಸತ್ಯಂ ಪ್ರಾಯಶ್ಚಿತ್ತಂ ಹಿ ಪಾಪಿನಾಂ ॥ ೧೨೦ ॥
ಅತ್ರ ಸೇತೌ ಧನುಷ್ಕೋಟಾವರ್ಧೋದಯಮಹೋದಯೇ ।
ಸ್ನಾತಿ ಚೇನ್ಮನುಜೋ ವಿಪ್ರಾಃ ಸತ್ಯಂ ಯಜ್ಞಂ ವಿನಾಽಪ್ಯಯಂ ॥ ೧೨೧ ॥
ಯಜ್ಞಾನಾಂ ಫಲಮಾಪ್ನೋತಿ ಸಂಪೂರ್ಣಂ ನಾಽತ್ರ ಸಂಶಯಃ ।
ಚಂದ್ರಸೂರ್ಯೋಪರಾಗೇಷು ಯಃ ಸ್ನಾಯಾದತ್ರ ಮಾನವಃ ॥ ೧೨೨ ॥
ತಸ್ಯ ಪುಣ್ಯಫಲಂ ವಕ್ತುಂ ಶೇಷೇಣಾಽಪಿ ನ ಶಕ್ಯತೇ ।
ಚಂದ್ರಸೂರ್ಯೋಪರಾಗೇಷು ಧನುಷ್ಕೋಟ್ಯವಗಾಹನಂ ॥ ೧೨೩ ॥

---

ಷ್ಕೋಟಿಯಲ್ಲಿ ಮಾಘಮಾಸದಲ್ಲಿ ಸಕಲ ಪ್ರಯತ್ನದಿಂದಲೂ ಸ್ನಾನಮಾಡಬೇಕು. ಈ ಸೇತುವೆಯಲ್ಲಿರುವ ಧನುಷ್ಕೋಟಿಯಲ್ಲಿ ಅರ್ಧೋದಯಕಾಲದಲ್ಲಿ ಮಿಂಧವನ ಪಾಪಗಳು ಕೂಡಲೆ ನಾಶವಾಗುವುವು. ಮಹೋದಯದಲ್ಲಿ ಇಲ್ಲಿ ಮಾಡಿದ ಸ್ನಾನವು ಭುಕ್ತಿಮುಕ್ತಿಗಳನ್ನು ಕೊಡುವುದು.

೧೧೮. ಅರ್ಧೋದಯ ಮಹೋದಯ ಕಾಲಗಳಲ್ಲಿ ಇಲ್ಲಿ ಮಿಂದವನಿಗೆ ಬ್ರಹ್ಮವಿಷ್ಣು ಮಹೇಶ್ವರರು ಅಧೀನರಾಗುವರು.

೧೧೯. ಅರ್ಧೋದಯ ಮಹೋದಯಗಳಲ್ಲಿ ಇಲ್ಲಿ ಮಾಡಿದ ಸ್ನಾನವು ಅದ್ವೈತಜ್ಞಾನವಿಲ್ಲದಿದ್ದರೂ ಸಾಯುಜ್ಯಮುಕ್ತಿಯನ್ನೀಯುವುದು.

೧೨೦. ಪಾಪಿಗಳು ಅರ್ಧೋದಯ ಮಹೋದಯಗಳಲ್ಲಿ ಇಲ್ಲಿ ಮಾಡಿದ ಸ್ನಾನವು ಮನ್ವಾದಿಗಳು ಹೇಳಿದ ಪ್ರಾಯಶ್ಚಿತ್ತವನ್ನಾಚರಿಸದಿದ್ದರೂ ಪ್ರಾಯಶ್ಚಿತ್ತರೂಪವಾಗುವುದು.

೧೨೧–೧೨೭. ಈ ಸೇತುವೆಯಲ್ಲಿರುವ ಧನುಷ್ಕೋಟಿಯಲ್ಲಿ ಅರ್ಧೋದಯ ಮಹೋದಯ ಕಾಲಗಳಲ್ಲಿ ಮಿಂದ ಮನುಷ್ಯನು ಯಜ್ಞಮಾಡದೆ ಯಜ್ಞದ ಸಂಪೂರ್ಣ ಫಲವನ್ನು ನಿಶ್ಚಯವಾಗಿಯೂ ಪಡೆಯುವನು. ಚಂದ್ರಸೂರ್ಯ ಗ್ರಹಣಕಾಲಗಳಲ್ಲಿ ಇಲ್ಲಿ ಮಿಂದ ಮನುಷ್ಯನ ಪುಣ್ಯಫಲವನ್ನು ಹೇಳಲು ಮಹಾ

ಬ್ರಹ್ಮಹತ್ಯಾದಿಪಾಪಾನಾಂ ಪ್ರಾಯಶ್ಚಿತ್ತಮುದೀರಿತಂ ।
ಶ್ರೀರಾಮಧನುಷಃ ಕೋಟೌ ಚಂದ್ರಸೂರ್ಯೋಪರಾಗಯೋಃ ॥ ೧೨೪ ॥
ಸ್ನಾನಂ ಸಾಯುಜ್ಯದಂ ಪ್ರೋಕ್ತಂ ಸರ್ವತೀರ್ಥಫಲಪ್ರದಂ ।
ಚಂದ್ರಸೂರ್ಯೋಪರಾಗೇಷು ಅರ್ಧೋದಯಮಹೋದಯೇ ॥ ೧೨೫ ॥
ಸ್ನಾತವ್ಯಮತ್ರ ಮನುಜೈರ್ಭುಕ್ತಿಮುಕ್ತಿಫಲೇಚ್ಛುಭಿಃ ।
ಅತಃ ಸರ್ವಂ ಪರಿತ್ಯಜ್ಯ ಗಚ್ಛಧ್ವಂ ಮುನಿಪುಂಗವಾಃ ॥ ೧೨೬ ॥
ಧನುಷ್ಕೋಟಿಂ ಮಹಾಪುಣ್ಯಾಂ ಭುಕ್ತಿಮುಕ್ತಿಫಲಪ್ರದಾಂ ।
ತತ್ರ ಗತ್ವಾ ಪಿತೃಭ್ಯಶ್ಚ ಕುರುಧ್ವಂ ಪಿಂಡದಾಪನಂ ॥ ೧೨೭ ॥
ಆಕಲ್ಪಂ ಪಿತೃತೃಪ್ತಿಃ ಸ್ಯಾದತ್ರ ಪಿಂಡನಿವಾಪನಾತ್ ।
ಪಿತೄಣಾಂ ತೃಪ್ತಿದಂ ಸ್ಥಾನತ್ರಯಂ ರಾಮೇಣ ನಿರ್ಮಿತಂ ॥ ೧೨೮ ॥
ಸೇತುಮೂಲೇ ಧನುಷ್ಕೋಟ್ಯಾಂ ಗಂಧಮಾದನಪರ್ವತೇ ।
ಪಿಂಡಂ ದತ್ವಾ ಪಿತೃಭ್ಯೋಽತ್ರ ಋಣಾನ್ಮುಕ್ತೋ ಭವಿಷ್ಯತಿ ॥ ೧೨೯ ॥
ಸೇತುಮೂಲಂ ಧನುಷ್ಕೋಟಿಂ ಗಂಧಮಾದನಮೇವ ಚ ।
ಋಣಮೋಕ್ಷ ಇತಿಖ್ಯಾತಂ ತ್ರಿಸ್ಥಾನಂ ದೇವನಿರ್ಮಿತಂ ॥ ೧೩೦ ॥

---

ಶೇಷನೂ ಶಕ್ತನಲ್ಲ. ಚಂದ್ರಸೂರ್ಯಗ್ರಹಣಕಾಲಗಳಲ್ಲಿ ಇಲ್ಲಿ ಮಾಡಿದ ಸ್ನಾನವು ಬ್ರಹ್ಮಹತ್ಯಾದಿ ಪಾಪಗಳಿಗೆ ಪ್ರಾಯಶ್ಚಿತ್ತವಾಗಿರುವುದು. ಇಲ್ಲಿ ಚಂದ್ರಸೂರ್ಯ ಗ್ರಹಣ ಕಾಲಗಳಲ್ಲಿ ಮಾಡಿದ ಸ್ನಾನವು ಸಾಯುಜ್ಯಮುಕ್ತಿಯನ್ನೂ, ಸಕಲ ತೀರ್ಥಫಲಗಳನ್ನೂ ಕೊಡುವುದು. ಭುಕ್ತಿಮುಕ್ತಿಫಲಗಳನ್ನಿಚ್ಛಿಸುವ ಮಾನವರು ಇಲ್ಲಿ ಚಂದ್ರಸೂರ್ಯಗ್ರಹಣಕಾಲಗಳಲ್ಲಿಯೂ, ಅರ್ಧೋದಯ ಮಹೋದಯ ಗಳಲ್ಲಿಯೂ ಸ್ನಾನಮಾಡಬೇಕು. ಎಲೈ ಮುನಿವರ್ಯರೆ! ಆದುದರಿಂದ ಎಲ್ಲವನ್ನೂ ತ್ಯಜಿಸಿ ಭುಕ್ತಿಮುಕ್ತಿಗಳನ್ನುಂಟುಮಾಡುವ ಅತಿ ಪುಣ್ಯಕರವಾದ ಧನುಷ್ಕೋಟಿಗೆ ಹೋಗಿ ಪಿತೃಗಳಿಗೆ ಪಿಂಡಪ್ರದಾನಮಾಡಿರಿ.

೧೨೮. ಇಲ್ಲಿ ಪಿಂಡಪ್ರದಾನಮಾಡುವುದರಿಂದ ಕಲ್ಪದ ಅಂತ್ಯದವರೆಗೆ ಪಿತೃಗಳು ತೃಪ್ತಿಗೊಳ್ಳುವರು. ರಾಮನು ಪಿತೃಗಳಿಗೆ ತೃಪ್ತಿಯನ್ನುಂಟು ಮಾಡುವ ಮೂರು ಸ್ನಾನಗಳನ್ನು ನಿರ್ಮಿಸಿರುವನು.

೧೨೯. ಸೇತುಮೂಲ, ಧನುಷ್ಕೋಟಿ, ಗಂಧಮಾದನಪರ್ವತ, ಈ ಮೂರು ಸ್ಥಾನಗಳಲ್ಲಿ ಮನುಷ್ಯನು ಪಿತೃಗಳಿಗೆ ಪಿಂಡಪ್ರದಾನ ಮಾಡಿದರೆ ಪಿತೃಋಣ ದಿಂದ ಮುಕ್ತನಾಗುವನು.

೧೩೦. ದೇವನಿರ್ಮಿತವಾದ ಸೇತುಮೂಲ, ಧನುಷ್ಕೋಟಿ, ಗಂಧಮಾದನ ಪರ್ವತ ಈ ಮೂರು ಸ್ಥಳಗಳೂ ಋಣಮೋಕ್ಷಗಳೆಂದು ಪ್ರಸಿದ್ಧವಾಗಿವೆ.

ಅತಃ ಸರ್ವಪ್ರಯತ್ನೇನ ಧನುಷ್ಕೋಟಿರ್ನಿಷೇವ್ಯತಾಂ ।
ಅತ್ರಾಗತ್ಯ ಧನುಷ್ಕೋಟೌ ಸ್ನಾತ್ವಾ ನಿಯಮಪೂರ್ವಕಂ ॥ ೧೩೧ ॥
ದ್ರೋಣಾಚಾರ್ಯಸುತಃ ಶ್ರೀಮಾನಶ್ವತ್ಥಾಮಾ ಮುನೀಶ್ವರಾಃ ।
ಸುಪ್ತಮಾರಣದೋಷೇಣ ಘೋರೇಣ ಮುಮುಚೇ ಕ್ಷಣಾತ್ ॥ ೧೩೨ ॥
ಏವಂ ವಃ ಕಥಿತಂ ವಿಪ್ರಾ ಧನುಷ್ಕೋಟೇಸ್ತು ವೈಭವಂ ।
ಭುಕ್ತಿಮುಕ್ತಿಪ್ರದಂ ನೄಣಾಂ ಸರ್ವಪಾಪನಿಬರ್ಹಣಂ ॥ ೧೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಧನುಷ್ಕೋಟಿವೈಭವಕಥನವರ್ಣನಂ" ನಾಮ ತ್ರಿಂಶೋಽಧ್ಯಾಯಃ

---

೧೩೧–೧೩೨. ಆದುದರಿಂದ ಸಕಲ ಪ್ರಯತ್ನದಿಂದಲೂ ಧನುಷ್ಕೋಟಿಯನ್ನು ಸೇವಿಸಿರಿ. ಎಲೈ ಮುನಿವರ್ಯರೆ! ದ್ರೋಣಾಚಾರ್ಯನ ಮಗನಾದ ಅಶ್ವತ್ಥಾಮನು ಈ ಧನುಷ್ಕೋಟಿಯಲ್ಲಿ ನಿಯಮದಿಂದ ಮಿಂದು ಘೋರವಾದ ಸುಪ್ತಮಾರಣ (ಮಲಗಿದವರನ್ನು ಕೊಂದ) ದೋಷದಿಂದ ಕೂಡಲೆ ಮುಕ್ತನಾದನು.

೧೩೩. ವಿಪ್ರರೆ! ಹೀಗೆ ಮನುಷ್ಯರಿಗೆ ಭುಕ್ತಿಮುಕ್ತಿಗಳನ್ನು ಕೊಡುವುದೂ, ಸಕಲ ಪಾಪವನ್ನು ಪರಿಹರಿಸುವುದೂ ಆದ ಧನುಷ್ಕೋಟಿಯ ಮಾಹಾತ್ಮ್ಯೆಯನ್ನು ನಿಮಗೆ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಧನುಷ್ಕೋಟಿವೈಭವಕಥನವರ್ಣನ"ವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕತ್ರಿಂಶೋಽಧ್ಯಾಯಃ

## ಅಶ್ವತ್ಥಾಮಸುಪ್ತಮಾರಣದೋಷಶಾಂತಿವರ್ಣನಂ

ಋಷಯ ಊಚುಃ :—

ಅಶ್ವತ್ಥಾಮಾ ಕಥಂ ಸೂತ ಸುಪ್ತಮಾರಣಮಾಚರತ್ ।
ಕಥಂ ಚ ಮುಕ್ತಸ್ತತ್ಪಾಪಾದ್ಧನುಷ್ಕೋಟೌ ನಿಮಜ್ಜನಾತ್ ॥ ೧ ॥
ಏತನ್ನಃ ಶ್ರದ್ದಧಾನಾನಾಂ ಬ್ರೂಹಿ ಪೌರಾಣಿಕೋತ್ತಮ ।
ತೃಪ್ತಿರ್ನಜಾಯತೇಽಸ್ಮಾಕಂ ತ್ವದ್ವಚೋಽಮೃತಪಾಯಿನಾಂ ॥ ೨ ॥
ಇತಿ ಪೃಷ್ಟಸ್ತದಾ ಸೂತೋ ನೈಮಿಷಾಽರಣ್ಯವಾಸಿಭಿಃ ।
ವಕ್ತುಂ ಪ್ರಚಕ್ರಮೇ ತತ್ರ ವ್ಯಾಸಂ ನತ್ವಾ ಗುರುಂ ಮುದಾ ॥ ೩ ॥

ಶ್ರೀ ಸೂತ ಉವಾಚ :—

ರಾಜ್ಯಾರ್ಥಂ ಕಲಹೇ ಜಾತೇ ಪಾಂಡವಾನಾಂ ಪುರಾ ದ್ವಿಜಾಃ ।
ಧಾರ್ತರಾಷ್ಟ್ರೈರ್ಮಹಾಯುದ್ಧೇ ಮಹದಕ್ಷೌಹಿಣೀಯುತೇ ॥ ೪ ॥
ಯುದ್ಧಂ ದಶದಿನಂ ಕೃತ್ವಾ ಭೀಷ್ಮೇ ಶಾಂತನವೇ ಹತೇ ।
ದ್ರೋಣೇ ಪಂಚದಿನಂ ಕೃತ್ವಾ ಕರ್ಣೇ ಚ ದ್ವಿದಿನಂ ತಥಾ ॥ ೫ ॥
ತಥೈವೈಕದಿನಂ ಯುಧ್ವಾ ಶಲ್ಯೇ ಚ ನಿಧನಂ ಗತೇ ।
ಅಷ್ಟಾದಶದಿನೇ ತತ್ರ ರಣೇ ದುರ್ಯೋಧನೇ ದ್ವಿಜಾಃ ॥ ೬ ॥

---

## ಕನ್ನಡದ ಅನುವಾದ

### ಅಶ್ವತ್ಥಾಮಸುಪ್ತಮಾರಣದೋಷಶಾಂತಿವರ್ಣನ

೧. ಋಷಿಗಳು ಕೇಳುತ್ತಾರೆ:—"ಸೂತನೇ! ಅಶ್ವತ್ಥಾಮನು ಹೇಗೆ ಮಲಗಿದವರನ್ನು ಕೊಂದ ಪಾಪವನ್ನಾಚರಿಸಿದನು? ಧನುಷ್ಕೋಟಿಯಲ್ಲಿ ಸ್ನಾನ ಮಾಡಿದುದರಿಂದ ಆ ಪಾಪದಿಂದ ಹೇಗೆ ಮುಕ್ತನಾದನು?

೨. ಪೌರಾಣಿಕರಲ್ಲಿ ಶ್ರೇಷ್ಠನಾದ ಸೂತನೆ! ಶ್ರದ್ಧೆಯಿಂದ ಕೇಳುವ ನಮಗೆ ಇದನ್ನು ಹೇಳು. ನಿನ್ನ ಮಾತೆಂಬ ಅಮೃತವನ್ನು ಪಾನಮಾಡುವ ನಮಗೆ ತೃಪ್ತಿಯುಂಟಾಗುವುದಿಲ್ಲ."

೩. ಹೀಗೆ ನೈಮಿಷಾರಣ್ಯವಾಸಿಗಳಾದ ಮುನಿಗಳು ಕೇಳಲು, ಸೂತನು ಗುರುವಾದ ವ್ಯಾಸನನ್ನು ವಂದಿಸಿ ಸಂತೋಷದಿಂದ ಹೇಳಲಾರಂಭಿಸಿದನು.

೪–೧೨. ಶ್ರೀಸೂತನು ಹೇಳುತ್ತಾನೆ:— ದ್ವಿಜರೆ! ಹಿಂದೆ ಪಾಂಡವರಿಗೆ ರಾಜ್ಯಕ್ಕೋಸ್ಕರ ಕೌರವರೊಡನೆ ನಡೆದ ಅನೇಕಾಕ್ಷೋಹಿಣಿಯಿಂದ ಕೂಡಿದ ಘೋರಯುದ್ಧದಲ್ಲಿ ಶಂತನುಪುತ್ರನಾದ ಭೀಷ್ಮನು ಹತ್ತುದಿನಗಳೂ, ದ್ರೋಣನು ಐದು ದಿನಗಳೂ, ಕರ್ಣನು ಎರಡು ದಿನಗಳೂ, ಶಲ್ಯನು ಒಂದು ದಿನವೂ ಕಾಳಗವಾಡಿ ಮಡಿಯಲು, ಹದಿನೆಂಟನೆಯ ದಿನದ ಸಮರದಲ್ಲಿ

ಭಗ್ನೋರೌ ಭೀಮಗದಯಾ ಪತಿತೇ ರಾಜಸತ್ತಮೇ ।
ಸರ್ವೇ ನೃಪತಯೋ ವಿಪ್ರಾ ನಿವೇಶಾಯ ಕೃತತ್ವರಾಃ ॥ ೭ ॥
ಯೇ ಜೀವಿತಾಸ್ತು ರಾಜಾನಸ್ತೇ ಯಯುರ್ಹೃಷ್ಟಮಾನಸಾಃ ।
ಧೃಷ್ಟದ್ಯುಮ್ನಶಿಖಂಡ್ಯಾದ್ಯಾಃ ಸೃಂಜಯಾಃ ಸರ್ವ ಏವ ಹಿ ॥ ೮ ॥
ಅನ್ಯೇ ಚಾಽಪಿ ಮಹೀಪಾಲಾ ಜಗ್ಮುಃ ಸ್ವಶಿಬಿರಾಣ್ಯಥ ।
ಅಥ ಪಾರ್ಥಾ ಮಹಾವೀರಾ ಕೃಷ್ಣಸಾತ್ಯಕಿಸಂಯುತಾಃ ॥ ೯ ॥
ದುರ್ಯೋಧನಸ್ಯ ಶಿಬಿರಂ ಪ್ರಾವಿಶನ್ನಿರ್ಜನಂ ದ್ವಿಜಾಃ ।
ವೃದ್ಧೈರಮಾತ್ಯೈಸ್ತತ್ರಸ್ಥೈಃ ಷಂಡೈಃ ಸ್ತ್ರೀರಕ್ಷಕೈಸ್ತಥಾ ॥ ೧೦ ॥
ಕೃತಾಂಜಲಿಪುಟೈಃಪ್ರಹ್ವೈಃ ಕಾಷಾಯಮಲಿನಾಽಂಬರೈಃ ।
ಪ್ರಣಮ್ಯಮಾನಾಸ್ತೇ ಪಾರ್ಥಾಃ ಕುರುರಾಜಸ್ಯ ವೇಶ್ಮನಿ ॥ ೧೧ ॥
ತತ್ರತ್ಯದ್ರವ್ಯಜಾತಾನಿ ಸಮಾದಾಯ ಮಹಾಬಲಾಃ ।
ಸುಯೋಧನಸ್ಯ ಶಿಬಿರೇ ನ್ಯವಸಂತ ಸುಖೇನ ತೇ ॥ ೧೨ ॥
ಅಥ ತಾನಬ್ರವೀತ್ಪಾರ್ಥಾನ್ ಶ್ರೀಕೃಷ್ಣಃ ಪ್ರೀಣಯನ್ನಿವ ।
ಮಂಗಲಾರ್ಥಾಯ ಚಾಽಸ್ಮಾಭಿರ್ವಸ್ತವ್ಯಂ ಶಿಬಿರಾದ್ಬಹಿಃ ॥ ೧೩ ॥
ಇತ್ಯುಕ್ತಾ ವಾಸುದೇವೇನ ತಥೇತ್ಯುಕ್ತ್ವಾಽಥ ಪಾಂಡವಾಃ ।
ಕೃಷ್ಣಸಾತ್ಯಕಿಸಂಯುಕ್ತಾಃ ಪ್ರಯಯುಃ ಶಿಬಿರಾದ್ಬಹಿಃ ॥ ೧೪ ॥
ವಾಸುದೇವೇನ ಸಹಿತಾ ಮಂಗಲಾರ್ಥಂ ಹಿ ಪಾಂಡವಾಃ ।
ಓಘವತ್ಯಾಃ ಸಮಾಸಾದ್ಯ ತೀರಂ ನದ್ಯಾ ನಮೋತ್ತಮಾಃ ॥ ೧೫ ॥

---

ದುರ್ಯೋಧನನು ಭೀಮನ ಗದೆಯಿಂದ ತೊಡೆಮುರಿದು ನೆಲದಲ್ಲಿ ಬಿದ್ದನು. ಆಗ ಹತಶೇಷರಾದ ರಾಜರೂ, ಧೃಷ್ಟದ್ಯುಮ್ನ, ಶಿಖಂಡಿ, ಸೃಂಜಯ ಮೊದಲಾದವರೂ ತಮ್ಮ ಶಿಬಿರಗಳಿಗೆ ತೆರಳಿದರು. ಬಳಿಕ ಮಹಾಬಲಶಾಲಿಗಳಾದ ಪಾಂಡವರು ಕೃಷ್ಣಸಾತ್ಯಕಿಗಳೊಡನೆ ನಿರ್ಜನವಾದ ದುರ್ಯೋಧನನ ಶಿಬಿರವನ್ನು ಹೊಕ್ಕರು. ಆ ಕುರುರಾಜನ ಮನೆಯಲ್ಲಿ ಮಲಿನವಸ್ತ್ರಗಳನ್ನುಟ್ಟಿರುವ ವೃದ್ಧಮಂತ್ರಿಗಳೂ, ನಪುಂಸಕರಾದ ಅಂತಃಪುರಪಾಲಕರೂ ನಮ್ರತೆಯಿಂದ ಕೈಮುಗಿದು ನಮಸ್ಕರಿಸಲು, ಆ ಪಾಂಡವರು ಅಲ್ಲಿರುವ ದ್ರವ್ಯಗಳನ್ನೆಲ್ಲ ತೆಗೆದುಕೊಂಡು ಅಲ್ಲಿಯೇ ಸುಖವಾಗಿ ವಾಸಮಾಡಿದರು.

೧೩. ಬಳಿಕ ಶ್ರೀಕೃಷ್ಣನು ಅವರನ್ನು ಸಂತೋಷಗೊಳಿಸುವಂತೆ "ನಾವು ಮಂಗಳಕ್ಕಾಗಿ ಶಿಬಿರದ ಹೊರಗೆ ವಾಸಮಾಡಬೇಕಾಗಿದೆ" ಎಂದನು.

೧೪. ಕೃಷ್ಣನು ಹೀಗೆನ್ನಲು ಪಾಂಡವರು ಆ ಮಾತನ್ನು ಒಪ್ಪಿ ಕೃಷ್ಣಸಾತ್ಯಕಿಯರೊಡನೆ ಪಟ್ಟಣದ ಹೊರಗೆ ಹೋದರು.

೧೫-೧೯. ಶತ್ರುಗಳನ್ನು ಕೊಂದ ಆ ಪಾಂಡವರು ಶ್ರೀಕೃಷ್ಣನೊಡನೆ

ಊಷುಸ್ತಾಂ ರಜನೀಂ ತತ್ರ ಹತಶತ್ರುಗಣಾಃ ಸುಖಂ ।
ಕೃತವರ್ಮಾ ಕೃಪೋ ದ್ರೌಣಿಸ್ತಥಾ ದುರ್ಯೋಧನಾಂತಿಕಂ ॥ ೧೬ ॥
ಆದಿತ್ಯಾಸ್ತಮಯಾತ್ಪೂರ್ವಮಪರಾಹ್ಣೇ ಸಮಾಯಯುಃ ।
ಸುಯೋಧನಂ ತದಾ ದೃಷ್ಟ್ವಾ ರಣಪಾಂಸುಷು ರೂಷಿತಂ ॥ ೧೭ ॥
ಭಗ್ನೋರುದಂಡಂ ಗದಯಾ ಭೀಮಸೇನಸ್ಯ ಭೀಮಯಾ ।
ರುಧಿರಾಸಿಕ್ತಸರ್ವಾಂಗಂ ಚೇಷ್ಟಮಾನಂ ಮಹೀತಲೇ ॥ ೧೮ ॥
ಅಶೋಚಂತ ತದಾ ತತ್ರ ದ್ರೋಣಪುತ್ರಾದಯಸ್ತ್ರಯಃ ।
ಶುಶೋಚ ಸೋಽಪಿ ತಾನ್ ದೃಷ್ಟ್ವಾ ರಣೇ ದುರ್ಯೋಧನೋ ನೃಪಃ ॥
ದೃಷ್ಟ್ವಾ ತಥಾ ತು ರಾಜಾನಂ ಬಾಷ್ಪವ್ಯಾಕುಲಲೋಚನಂ ।
ಅಶ್ವತ್ಥಾಮಾ ತದಾ ಕೋಪಾಜ್ಜ್ವಲನ್ನಿವ ಮಹಾನಲಃ ॥ ೨೦ ॥
ಪಾಣೌ ಪಾಣಿಂ ವಿನಿಷ್ಪಿಷ್ಯ ಕ್ರೋಧವಿಸ್ಫಾರಿತೇಕ್ಷಣಃ ।
ಅಶ್ರುವಿಕ್ಲವಯಾ ವಾಚಾ ದುರ್ಯೋಧನಮಭಾಷತ ॥ ೨೧ ॥
ಪಿತಾ ಮೇ ಪಾತಿತಃ ಕ್ಷುದ್ರೈಶ್ಛಲೇನೈವ ರಣಾಜಿರೇ ।
ನ ತಥಾ ತೇನ ಶೋಚಾಮಿ ಯಥಾ ನಿಷ್ಪಾತಿತೇ ತ್ವಯಿ ॥ ೨೨ ॥

---

ಮಂಗಳಕ್ಕೋಸ್ಕರ ಓಘವತೀನದಿಯ ದಡವನ್ನು ಸೇರಿ ಆ ರಾತ್ರಿ ಅಲ್ಲಿ ಸುಖವಾಗಿ ವಾಸಿಸಿದರು. ಇಷ್ಟರಲ್ಲಿ ಸಾಯಂಕಾಲ ಸೂರ್ಯನು ಮುಳುಗುವುದಕ್ಕಿಂತ ಮುಂಚೆ ಕೃತವರ್ಮ, ಕೃಪ, ಅಶ್ವತ್ಥಾಮರು ದುರ್ಯೋಧನನಿದ್ದೆಡೆಗೆ ಬಂದು ಸಮರಾಂಗಣದಲ್ಲಿ ಧೂಳಿನಿಂದ ಲಿಪ್ತನಾದವನೂ, ಭೀಮನ ಭಯಂಕರ ಗದೆಯಿಂದ ಮುರಿದ ತೊಡೆಯುಳ್ಳವನೂ, ರಕ್ತದಿಂದ ಒದ್ದೆಯಾದ ಸಮಸ್ತಾವಯವಗಳುಳ್ಳವನೂ, ನೆಲದಮೇಲೆ ಹೊರಳಾಡುತ್ತಿರುವವನೂ ಆದ ಸುಯೋಧನನನ್ನು ಕಂಡು ದುಃಖಿಸಿದರು. ಆಗ ರಾಜನಾದ ಆ ದುರ್ಯೋಧನನೂ ಅವರನ್ನು ಕಂಡು ದುಃಖಿಸಿದನು.

೨೦–೨೧. ಆಗ ಅಶ್ವತ್ಥಾಮನು ದುಃಖದಿಂದ ಕಣ್ಣೀರನ್ನು ಸುರಿಸುತ್ತಿರುವ ಅವನನ್ನು ಕಂಡು ಸಿಟ್ಟನಿಂದ ಉರಿಯುವ ಬೆಂಕಿಯಂತಾಗಿ ಹಸ್ತದಿಂದ ಹಸ್ತವನ್ನು ಹಿಸುಕಿಕೊಂಡು ಕೋಪದಿಂದ ಅರಳಿದ ಕಣ್ಣುಳ್ಳವನಾಗಿ ಕಣ್ಣೀರಿನಿಂದ ಕುಗ್ಗಿದ ಮಾತಿನಿಂದ ಆ ದುರ್ಯೋಧನನನ್ನು ಕುರಿತು ಇಂತೆಂದನು:

೨೨. "ಭೀಮನು ಬೀಳಿಸಿದ ನಿನ್ನನ್ನು ನೋಡಿದ ನನಗೆ ಅಲ್ಪರಾದ ಶತ್ರುಗಳು ಯುದ್ಧರಂಗದಲ್ಲಿ ಮೋಸದಿಂದ ಕೆಡವಿದ ನನ್ನ ತಂದೆಯನ್ನು ನೋಡಿದಾಗ ಉಂಟಾದ ದುಃಖಕ್ಕಿಂತಲೂ ಅಧಿಕ ದುಃಖವಾಗಿದೆ.

ಶೃಣು ವಾಕ್ಯಂ ಮಮಾಽದ್ಯ ತ್ವಂ ಯಥಾರ್ಥಂ ವದತೋ ನೃಪ ।
ಸುಕೃತೇನ ಶಪೇ ಚಾಽಹಂ ಸುಯೋಧನ ಮಹಾಮತೇ ॥ ೨೩ ॥
ಅದ್ಯ ರಾತ್ರೌ ಹನಿಷ್ಯಾಮಿ ಪಾಂಡವಾನ್ಸಹಸೃಂಜಯೈಃ ।
ಪಶ್ಯತೋ ವಾಸುದೇವಸ್ಯ ತ್ವಮನುಜ್ಞಾಂ ಪ್ರಯಚ್ಛ ಮೇ ॥ ೨೪ ॥
ತಸ್ಯ ತದ್ವಚನಂ ಶ್ರುತ್ವಾ ದ್ರೌಣಿಂ ರಾಜಾ ತದಾಽಬ್ರವೀತ್ ।
ತಥಾಽಸ್ತ್ವಿತಿ ಪುನಃ ಪ್ರಾಹ ಕೃಪಂ ರಾಜಾ ದ್ವಿಜೋತ್ತಮಾಃ ॥ ೨೫ ॥
ಆಚಾರ್ಯೈನಂ ದ್ರೋಣಪುತ್ರಂ ಕಲಶೋತ್ಥೇನ ವಾರಿಣಾ ।
ಸೈನಾಪತ್ಯೇಽಭಿಷಿಂಚಸ್ವೇತ್ಯಥ ಸೋಽಪಿ ತಥಾಽಕರೋತ್ ॥ ೨೬ ॥
ಸೋಽಭಿಷಿಕ್ತಸ್ತದಾ ದ್ರೌಣಿಃ ಪರಿಷ್ವಜ್ಯ ನೃಪೋತ್ತಮಂ ।
ಕೃತವರ್ಮಕೃಪಾಭ್ಯಾಂ ಚ ಸಹಿತಸ್ತ್ವರಿತಂ ಯಯೌ ॥ ೨೭ ॥
ತತಸ್ತೇ ತು ತ್ರಯೋ ವೀರಾಃ ಪ್ರಯಾತಾ ದಕ್ಷಿಣೋಽಮುಖಾಃ ।
ಆದಿತ್ಯಾಽಸ್ತಮಯಾತ್ಪೂರ್ವಂ ಶಿಬಿರಾಂತಿಕಮಾಸತ ॥ ೨೮ ॥
ಪಾರ್ಥಾನಾಂ ಭೀಷಣಂ ಶಬ್ದಂ ಶ್ರುತ್ವಾ ತತ್ರ ಜಯೈಷಿಣಃ ।
ಪಾಂಡವಾಽನುದ್ರುತಾ ಭೀತಾಸ್ತದಾ ದ್ರೌಣ್ಯಾದಯಸ್ತ್ರಯಃ ॥ ೨೯ ॥
ಪ್ರಾಙ್ಮುಖಾ ದುದ್ರುವುರ್ಭೀತ್ಯಾ ಕಿಯದ್ದೂರಂ ಶ್ರಮಾತುರಾಃ ।
ಮುಹೂರ್ತಂ ತೇ ತತೋ ಗತ್ವಾ ಕ್ರೋಧಾಮರ್ಷವಶಾಽನುಗಾಃ ॥ ೩೦ ॥

---

೨೩. ಸಾರ್ವಭೌಮ! ನಿಜವಾಗಿ ನುಡಿಯುವ ನನ್ನ ಮಾತನ್ನು ಲಾಲಿಸು. ನನ್ನ ಪುಣ್ಯದ ಆಣೆಯಾಗಿ ಹೇಳುತ್ತೇನೆ.

೨೪. ನಾನು ಈ ದಿನ ರಾತ್ರಿ ಸೃಂಜಯರೊಡಗೂಡಿದ ಪಾಂಡವರನ್ನು ಕೃಷ್ಣನು ನೋಡುತ್ತಿರುವಂತೆಯೆ ಕೊಲ್ಲುವೆನು. ನೀನು ನನಗೆ ಅನುಮತಿಯನ್ನು ನೀಡು."

೨೫. ದ್ವಿಜವರ್ಯರೆ! ಆಗ ದೊರೆಯಾದ ದುರ್ಯೋಧನನು ಆ ಅಶ್ವತ್ಥಾಮನ ಮಾತನ್ನು ಕೇಳಿ ಅವನನ್ನು ಕುರಿತು ಹಾಗೆಯೇ ಆಗಲೆಂದು ಕೃಪಾಚಾರ್ಯನನ್ನು ಕುರಿತು ಇಂತೆಂದನು :

೨೬. "ಕೃಪಾಚಾರ್ಯ! ಈ ಅಶ್ವತ್ಥಾಮನನ್ನು ಕಲಶೋದಕದಿಂದ ಸೇನಾಪತಿಯ ಪದವಿಯಲ್ಲಿ ಅಭಿಷೇಕಮಾಡು" ಎನ್ನಲು ಅವನು ಹಾಗೆಯೇ ಮಾಡಿದನು.

೨೭. ಆಗ ಅಭಿಷಿಕ್ತನಾದ ಅಶ್ವತ್ಥಾಮನು ದುರ್ಯೋಧನನನ್ನು ತಬ್ಬಿಕೊಂಡು ಕೃತವರ್ಮ ಕೃಪರೊಡನೆ ತ್ವರೆಯಿಂದ ಹೊರಟನು.

೨೮. ಬಳಿಕ ಆ ಮೂವರು ವೀರರೂ ದಕ್ಷಿಣಾಭಿಮುಖವಾಗಿ ತೆರಳಿ ಸೂರ್ಯನು ಮುಳುಗುವುದಕ್ಕಿಂತ ಮುಂಚೆ ಶಿಬಿರದ ಹತ್ತಿರಕ್ಕೆ ಹೋದರು.

೨೯–೩೦. ಅಲ್ಲಿ ಜಯಾಕಾಂಕ್ಷಿಗಳಾದ ಅವರು ಪಾಂಡವರ ಭಯಂಕರ ಶಬ್ದವನ್ನು ಕೇಳಿ ಆ ಪಾಂಡವರಿಂದ ಹಿಂಬಾಲಿಸಲ್ಪಟ್ಟವರಾಗಿ ಭಯದಿಂದ

ದುರ್ಯೋಧನವಧಾರ್ತಾಸ್ತೇ ಕ್ಷಣಂ ತತ್ರಾಽವತಸ್ಥಿರೇ ।
ತತೋಽಪಶ್ಯನ್ನರಣ್ಯಂ ವೈ ನಾನಾತರುಲತಾಽಽವೃತಂ ॥ ೩೧ ॥
ಅನೇಕಮೃಗಸಂಬಾಧಂ ಕ್ರೂರಪಕ್ಷಿಗಣಾಕುಲಂ ।
ಸಮೃದ್ಧಜಲಸಂಪೂರ್ಣತಟಾಕಪರಿಶೋಭಿತಂ ॥ ೩೨ ॥
ಪದ್ಮೇಂದೀವರಕಹ್ಲಾರಸರಸೀಶತಸಂಕುಲಂ ।
ತತ್ರ ಪೀತ್ವಾ ಜಲಂ ತೇ ತು ಪಾಯಯಿತ್ವಾ ಹಯಾಂಸ್ತಥಾ ॥ ೩೩ ॥
ಅನೇಕಶಾಖಾಸಂಬಾಧನ್ಯಗ್ರೋಧಂ ದದೃಶುಸ್ತತಃ ।
ಸಂಪ್ರಾಪ್ಯ ತು ಮಹಾವೃಕ್ಷಂ ನ್ಯಗ್ರೋಧಂ ತೇ ತ್ರಯಸ್ತದಾ ॥ ೩೪ ॥
ಅವತೀರ್ಯ ರಥೇಭ್ಯಶ್ಚ ಮೋಚಯಿತ್ವಾ ತುರಂಗಮಾನ್ ।
ಉಪಸ್ಪೃಶ್ಯ ಜಲಂ ತತ್ರ ಸಾಯಂಸಂಧ್ಯಾಮುಪಾಸತ ॥ ೩೫ ॥
ಅಥ ಚಾಽಸ್ತಗಿರಿಂ ಭಾನುಃ ಪ್ರಪೇದೇ ಚ ಗತಪ್ರಭಃ ।
ತತಶ್ಚ ರಜನೀ ಘೋರಾ ಸಮಭೂತ್ತಿಮಿರಾಕುಲಾ ॥ ೩೬ ॥
ರಾತ್ರಿಂಚರಾಣಿ ಸತ್ವಾನಿ ಸಂಚರಂತಿ ತತಸ್ತತಃ ।
ದಿವಾಚರಾಣಿ ಸತ್ವಾನಿ ನಿದ್ರಾವಶಮುಪಾಯಯುಃ ॥ ೩೭ ॥
ಕೃತವರ್ಮಾ ಕೃಪೋ ದ್ರೌಣಿಃ ಪ್ರದೋಷಸಮಯೇ ಹಿ ತೇ ।
ನ್ಯಗ್ರೋಧಸ್ಯೋಪ ವಿವಿಶುರಂತಿಕೇ ಶೋಕಕರ್ಶಿತಾಃ ॥ ೩೮ ॥

---

ಪೂರ್ವಮುಖವಾಗಿ ಸ್ವಲ್ಪದೂರ ಓಡಿದರು. ಬಳಿಕ ಆಯಾಸಗೊಂಡವರೂ, ಕುಪಿತರಾದವರೂ, ದುರ್ಯೋಧನನ ವಧೆಯಿಂದ ವ್ಯಥೆಗೊಂಡವರೂ ಆದ ಆ ಮೂವರೂ ಕ್ಷಣಕಾಲ ಅಲ್ಲಿಯೇ ನಿಂತರು. ಬಳಿಕ ಅವರು ಅನೇಕ ವೃಕ್ಷ ಲತೆಗಳಿಂದ ಆವರಿಸಲ್ಪಟ್ಟಿದೂ, ನಾನಾ ಬಗೆಯ ಮೃಗಗಳಿಂದ ತುಂಬಿರುವುದೂ, ಕ್ರೂರವಾದ ಪಕ್ಷಿಗಳ ಗುಂಪುಗಳುಳ್ಳದೂ, ತುಂಬಿದ ಕೆರೆಗಳಿಂದ ವಿರಾಜಿಸುವುದೂ, ತಾವರೆ, ನೀಲೋತ್ಪಲ, ಕಲ್ಹಾರ ಸರೋವರಗಳಿಂದ ತುಂಬಿರುವುದೂ ಆದ ಒಂದು ಕಾಡನ್ನು ಕಂಡರು. ಅಲ್ಲಿ ಅವರು ನೀರನ್ನು ಕುಡಿದು ಕುದುರೆಗಳಿಗೂ ನೀರನ್ನು ಕುಡಿಸಿ ಅನೇಕ ಕೊಂಬೆಗಳಿಂದ ದಟ್ಟವಾದ ಒಂದು ಆಲದ ಮರವನ್ನು ನೋಡಿದರು. ಆ ದೊಡ್ಡ ಆಲದಮರವನ್ನು ಹೊಂದಿ ರಥಗಳಿಂದ ಇಳಿದು ಕುದುರೆಗಳನ್ನು ಬಿಡಿಸಿ ಆಚಮನಮಾಡಿ ಸಾಯಂಕಾಲದ ಸಂಧ್ಯಾವಂದನೆಯನ್ನು ಮಾಡಿದರು. ಬಳಿಕ ಸೂರ್ಯನು ಕಾಂತಿಹೀನನಾಗಿ ಅಸ್ತಾಚಲವನ್ನು ಸೇರಲು ರಾತ್ರಿಯು ಕತ್ತಲೆಯಿಂದ ಕವಿದು ಭಯಂಕರವಾಯಿತು.

೩೭. ರಾತ್ರಿಚಾರಿಗಳಾದ ಪ್ರಾಣಿಗಳು ಇಲ್ಲಿ ಅಲ್ಲಿ ಸಂಚರಿಸುತ್ತಿದ್ದುವು. ಹಗಲು ಸಂಚರಿಸುವ ಪ್ರಾಣಿಗಳು ನಿದ್ರಿಸಿದುವು.

೩೮. ದುಃಖಗೊಂಡ ಆ ಕೃತವರ್ಮ, ಕೃಪ, ಅಶ್ವತ್ಥಾಮರು ರಾತ್ರಿಯಾಗಲು ಆ ಆಲದಮರದ ಹತ್ತಿರ ಕುಳಿತರು.

ಕೃಪಭೋಜೌ ತದಾ ನಿದ್ರಾಂ ಭೇಜಾತೇಽತಿಪರಾಕ್ರಮೌ ।
ಸುಖೋಚಿತಾಸ್ತ್ವದುಃಖಾರ್ಹಾ ನಿಷೇದುರ್ಧರಣೀತಲೇ ॥ ೩೯ ॥
ದ್ರೋಣಪುತ್ರಸ್ತು ಕೋಪೇನ ಕಲುಷೀಕೃತಮಾನಸಃ ।
ಯಯೌ ನ ನಿದ್ರಾಂ ವಿಪ್ರೇಂದ್ರಾ ನಿಶ್ವಸನ್ನುರಗೋ ಯಥಾ ॥ ೪೦ ॥
ತತೋಽವಲೋಕಯಾಂಚಕ್ರೇ ತದರಣ್ಯಂ ಭಯಾನಕಂ ।
ನ್ಯಗ್ರೋಧಂ ಚ ತತೋಽಪಶ್ಯದ್ಬಹುವಾಯಸಸಂಕುಲಂ ॥ ೪೧ ॥
ತತ್ರ ವಾಯಸವೃಂದಾನಿ ನಿಶಾಯಾಂ ವಾಸಮಾಯಯುಃ ।
ಸುಖಂ ಭಿನ್ನಾಸು ಶಾಖಾಸು ಸುಷುಪುಸ್ತೇ ಪೃಥಕ್ಪೃಥಕ್ ॥ ೪೨ ॥
ಕಾಕೇಷು ತೇಷು ಸುಪ್ತೇಷು ವಿಶ್ವಸ್ತೇಷು ಸಮಂ ತತಃ ।
ತತೋಽಪಶ್ಯತ್ಸಮಾಯಾಂತಂ ಘೂಕಂ ದ್ರೌಣಿರ್ಭಯಂಕರಂ ॥ ೪೩ ॥
ಕ್ರೂರಶಬ್ದಂ ಕ್ರೂರಕಾಯಂ ಬಭ್ರುಪಿಂಗಕಲೇಬರಂ ।
ಸ ಘೂಕೋಽಥ ಭೃಶಂ ಶಬ್ದಂ ಕೃತ್ವಾಽಲೀಯತ ಶಾಖಿನಿ ॥ ೪೪ ॥
ಉತ್ಪ್ಲುತ್ಯ ತಸ್ಯ ಶಾಖಾಯಾಂ ನ್ಯಗ್ರೋಧಸ್ಯ ವಿಹಂಗಮಃ ।
ಸುಪ್ತಾನ್ಕಾಕಾನ್ನಿಜಘ್ನೇಽಸಾವನೇಕಾನ್ವಾಯಸಾಂತಕಃ ॥ ೪೫ ॥

---

೩೯. ಆಗ ಸುಖಿಸಲು ಯೋಗ್ಯರೂ, ದುಃಖಪಡಲು ಅನರ್ಹರೂ ಆದ ಅವರು ನೆಲದಮೇಲೆ ಕುಳಿತುಕೊಂಡರು. ಆಗ ಕೃಪ ಕೃತವರ್ಮರು ನಿದ್ರಿಸಿದರು.

೪೦. ವಿಪ್ರವರ್ಯರೆ! ಅಶ್ವತ್ಥಾಮನು ಕೋಪದಿಂದ ಕದಡಿದ ಮನಸ್ಸುಳ್ಳವನಾಗಿ ನಾಗರಹಾವಿನಂತೆ ನಿಟ್ಟುಸಿರುಬಿಡುತ್ತಿದ್ದನು. ಅವನಿಗೆ ನಿದ್ರೆ ಬರಲಿಲ್ಲ.

೪೧. ಬಳಿಕ ಅವನು ಆ ಭಯಂಕರವಾದ ಕಾಡನ್ನೂ, ಅನೇಕ ಕಾಗೆಗಳಿಂದ ತುಂಬಿದ ಆ ಆಲದಮರವನ್ನೂ ಒಮ್ಮೆ ನೋಡಿದನು.

೪೨. ರಾತ್ರಿಯಲ್ಲಿ ಆ ಕಾಗೆಗಳು ಅಲ್ಲಿ ವಾಸಮಾಡುತ್ತ ಬೇರೆ ಬೇರೆ ಕೊಂಬೆಗಳಲ್ಲಿ ಪ್ರತ್ಯೇಕವಾಗಿ ನಿದ್ರಿಸಿದುವು.

೪೩. ಆ ಕಾಗೆಗಳು ನಂಬಿಕೆಯಿಂದ ನಿದ್ರಿಸುತ್ತಿರಲು ಅಶ್ವತ್ಥಾಮನು ಭಯಂಕರವಾದ ಒಂದು ಗೂಬೆಯು ಬರುತ್ತಿರುವುದನ್ನು ನೋಡಿದನು.

೪೪. ಕ್ರೂರಶಬ್ದವುಳ್ಳುದೂ, ಕ್ರೂರವಾದ ಮುಂಗಸಿಯಂತೆ ಹಳದಿಬಣ್ಣದ ದೇಹವುಳ್ಳುದೂ ಆದ ಆ ಗೂಬೆಯು ಬಹಳ ಶಬ್ದಮಾಡಿ ಕೊಂಬೆಯಲ್ಲಿ ಅಡಗಿಕೊಂಡಿತು.

೪೫. ತರುವಾಯ ಕಾಗೆಗಳಿಗೆ ಶತ್ರುವಾದ ಆ ಗೂಬೆಯು ಮೇಲಕ್ಕೆ ಹಾರಿ ಆ ಆಲದಮರದ ಕೊಂಬೆಯಲ್ಲಿ ನಿದ್ರಿಸುತ್ತಿರುವ ಅನೇಕ ಕಾಗೆಗಳನ್ನು ಕೊಂದಿತು.

ಕಾಕಾನಾಮಭಿನತ್ಪಕ್ಷಾನ್ಸ ಕೇಷಾಂಚಿದ್ವಿಹಂಗಮಃ ।
ಇತರೇಷಾಂ ಚ ಚರಣಾನ್ಶಿರಾಂಸಿ ಚರಣಾಯುಧಃ ॥ ೪೬ ॥
ವಿಚಕರ್ತ ಕ್ಷಣೇನಾಽಸಾವುಲೂಕೋ ಬಲವಾನ್ದ್ವಿಜಾಃ ।
ಸ ಭಿನ್ನದೇಹಾಽವಯವೈಃ ಕಾಕಾನಾಂ ಬಹುಭಿಸ್ತದಾ ॥ ೪೭ ॥
ಸಮಂತಾದಾವೃತಂ ಸರ್ವಂ ನ್ಯಗ್ರೋಧಪರಿಮಂಡಲಂ ।
ವಾಯಸಾಂಸ್ತಾನ್ನಿಹತ್ಯಾಸಾವುಲೂಕೋ ಮುಮುದೇ ತದಾ ॥ ೪೮ ॥
ದ್ರೌಣಿರ್ದೃಷ್ಟ್ವಾ ತು ತತ್ಕರ್ಮ ಭಾಸೇನೈವಂ ಕೃತಂ ನಿಶಿ ।
ಕರಿಷ್ಯಾಮ್ಯಹಮಪ್ಯೇವಂ ಶತ್ರೂಣಾಂ ನಿಧನಂ ನಿಶಿ ॥ ೪೯ ॥
ಇತ್ಯಚಿಂತಯದೇಕಃ ಸನ್ನುಪದೇಶಮಿಮಂ ಸ್ಮರನ್ ।
ಜೇತುಂ ನ ಶಕ್ಯಾಃ ಪಾರ್ಥಾ ಹಿ ಋಜುಮಾರ್ಗೇಣ ಯುಧ್ಯತಾ ॥ ೫೦ ॥
ಮಯಾ ತಚ್ಛದ್ಮನಾ ತೇಽದ್ಯ ಹಂತವ್ಯಾ ಜಿತಕಾಶಿನಃ ।
ಸುಯೋಧನಸಕಾಶೇ ಚ ಪ್ರತಿಜ್ಞಾತೋ ಮಯಾ ವಧಃ ॥ ೫೧ ॥
ಋಜುಮಾರ್ಗೇಣ ಯುದ್ಧೇ ಮೇ ಪ್ರಾಣನಾಶೋ ಭವಿಷ್ಯತಿ ।
ಛಲೇನ ಯುಧ್ಯಮಾನಸ್ಯ ಜಯಶ್ಚಾಽಸ್ಯ ರಿಪುಕ್ಷಯಃ ॥ ೫೨ ॥

---

೪೬. ಅದು ಕೆಲವು ಕಾಗೆಗಳ ರೆಕ್ಕೆಗಳನ್ನೂ, ಕೆಲವು ಕಾಗೆಗಳ ಕಾಲುಗಳನ್ನೂ, ಕೆಲವು ಕಾಗೆಗಳ ತಲೆಗಳನ್ನೂ ಕತ್ತರಿಸಿತು.

೪೭–೪೮. ಬಲಿಷ್ಠವಾದ ಆ ಗೂಬೆಯು ಒಂದು ಕ್ಷಣದಲ್ಲಿಯೆ ಅನೇಕ ಕಾಗೆಗಳನ್ನು ಕತ್ತರಿಸಲು ಆ ಆಲದಮರದ ಸುತ್ತ ಎಲ್ಲ ಕಡೆಯಲ್ಲಿಯೂ ಕಾಗೆಗಳ ಶರೀರರಾಶಿಗಳು ಬಿದ್ದುವು. ಗೂಬೆಯು ಆ ಕಾಗೆಗಳನ್ನು ಕೊಂದು ಸಂತೋಷಗೊಂಡಿತು.

೪೯–೫೧. ಅಶ್ವತ್ಥಾಮನು ರಾತ್ರಿಯಲ್ಲಿ ಗೂಬೆಯು ಮಾಡಿದ ಆ ಕೆಲಸವನ್ನು ಕಂಡು ಆ ಉಪದೇಶವನ್ನೇ ಸ್ಮರಿಸುತ್ತ, "ನಾನೂ ರಾತ್ರಿಯಲ್ಲಿ ಹೀಗೆಯೇ ಶತ್ರುಗಳನ್ನು ಕೊಲ್ಲುವೆನು" ಎಂದು ಆಲೋಚಿಸಿದನು. "ಸರಳಮಾರ್ಗದಿಂದ ಕಾಳಗಮಾಡಿ ಪಾಂಡವರನ್ನು ಗೆಲ್ಲಲು ಸಾಧ್ಯವಿಲ್ಲ. ಜಯಶಾಲಿಗಳಾದ ಅವರನ್ನು ನಾನೀಗ ಮೋಸದಿಂದ ಕೊಲ್ಲುವೆನು. ದುರ್ಯೋಧನನ ಬಳಿ ನಾನು ಪಾಂಡವರನ್ನು ಕೊಲ್ಲುವೆನೆಂದು ಪ್ರತಿಜ್ಞೆಮಾಡಿರುವೆನು.

೫೨. ನಾನು ಋಜುಮಾರ್ಗದಿಂದ ಯುದ್ಧಮಾಡಿದರೆ ಸಾಯುವೆನು. ಮೋಸದಿಂದ ಯುದ್ಧಮಾಡಿದರೆ ಜಯವು ಲಭಿಸುವುದು. ಶತ್ರುಗಳೂ ನಾಶವಾಗುವರು.

ಯಚ್ಚ ನಿಂದ್ಯಂ ಭವೇತ್ಕಾರ್ಯಂ ಲೋಕೇ ಸರ್ವಜನೈರಪಿ ।
ಕಾರ್ಯಮೇವ ಹಿ ತತ್ಕರ್ಮ ಕ್ಷತ್ರಧರ್ಮಾನುವರ್ತಿನಾ ॥ ೫೩ ॥
ಪಾರ್ಥೈರಪಿ ಛಲೇನೈವ ಕೃತಂ ಕರ್ಮ ಸುಯೋಧನೇ ।
ಅಸ್ಮಿನ್ನರ್ಥೇ ಪುರಾವಿದ್ಭಿಃ ಪ್ರೋಕ್ತಾಃ ಶ್ಲೋಕಾ ಭವಂತಿ ಹಿ ॥ ೫೪ ॥
ಪರಿಶ್ರಾಂತೇ ವಿದೀರ್ಣೇ ಚ ಭುಂಜಾನೇ ಚ ರಿಪೋರ್ಬಲೇ ।
ಪ್ರಸ್ಥಾನೇ ಚ ಪ್ರವೇಶೇ ಚ ಪ್ರಹರ್ತವ್ಯಂ ನ ಸಂಶಯಃ ॥ ೫೫ ॥
ನಿದ್ರಾರ್ತಮರ್ಧರಾತ್ರೇ ಚ ತಥಾ ತ್ಯಕ್ತಾಯುಧಂ ರಣೇ ।
ಭಿನ್ನಯೋಧಂ ಬಲಂ ಸರ್ವಂ ಪ್ರಹರ್ತವ್ಯಮರಾತಿಭಿಃ ॥ ೫೬ ॥
ಏವಂ ಸ ನಿಯಮಂ ಕೃತ್ವಾ ಸುಪ್ತಮಾರಣಕರ್ಮಣಿ ।
ಪ್ರಾಬೋಧಯದ್ದ್ವಿಜಕೃಪೌ ಸುಪ್ತೌ ರಾತ್ರೌ ಸ ಸಾಹಸೀ ।
ದ್ರೌಣಿರ್ಧ್ಯಾತ್ವಾ ಮುಹೂರ್ತಂ ತು ತಾವುಭಾವಭ್ಯಭಾಷತ ॥ ೫೭ ॥

ಅಶ್ವತ್ಥಾಮೋವಾಚ :—

ಮೃತಃ ಸುಯೋಧನೋ ರಾಜಾ ಮಹಾಬಲಪರಾಕ್ರಮಃ ॥ ೫೮ ॥
ಶುದ್ಧಕರ್ಮಾ ಹತಃ ಪಾರ್ಥೈರ್ಬಹುಭಿಃ ಕ್ಷುದ್ರಕರ್ಮಭಿಃ ।
ಭೀಮೇನಾತಿ ನೃಶಂಸೇನ ಶಿರೋ ರಾಜ್ಞಃ ಪದಾ ಹತಂ ॥ ೫೯ ॥

---

೫೩. ಪ್ರಪಂಚದಲ್ಲಿ ಸಮಸ್ತ ಜನರೂ ನಿಂದಿಸುವ ಕಾರ್ಯವನ್ನು ಕ್ಷತ್ರಿಯ ಧರ್ಮಾವಲಂಬಿಯು ಮಾಡಲೇಬೇಕಾಗುವುದು.

೫೪. ಪಾಂಡವರೂ ದುರ್ಯೋಧನನಲ್ಲಿ ಮೋಸವನ್ನು ಆಚರಿಸಿರುವರು. ಈ ವಿಷಯದಲ್ಲಿ ಹಿಂದಿನವರು ಹೇಳಿದ ಶ್ಲೋಕಗಳಿರುವುವು.

೫೫. "ಶತ್ರುಸೈನ್ಯವು ಬಳಲಿದಾಗಲೂ, ಗಾಯಗೊಂಡಾಗಲೂ, ಊಟ ಮಾಡುತ್ತಿರುವಾಗಲೂ, ಪ್ರಯಾಣಮಾಡುತ್ತಿರುವಾಗಲೂ, ಪಟ್ಟಣವನ್ನು ಪ್ರವೇಶಿಸುತ್ತಿರುವಾಗಲೂ ಹೊಡೆಯಬೇಕು.

೫೬. ಶತ್ರುಬಲವು ಅರ್ಧರಾತ್ರಿಯಲ್ಲಿ ನಿದ್ರಿಸುತ್ತಿರುವಾಗಲೂ, ಆಯುಧಗಳನ್ನು ತ್ಯಜಿಸಿರುವಾಗಲೂ, ಚದರಿದ ಪದಾತಿಗಳುಳ್ಳದಾಗಿರುವಾಗಲೂ ಆ ಸೈನ್ಯವನ್ನು ಸಂಹರಿಸಬೇಕು."

೫೭. ಅಶ್ವತ್ಥಾಮನು ಹೀಗೆ ಮಲಗಿರುವ ಶತ್ರುಗಳನ್ನು ಕೊಲ್ಲಬೇಕೆಂದು ನಿಶ್ಚಯಿಸಿ ಮಲಗಿರುವ ಕೃಪ ಮತ್ತು ಕೃತವರ್ಮರನ್ನು ಎಬ್ಬಿಸಿ ಸ್ವಲ್ಪಹೊತ್ತು ಆಲೋಚಿಸಿ ಅವರನ್ನು ಕುರಿತು ಇಂತೆಂದನು :

೫೮–೫೯. ಅಶ್ವತ್ಥಾಮನು ಹೇಳುತ್ತಾನೆ :—"ಅತಿಶಯಬಲವುಳ್ಳವನೂ, ಪರಿಶುದ್ಧಕಾರ್ಯಗಳುಳ್ಳವನೂ ಆದ ದುರ್ಯೋಧನನನ್ನು ಅಲ್ಪಕಾರ್ಯವನ್ನು ಆಚರಿಸುವವರಾದ ಬಹುಮಂದಿ ಪಾಂಡವರು ಹೊಡೆದು ಕೊಂದರು. ಮಹಾ

ತತೋಽದ್ಯ ರಾತ್ರೌ ಪಾರ್ಥಾನಾಂ ಸಮೇತ್ಯ ಪಟಮಂಡಪಂ ।
ಸುಖಸುಪ್ತಾನ್ನಿಷ್ಯಾಮಃ ಶಸ್ತ್ರೈರ್ನಾನಾವಿಧೈರ್ವಯಂ ।
ಕೃಪಃ ಪ್ರೋವಾಚ ತತ್ರೈನಮಿತಿ ಶ್ರುತ್ವಾ ದ್ವಿಜೋತ್ತಮಾಃ ॥ ೬೦ ॥

ಕೃಪ ಉವಾಚ :—

ಸುಪ್ತಾನಾಂ ಮಾರಣಂ ಲೋಕೇ ನ ಧರ್ಮೋ ನ ಚ ಪೂಜ್ಯತೇ ॥ ೬೧ ॥
ತಥೈವ ತ್ಯಕ್ತಶಸ್ತ್ರಾಣಾಂ ಸಂತ್ಯಕ್ತರಥವಾಜಿನಾಂ ।
ಶೃಣು ಮೇ ವಚನಂ ವತ್ಸ ಮುಚ್ಯತಾಂ ಸಾಹಸಂ ತ್ವಯಾ ॥ ೬೨ ॥
ವಯಂ ತು ಧೃತರಾಷ್ಟ್ರಂ ಚ ಗಾಂಧಾರೀಂ ಚ ಪತಿವ್ರತಾಂ ।
ಪೃಚ್ಛಾಮೋ ವಿದುರಂ ಚಾಽಪಿ ತದುಕ್ತಂ ಕರವಾಮಹೇ ।
ಇತ್ಯುಕ್ತಃ ಸ ತದಾ ದ್ರೌಣಿಃ ಕೃಪಂ ಪ್ರೋವಾಚ ವೈ ಪುನಃ ॥ ೬೩ ॥

ಅಶ್ವತ್ಥಾಮೋವಾಚ :—

ಪಾಂಡವೈಶ್ಚ ಪುರಾ ಯನ್ಮೇ ಛಲಾದ್ಯುದ್ಧೇ ಪಿತಾ ಹತಃ ॥ ೬೪ ॥
ತನ್ಮೇ ಸರ್ವಾಣಿ ಮರ್ಮಾಣಿ ನಿಕೃಂತತಿ ಹಿ ಮಾತುಲ ।
ದ್ರೋಣಹಂತಾಽಹಮಿತ್ಯೇತದ್ಧೃಷ್ಟದ್ಯುಮ್ನಸ್ಯ ಯದ್ವಚಃ ॥ ೬೫ ॥
ಕಥಂ ಜನಸಮಕ್ಷೇ ತದ್ವಚನಂ ಸಂಶೃಣೋಮ್ಯಹಂ ।
ತೈರೈವ ಪಾಂಡವೈಃ ಪೂರ್ವಂ ಧರ್ಮಸೇತುರ್ನಿರಾಕೃತಃ ॥ ೬೬ ॥

---

ಘಾತುಕನಾದ ಭೀಮನು ದೊರೆಯಾದ ದುರ್ಯೋಧನನ ತಲೆಯನ್ನು ಕಾಲಿನಿಂದ ಒದೆದಿರುವನು.

೬೦. ಆದುದರಿಂದ ಈ ರಾತ್ರಿ ನಾವು ಪಾಂಡವರ ಪಾಳೆಯಕ್ಕೆ ಹೋಗಿ ಸುಖವಾಗಿ ಮಲಗಿರುವ ಅವರನ್ನು ನಾನಾ ಬಗೆಯ ಆಯುಧಗಳಿಂದ ಕೊಲ್ಲೋಣ'' ಎಂದನು. ಈ ಮಾತನ್ನು ಕೇಳಿ ಕೃಪನು ಹೀಗೆಂದನು :

೬೧–೬೨. ಕೃಪನು ಹೇಳುತ್ತಾನೆ:—''ಮಲಗಿದವರನ್ನೂ, ಆಯುಧಗಳಿಲ್ಲದವರನ್ನೂ, ರಥ ಕುದುರೆಗಳನ್ನು ತ್ಯಜಿಸಿದವರನ್ನೂ ಕೊಲ್ಲುವುದು ಧರ್ಮವಲ್ಲ. ಇದು ಲೋಕಪೂಜ್ಯವೂ ಅಲ್ಲ. ಮಗು! ನನ್ನ ಮಾತನ್ನು ಕೇಳು; ನೀನು ಈ ಸಾಹಸಕಾರ್ಯವನ್ನು ತ್ಯಜಿಸು.

೬೩. ನಾವು ಧೃತರಾಷ್ಟ್ರನನ್ನೂ, ಸಾಧ್ವಿಯಾದ ಗಾಂಧಾರಿಯನ್ನೂ, ವಿದುರನನ್ನೂ ಕೇಳೋಣ. ಅವರು ಹೇಳಿದಂತೆ ಮಾಡೋಣ'' ಎನ್ನಲು, ಅಶ್ವತ್ಥಾಮನು ಮರಳಿ ಕೃಪನನ್ನು ಕುರಿತು ಇಂತೆಂದನು:

೬೪–೬೬. ಅಶ್ವತ್ಥಾಮನು ಹೇಳುತ್ತಾನೆ:—''ಮಾವ! ಹಿಂದೆ ಪಾಂಡವರು ಮೋಸದಿಂದ ನನ್ನ ತಂದೆಯನ್ನು ಕೊಂದಿರುವುದು ನನ್ನ ಮರ್ಮಸ್ಥಾನವನ್ನು ಕತ್ತರಿಸುತ್ತಿದೆ. ಧೃಷ್ಟದ್ಯುಮ್ನನು ಜನರ ಮುಂದೆ ನಾನು ದ್ರೋಣನನ್ನು

ಸಮಕ್ಷಮೇವ ಯುಷ್ಮಾಕಂ ಸರ್ವೇಷಾಮೇವ ಭೂಭೃತಾಂ ।
ತ್ಯಕ್ತಾಯುಧೋ ಮಮ ಪಿತಾ ಧೃಷ್ಟದ್ಯುಮ್ನೇನ ಪಾತಿತಃ ॥ ೬೭ ॥
ತಥಾ ಶಾಂತನವೋ ಭೀಷ್ಮಃ ತ್ಯಕ್ತಚಾಪೋ ನಿರಾಯುಧಃ ।
ಶಿಖಂಡಿನಂ ಪುರೋಧಾಯ ನಿಹತಃ ಸವ್ಯಸಾಚಿನಾ ॥ ೬೮ ॥
ಏವಮನ್ಯೇಽಪಿ ಭೂಪಾಲಾಶ್ಛಲೇನೈವ ಹತಾಸ್ತು ತೈಃ ।
ತಥೈವಾಽಹಂ ಕರಿಷ್ಯಾಮಿ ಸುಪ್ತಾನಾಂ ಮಾರಣಂ ನಿಶಿ ॥ ೬೯ ॥
ಏವಮುಕ್ತ್ವಾ ತದಾ ದ್ರೌಣಿಃ ಸಂಯುಕ್ತತುರಗಂ ರಥಂ ।
ಪ್ರಾಯಾದಭಿಮುಖಃ ಶತ್ರೂನ್ಸಮಾರುಹ್ಯ ಕ್ರುಧಾ ಜ್ವಲನ್ ॥ ೭೦ ॥
ತಂ ಯಾಂತಮನ್ವಗಾತಾಂ ತೌ ಕೃತವರ್ಮಕೃಪಾವುಭೌ ।
ಯಯುಶ್ಚ ಶಿಬಿರೇ ತೇಷಾಂ ಸಂಪ್ರಸುಪ್ತಜನಂ ತದಾ ॥ ೭೧ ॥
ಶಿಬಿರದ್ವಾರಮಾಸಾದ್ಯ ದ್ರೋಣಪುತ್ರೋ ವ್ಯತಿಷ್ಠತ ।
ರಾತ್ರೌ ತತ್ರ ಸಮಾರಾಧ್ಯ ಮಹಾದೇವಂ ಘೃಣಾನಿಧಿಂ ॥ ೭೨ ॥
ಅವಾಪ ವಿಮಲಂ ಖಡ್ಗಂ ಮಹಾದೇವಾದ್ವರಪ್ರದಾತ್ ।
ತತೋ ದ್ರೌಣಿರವಸ್ಥಾಪ್ಯ ಕೃತವರ್ಮಕೃಪಾವುಭೌ ॥ ೭೩ ॥

---

ಕೊಂದವನೆಂದು ಹೇಳುತ್ತಿರುವ ಮಾತನ್ನು ನಾನು ಹೇಗೆ ಕೇಳಲಿ. ಹಿಂದೆ ಆ ಪಾಂಡವರೇ ಧರ್ಮದ ಕಟ್ಟನ್ನು ಬಿಡಿಸಿರುವರು.

೬೭. ಧೃಷ್ಟದ್ಯುಮ್ನನು ನಿಮ್ಮ ಮತ್ತು ಸಕಲ ದೊರೆಗಳ ಮುಂದೆ ಶಸ್ತ್ರವನ್ನು ತ್ಯಜಿಸಿದ ನನ್ನ ತಂದೆಯನ್ನು ಕೊಂದಿರುವನು.

೬೮. ಹಾಗೆಯೇ ಅರ್ಜನನು ಶಿಖಂಡಿಯನ್ನು ಮುಂದಿರಿಸಿಕೊಂಡು ಆಯುಧವಿಲ್ಲದ ಭೀಷ್ಮನನ್ನು ಸಂಹರಿಸಿದ್ದಾನೆ.

೬೯. ಆ ಪಾಂಡವರು ಹೀಗೆಯೇ ಇತರ ರಾಜರನ್ನೂ ಮೋಸದಿಂದ ಕೊಂದಿರುವರು. ನಾನೂ ಹಾಗೆಯೇ ರಾತ್ರಿಯಲ್ಲಿ ಮಲಗಿದ ಅವರನ್ನು ಕೊಲ್ಲುವೆನು."

೭೦. ಅಶ್ವತ್ಥಾಮನು ಹೀಗೆ ಹೇಳಿ ರಥಕ್ಕೆ ಕುದುರೆಗಳನ್ನು ಕಟ್ಟಿ ಅದರಲ್ಲಿ ಕುಳಿತು ಸಿಟ್ಟಿನಿಂದ ಉರಿಯುತ್ತ ಶತ್ರುಗಳಿಗೆ ಅಭಿಮುಖವಾಗಿ ಹೊರಟನು.

೭೧–೭೬. ಕೃತವರ್ಮ ಕೃಪರು ಹೀಗೆ ನುಗ್ಗಿಹೋಗುತ್ತಿರುವ ಅವನನ್ನು ಹಿಂಬಾಲಿಸಿದರು. ದ್ರೋಣಪುತ್ರನು ಮಲಗಿದ ಜನರುಳ್ಳ ಆ ಪಾಂಡವರ ಶಿಬಿರವನ್ನು ಸೇರಿ ಬಾಗಿಲಿನಲ್ಲಿ ನಿಂತನು. ಆ ರಾತ್ರಿ ಅಲ್ಲಿಯೇ ಅವನು ದಯಾಳುವಾದ ಮಹೇಶ್ವರನನ್ನು ಆರಾಧಿಸಿ ವರದಾನವನ್ನು ಮಾಡುವ ಅವನಿಂದ ವಿಮಲವಾದ ಖಡ್ಗವನ್ನು ಪಡೆದನು. ಬಳಿಕ ವೀರನಾದ ಅಶ್ವತ್ಥಾಮನು ಆ ಕೃತವರ್ಮ ಕೃಪರನ್ನು ಬಾಗಿಲಿನಲ್ಲಿ ನಿಲ್ಲಿಸಿ ಶಿಬಿರದ ಒಳಗೆ ಹೊಕ್ಕನು. ಅವನು

ದ್ವಾರದೇಶೇ ಮಹಾವೀರಾಃ ಶಿಬಿರಾಂತಃಪ್ರವಿಷ್ಟವಾನ್ ।
ಪ್ರವಿಷ್ಟೇ ಶಿಬಿರೇ ದ್ರೋಣೌ ಕೃತವರ್ಮಕೃತಾವುಭೌ ॥ ೭೪ ॥
ದ್ವಾರದೇಶೇ ವ್ಯತಿಷ್ಠೇತಾಂ ಯತ್ತೌ ಪರಮಧನ್ವಿನೌ ।
ಅಥ ದ್ರೌಣಿಃ ಸುಸಂಕ್ರುದ್ಧಸ್ತೇಜಸಾ ಪ್ರಜ್ವಲನ್ನಿವ ॥ ೭೫ ॥
ಖಡ್ಗಂ ವಿಮಲಮಾದಾಯ ವ್ಯಚರಚ್ಛಿಬಿರೇ ನಿಶಿ ।
ತತಸ್ತು ಧೃಷ್ಟದ್ಯುಮ್ನಸ್ಯ ಶಿಬಿರಂ ಮಂದಮಾಯಯೌ ॥ ೭೬ ॥
ಧೃಷ್ಟದ್ಯುಮ್ನಾದಯಸ್ತತ್ರ ಮಹಾಯುದ್ಧೇನ ಕರ್ಶಿತಾಃ ।
ಸುಷುಪುರ್ನಿಶಿ ವಿಶ್ವಸ್ತಾಃ ಸ್ವಸ್ವಸೈನ್ಯಸಮಾವೃತಾಃ ॥ ೭೭ ॥
ಧೃಷ್ಟದ್ಯುಮ್ನಸ್ಯ ಶಿಬಿರಂ ಪ್ರವಿಶ್ಯ ದ್ರೌಣಿರಸ್ತ್ರವಿತ್ ।
ತಂ ಸುಪ್ತಂ ಶಯನೇ ಶುಭ್ರೇ ದದರ್ಶಾರಾನ್ಮಹಾಬಲಂ ॥ ೭೮ ॥
ಪಾದೇನಾಘಾತಯದ್ರೋಷಾತ್ಸ್ವಪಂತಂ ದ್ರೋಣನಂದನಃ ।
ಸ ಬುದ್ಧಶ್ಚರಣಾಘಾತಾದುತ್ಥಾಯ ಶಯನಾದಥ ॥ ೭೯ ॥
ವ್ಯಲೋಕಯತ್ತದಾ ವೀರೋ ದ್ರೋಣಪುತ್ರಂ ಪುರಃ ಸ್ಥಿತಂ ।
ತಮುತ್ಪತಂತಂ ಶಯನಾದ್ದ್ರೋಣಾಚಾರ್ಯಸುತೋ ಬಲೀ ॥ ೮೦ ॥
ಕೇಶೇಷ್ವಾಕೃಷ್ಯ ಬಾಹುಭ್ಯಾಂ ನಿಷ್ಪಿಪೇಷ ಧರಾತಲೇ ।
ಧೃಷ್ಟದ್ಯುಮ್ನಸ್ತದಾ ತೇನ ನಿಷ್ಪಿಷ್ಟಃ ಸಭಯಾತುರಃ ॥ ೮೧ ॥

---

ಒಳಗೆ ಪ್ರವೇಶಿಸಲು ಕೃಪ ಕೃತವರ್ಮರು ಧನುರ್ಧಾರಿಗಳಾಗಿ ಬಾಗಿಲಿನಲ್ಲಿ ನಿಂತರು. ತರುವಾಯ ಅಶ್ವತ್ಥಾಮನು ಕುಪಿತನಾಗಿ ತೇಜಸ್ಸಿನಿಂದ ಜ್ವಲಿಸುತ್ತ ಖಡ್ಗವನ್ನು ಹಿಡಿದು ರಾತ್ರಿಯಲ್ಲಿ ಆ ಶಿಬಿರದಲ್ಲೆಲ್ಲ ಸಂಚರಿಸಿದನು. ಹಾಗೆಯೇ ಅವನು ಧೃಷ್ಟದ್ಯುಮ್ನನ ಶಿಬಿರಕ್ಕೆ ಮೆಲ್ಲನೆ ಬಂದನು.

೭೭. ಅಲ್ಲಿ ಧೃಷ್ಟದ್ಯುಮ್ನಾದಿಗಳು ಘೋರ ಯುದ್ಧದಿಂದ ಕೃಶರಾಗಿ ತಮ್ಮ ತಮ್ಮ ಸೈನ್ಯಗಳೊಡನೆ ನಂಬಿಕೆಯಿಂದ ನಿದ್ರಿಸಿದ್ದರು.

೭೮. ಅಸ್ತ್ರವಿದ್ಯೆಯನ್ನರಿತ ಅಶ್ವತ್ಥಾಮನು ಧೃಷ್ಟದ್ಯುಮ್ನನ ಶಿಬಿರವನ್ನು ಹೊಕ್ಕು ಹತ್ತಿರದಲ್ಲಿ ಶುಭ್ರವಾದ ಹಾಸಿಗೆಯಲ್ಲಿ ಮಲಗಿರುವ ಬಲಿಷ್ಠನಾದ ಅವನನ್ನು ಕಂಡನು.

೭೯–೮೩. ಅಶ್ವತ್ಥಾಮನು ನಿದ್ರಿಸುತ್ತಿರುವ ಆ ಧೃಷ್ಟದ್ಯುಮ್ನನನ್ನು ಕಾಲಿನಿಂದ ಒದೆದನು. ಆ ಧೃಷ್ಟದ್ಯುಮ್ನನು ಅದರಿಂದ ಕುಪಿತನಾಗಿ ಹಾಸಿಗೆಯಿಂದ ಎದ್ದು ಮುಂದೆ ನಿಂತಿರುವ ಅಶ್ವತ್ಥಾಮನನ್ನು ಕಂಡನು. ದ್ರೋಣಸುತನು ಹಾಸಿಗೆಯಿಂದ ಹಾರುತ್ತಿರುವ ಆ ಧೃಷ್ಟದ್ಯುಮ್ನನ ಕೂದಲುಗಳನ್ನು ಎಳೆದು ತೋಳುಗಳಿಂದ ಅವನನ್ನು ಭೂಮಿಯಲ್ಲಿ ಉಜ್ಜಿದನು. ಹಾಗೆ ಉಜ್ಜಲ್ಪಟ್ಟ ಧೃಷ್ಟದ್ಯುಮ್ನನು ಭಯಗೊಂಡವನೂ, ನಿದ್ರೆಯಿಂದ ಮಂಕಾದವನೂ, ಕಾಲಿನ

ನಿದ್ರಾಂಧಃ ಪಾದಘಾತಾರ್ತೋ ನ ಶಶಾಕ ವಿಚೇಷ್ಟಿತುಂ ।
ದ್ರೌಣಿಸ್ತ್ವಾಕ್ರಮ್ಯ ತಸ್ಯೋರಃ ಕಂಠಂ ಬದ್ಧ್ವಾ ಧನುರ್ಗುಣೈಃ ॥ ೮೨ ॥
ನದಂತಂ ವಿಸ್ಫುರಂತಂ ತಂ ಪಶುಮಾರಮಮಾರಯತ್ ।
ತಸ್ಯ ಸೈನ್ಯಾನಿ ಸರ್ವಾಣಿ ನ್ಯವಧೀಚ್ಚ ತಥೈವ ಸಃ ॥ ೮೩ ॥
ಯುಧಾಮನ್ಯುಂ ಮಹಾವೀರ್ಯಮುತ್ತಮೌಜಸಮೇವ ಚ ।
ತಥೈವ ದ್ರೌಪದೀಪುತ್ರಾನವಶಿಷ್ಟಾಂಶ್ಚ ಸೋಮಕಾನ್ ॥ ೮೪ ॥
ಶಿಖಂಡಿಪ್ರಮುಖಾನನ್ಯಾನ್ಖಡ್ಗೇನಾಮಾರಯದ್ಬಹೂನ್ ।
ತದ್ಭಯಾದ್ದ್ವಾರನಿರ್ಯಾತಾನ್ಸರ್ವಾನೇವ ಚ ಸೈನಿಕಾನ್ ॥ ೮೫ ॥
ಪ್ರಾಪಯಾಮಾಸತುರ್ಮೃತ್ಯುಂ ಕೃತವರ್ಮಕೃಪಾವುಭೌ ।
ಏವಂ ನಿಹತಸೈನ್ಯಂ ತಚ್ಛಿಬಿರಂ ತೈರ್ಮಹಾಬಲೈಃ ॥ ೮೬ ॥
ತತ್ಕ್ಷಣೇ ಶೂನ್ಯಮಭವತ್ಪ್ರಜಗತ್ಪ್ರಲಯೇ ಯಥಾ ।
ಏವಂ ಹತ್ವಾ ತತಃ ಸರ್ವಾನ್ದ್ರೋಣಪುತ್ರಾದಯಸ್ತ್ರಯಃ ॥ ೮೭ ॥
ನಿರಗುಃ ಶಿಬಿರಾತ್ತಸ್ಮಾತ್ಪಾರ್ಥಭೀತಾ ಭಯಾತುರಾಃ ।
ಸರ್ವೇ ಪೃಥಕ್ಪೃಥಗ್ದೇಶಾನ್ಸುದ್ರುವುಃ ಶೀಘ್ರಗಾಮಿನಃ ॥ ೮೮ ॥
ಅಥ ದ್ರೌಣಿರ್ಯಯೌ ವಿಪ್ರಾ ರೇವಾತೀರಂ ಮನೋರಮಂ ।
ತತ್ರ ಹ್ಯನೇಕ ಸಾಹಸ್ರಾ ಋಷಯೋ ವೇದವಾದಿನಃ ॥ ೮೯ ॥

---

ಹೊಡೆತದಿಂದ ನೋವುಗೊಂಡವನೂ ಆಗಿ ಅಲ್ಲಾಡಲು ಸಮರ್ಥನಾಗಲಿಲ್ಲ. ಆಗ ಅಶ್ವತ್ಥಾಮನು ಅವನ ಎದೆಯನ್ನು ಹತ್ತಿ ಬಿಲ್ಲಿನ ಹಗ್ಗದಿಂದ ಕುತ್ತಿಗೆಯನ್ನು ಬಿಗಿದು, ಕೂಗುತ್ತಿರುವವನೂ, ಚಲಿಸುತ್ತಿರುವವನೂ ಆದ ಆ ಧೃಷ್ಟದ್ಯುಮ್ನನನ್ನು ಪಶುವನ್ನು ಕೊಲ್ಲುವಂತೆ ಕೊಂದನು. ಹಾಗೆಯೇ ಅವನ ಸೈನ್ಯವನ್ನೆಲ್ಲ ಸಂಹರಿಸಿದನು.

೮೪–೮೮. ಹಾಗೆಯೇ ಬಲವಂತನಾದ ಯುಧಾಮನ್ಯು, ದ್ರೌಪದಿಯ ಮಕ್ಕಳು, ಉಳಿದ ಸೋಮಕರು, ಶಿಖಂಡಿ ಇವರೇ ಮೊದಲಾದ ಇತರರನ್ನೂ ಕತ್ತಿಯಿಂದ ಕೊಂದನು. ಅವನ ಭಯದಿಂದ ಬಾಗಿಲಿನಲ್ಲಿ ಹೊರಟ ಎಲ್ಲ ಸೈನಿಕರನ್ನು ಕೃತವರ್ಮ ಕೃಪರು ಯಮಾಲಯಕ್ಕೆ ಕಳುಹಿಸಿದರು. ಹೀಗೆ ಮಹಾಬಲಶಾಲಿಗಳಾದ ಅವರು ಸೈನಿಕರನ್ನು ಕೊಲ್ಲಲು ಆ ಶಿಬಿರವು ಕೂಡಲೆ ಪ್ರಳಯಕಾಲದ ಜಗತ್ತಿನಂತೆ ಬರಿದಾಯಿತು. ಹೀಗೆ ಅಶ್ವತ್ಥಾಮನೇ ಮೊದಲಾದ ಆ ಮೂವರೂ, ಎಲ್ಲರನ್ನೂ ಸಂಹರಿಸಿ ಪಾಂಡವರ ಭಯದಿಂದ ಆ ಶಿಬಿರದಿಂದ ಹೊರಟು ವೇಗವಾಗಿ ಬೇರೆ ಬೇರೆ ದೇಶಕ್ಕೆ ಓಡಿಹೋದರು.

೮೯–೯೧. ಎಲೈ ದ್ವಿಜರೆ! ತರುವಾಯ ಅಶ್ವತ್ಥಾಮನು ಮನೋಹರವಾದ ರೇವಾನದಿಯ ದಡಕ್ಕೆ ಸಾಗಿದನು. ಅಲ್ಲಿ ಅನೇಕಸಾವಿರ ಮಂದಿ ವೇದಾಧ್ಯಯನ

ಕಥಯಂತಃ ಕಥಾಃ ಪುಣ್ಯಾಸ್ತಪಶ್ಚಕ್ರುರನುತ್ತಮಂ ।
ತತ್ರಾಽಯಂ ಪ್ರಯಯೌ ದ್ರೌಣೀರ್ಋಷೀಣಾಮಾಶ್ರಮೇಷ್ವಥ ॥ ೯೦ ॥
ಪ್ರವಿಷ್ಟಮಾತ್ರೇ ತಸ್ಮಿಂಸ್ತು ಮುನಯೋ ಬ್ರಹ್ಮವಾದಿನಃ ।
ದ್ರೌಣೇರ್ದುಶ್ಚರಿತಂ ಜ್ಞಾತ್ವಾ ಪ್ರಾಹುರ್ಯೋಗಬಲೇನ ತಂ ॥ ೯೧ ॥
ಸುಪ್ತಮಾರಣಕೃತ್ಪಾಪೀ ದ್ರೌಣೇ ತ್ವಂ ಬ್ರಾಹ್ಮಣಾಧಮಃ ।
ತ್ವದ್ದರ್ಶನೇನ ಹ್ಯಸ್ಮಾಕಂ ಪಾತಿತ್ಯಂ ಭವತಿ ಧ್ರುವಂ ॥ ೯೨ ॥
ತ್ವತ್ಸಂಭಾಷಣಮಾತ್ರೇಣ ಬ್ರಹ್ಮಹತ್ಯಾಽಯುತಂ ಭವೇತ್ ।
ಅತೋಽಸ್ಮದಾಶ್ರಮೇಭ್ಯಸ್ತ್ವಂ ನಿರ್ಗಚ್ಛ ಪುರುಷಾಧಮ ॥ ೯೩ ॥
ಇತ್ಯಬ್ರುವಂಸ್ತದಾ ದ್ರೌಣಿಂ ತತ್ರತ್ಯಾ ಮುನಯೋ ದ್ವಿಜಾಃ ।
ಇತೀರಿತಸ್ತತೋ ದ್ರೌಣಿರ್ಮುನಿಭಿರ್ಬ್ರಹ್ಮವಾದಿಭಿಃ ॥ ೯೪ ॥
ಲಜ್ಜಿತೋ ನಿರಗಾತ್ತಸ್ಮಾದಾಶ್ರಮಾನ್ಮುನಿಸೇವಿತಾತ್ ।
ಏವಂ ಕಾಶ್ಯಾದಿ ತೀರ್ಥೇಷು ಪುಣ್ಯೇಷು ಪ್ರಯಯೌ ಚ ಸಃ ॥ ೯೫ ॥
ತತ್ರ ತತ್ರ ದ್ವಿಜೈಃ ಸರ್ವೈರ್ನಿಂದಿತೋಽಸೌ ಮಹಾತ್ಮಭಿಃ ।
ವ್ಯಾಸಂ ಶರಣಮಾಪೇದೇ ಪ್ರಾಯಶ್ಚಿತ್ತಚಿಕೀರ್ಷಯಾ ॥ ೯೬ ॥

---

ಸಂಪನ್ನರಾದ ಋಷಿಗಳು ಪುಣ್ಯಕರವಾದ ಕಥೆಯನ್ನು ಹೇಳುತ್ತ ಉತ್ತಮ ತಪಸ್ಸನ್ನು ಮಾಡುತ್ತಿದ್ದರು. ಅಶ್ವತ್ಥಾಮನು ಆ ಮುನಿಗಳ ಆಶ್ರಮಗಳನ್ನು ಪ್ರವೇಶಿಸಿದ ಕೂಡಲೆ ಬ್ರಹ್ಮಜ್ಞಾನಿಗಳಾದ ಆ ಋಷಿಗಳು ಯೋಗಸಾಮರ್ಥ್ಯದಿಂದ ಆ ಅಶ್ವತ್ಥಾಮನ ನಡತೆಯನ್ನು ಅರಿತು ಅವನನ್ನು ಕುರಿತು ಇಂತೆಂದರು:

೯೨. "ಅಶ್ವತ್ಥಾಮ! ಮಲಗಿದವರನ್ನು ಕೊಂದ ಪಾಪಿಯಾದ ನೀನು ಬ್ರಾಹ್ಮಣಾಧಮನು. ನಿನ್ನನ್ನು ನೋಡಿದ ನಮಗೆ ನಿಶ್ಚಯವಾಗಿಯೂ ಪಾತಿತ್ಯವು ಸಂಭವಿಸುವುದು.

೯೩. ನಿನ್ನೊಡನೆ ಮಾತನಾಡುವುದರಿಂದಲೆ ನಮಗೆ ಹತ್ತುಸಾವಿರ ಬ್ರಹ್ಮಹತ್ಯೆಗಳು ಸಂಭವಿಸೀತು. ಎಲೈ ನೀಚನೆ! ಆದುದರಿಂದ ನೀನು ಈ ಆಶ್ರಮದಿಂದ ಹೊರಡು."

೯೪-೯೫. ದ್ವಿಜರೆ! ಬ್ರಹ್ಮಜ್ಞಾನಿಗಳಾದ ಆ ಮುನಿಗಳು ಅಶ್ವತ್ಥಾಮನನ್ನು ಕುರಿತು ಹೀಗೆನ್ನಲು ಅವನು ನಾಚಿಕೆಗೊಂಡು ಆ ಋಷ್ಯಾಶ್ರಮದಿಂದ ಹೊರಟು ಕಾಶ್ಯಾದಿ ಪುಣ್ಯತೀರ್ಥಗಳಿಗೆ ತೆರಳಿದನು.

೯೬. ಅಲ್ಲಲ್ಲಿ ಅವನನ್ನು ಮಹಾತ್ಮರಾದ ಬ್ರಾಹ್ಮಣರು ನಿಂದಿಸಲು ಅವನು ಪ್ರಾಯಶ್ಚಿತ್ತವನ್ನಾಚರಿಸುವ ಅಪೇಕ್ಷೆಯಿಂದ ವ್ಯಾಸರನ್ನು ಮರೆಹೊಕ್ಕನು.

ತತೋ ಬದರಿಕಾಽರಣ್ಯೇ ಸಮಾಸೀನಂ ಮಹಾಮುನಿಂ ।
ದ್ವೈಪಾಯನಂ ಸಮಾಗಮ್ಯ ಪ್ರಣನಾಮ ಸಭಕ್ತಿಕಂ ॥ ೯೭ ॥
ತತೋ ವ್ಯಾಸೋಽಬ್ರವೀದೇನಂ ದ್ರೋಣಾಚಾರ್ಯಸುತಂ ಮುನಿಃ ।
ತ್ವಮಸ್ಮಾದಾಶ್ರಮಾದ್ದ್ರೌಣೇ ನಿರ್ಯಾಹಿ ತ್ವರಯಾ ತ್ವಿತಿ ॥ ೯೮ ॥
ಸುಪ್ತಮಾರಣದೋಷೇಣ ಮಹಾಪಾತಕವಾನ್ಭವಾನ್ ।
ಅತೋ ಮೇ ಭವತಾಲಾಪಾನ್ಮಹತ್ಪಾಪಂ ಭವಿಷ್ಯತಿ ।
ಇತ್ಯುಕ್ತಃ ಸ ತದಾ ದ್ರೌಣಿಃ ಪ್ರೋವಾಚೇದಂ ವಚೋ ಮುನಿಃ ॥ ೯೯ ॥

ಅಶ್ವತ್ಥಾಮೋವಾಚ :—

ಭಗವನ್ನಿಂದಿತಃ ಸರ್ವೈಸ್ತ್ವಾಮಸ್ಮಿ ಶರಣಂ ಗತಃ ॥ ೧೦೦ ॥
ಬ್ರವೀಷಿ ಚೇತ್ತ್ವಮಪ್ಯೇವಂ ಕೋಽನ್ಯೋ ಮೇ ಶರಣಂ ಭವೇತ್ ।
ಕೃಪಾಂ ಕುರು ಮಯಿ ಬ್ರಹ್ಮನ್ಸಾಧವೋ ದೀನವತ್ಸಲಾಃ ॥ ೧೦೧ ॥
ಸುಪ್ತಮಾರಣದೋಷಸ್ಯ ಶಾಂತ್ಯರ್ಥಂ ಭಗವನ್ಮಮ ।
ಪ್ರಾಯಶ್ಚಿತ್ತಂ ವಿಧೇಹಿ ತ್ವಂ ಸರ್ವಜ್ಞೋಽಸಿ ಭವಾನ್ಯತಃ ।
ಇತ್ಯುಕ್ತೋ ದ್ರೌಣಿನಾ ವ್ಯಾಸಶ್ಚಿರಂ ಧ್ಯಾತ್ವಾ ತಮಬ್ರವೀತ್ ॥ ೧೦೨ ॥

ವ್ಯಾಸ ಉವಾಚ :—

ಏತತ್ಪಾಪಸ್ಯ ಶಾಂತ್ಯರ್ಥಂ ಪ್ರಾಯಶ್ಚಿತ್ತಂ ಸ್ಮೃತೌ ನ ಹಿ ॥ ೧೦೩ ॥

---

೯೭. ಬಳಿಕ ಅವನು ಬದರಿಕಾರಣ್ಯದಲ್ಲಿ ಕುಳಿತಿರುವ ವ್ಯಾಸರನ್ನು ಸಮಿಾಪಿಸಿ ಭಕ್ತಿಯಿಂದ ವಂದಿಸಿದನು.

೯೮–೯೯. ಆಗ ವ್ಯಾಸರು ಅವನನ್ನು ಕುರಿತು, "ಅಶ್ವತ್ಥಾಮ! ನೀನು ಶೀಘ್ರವಾಗಿ ಈ ಆಶ್ರಮದಿಂದ ಹೊರಡು. ನೀನು ಮಲಗಿದವರನ್ನು ಕೊಂದುದರಿಂದ ಮಹಾಪಾತಕಿಯಾಗಿರುವೆ. ನಿನ್ನೊಡನೆ ಮಾತಾಡಿದರೆ ನನಗೂ ಮಹಾಪಾಪವು ಸಂಭವಿಸುವುದು" ಎಂದು ಹೇಳಲು ಆಗ ಅಶ್ವತ್ಥಾಮನು ಅವನನ್ನು ಕುರಿತು ಹೀಗೆಂದನು :

೧೦೦–೧೦೧. ಅಶ್ವತ್ಥಾಮನು ಹೇಳುತ್ತಾನೆ:—"ಪೂಜ್ಯನೆ! ನಾನು ಎಲ್ಲರಿಂದಲೂ ನಿಂದಿತನಾಗಿ ನಿನ್ನನ್ನು ಮರೆಹೊಕ್ಕಿರುವೆನು. ನೀನೂ ಹೀಗೆಂದರೆ ನನ್ನನ್ನು ರಕ್ಷಿಸುವವರಾರು? ಮುನಿಯೆ! ನನ್ನಲ್ಲಿ ದಯೆದೋರು.

೧೦೨. ಪೂಜ್ಯನಾದ ವ್ಯಾಸಮುನಿಯೆ! ನೀನು ಎಲ್ಲವನ್ನೂ ಅರಿತವನು. ನಿದ್ರಿಸಿದವರನ್ನು ಕೊಂದ ಪಾಪವನ್ನು ನೀಗಿಸುವ ಪ್ರಾಯಶ್ಚಿತ್ತವನ್ನು ನನಗೆ ವಿಧಿಸು." ಅಶ್ವತ್ಥಾಮನು ಹೀಗೆನ್ನಲು ವ್ಯಾಸನು ಬಹಳಹೊತ್ತು ಚಿಂತಿಸಿ ಅವನನ್ನು ಕುರಿತು ಇಂತೆಂದನು :

೧೦೩. ವ್ಯಾಸನು ಹೇಳುತ್ತಾನೆ:—"ಅಶ್ವತ್ಥಾಮ! ಈ ಪಾಪವನ್ನು ಪರಿಹರಿಸುವ ಪ್ರಾಯಶ್ಚಿತ್ತವು ಸ್ಮೃತಿಯಲ್ಲಿ ಕಾಣಲಿಲ್ಲ.

ತಥಾಽಪ್ಯುಪಾಯಂ ವಕ್ಷ್ಯಾಮಿ ತವೈತದ್ದೋಷಶಾಂತಯೇ ।
ದಕ್ಷಿಣಾಂಬುನಿಧೌ ಪುಣ್ಯೇ ರಾಮಸೇತೌ ವಿಮುಕ್ತಿದೇ ॥ ೧೦೪ ॥
ಧನುಷ್ಕೋಟಿರಿತಿ ಖ್ಯಾತಂ ತೀರ್ಥಮಸ್ತಿ ಮಹತ್ತರಂ ।
ಅಸ್ತಿ ಪುಣ್ಯತಮಂ ದ್ರೌಣೇ ಮಹಾಪಾತಕನಾಶನಂ ॥ ೧೦೫ ॥
ಸ್ವರ್ಗಮೋಕ್ಷಪ್ರದಂ ಪುಂಸಾಂ ಬ್ರಹ್ಮಹತ್ಯಾದಿಶೋಧಕಂ ।
ಸರ್ವಮಂಗಲಮಾಂಗಲ್ಯಂ ಸರ್ವಾಽಭೀಷ್ಟಪ್ರದಾಯಕಂ ॥ ೧೦೬ ॥
ಪವಿತ್ರಾಣಾಂ ಪವಿತ್ರಂ ಚ ತೀರ್ಥಾನಾಂ ಚ ತಥೋತ್ತಮಂ ।
ದುಃಸ್ವಪ್ನನಾಶನಂ ಪುಣ್ಯಂ ನರಕಕ್ಲೇಶನಾಶನಂ ॥ ೧೦೭ ॥
ಅಕಾಲಮೃತ್ಯುಶಮನಂ ಪುಂಸಾಂ ವಿಜಯವರ್ಧನಂ ।
ದಾರಿದ್ರ್ಯನಾಶನಂ ಪುಂಸಾಮಾಯುರ್ವರ್ಧನಕಾರಣಂ ॥ ೧೦೮ ॥
ಚಿತ್ತಶುದ್ಧಿಪ್ರದಂ ನೄಣಾಂ ಶಾಂತಿದಾಂತ್ಯಾದಿಕಾರಣಂ ।
ತತ್ರ ಗತ್ವಾ ಧನುಷ್ಕೋಟೌ ರಾಮಸೇತೌ ವಿಮುಕ್ತಿದೇ ॥ ೧೦೯ ॥
ಸ್ನಾನಂ ಕುರುಷ್ವ ದ್ರೌಣೇ ತ್ವಂ ಮಾಸಮಾತ್ರಂ ನಿರಂತರಂ ।
ಸುಪ್ತಮಾರಣದೋಷಾತ್ತ್ವಂ ಸದ್ಯಃ ಪೂತೋ ಭವಿಷ್ಯಸಿ ॥ ೧೧೦ ॥
ಕುರುಷ್ವ ವಚನಂ ಶೀಘ್ರಂ ಮಮ ತ್ವಂ ದ್ರೋಣನಂದನ ।
ಏವಮುಕ್ತಸ್ತದಾ ದ್ರೌಣಿರ್ವ್ಯಾಸೇನ ಪರಮರ್ಷಿಣಾ ॥ ೧೧೧ ॥

---

೧೦೪-೧೧೦. ಆದರೂ ನಾನು ನಿನ್ನ ಈ ದೋಷದ ಪರಿಹಾರಕ್ಕೆ ಉಪಾಯವನ್ನರುಹುವೆನು. ದಕ್ಷಿಣಸಾಗರದಲ್ಲಿರುವ ಮೋಕ್ಷವನ್ನೀಯುವ ಪವಿತ್ರವಾದ ರಾಮಸೇತುವಿನಲ್ಲಿ ಧನುಷ್ಕೋಟಿಯೆಂಬ ಮಹಾಕ್ಷೇತ್ರವಿರುವುದು. ಅಶ್ವತ್ಥಾಮ! ಆ ಕ್ಷೇತ್ರವು ನರರ ಬ್ರಹ್ಮಹತ್ಯವೇ ಮೊದಲಾದ ಘೋರಪಾಪಗಳನ್ನು ನಿವಾರಿಸುವುದೂ, ಸ್ವರ್ಗಮೋಕ್ಷಗಳನ್ನೀಯುವುದೂ, ಸಕಲ ಮಂಗಳವನ್ನೂ, ಸಮಸ್ತ ಇಷ್ಟಾರ್ಥಗಳನ್ನೂ ಕೊಡುವುದೂ, ಅತಿ ಪವಿತ್ರವೂ, ತೀರ್ಥಗಳೆಲ್ಲೆಲ್ಲ ಶ್ರೇಷ್ಠವೂ, ದುಸ್ಸ್ವಪ್ನವನ್ನು ಪರಿಹರಿಸುವುದೂ, ನರಕದುಃಖವನ್ನು ನಾಶಮಾಡುವುದೂ, ಅಕಾಲಮರಣವನ್ನು ಪರಿಹರಿಸುವುದೂ, ಗೆಲುವನ್ನು ಹೆಚ್ಚಿಸುವುದೂ, ಮಾನವರ ಬಡತನವನ್ನು ಹೋಗಲಾಡಿಸುವುದೂ, ಆಯುಸ್ಸನ್ನು ಹೆಚ್ಚಿಸುವುದೂ, ಮನಶ್ಶುದ್ಧಿಯನ್ನೂ, ಶಾಂತಿ, ಇಂದ್ರಿಯನಿಗ್ರಹ ಮೊದಲಾದುವುಗಳನ್ನೂ ಕೊಡುವುದೂ ಆಗಿರುವುದು. ನೀನು ಮೋಕ್ಷವನ್ನೀಯುವ ಆ ಧನುಷ್ಕೋಟಕ್ಷೇತ್ರಕ್ಕೆ ಹೋಗಿ ಒಂದು ತಿಂಗಳು ಎಡೆಬಿಡದೆ ಸ್ನಾನಮಾಡು. ಇದರಿಂದ ನಿನ್ನ ಈ ಮಹಾಪಾಪವು ನೀಗಿ ನೀನು ಶುದ್ಧನಾಗುವೆ.

೧೧೧-೧೧೨. ಅಶ್ವತ್ಥಾಮ! ನೀನು ನನ್ನ ನುಡಿಯನ್ನು ನಡೆಸು.'' ಹೀಗೆ ವ್ಯಾಸನು ಹೇಳಲು ಅಶ್ವತ್ಥಾಮನು ಪವಿತ್ರವಾದ ಧನುಷ್ಕೋಟಿಗೆ ತೆರಳಿ ಒಂದು ತಿಂಗಳು ಸಂಕಲ್ಪಪೂರ್ವಕವಾಗಿ ಎಡೆಬಿಡದೆ ಮಿಂದನು.

ರಾಮಸೇತುಂ ಸಮಾಸಾದ್ಯ ಧನುಷ್ಕೋಟಿಂ ಪವಿತ್ರದಾಂ ।
ಸಸ್ನೌ ಸಂಕಲ್ಪಪೂರ್ವಂ ತು ಮಾಸಮೇಕಂ ನಿರಂತರಂ ॥ ೧೧೨ ॥
ತ್ರಿಸಂಧ್ಯಂ ರಾಮನಾಥಂ ಚ ಸಿಷೇವೇ ಸ ದಿನೇ ದಿನೇ ।
ತತಸ್ತ್ರಿಂಶದ್ದಿನೇ ತೋಯಸ್ನಾನಾದ್ದ್ರೋಣಾತ್ಮಜಸ್ತದಾ ॥ ೧೧೩ ॥
ಜಜಾಪ ಚ ಧನುಷ್ಕೋಟ್ಯಾಂ ಮಂತ್ರಂ ಪಂಚಾಕ್ಷರಂ ತದಾ ।
ಅಕಾರ್ಷೀದುಪವಾಸಂ ಚ ದ್ರೋಣಪುತ್ರಸ್ತು ತದ್ದಿನೇ ॥ ೧೧೪ ॥
ಅಕರೋಜ್ಜಾಗರಂ ರಾತ್ರೌ ರಾಮನಾಥಸ್ಯ ಸನ್ನಿಧೌ ।
ಅಪರೇದ್ಯುರ್ಧನುಷ್ಕೋಟೌ ಸ್ನಾತ್ವಾ ಸಂಕಲ್ಪಪೂರ್ವಕಂ ॥ ೧೧೫ ॥
ಸಿಷೇವೇ ರಾಮನಾಥಂ ಚ ಸ್ತುತ್ವಾ ಭಕ್ತಿಪುರಸ್ಸರಂ ।
ನನರ್ತ ಪುರತಃ ಶಂಭೋರಾನಂದಾಶ್ರುಪರಿಪ್ಲುತಃ ॥ ೧೧೬ ॥
ತತಃ ಪ್ರಸನ್ನೋ ಭಗವಾನ್ಪ್ರಾದುರಾಸೀತ್ತದಗ್ರತಃ ।
ದೃಷ್ಟ್ವಾ ತತ್ರ ಮಹಾದೇವಂ ತುಷ್ಟಾವ ಪರಮೇಶ್ವರಂ ॥ ೧೧೭ ॥

ದ್ರೌಣಿರುವಾಚ:–

ನಮಸ್ತೇ ದೇವದೇವೇಶ ಕರುಣಾಕರ ಶಂಕರ ।
ಆಪದಂಬುಧಿಮಗ್ನಾನಾಂ ಪೋತಾಯಿತಪದಾಂಬುಜ ॥ ೧೧೮ ॥
ಮಹಾದೇವ ಕೃಪಾಮೂರ್ತೇ ಧೂರ್ಜಟೇ ನೀಲಲೋಹಿತ ।
ಉಮಾಕಾಂತ ವಿರೂಪಾಕ್ಷ ಚಂದ್ರಶೇಖರ ತೇ ನಮಃ ॥ ೧೧೯ ॥

---

೧೧೩–೧೧೬. ಅವನು ಪ್ರತಿದಿನವೂ ಮೂರು ಸಂಧ್ಯಾಕಾಲಗಳಲ್ಲಿಯೂ ರಾಮೇಶ್ವರನನ್ನು ಸೇವಿಸಿದನು. ಹೀಗೆ ಮೂವತ್ತುದಿನ ಸ್ನಾನಮಾಡಿದಮೇಲೆ ಅವನು ಪಂಚಾಕ್ಷರಮಂತ್ರವನ್ನು ಜಪಿಸುತ್ತ ಆ ದಿನ ಉಪವಾಸವಿದ್ದನು. ಆ ರಾತ್ರಿ ರಾಮೇಶ್ವರನ ಸಮ್ಮುಖದಲ್ಲಿ ಜಾಗರಣೆ ಮಾಡಿದನು. ಮಾರನೆ ದಿನ ಧನುಷ್ಕೋಟಿಯಲ್ಲಿ ಸಂಕಲ್ಪಪೂರ್ವಕವಾಗಿ ಮಿಂದು ರಾಮೇಶ್ವರನನ್ನು ಸೇವಿಸಿ ಭಕ್ತಿಪೂರ್ವಕವಾಗಿ ಸ್ತುತಿಗೈದು ಆ ಶಿವನ ಮುಂದೆ ಆನಂದಬಾಷ್ಪವನ್ನು ಸುರಿಸುತ್ತ ಕುಣಿದನು.

೧೧೭. ಬಳಿಕ ಪ್ರಸನ್ನನಾದ ರಾಮೇಶ್ವರನು ಆ ಅಶ್ವತ್ಥಾಮನ ಮುಂದೆ ಪ್ರತ್ಯಕ್ಷನಾಗಲು ಅವನನ್ನು ಕಂಡು ಅಶ್ವತ್ಥಾಮನು ಸ್ತುತಿಸಿದನು.

೧೧೮. ಅಶ್ವತ್ಥಾಮನು ಸ್ತುತಿಸುತ್ತಾನೆ:–"ದೇವಾಧಿಪನಾಗಿ ದೇವೇಂದ್ರನಿಗೂ ಒಡೆಯನಾಗಿ, ದಯಾಮಯನೂ, ಆಪತ್ತೆಂಬ ಸಮುದ್ರದಲ್ಲಿ ಮುಳುಗಿದ ಭಕ್ತರಿಗೆ ದೋಣಿಯಂತಿರುವ ಅಡಿದಾವರೆಗಳುಳ್ಳವನೂ ಆದ ಓ ಶಂಕರ! ನಿನಗೆ ನಮಸ್ಕಾರವು.

೧೧೯. ಉಮಾದೇವಿಯ ಪ್ರಿಯನೂ, ಮುಕ್ಕಣ್ಣನೂ, ಚಂದ್ರಮೌಳಿಯೂ, ದಯಾಳುವೂ ಆಗಿರುವ ಶಂಕರ! ನಿನಗೆ ನಮಸ್ಕಾರವು.

ಮೃತ್ಯುಂಜಯ ತ್ರಿನೇತ್ರ ತ್ವಂ ಪಾಹಿ ಮಾಂ ಕೃಪಯಾ ದೃಶಾ ।
ಪಾರ್ವತೀಪತಯೇ ತುಭ್ಯಂ ತ್ರಿಪುರಘ್ನಾಯ ಶಂಭವೇ ॥ ೧೨೦ ॥
ಪಿನಾಕಪಾಣಯೇ ತುಭ್ಯಂ ತ್ರ್ಯಂಬಕಾಯ ನಮೋನಮಃ ।
ಅನಂತಾದಿ ಮಹಾನಾಗಹಾರಭೂಷಣಭೂಷಿತ ॥ ೧೨೧ ॥
ಶೂಲಪಾಣೇ ನಮಸ್ತುಭ್ಯಂ ಗಂಗಾಧರ ಮೃಡಾಽವ್ಯಯ ।
ರಕ್ಷ ಮಾಂ ಕೃಪಯಾ ದೇವ ಪಾಪಸಂಘಾತಪಂಜರಾತ್ ।
ಇತಿ ಸ್ತುತೋ ಮಹಾದೇವೋ ದ್ರೌಣಿಂ ಪ್ರೋವಾಚ ಹರ್ಷಿತಃ ॥ ೧೨೨ ॥
ಮಹಾದೇವ ಉವಾಚ :—
ಸುಪ್ತಮಾರಣದೋಷಸ್ತೇ ಧನುಷ್ಕೋಟೌ ನಿಮಜ್ಜನಾತ್ ॥ ೧೨೩ ॥
ಅಶ್ವತ್ಥಾಮನ್ವಿನಷ್ಟೋಽಭೂದ್ವರಂ ವರಯ ಸುವ್ರತ ।
ಮಯಿ ಪ್ರಸನ್ನೇ ಲೋಕೇಷು ಕಿಮಲಭ್ಯಂ ಭವೇನ್ನೃಣಾಂ ॥ ೧೨೪ ॥
ಅತೋಽಭೀಷ್ಟಂ ವೃಣೀಷ್ವ ತ್ವಂ ಮತ್ತೋ ದ್ರೋಣಾತ್ಮಜಾಽಧುನಾ ।
ಇತ್ಯುಕ್ತಃ ಶಂಭುನಾ ದ್ರೌಣಿಃ ಪ್ರಾಹ ತಂ ಪರಮೇಶ್ವರಂ ॥ ೧೨೫ ॥
ತವಾಽದ್ಯ ದರ್ಶನೇನಾಽಹಂ ಕೃತಾರ್ಥೋಽಸ್ಮಿ ಮಹೇಶ್ವರ ।
ತ್ವದ್ದರ್ಶನಮಪುಣ್ಯಾನಾಮಲಭ್ಯಂ ಜನ್ಮಕೋಟಿಭಿಃ ॥ ೧೨೬ ॥

---

೧೨೦. ತ್ರಿಪುರವನ್ನು ನಾಶಮಾಡಿದವನೂ, ಪಾರ್ವತಿಯ ಪ್ರಿಯನೂ ಆದ ಎಲೈ ಮೃತ್ಯುಂಜಯನೆ! ಕೃಪಾದೃಷ್ಟಿಯಿಂದ ನನ್ನನ್ನು ಸಲಹು.

೧೨೧. ಪಿನಾಕವೆಂಬ ಬಿಲ್ಲನ್ನು ಹಿಡಿದವನೂ, ಅನಂತನೇ ಮೊದಲಾದ ಸರ್ಪರಾಜರ ಹಾರದಿಂದ ಅಲಂಕರಿಸಲ್ಪಟ್ಟವನೂ ಆದ ಓ ಶಂಕರ! ನಿನಗೆ ನಮಸ್ಕಾರವು.

೧೨೨. ತ್ರಿಶೂಲಧಾರಿಯೂ, ಗಂಗೆಯನ್ನು ಹೊತ್ತವನೂ, ನಾಶರಹಿತನೂ ಆದ ರಾಮೇಶ್ವರ! ಪಾಪವೆಂಬ ಪಂಜರದಿಂದ ನನ್ನನ್ನು ದಯೆಯಿಂದ ಕಾಪಾಡು.'' ಹೀಗೆ ಅಶ್ವತ್ಥಾಮನು ಸ್ತುತಿಸಲು ಹರ್ಷಗೊಂಡ ಮಹೇಶ್ವರನು ಹೀಗೆಂದನು:

೧೨೩–೧೨೫. ಮಹಾದೇವನು ಹೇಳುತ್ತಾನೆ:—''ಅಶ್ವತ್ಥಾಮ! ನೀನು ಧನುಷ್ಕೋಟಿಯಲ್ಲಿ ಸ್ನಾನಮಾಡಿದುದರಿಂದ ನಿದ್ರಿಸಿದವರನ್ನು ಕೊಂದ ನಿನ್ನ ಪಾಪವು ನಷ್ಟವಾಯಿತು. ಈಗ ವರವನ್ನು ಕೇಳಿಕೊ. ಪ್ರಪಂಚದಲ್ಲಿ ನಾನು ಪ್ರಸನ್ನನಾದರೆ ಮಾನವರಿಗೆ ದೊರಕದಿರುವುದು ಯಾವುದಿದೆ? ಆದ್ದರಿಂದ ಓ ದ್ರೋಣತನಯ! ನೀನೀಗ ನನ್ನಿಂದ ಇಷ್ಟಾರ್ಥವನ್ನು ಪಡೆ.'' ಹೀಗೆಂದು ರಾಮೇಶ್ವರನು ಹೇಳಲು, ಅಶ್ವತ್ಥಾಮನು ಅವನನ್ನು ಕುರಿತು ಇಂತೆಂದನು:

೧೨೬. ''ಮಹೇಶ್ವರ! ನಾನು ನಿನ್ನ ದರ್ಶನದಿಂದೀಗ ಧನ್ಯನಾದೆನು. ಪಾಪಿಗಳಿಗೆ ಅನೇಕ ಜನ್ಮಗಳಲ್ಲಿಯೂ ನಿನ್ನ ದರ್ಶನವಾಗಲಾರದು.

ಅತೋ ಯುಷ್ಮತ್ಪದಾಂಭೋಜೇ ನಿಶ್ಚಲಾ ಭಕ್ತಿರಸ್ತು ಮೇ ।
ಇಮಮೇವ ವರಂ ದೇಹಿ ಮಹ್ಯಂ ಶಂಭೋ ನಮೋಽಸ್ತು ತೇ ॥ ೧೨೭ ॥
ಉಕ್ತ್ವಾ ತಥಾಸ್ತ್ವಿತಿ ದ್ರೌಣಿಂ ದೇವದೇವೋ ಮಹೇಶ್ವರಃ ।
ಪಶ್ಯತೋ ದ್ರೋಣಪುತ್ರಸ್ಯ ತತ್ರೈವಾಂತರಧೀಯತ ॥ ೧೨೮ ॥
ಅಶ್ವತ್ಥಾಮಾಽಪಿ ವಿಪ್ರೇಂದ್ರಾ ಧೂತಪಾಪೋ ವಿನಿರ್ಮಲಃ ।
ರಾಮಚಂದ್ರಧನುಷ್ಕೋಟೌ ಸ್ನಾನಮಾತ್ರೇಣ ತತ್ಕ್ಷಣೇ ॥ ೧೨೯ ॥
ಧೂತಪಾಪಮಿಮಂ ದ್ರೌಣಿಂ ಸರ್ವೇ ಚಾಽಪಿ ಮಹರ್ಷಯಃ ।
ಶುದ್ಧಂ ಪ್ರತ್ಯಗ್ರಹೀಷುಸ್ತೇ ತದಾಪ್ರಭೃತಿ ನಿರ್ಮಲಂ ॥ ೧೩೦ ॥
ಏವಂ ವಃ ಕಥಿತಂ ವಿಪ್ರಾ ದ್ರೌಣಿಪಾಪವಿಮೋಕ್ಷಣಂ ।
ರಾಮಚಂದ್ರಧನುಷ್ಕೋಟಿಸ್ನಾನಸಂಭವಮಾತ್ರತಃ ॥ ೧೩೧ ॥
ಯಃ ಪಠೇದಿಮಮಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ಸ ವಿಧೂಯೇಹ ಪಾಪಾನಿ ಶಿವಲೋಕೇ ಮಹೀಯತೇ ॥ ೧೩೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಅಶ್ವತ್ಥಾಮಸುಪ್ತಮಾರಣದೋಷ ಶಾಂತಿವರ್ಣನಂ"ನಾಮೈಕತ್ರಿಂಶೋಽಧ್ಯಾಯಃ

---

೧೨೭. ಓ ಶಂಕರ! ಆದುದರಿಂದ ನಿನ್ನ ಪಾದಕಮಲದಲ್ಲಿ ನನಗೆ ಧೃಢ ಭಕ್ತಿಯುಂಟಾಗಲಿ. ಈ ವರವನ್ನೇ ನನಗೆ ಕೊಡು. ನಿನಗೆ ನಮಸ್ಕಾರವು."

೧೨೮. ಮಹೇಶ್ವರನು ಅಶ್ವತ್ಥಾಮನನ್ನು ಕುರಿತು ಹಾಗೆಯೇ ಆಗಲೆಂದು ಹೇಳಿ ಅವನು ನೋಡುತ್ತಿರುವಂತೆಯೆ ಅಲ್ಲಿಯೇ ಅದೃಶ್ಯನಾಗಿಹೋದನು.

೧೨೯. ಎಲೈ ಬ್ರಾಹ್ಮಣೋತ್ತಮರೆ! ಹೀಗೆ ಅಶ್ವತ್ಥಾಮನು ಧನುಷ್ಕೋಟಿ ಕ್ಷೇತ್ರದಲ್ಲಿ ಸ್ನಾನಮಾಡುವುದರಿಂದಲೆ ಪಾಪರಹಿತನಾಗಿ ಶುದ್ಧನಾದನು.

೧೩೦. ಅದು ಮೊದಲ್ಗೊಂಡು ಎಲ್ಲ ಮಹರ್ಷಿಗಳೂ ಪಾಪದೂರನಾದ ಆ ಅಶ್ವತ್ಥಾಮನನ್ನು ತಮ್ಮೊಡನೆ ಸೇರಿಸಿಕೊಂಡರು.

೧೩೧. ಹೀಗೆ ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದಲೆ ಅಶ್ವತ್ಥಾಮನ ಪಾಪವು ಪರಿಹಾರವಾದುದನ್ನು ನಿಮಗೆ ಹೇಳಿರುವೆನು.

೧೩೨. ಯಾವ ಮನುಷ್ಯನು ಒಮ್ಮನಸ್ಸಿನಿಂದ ಈ ಅಧ್ಯಾಯವನ್ನು ಓದುವನೊ, ಅಥವಾ ಕೇಳುವನೊ, ಅವನು ಈ ಲೋಕದಲ್ಲಿ ಪಾಪವಿಲ್ಲದವನಾಗಿ ಶಿವಲೋಕದಲ್ಲಿ ಪೂಜ್ಯನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಅಶ್ವತ್ಥಾಮಸುಪ್ತಮಾರಣದೋಷಶಾಂತಿವರ್ಣನ"ವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾತ್ರಿಂಶೋಽಧ್ಯಾಯಃ

### ಧರ್ಮಗುಪ್ತೋನ್ಮಾದವಿಮೋಕ್ಷಣವರ್ಣನಂ

ಶ್ರೀ ಸೂತ ಉವಾಚ :—

ಭೂಯೋಽಪಿ ಸಂಪ್ರವಕ್ಷ್ಯಾಮಿ ಧನುಷ್ಕೋಟೇಸ್ತು ವೈಭವಂ ।
ಯುಷ್ಮಾಕಮಾದರೇಣಾಽಹಂ ನೈಮಿಷಾಽರಣ್ಯವಾಸಿನಃ ॥ ೧ ॥
ನಂದೋನಾಮ ಮಹಾರಾಜಃ ಸೋಮವಂಶಸಮುದ್ಭವಃ ।
ಧರ್ಮೇಣ ಪಾಲಯಾಮಾಸ ಸಾಗರಾಂತಾಂ ಧರಾಮಿಮಾಂ ॥ ೨ ॥
ತಸ್ಯ ಪುತ್ರಃ ಸಮಭವದ್ಧರ್ಮಗುಪ್ತ ಇತಿ ಶ್ರುತಃ ।
ರಾಜ್ಯರಕ್ಷಾಧುರಂ ನಂದೋ ನಿಜಪುತ್ರೇ ನಿಧಾಯ ಸಃ ॥ ೩ ॥
ಜಿತೇಂದ್ರಿಯೋ ಜಿತಾಹಾರಃ ಪ್ರವಿವೇಶ ತಪೋವನಂ ।
ತಾತೇ ತಪೋವನಂ ಯಾತೇ ಧರ್ಮಗುಪ್ತಾಽಭಿಧೋ ನೃಪಃ ॥ ೪ ॥
ಮೇದಿನೀಂ ಪಾಲಯಾಮಾಸ ಧರ್ಮಜ್ಞೋ ನೀತಿತತ್ಪರಃ ।
ಈಜೇ ಬಹುವಿಧೈರ್ಯಜ್ಞೈರ್ದೇವಾನಿಂದ್ರಪುರೋಗಮಾನ್ ॥ ೫ ॥
ಬ್ರಾಹ್ಮಣೇಭ್ಯೋ ದದೌ ವಿತ್ತಂ ಕ್ಷೇತ್ರಾಣಿ ಚ ಬಹೂನಿ ಸಃ ।
ಸರ್ವೇ ಸ್ವಧರ್ಮನಿರತಾಸ್ತಸ್ಮಿನ್ರಾಜನಿ ಶಾಸತಿ ॥ ೬ ॥

---

## ಕನ್ನಡದ ಅನುವಾದ

### ಧರ್ಮಗುಪ್ತೋನ್ಮಾದವಿಮೋಕ್ಷಣವರ್ಣನ

೧. ಶ್ರೀಸೂತನು ಹೇಳುತ್ತಾನೆ:—ನೈಮಿಷಾರಣ್ಯವಾಸಿಗಳಾದ ಎಲೈ ಮುನಿಗಳೆ! ನಾನು ನಿಮಗೆ ಪ್ರೀತಿಯಿಂದ ಮರಳಿಯೂ ಧನುಷ್ಕೋಟಿಯ ಮಾಹಾತ್ಮ್ಯೆಯನ್ನು ಹೇಳುವೆನು.

೨. ಚಂದ್ರವಂಶದಲ್ಲಿ ಜನಿಸಿದ ನಂದನೆಂಬ ದೊರೆಯು ಸಮುದ್ರಗಳೇ ಎಲ್ಲೆಯಾಗಿರುವ ಈ ಭೂಮಿಯನ್ನು ಧರ್ಮದಿಂದ ಕಾಪಾಡುತ್ತಿದ್ದನು.

೩–೫. ಅವನಿಗೆ ಧರ್ಮಗುಪ್ತನೆಂಬ ಮಗನಿದ್ದನು. ಆ ನಂದರಾಜನು ತನ್ನ ಪುತ್ರನಾದ ಆ ಧರ್ಮಗುಪ್ತನಿಗೆ ರಾಜ್ಯವನ್ನೊಪ್ಪಿಸಿ ಜಿತೇಂದ್ರಿಯನೂ, ಮಿತಾಹಾರಿಯೂ ಆಗಿ ತಪೋವನವನ್ನು ಸೇರಿದನು. ತಂದೆಯು ತಪೋವನಕ್ಕೆ ತೆರಳಲು ಧರ್ಮವನ್ನರಿತ ಧರ್ಮಗುಪ್ತನು ನೀತಿಯನ್ನನುಸರಿಸಿ ಭೂಮಿಯನ್ನು ಕಾಪಾಡಿದನು. ಇಂದ್ರಾದಿ ದೇವತೆಗಳನ್ನು ಹಲವು ವಿಧ ಯಜ್ಞಗಳಿಂದ ಪೂಜಿಸಿದನು.

೬. ಅವನು ಬ್ರಾಹ್ಮಣರಿಗೆ ದ್ರವ್ಯಗಳನ್ನೂ, ಹೊಲಗದ್ದೆಗಳನ್ನೂ ಬಹು

ಬಭೂವುರ್ನಾಽಭವನ್ಪೀಡಾಸ್ತಸ್ಮಿಂಶ್ಚೋರಾದಿಸಂಭವಾಃ ।
ಕದಾಚಿದ್ಧರ್ಮಗುಪ್ತೋಽಯಮಾರೂಢಸ್ತುರಗೋತ್ತಮಂ ॥ ೭ ॥
ವನಂ ವಿವೇಶ ವಿಪ್ರೇಂದ್ರಾ ಮೃಗಯಾರಸಕೌತುಕೀ ।
ತಮಾಲತಾಲಹಿಂತಾಲಕುರವಾಕುಲದಿಙ್ಮುಖೇ ॥ ೮ ॥
ವಿಚಚಾರ ವನೇ ತಸ್ಮಿನ್ಸಿಂಹವ್ಯಾಘ್ರಭಯಾನಕೇ ।
ಮತ್ತಾಽಲಿಕುಲಸಂನಾದ ಸಂಮೂರ್ಛಿತದಿಗಂತರೇ ॥ ೯ ॥
ಪದ್ಮಕಲ್ಹಾರಕುಮುದನೀಲೋತ್ಪಲವನಾಕುಲೈಃ ।
ತಟಾಕೈರಪಿ ಸಂಪೂರ್ಣೇ ತಪಸ್ವಿಜನಮಂಡಿತೇ ॥ ೧೦ ॥
ತಿಸ್ಮಿನ್ವನೇ ಸಂಚರತೋ ಧರ್ಮಗುಪ್ತಸ್ಯ ಭೂಪತೇಃ ।
ಅಭೂದ್ವಿಭಾವರೀ ವಿಪ್ರಾಸ್ತಮಸಾವೃತದಿಙ್ಮುಖಾ ॥ ೧೧ ॥
ರಾಜಾಽಪಿ ಪಶ್ಚಿಮಾಂ ಸಂಧ್ಯಾಂ ಉಪಾಸ್ಯ ನಿಯಮಾನ್ವಿತಃ ।
ಜಜಾಪ ತತ್ರ ಚ ವನೇ ಗಾಯತ್ರೀಂ ವೇದಮಾತರಂ ॥ ೧೨ ॥
ಸಿಂಹವ್ಯಾಘ್ರಾದಿಭೀತ್ಯಾಽಸ್ಮಿನ್ವೃಕ್ಷಮೇಕಂ ಸಮಾಸ್ಥಿತೇ ।
ರಾಜಪುತ್ರೇ ತದಾಽಭ್ಯಾಗಾದೃಕ್ಷಃ ಸಿಂಹಭಯಾರ್ದಿತಃ ॥ ೧೩ ॥

---

ವಾಗಿ ದಾನಮಾಡಿದನು. ಅವನು ರಾಜ್ಯವನ್ನಾಳುತ್ತಿರಲು ಎಲ್ಲರೂ ತಂತಮ್ಮ ಧರ್ಮಗಳಲ್ಲಾಸಕ್ತರಾಗಿದ್ದರು.

೭–೧೧. ಬ್ರಾಹ್ಮಣೋತ್ತಮರೆ! ಅವನ ರಾಜ್ಯದಲ್ಲಿ ಕಳ್ಳಕಾಕರ ಬಾಧೆ ಯಿರಲಿಲ್ಲ. ಒಂದಾನೊಂದು ದಿನ ಈ ಧರ್ಮಗುಪ್ತನು ಉತ್ತಮವಾದ ಕುದುರೆ ಯನ್ನೇರಿ ಬೇಟೆಯಾಡಲು ಕುತೂಹಲವುಳ್ಳವನಾಗಿ ಒಂದು ಕಾಡನ್ನು ಹೊಕ್ಕನು. ಹೊಂಗೆ, ತಾಳೆ, ಹಿಂತಾಲ, ಗೋರಂಟೆ ಮರಗಳಿಂದ ದಟ್ಟವೂ, ಸಿಂಹ, ಹುಲಿಗಳಿಂದ ಭಯಂಕರವೂ, ಮದಿಸಿದ ದುಂಬಿಗಳ ಧ್ವನಿಯಿಂದ ವ್ಯಾಪ್ತ ವಾದ ದಿಕ್ಕುಗಳುಳ್ಳದೂ, ತಾವರೆ, ಕಲ್ಹಾರ, ನೈದಿಲೆ, ಕನ್ನೈದಿಲೆಗಳಿರುವ ಕೆರೆಗಳಿಂದ ತುಂಬಿರುವುದೂ, ಮುನಿಗಳಿಂದ ಅಲಂಕರಿಸಲ್ಪಟ್ಟುದೂ ಆಗಿರುವ ಆ ಕಾಡಿನಲ್ಲಿ ಧರ್ಮಗುಪ್ತನು ಸಂಚರಿಸುತ್ತಿರಲು ರಾತ್ರಿಯಾಗಿ ಕತ್ತಲೆಯು ಕವಿಯಿತು.

೧೨. ದೊರೆಯು ಆ ಕಾಡಿನಲ್ಲಿ ಸಾಯಂಸಂಧ್ಯಾವಂದನೆಯನ್ನು ಮಾಡಿ ನಿಯಮದಿಂದ ವೇದಮಾತೆಯಾದ ಗಾಯತ್ರಿಯನ್ನು ಜಪಿಸಿದನು.

೧೩. ಅವನು ಸಿಂಹ, ಹುಲಿ ಮೊದಲಾದ ಕ್ರೂರಜಂತುಗಳ ಭಯದಿಂದ ಒಂದು ಮರವನ್ನು ಹತ್ತಿ ಕುಳಿತಿರಲು ಅಲ್ಲಿಗೆ ಸಿಂಹಕ್ಕೆ ಹೆದರಿ ವ್ಯಥೆಗೊಂಡ ಕರಡಿಯೊಂದು ಬಂದಿತು.

ಅನ್ವಧಾವತ ತಂ ಋಕ್ಷಮೇಕಃ ಸಿಂಹೋ ವನೇಚರಃ ।
ಅನುದ್ರುತಃ ಸ ಸಿಂಹೇನ ಋಕ್ಷೋ ವೃಕ್ಷಮುಪಾರುಹತ್ ॥ ೧೪ ॥
ಆರುಹ್ಯ ಋಕ್ಷೋ ವೃಕ್ಷಂ ತಂ ದದರ್ಶ ಜಗತೀಪತಿಂ ।
ವೃಕ್ಷಸ್ಥಿತಂ ಮಹಾತ್ಮಾನಂ ಮಹಾಬಲಪರಾಕ್ರಮಂ ॥ ೧೫ ॥
ಉವಾಚ ಭೂಪತಿಂ ದೃಷ್ಟ್ವಾ ಋಕ್ಷೋಽಯಂ ವನಗೋಚರಃ ।
ಮಾ ಭೀತಿಂ ಕುರು ರಾಜೇಂದ್ರ ವತ್ಸ್ಯಾವೋ ರಜನೀಮಿಹ ॥ ೧೬ ॥
ಮಹಾಸತ್ವೋ ಮಹಾಕಾಯೋ ಮಹಾದಂಷ್ಟ್ರಾಸಮಾಕುಲಃ ।
ವೃಕ್ಷಮೂಲಂ ಸಮಾಯಾತಃ ಸಿಂಹೋಽಯಮತಿಭೀಷಣಃ ॥ ೧೭ ॥
ರಾತ್ರ್ಯರ್ಧಂ ಭಜ ನಿದ್ರಾಂ ತ್ವಂ ರಕ್ಷ್ಯಮಾಣೋ ಮಯಾದಿತಃ ।
ತತಃ ಪ್ರಸುಪ್ತಂ ಮಾಂ ರಕ್ಷ ಶರ್ವರ್ಯರ್ಧಂ ಮಹಾಮತೇ ॥ ೧೮ ॥
ಇತಿ ತದ್ವಾಕ್ಯಮಾದಾಯ ಸುಪ್ತೇ ನಂದಸುತೇ ಹರಿಃ ।
ಪ್ರೋವಾಚ ಋಕ್ಷಂ ಸುಪ್ತೋಽಯಂ ನೃಪಶ್ಚ ತ್ಯಜ್ಯತಾಮಿತಿ ॥ ೧೯ ॥
ತಂ ಸಿಂಹಮಬ್ರವೀದೃಕ್ಷೋ ಧರ್ಮಜ್ಞೋ ದ್ವಿಜಸತ್ತಮಾಃ ।
ಭವಾನ್ಧರ್ಮಂ ನ ಜಾನೀಷೇ ಮೃಗರಾಜ ವನೇಚರ ॥ ೨೦ ॥
ವಿಶ್ವಾಸಘಾತಿನಾಂ ಲೋಕೇ ಮಹಾಕಷ್ಟಾ ಭವಂತಿ ಹಿ ।
ನ ಹಿ ಮಿತ್ರದ್ರುಹಾಂ ಪಾಪಂ ನಶ್ಯೇದ್ಯಜ್ಞಾಽಯುತೈರಪಿ ॥ ೨೧ ॥

---

೧೪. ಆ ಕರಡಿಯನ್ನು ಆ ಕಾಡಿನಲ್ಲಿ ವಾಸಿಸುತ್ತಿರುವ ಸಿಂಹವೊಂದು ಹಿಂಬಾಲಿಸಲು ಅದು ಮರವನ್ನೇರಿತು.

೧೫. ಕರಡಿಯು ಮರವನ್ನು ಹತ್ತಿ ಅಲ್ಲಿರುವ ಮಹಾತ್ಮನೂ, ಅತಿ ಪರಾಕ್ರಮಶಾಲಿಯೂ ಆದ ದೊರೆಯನ್ನು ಕಂಡಿತು.

೧೬. ಆ ಕಾಡಿನ ಕರಡಿಯು ರಾಜನನ್ನು ಕುರಿತು, "ದೊರೆಯೆ! ಹೆದರ ಬೇಡ. ಈ ರಾತ್ರಿ ಇಲ್ಲಿಯೇ ನಾವಿಬ್ಬರೂ ವಾಸಿಸೋಣ.

೧೭. ಬಹು ಬಲಶಾಲಿಯೂ, ದೊಡ್ಡ ಹಲ್ಲುಗಳುಳ್ಳದೂ, ಅತಿ ಭಯಂಕರವೂ ಆದ ದೊಡ್ಡ ಸಿಂಹವೊಂದು ಮರದ ಬುಡಕ್ಕೆ ಬಂದಿರುವುದು.

೧೮. ಎಲೈ ಪ್ರಾಜ್ಞನೆ! ನೀನು ಈಗಿನಿಂದ ಅರ್ಧರಾತ್ರಿಯವರೆಗೆ ನಿದ್ರಿಸು. ನಾನು ನಿನ್ನನ್ನು ಕಾಪಾಡಿಕೊಂಡಿರುವೆನು. ಬಳಿಕ ಅರ್ಧರಾತ್ರಿ ನಾನು ನಿದ್ರಿಸುವೆನು. ನೀನು ನನ್ನನ್ನು ರಕ್ಷಿಸು."

೧೯. ಹೀಗೆ ರಾಜನು ಆ ಕರಡಿಯ ನುಡಿಯಂತೆ ನಿದ್ರಿಸಲು ಸಿಂಹವು ಕರಡಿಯನ್ನು ಕುರಿತು, 'ಮಲಗಿರುವ ಈ ರಾಜನನ್ನು ಬಿಟ್ಟುಕೊಡು' ಎಂದಿತು.

೨೦. ಬ್ರಾಹ್ಮಣವರ್ಯರೆ! ಧರ್ಮವನ್ನರಿತ ಕರಡಿಯು ಆ ಸಿಂಹವನ್ನು ಕುರಿತು, "ಮೃಗಗಳರಸ! ನಿನಗೆ ಧರ್ಮವು ತಿಳಿಯದು.

೨೧. ಪ್ರಪಂಚದಲ್ಲಿ ನಂಬಿಸಿ ದ್ರೋಹಮಾಡುವವರಿಗೆ ಬಹಳ ಕಷ್ಟಗಳು

ಬ್ರಹ್ಮಹತ್ಯಾದಿ ಪಾಪಾನಾಂ ಕಥಂಚಿನ್ನಿಷ್ಕೃತಿರ್ಭವೇತ್ ।
ವಿಶ್ವಸ್ತಘಾತಿನಾಂ ಪಾಪಂ ನ ನಶ್ಯೇಜ್ಜನ್ಮಕೋಟಿಭಿಃ ॥ ೨೨ ॥
ನಾಽಹಂ ಮೇರುಂ ಮಹಾಭಾರಂ ಮನ್ಯೇ ಪಂಚಾಸ್ಯ ಭೂತಲೇ ।
ಮಹಾಭಾರಮಿಮಂ ಮನ್ಯೇ ಲೋಕೇ ವಿಶ್ವಾಸಘಾತಕಂ ॥ ೨೩ ॥
ಏವಮುಕ್ತೇಽಥ ಋಕ್ಷೇಣ ಸಿಂಹಸ್ತೂಷ್ಣೀಮಭೂತ್ತದಾ ।
ಧರ್ಮಗುಪ್ತೇ ಪ್ರಬುದ್ಧೇತು ಋಕ್ಷಃ ಸುಷ್ವಾಪ ಭೂರುಹೇ ॥ ೨೪ ॥
ತತಃ ಸಿಂಹೋಽಬ್ರವೀದ್ಭೂಪಮೇನಮೃಕ್ಷಂ ತ್ಯಜಸ್ವ ಮೇ ।
ಏವಮುಕ್ತೇಽಥ ಸಿಂಹೇನ ರಾಜಾ ಸುಪ್ತಮಶಂಕಿತಃ ॥ ೨೫ ॥
ಸ್ವಾಂಕನ್ಯಸ್ತಶಿರಸ್ಕಂ ತಮೃಕ್ಷಂ ತತ್ಯಾಜ ಭೂತಲೇ ।
ಪಾತ್ಯಮಾನಸ್ತತೋ ರಾಜ್ಞಾ ನಖಾಲಂಬಿತ ಪಾದಪಃ ॥ ೨೬ ॥
ಋಕ್ಷಃ ಪುಣ್ಯವಶಾದ್ವೃಕ್ಷಾನ್ನ ಪಪಾತ ಮಹೀತಲೇ ।
ಸ ಋಕ್ಷೋ ನೃಪಮಭ್ಯೇತ್ಯ ಕೋಪಾದ್ವಾಕ್ಯಮಭಾಷತ ॥ ೨೭ ॥
ಕಾಮರೂಪಧರೋ ರಾಜನ್ನಹಂ ಭೃಗುಕುಲೋದ್ಭವಃ ।
ಧ್ಯಾನಕಾಷ್ಠಾಽಭಿಧೋ ನಾಮ್ನಾ ಋಕ್ಷರೂಪಮಧಾರಯಂ ॥ ೨೮ ॥

---

ಸಂಭವಿಸುವುವು. ಮಿತ್ರದ್ರೋಹಿಗಳ ಪಾಪವು ಹತ್ತುಸಾವಿರ ಯಜ್ಞಗಳನ್ನು ಮಾಡಿದರೂ ಪರಿಹಾರವಾಗಲಾರದು.

೨೨–೨೩. ಬ್ರಹ್ಮಹತ್ಯಾದಿ ಮಹಾಪಾತಕಗಳು ಹೇಗಾದರೂ ಪರಿಹಾರವಾಗ ಬಹುದು. ವಿಶ್ವಾಸಘಾತುಕರ ಪಾಪವು ಕೋಟಿಜನ್ಮಗಳಲ್ಲಿಯೂ ನಾಶವಾಗ ಲಾರದು. ಮೃಗರಾಜ! ನಾನು ಭೂಮಿಯಲ್ಲಿ ಮೇರುಪರ್ವತವನ್ನೂ ಅತಿ ಭಾರವನ್ನಾಗಿ ತಿಳಿಯೆನು. ವಿಶ್ವಾಸಘಾತಕತನವನ್ನು ಮಾತ್ರ ಅತ್ಯಂತ ಭಾರ ವುಳ್ಳುದೆಂದರಿವೆನು.”

೨೪. ಕರಡಿಯು ಹೀಗೆನ್ನಲು ಸಿಂಹವು ಸುಮ್ಮನಾಯಿತು. ಧರ್ಮ ಗುಪ್ತನು ಎಚ್ಚರಗೊಳ್ಳಲು ಕರಡಿಯು ಮರದಲ್ಲಿ ನಿದ್ರಿಸಿತು.

೨೫–೨೭. ತರುವಾಯ ಸಿಂಹವು ರಾಜನನ್ನು ಕುರಿತು, “ಈ ಕರಡಿಯನ್ನು ನನಗೆ ಬಿಟ್ಟುಕೊಡು” ಎಂದಿತು. ಸಿಂಹವು ಹೀಗೆ ಹೇಳಲು ರಾಜನು ಸ್ವಲ್ಪವೂ ಸಂದೇಹಗೊಳ್ಳದೆ ತನ್ನ ತೊಡೆಯಮೇಲೆ ತಲೆಯನ್ನಿಟ್ಟು ಮಲಗಿರುವ ಕರಡಿ ಯನ್ನು ಭೂಮಿಯಲ್ಲಿ ಕೆಡವಿದನು. ರಾಜನು ಕೆಳಗೆ ಕೆಡವುತ್ತಿರುವಾಗ ಆ ಕರಡಿಯು ಉಗುರುಗಳಿಂದ ಮರವನ್ನು ಹಿಡಿದುಕೊಂಡುದರಿಂದ ಪುಣ್ಯವಶ ದಿಂದ ಭೂಮಿಯಲ್ಲಿ ಬೀಳದೆ ರಾಜನ ಬಳಿಗೆ ಬಂದು ಕೋಪದಿಂದ ಇಂತೆಂದಿತು:

೨೮. “ಅರಸ! ಭೃಗುವಂಶದಲ್ಲಿ ಹುಟ್ಟಿ ಸ್ವೇಚ್ಛಾರೂಪಿಯಾದ ಧ್ಯಾನ ಕಾಷ್ಠನೆಂಬ ನಾನು ಕರಡಿಯ ರೂಪವನ್ನು ಧರಿಸಿದ್ದೇನೆ.

ಯಸ್ಮಾದನಾಗಸಂ ಸುಪ್ತಮುತ್ಥಾಪ್ಯಕ್ಷೋಣ್ಯಾಂ ಭವಾನ್ನೃಪ ।
ಮಚ್ಛಾಪಾತ್ತ್ವಮತಃ ಶೀಘ್ರಂ ಉನ್ಮತ್ತಶ್ಚರ ಭೂಪತೇ ॥ ೨೯ ॥
ಇತಿ ಶಪ್ತ್ವಾ ಮುನಿರ್ಭೂಪಂ ತತಃ ಸಿಂಹಮಭಾಷತ ।
ನೃಸಿಂಹಸ್ತ್ವಂ ಮಹಾಯಕ್ಷಃ ಕುಬೇರಸಚಿವಃ ಪುರಾ ॥ ೩೦ ॥
ಹಿಮವದ್ಗಿರಿಮಾಸಾದ್ಯ ಕದಾಚಿತ್ತ್ವಂ ವಧೂಸಖಃ ।
ಅಜ್ಞಾನಾದ್ಗೌತಮಾಭ್ಯಾಶೇ ವಿಹಾರಮಕರೋರ್ಮುದಾ ॥ ೩೧ ॥
ಗೌತಮೋಽಪ್ಯುಟಜಾದ್ದೈವಾತ್ಸಮಿದಾಹರಣಾಯ ವೈ ।
ನಿರ್ಗತಸ್ತ್ವಾಂ ವಿವಸನಂ ದೃಷ್ಟ್ವಾ ಶಾಪಮುದಾಹರತ್ ॥ ೩೨ ॥
ಯಸ್ಮಾನ್ಮಮಾಶ್ರಮೇಽದ್ಯ ತ್ವಂ ವಿವಸ್ತ್ರಃ ಸ್ಥಿತವಾನಸಿ ।
ಅತಃ ಸಿಂಹತ್ವಮದ್ಯೈವ ಭವಿತಾ ತೇ ನ ಸಂಶಯಃ ॥ ೩೩ ॥
ಇತಿ ಗೌತಮಶಾಪೇನ ಸಿಂಹತ್ವಮಗಮತ್ಪುರಾ ।
ಕುಬೇರಸಚಿವೋ ಯಕ್ಷೋ ಭದ್ರನಾಮಾ ಭವಾನ್ಪುರಾ ॥ ೩೪ ॥
ಕುಬೇರೋ ಧರ್ಮಶೀಲೋ ಹಿ ತದ್ಭೃತ್ಯಾಶ್ಚ ತಥೈವ ಹಿ ।
ಅತಃ ಕಿಮರ್ಥಂ ತ್ವಂ ಹಂಸಿ ಮಾಮೃಷಿಂ ವನಗೋಚರಂ ॥ ೩೫ ॥

---

೨೯. ದೊರೆಯೆ! ತಪ್ಪಿಲ್ಲದ ನಿದ್ರಿಸುತ್ತಿರುವ ನನ್ನನ್ನು ನೀನು ಭೂಮಿಯಲ್ಲಿ ಕೆಡವಿದುದರಿಂದ ಜಾಗ್ರತೆಯಾಗಿ ನನ್ನ ಶಾಪದಿಂದ ಹುಚ್ಚನಾಗಿ ಅಲೆಯುವೆ."

೩೦. ಧ್ಯಾನಕಾಷ್ಠನು ಹೀಗೆ ರಾಜನನ್ನು ಶಪಿಸಿ ಸಿಂಹವನ್ನು ಕುರಿತು, "ನೃಸಿಂಹನಾದ ನೀನು ಹಿಂದೆ ಕುಬೇರನ ಮಂತ್ರಿಯಾದ ಮಹಾಯಕ್ಷನು.

೩೧. ನೀನು ಒಂದಾನೊಂದು ಸಮಯದಲ್ಲಿ ಮೋಹದಿಂದ ಹಿಮಾಲಯವನ್ನು ಹೊಂದಿ ಪ್ರಿಯಳೊಡನೆ ಗೌತಮಮುನಿಯ ಆಶ್ರಮದಲ್ಲಿ ಸಂತೋಷದಿಂದ ವಿಹಾರಮಾಡಿದೆ.

೩೨. ಗೌತಮನು ದೈವವಶದಿಂದ ಸಮಿತ್ತುಗಳನ್ನು ತರುವುದಕ್ಕಾಗಿ ತನ್ನ ಎಲೆಮನೆಯಿಂದ ಹೊರಟು ಬಟ್ಟೆಯಿಲ್ಲದ ನಿನ್ನನ್ನು ಕಂಡು ಹೀಗೆ ಶಾಪವನ್ನು ಕೊಟ್ಟನು.

೩೩. "ನೀನು ಈಗ ನನ್ನ ಆಶ್ರಮದಲ್ಲಿ ವಸ್ತ್ರವಿಲ್ಲದೆ ವಿಹರಿಸುತ್ತಿರುವುದರಿಂದ ಕೂಡಲೆ ಸಿಂಹವಾಗುವೆ."

೩೪. ಹೀಗೆ ಕುಬೇರನ ಮಂತ್ರಿಯಾದ ಭದ್ರನೆಂಬ ನೀನು ಹಿಂದೆ ಗೌತಮನ ಶಾಪದಿಂದ ಸಿಂಹವಾಗಿರುವೆ.

೩೫. ಕುಬೇರನು ಧರ್ಮಿಷ್ಠನು. ಅವನ ಸೇವಕರೂ ಹಾಗೆಯೇ ಇರಬೇಕು. ಆದ್ದರಿಂದ ವನದಲ್ಲಿ ವಾಸಿಸುವ ಮುನಿಯಾದ ನನ್ನನ್ನು ನೀನೇಕೆ ಕೊಲ್ಲುತ್ತೀಯೆ?

ಏತತ್ಸರ್ವಮಹಂ ಧ್ಯಾನಾಜ್ಜ್ಞಾನಾಮೀಹ ಮೃಗಾಧಿಪ ।
ಇತ್ಯುಕ್ತೇ ಧ್ಯಾನಕಾಷ್ಠೇನ ತ್ಯಕ್ತ್ವಾ ಸಿಂಹತ್ವಮಾಶು ಸಃ ॥ ೩೬ ॥
ಯಕ್ಷರೂಪಂ ಗತೋ ದಿವ್ಯಂ ಕುಬೇರಸಚಿವಾತ್ಮಕಂ ।
ಧ್ಯಾನಕಾಷ್ಠಮುವಾಚ ಪ್ರಾಂಜಲಿಃ ಪ್ರಣತೋ ಮುನಿಂ ॥ ೩೭ ॥
ಅದ್ಯ ಜ್ಞಾತಂ ಮಯಾ ಸರ್ವಂ ಪೂರ್ವವೃತ್ತಂ ಮಹಾಮುನೇ ।
ಗೌತಮಃ ಶಾಪಕಾಲೇ ಮೇ ಶಾಪಾಂತಮಪಿ ಚೋಕ್ತವಾನ್ ॥ ೩೮ ॥
ಧ್ಯಾನಕಾಷ್ಠೇನ ಸಂವಾದೋ ಋಕ್ಷರೂಪೇಣ ತೇ ಯದಾ ।
ತದಾ ನಿರ್ಧೂಯ ಸಿಂಹತ್ವಂ ಯಕ್ಷರೂಪಮವಾಪ್ಸ್ಯಸಿ ॥ ೩೯ ॥
ಇತಿ ಮಾಮಬ್ರವೀದ್ಬ್ರಹ್ಮನ್ಗೌತಮೋ ಮುನಿಪುಂಗವಃ ।
ಅದ್ಯ ಸಿಂಹತ್ವನಾಶಾನ್ಮೇ ಜಾನಾಮಿ ತ್ವಾಂ ಮಹಾಮುನೇ ॥ ೪೦ ॥
ಧ್ಯಾನಕಾಷ್ಠಾಭಿಧಂ ಶುದ್ಧಂ ಕಾಮರೂಪಧರಂ ಸದಾ ।
ಇತ್ಯುಕ್ತ್ವಾ ತಂ ಪ್ರಣಮ್ಯಾಥ ಧ್ಯಾನಕಾಷ್ಠಂ ಸ ಯಕ್ಷರಾಟ್ ॥ ೪೧ ॥
ವಿಮಾನವರಮಾರುಹ್ಯ ಪ್ರಯಯಾವಲಕಾಪುರೀಂ ।
ತಸ್ಮಿನ್ಗತೇ ತು ಯಕ್ಷೇಶೇ ಧ್ಯಾನಕಾಷ್ಠೋ ಮಹಾಮುನಿಃ ॥ ೪೨ ॥
ಅವ್ಯಾಹತೇಷ್ಟಗಮನೋ ಯಥೇಷ್ಟಃ ಪ್ರಯಯೌ ಮಹೀಂ ।
ಧ್ಯಾನಕಾಷ್ಠೇ ಗತೇ ತಸ್ಮಿನ್ಕಾಮರೂಪಧರೇ ಮುನೌ ॥ ೪೩ ॥

---

೩೬–೩೭. ಮೃಗೇಂದ್ರ! ನಾನು ಇದನ್ನೆಲ್ಲ ಧ್ಯಾನದಿಂದ ತಿಳಿದಿರುವೆನು.” ಹೀಗೆ ಧ್ಯಾನಕಾಷ್ಠನು ಹೇಳಲು ಆ ಸಿಂಹವು ತನ್ನ ಸಿಂಹದ ರೂಪವನ್ನು ತ್ಯಜಿಸಿ ಕುಬೇರನ ಮಂತ್ರಿಯಾದ ಯಕ್ಷನಾಗಿ ಕೈಮುಗಿದುಕೊಂಡು ನಮ್ರತೆಯಿಂದ ಧ್ಯಾನಕಾಷ್ಠನನ್ನು ಕುರಿತು ಇಂತೆಂದನು :

೩೮. ಮಹರ್ಷಿಯೆ! “ನಾನೀಗ ನನ್ನ ಹಿಂದಿನ ವೃತ್ತಾಂತವನ್ನೆಲ್ಲ ತಿಳಿದೆನು. ಗೌತಮನು ಶಪಿಸುವಾಗ ಶಾಪದ ಅವಸಾನವನ್ನೂ ಹೀಗೆ ಹೇಳಿರುವನು.

೩೯. “ಕರಡಿಯಾದ ಧ್ಯಾನಕಾಷ್ಠನೊಡನೆ ನಿನಗೆ ಸಂಭಾಷಣೆಯು ನಡೆದಾಗ ನೀನು ಸಿಂಹರೂಪವನ್ನು ತ್ಯಜಿಸಿ ನಿಜಸ್ವರೂಪವನ್ನು ಪಡೆಯುವೆ.”

೪೦–೪೫. ಹೀಗೆ ಗೌತಮಮುನಿವರ್ಯನು ಹೇಳಿರುವುದರಿಂದ ಈಗ ನನ್ನ ಸಿಂಹರೂಪವು ತೊಲಗಿತು. ನೀನೇ ಧ್ಯಾನಕಾಷ್ಠನೆಂಬ ಸ್ವೇಚ್ಛಾರೂಪಿಯೆಂದು ತಿಳಿಯುವೆನು” ಎಂದು ಆ ಯಕ್ಷನು ಮುನಿಗೆ ನಮಸ್ಕಾರಮಾಡಿ ಉತ್ತಮ ವಿಮಾನವನ್ನೇರಿ ಅಲಕಾಪುರಿಗೆ ತೆರಳಿದನು. ಆ ಯಕ್ಷನು ಹೊರಟುಹೋಗಲು ಧ್ಯಾನಕಾಷ್ಠನೂ ಇಷ್ಟಬಂದ ಸ್ಥಳಕ್ಕೆ ಹೋದನು. ಸ್ವೇಚ್ಛಾರೂಪಿಯಾದ ಆ ಮುನಿಯು ಹೊರಟುಹೋದಕೂಡಲೆ ಧರ್ಮಗುಪ್ತನು ಅವನ ಶಾಪದಿಂದ ಹುಚ್ಚನಾಗಿ ತನ್ನ ಪಟ್ಟಣವನ್ನು ಸೇರಿದನು. ಅಲ್ಲಿ ಮಂತ್ರಿಗಳು ಹುಚ್ಚನಾದ

ಧರ್ಮಗುಪ್ತೋ ಮುನೇಃ ಶಾಪಾದುನ್ಮತ್ತಃ ಪ್ರಯಯೌ ಪುರೀಂ ।
ಉನ್ಮತ್ತರೂಪಂ ತಂ ದೃಷ್ಟ್ವಾ ಮಂತ್ರಿಣಸ್ತು ನೃಪೋತ್ತಮಂ ॥ ೪೪ ॥
ಪಿತುಃ ಸಕಾಶಮಾನಿನ್ಯೋ ರೇವಾತೀರೇ ಮನೋರಮೇ ।
ತಸ್ಮೈ ನಿವೇದಯಾಮಾಸುರ್ಮತಿಭ್ರಂಶಂ ಸುತಸ್ಯ ತೇ ॥ ೪೫ ॥
ಜ್ಞಾತ್ವಾ ತು ಪುತ್ರವೃತ್ತಾಂತಂ ನಂದಸ್ತಸ್ಯ ಪಿತಾ ತದಾ ।
ಪುತ್ರಮಾದಾಯ ತರಸಾ ಜೈಮಿನೇರಂತಿಕಂ ಯಯೌ ।
ತಸ್ಮೈ ನಿವೇದಯಾಮಾಸ ಪುತ್ರವೃತ್ತಾಂತಮಾದಿತಃ ॥ ೪೬ ॥
ಭಗವನ್ ಜೈಮಿನೇ ಪುತ್ರೋ ಮಮಾಯಮುನ್ಮತ್ತತಾಂ ಗತಃ ॥ ೪೭ ॥
ಅಸ್ಯೋನ್ಮಾದವಿನಾಶಾಯ ಬ್ರೂಹ್ಯುಪಾಯಂ ಮಹಾಮುನೇ ।
ಇತಿ ಪೃಷ್ಟಶ್ಚಿರಂ ದಧ್ಯೌ ಜೈಮಿನಿರ್ಮುನಿಪುಂಗವಃ ॥ ೪೮ ॥
ಧ್ಯಾತ್ವಾ ತು ಸುಚಿರಂ ಕಾಲಂ ನೃಪಂ ನಂದಮಥಾಽಬ್ರವೀತ್ ।
ಧ್ಯಾನಕಾಷ್ಠಸ್ಯ ಶಾಪೇನ ಹ್ಯುನ್ಮತ್ತಸ್ತೇ ಸುತೋಽಭವತ್ ॥ ೪೯ ॥
ತಸ್ಯ ಶಾಪಸ್ಯ ಮೋಕ್ಷಾರ್ಥಮುಪಾಯಂ ಪ್ರಬ್ರವೀಮಿ ತೇ ।
ದಕ್ಷಿಣಾಂಬುನಿಧೌ ಸೇತೌ ಪುಣ್ಯೇ ಪಾಪವಿನಾಶನೇ ॥ ೫೦ ॥
ಧನುಷ್ಕೋಟಿರಿತಿ ಖ್ಯಾತಂ ತೀರ್ಥಮಸ್ತಿ ಮಹತ್ತರಂ ।
ಪವಿತ್ರಾಣಾಂ ಪವಿತ್ರಂ ಚ ಮಂಗಲಾನಾಂ ಚ ಮಂಗಲಂ ॥ ೫೧ ॥

---

ರಾಜನನ್ನು ಈಕ್ಷಿಸಿ ಅವನನ್ನು ನರ್ಮದೆಯ ರಮ್ಯವಾದ ದಡದಲ್ಲಿ ವಾಸಿಸುತ್ತಿದ್ದ ಅವನ ತಂದೆಯ ಬಳಿಗೆ ಕರೆದುಕೊಂಡು ಹೋಗಿ ಮಗನ ಬುದ್ಧಿ ಭ್ರಮಣೆಯ ವಿಷಯವನ್ನು ತಿಳಿಸಿದರು.

೪೬. ಆಗ ಅವನ ತಂದೆಯಾದ ನಂದನು ಮಗನ ಸಮಾಚಾರವನ್ನರಿತು ಕೂಡಲೆ ಅವನನ್ನು ಕರೆದುಕೊಂಡು ಜೈಮಿನಿಯ ಹತ್ತಿರಕ್ಕೆ ಹೋಗಿ ಅವನಿಗೆ ಆ ವೃತ್ತಾಂತವನ್ನೆಲ್ಲವನ್ನೂ ಅರುಹಿದನು.

೪೭–೪೮. "ಪೂಜ್ಯನಾದ ಜೈಮಿನಿಯೆ! ಈಗ ನನ್ನ ಮಗನು ಹುಚ್ಚನಾಗಿರುವನು. ಇವನ ಹುಚ್ಚನ್ನು ಹೋಗಲಾಡಿಸಲು ಉಪಾಯವನ್ನು ಹೇಳು" ಎಂದು ಕೇಳಲು ಆ ಮುನಿಯು ಬಹಳ ಹೊತ್ತು ಆಲೋಚಿಸಿದನು.

೪೯. ಅನಂತರ ನಂದನನ್ನು ಕುರಿತು, "ದೊರೆಯೆ! ಈ ನಿನ್ನ ಮಗನು ಧ್ಯಾನಕಾಷ್ಠನ ಶಾಪದಿಂದ ಹುಚ್ಚನಾಗಿರುವನು.

೫೦–೫೨. ಆ ಶಾಪದ ಬಿಡುಗಡೆಗೆ ಉಪಾಯವನ್ನು ಹೇಳುತ್ತೇನೆ. ದಕ್ಷಿಣ ಸಮುದ್ರದಲ್ಲಿ ಪಾಪನಾಶಕವಾದ ರಾಮಸೇತುವಿರುವುದು. ಅಲ್ಲಿ ಅತಿ ಪವಿತ್ರವೂ, ಅತ್ಯಂತ ಮಂಗಳಕರವೂ, ವೇದಗಳಲ್ಲಿ ಪ್ರಸಿದ್ಧವೂ, ಬ್ರಹ್ಮಹತ್ಯೆ ಮೊದಲಾದ

ಶ್ರುತಿಸಿದ್ಧಂ ಮಹಾಪುಣ್ಯಂ ಬ್ರಹ್ಮಹತ್ಯಾದಿಶೋಧಕಂ ।
ನೀತ್ವಾ ತತ್ರ ಸುತಂ ತೇಽದ್ಯ ಸ್ನಾಪಯಸ್ವ ಮಹೀಪತೇ ॥ ೫೨ ॥
ಉನ್ಮಾದಸ್ತತ್ಕ್ಷಣಾದೇವ ತಸ್ಯ ನಶ್ಯೇನ್ನ ಸಂಶಯಃ ।
ಇತ್ಯುಕ್ತಸ್ತಂ ಪ್ರಣಮ್ಯಾಽಸೌ ಜೈಮಿನಿಂ ಮುನಿಪುಂಗವಂ ॥ ೫೩ ॥
ನಂದಃ ಪುತ್ರಂ ಸಮಾದಾಯ ಧನುಷ್ಕೋಟಿಂ ಯಯೌ ತದಾ ।
ತತ್ರ ಚ ಸ್ನಾಪಯಾಮಾಸ ಪುತ್ರಂ ನಿಯಮಪೂರ್ವಕಂ ॥ ೫೪ ॥
ಸ್ನಾನಮಾತ್ರಾತ್ತತಃ ಸದ್ಯೋ ನಷ್ಟೋನ್ಮಾದೋಽಭವತ್ಸುತಃ ।
ಸ್ವಯಂ ಸಸ್ನೌ ಸ ನಂದೋಽಪಿ ಧನುಷ್ಕೋಟೌ ಸ ಭಕ್ತಿಕಂ ॥ ೫೫ ॥
ಉಷಿತ್ವಾ ದಿನಮೇಕಂ ತು ಸಪುತ್ರಸ್ತು ಪಿತಾ ತದಾ ।
ಸೇವಿತ್ವಾ ರಾಮನಾಥಂ ಚ ಸಾಂಬಮೂರ್ತಿಂ ಘೃಣಾನಿಧಿಂ ॥ ೫೬ ॥
ಪುತ್ರಮಾಪೃಚ್ಛ್ಯ ನಂದಸ್ತಂ ಪ್ರಯಯೌ ತಪಸೇ ವನಂ ।
ಗತೇ ಪಿತರಿ ಪುತ್ರೋಽಪಿ ಧರ್ಮಗುಪ್ತೋ ನೃಪೋ ದ್ವಿಜಾಃ ॥ ೫೭ ॥
ಪ್ರದದೌ ರಾಮನಾಥಾಯ ಬಹುವಿತ್ತಾನಿ ಭಕ್ತಿತಃ ।
ಬ್ರಾಹ್ಮಣೇಭ್ಯೋ ಧನಂ ಧಾನ್ಯಂ ಕ್ಷೇತ್ರಾಣಿ ಚ ದದೌ ತದಾ ॥ ೫೮ ॥
ಪ್ರಯಯೌ ಮಂತ್ರಿಭಿಃ ಸಾರ್ಧಂ ಸ್ವಾಂ ಪುರೀಂ ತದನಂತರಂ ।
ಧರ್ಮೇಣ ಪಾಲಯಾಮಾಸ ರಾಜ್ಯಂ ನಿಹತಕಂಟಕಂ ॥ ೫೯ ॥

---

ಮಹಾಪಾತಕಗಳನ್ನು ನೀಗಿಸುವುದೂ ಆದ ಧನುಷ್ಕೋಟಿಯೆಂಬ ಪುಣ್ಯಕ್ಷೇತ್ರವಿರುವುದು. ಅಲ್ಲಿಗೆ ನಿನ್ನ ಮಗನನ್ನು ಕರೆದುಕೊಂಡುಹೋಗಿ ಸ್ನಾನಮಾಡಿಸು.

೫೩–೫೪. ಕೂಡಲೆ ಇವನ ಉನ್ಮಾದವು ಪರಿಹಾರವಾಗುವುದು" ಎಂದು ಹೇಳಲು, ಆ ನಂದನು ಜೈಮಿನಿಗೆ ವಂದಿಸಿ ಮಗನನ್ನು ಧನುಷ್ಕೋಟಿಗೆ ಕರೆದುಕೊಂಡುಹೋಗಿ ವಿಧಿಯಂತೆ ಸ್ನಾನಮಾಡಿಸಿದನು.

೫೫. ತರುವಾಯ ಸ್ನಾನಮಾತ್ರದಿಂದ ಆ ಧರ್ಮಗುಪ್ತನ ಹುಚ್ಚು ನೀಗಲು ನಂದನು ತಾನೂ ಭಕ್ತಿಯಿಂದ ಆ ಕ್ಷೇತ್ರದಲ್ಲಿ ಮಿಂದನು.

೫೬–೫೮. ತಂದೆಯಾದ ಆ ನಂದನು ಅಲ್ಲಿ ಒಂದು ದಿನ ಮಗನೊಡನೆ ವಾಸಮಾಡಿ ದಯಾಳುವಾದ ರಾಮೇಶ್ವರನನ್ನು ಸೇವಿಸಿ ಮಗನ ಅನುಮತಿಯಂತೆ ತಪಸ್ಸಿಗಾಗಿ ಕಾಡಿಗೆ ಹೋದನು. ತಂದೆಯು ತಪಸ್ಸಿಗೆ ಹೊರಟುಹೋಗಲು ಧರ್ಮಗುಪ್ತನು ರಾಮೇಶ್ವರನಿಗೆ ಭಕ್ತಿಯಿಂದ ಬಹುದ್ರವ್ಯಗಳನ್ನಿತ್ತು ಬ್ರಾಹ್ಮಣರಿಗೆ ಹಣ, ಧಾನ್ಯ, ಕ್ಷೇತ್ರಗಳನ್ನು ದಾನಮಾಡಿದನು.

೫೯–೬೧. ಬಳಿಕ ಸಚಿವರೊಡನೆ ತನ್ನ ಪಟ್ಟಣವನ್ನು ಸೇರಿ ಶತ್ರುಗಳಿಲ್ಲದೆ ವಂಶಕ್ರಮದಿಂದ ಬಂದ ತನ್ನ ರಾಜ್ಯವನ್ನು ಪಾಲಿಸಿದನು. ಹೀಗೆ ಉನ್ಮತ್ತರೂ, ಮೂರ್ಛೆಯ ರೋಗವುಳ್ಳವರೂ, ದುಷ್ಟಗ್ರಹಪೀಡಿತರೂ ಆದ ಮಾನವರು

ಪಿತೃಪೈತಾಮಹಂ ವಿಪ್ರಾ ಧರ್ಮಗುಪ್ತೋಽತಿಧಾರ್ಮಿಕಃ ।
ಉನ್ಮಾದ್ಯೈರಪ್ಯಪಸ್ಮಾರೈರ್ಗ್ರಹೈರ್ದುಷ್ಟೈಶ್ಚ ಯೇ ನರಾಃ ॥ ೬೦ ॥
ಗ್ರಸ್ತಾ ಭವಂತಿ ವಿಪ್ರೇಂದ್ರಾಸ್ತೇಽಪಿ ಚಾಽತ್ರ ನಿಮಜ್ಜನಾತ್ ।
ಧನುಷ್ಕೋಟೌ ವಿಮುಕ್ತಾಃ ಸ್ಯುಃ ಸತ್ಯಂ ಸತ್ಯಂ ವದಾಮ್ಯಹಂ ॥ ೬೧ ॥
ಪರಿತ್ಯಜ್ಯ ಧನುಷ್ಕೋಟಿಂ ತೀರ್ಥಮನ್ಯದ್ವ್ರಜೇತ್ತು ಯಃ ।
ಸಿದ್ಧಂ ಸ ಗೋಪಯಸ್ತ್ಯಕ್ತ್ವಾ ಸ್ನುಹೀ ಕ್ಷೀರಂ ಪ್ರಯಾಚತೇ ॥ ೬೨ ॥
ಧನುಷ್ಕೋಟಿರ್ಧನುಷ್ಕೋಟಿರ್ಧನುಷ್ಕೋಟಿರಿತಿ ದ್ವಿಜಾಃ ।
ತ್ರಿಃ ಪಠಂತೋ ನರಾ ಯೇ ತು ಯತ್ರ ಕ್ವಾಽಪಿ ಜಲಾಶಯೇ ॥ ೬೩ ॥
ಸ್ನಾಂತಿ ಸರ್ವೇ ನರಾಸ್ತೇ ವೈ ಯಾಸ್ಯಂತಿ ಬ್ರಹ್ಮಣಃ ಪದಂ ।
ಏವಂ ವಃ ಕಥಿತಾ ವಿಪ್ರಾ ಧರ್ಮಗುಪ್ತಕಥಾ ಶುಭಾ ॥ ೬೪ ॥
ಯಸ್ಯಾಃ ಶ್ರವಣಮಾತ್ರೇಣ ಬ್ರಹ್ಮಹತ್ಯಾ ವಿನಶ್ಯತಿ ।
ಸ್ವರ್ಣಸ್ತೇಯಾದಯಶ್ಚಾಽನ್ಯೇ ನಶ್ಯೇಯುಃ ಪಾಪಸಂಚಯಾಃ ॥ ೬೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಧರ್ಮಗುಪ್ತೋನ್ಮಾದವಿಮೋಕ್ಷಣ ವರ್ಣನಂ" ನಾಮ ದ್ವಾತ್ರಿಂಶೋಽಧ್ಯಾಯಃ

---

ಧನುಷ್ಕೋಟಿಯಲ್ಲಿ ಮಿಂದರೆ ಅವರು ಅವುಗಳಿಂದ ನಿಜವಾಗಿಯೂ ಮುಕ್ತರಾಗುವರು.

೬೨. ಯಾವನು ಧನುಷ್ಕೋಟಿಕ್ಷೇತ್ರವನ್ನು ಬಿಟ್ಟು ಬೇರೆ ತೀರ್ಥಕ್ಕೆ ಹೋಗುವನೊ ಅವನು ಸಿದ್ಧವಾಗಿರುವ ಆಕಳಹಾಲನ್ನು ತ್ಯಜಿಸಿ ಕಳ್ಳಿಯ ಹಾಲನ್ನು ಬೇಡಿದವನಂತೆಯೇ ಸರಿ!

೬೩-೬೪. ಬ್ರಾಹ್ಮಣರೆ! ಮನುಷ್ಯರು ಯಾವುದಾದರೂ ಕೆರೆಯಲ್ಲಿ ಧನುಷ್ಕೋಟಿಯೆಂದು ಮೂರುಸಾರಿ ಹೇಳುತ್ತ ಸ್ನಾನಮಾಡಿದರೆ ಅವರು ಬ್ರಹ್ಮನ ಸ್ಥಾನವನ್ನು ಪಡೆಯುವರು. ಹೀಗೆ ನಿಮಗೆ ಧರ್ಮಗುಪ್ತನ ಕಥೆಯನ್ನು ಹೇಳಿರುವೆನು.

೬೫. ಇದನ್ನು ಕೇಳುವುದರಿಂದ ಮನುಷ್ಯನ ಬ್ರಹ್ಮಹತ್ಯೆ, ಸ್ವರ್ಣಸ್ತೇಯ ಮೊದಲಾದ ಪಾಪಗಳೂ ನಾಶವಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಧರ್ಮಗುಪ್ತೋನ್ಮಾದವಿಮೋಕ್ಷಣವರ್ಣನ"ವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯಸ್ತ್ರಿಂಶೋಽಧ್ಯಾಯಃ

## ಪರಾವಸೋರ್ಬ್ರಹ್ಮಹತ್ಯಾವಿಮೋಕ್ಷಣಂ

ಶ್ರೀ ಸೂತ ಉವಾಚ :—

ಭೂಯೋಽಪ್ಯಹಂ ಪ್ರವಕ್ಷ್ಯಾಮಿ ಧನುಷ್ಕೋಟೇಸ್ತು ವೈಭವಂ ।
ಅತ್ಯದ್ಭುತತರಂ ಗುಹ್ಯಂ ಸರ್ವಲೋಕೈಕಪಾವನಂ ॥ ೧ ॥
ಪುರಾ ಪರಾವಸುರ್ನಾಮ ಬ್ರಾಹ್ಮಣೋ ವೇದವಿತ್ತಮಃ ।
ಅಜ್ಞಾನಾತ್ಪಿತರಂ ಹತ್ವಾ ಬ್ರಹ್ಮಹತ್ಯಾಮವಾಪ್ತವಾನ್ ।
ಸೋಽಪಿ ಸ್ನಾತ್ವಾ ಧನುಷ್ಕೋಟೌ ತದ್ದೋಷಾನ್ಮುಮುಚೇ ಕ್ಷಣಾತ್ ॥

ಋಷಯ ಊಚುಃ :—

ಪಿತರಂ ಹತವಾನ್ಪೂರ್ವಂ ಕಥಂ ಸೂತ ಪರಾವಸುಃ ॥ ೩ ॥
ಕಥಂ ವಾ ಧನುಷಃ ಕೋಟೌ ಮುಕ್ತಿಸ್ತಸ್ಯಾಽಪ್ಯಭೂನ್ಮುನೇ ।
ಏತನ್ನಃ ಶ್ರದ್ದಧಾನಾನಾಂ ವಿಸ್ತರಾದ್ವಕ್ತುಮರ್ಹಸಿ ॥ ೪ ॥

ಶ್ರೀ ಸೂತ ಉವಾಚ :—

ಆಸೀದ್ರಾಜಾ ಬೃಹದ್ದ್ಯುಮ್ನಶ್ಚಕ್ರವರ್ತೀ ಮಹಾಬಲಃ ।
ಧರ್ಮೇಣ ಪಾಲಯಾಮಾಸ ಸಾಗರಾಂತಾಂ ವಸುಂಧರಾಂ ॥ ೫ ॥

---

## ಕನ್ನಡದ ಅನುವಾದ

### ಪರಾವಸುಬ್ರಹ್ಮಹತ್ಯಾವಿಮೋಕ್ಷಣವರ್ಣನ

೧. ಶ್ರೀಸೂತನು ಹೇಳುತ್ತಾನೆ:—ನಾನು ಮರಳಿ ನಿಮಗೆ ಅತ್ಯಾಶ್ಚರ್ಯಕರವೂ, ಸಮಸ್ತಲೋಕಗಳನ್ನು ಪವಿತ್ರಗೊಳಿಸುವುದೂ ಆಗಿರುವ ಧನುಷ್ಕೋಟಿಯ ಮಾಹಾತ್ಮ್ಯೆಯನ್ನು ಹೇಳುವೆನು.

೨. ಹಿಂದೆ ವೇದಜ್ಞರಲ್ಲಿ ಶ್ರೇಷ್ಠನಾದ ಪರಾವಸುವೆಂಬ ಬ್ರಾಹ್ಮಣನು ಅಜ್ಞಾನದಿಂದ ತಂದೆಯನ್ನು ವಧಿಸಿ ಬ್ರಹ್ಮಹತ್ಯಾಪಾಪವನ್ನು ಹೊಂದಿದನು. ಅವನೂ ಧನುಷ್ಕೋಟಿಯಲ್ಲಿ ಮಿಂದು ಆ ದೋಷದಿಂದ ಕೂಡಲೆ ಮುಕ್ತನಾದನು.

೩. ಋಷಿಗಳು ಹೇಳುತ್ತಾರೆ:—ಸೂತ! ಪರಾವಸುವು ಹೇಗೆ ತಂದೆಯನ್ನು ಕೊಂದನು?

೪. ಧನುಷ್ಕೋಟಿಯಲ್ಲಿ ಅವನಿಗೆ ಮೋಕ್ಷವು ಹೇಗಾಯಿತು? ಅದನ್ನು ಶ್ರದ್ಧೆಯಿಂದ ಕೇಳುತ್ತಿರುವ ನಮಗೆ ವಿಸ್ತಾರವಾಗಿ ಹೇಳು.

೫. ಶ್ರೀಸೂತನು ಹೇಳುತ್ತಾನೆ:— ಹಿಂದೆ ಅತಿ ಬಲಿಷ್ಠನಾದ ಬೃಹದ್ದ್ಯುಮ್ನನೆಂಬ ಚಕ್ರವರ್ತಿಯು ಇದ್ದನು. ಅವನು ಈ ಸಮುದ್ರಗಳವರೆಗಿರುವ ಭೂಮಿಯನ್ನು ಆಳುತ್ತಿದ್ದನು.

ಅಯಜತ್ಸತ್ರಯಾಗೇನ ದೇವಾನಿಂದ್ರಪುರೋಗಮಾನ್ ।
ಯಾಜಕಸ್ತಸ್ಯ ರೈಭ್ಯೋಽಭೂದ್ವಿದ್ವಾನ್ಪರಮಧಾರ್ಮಿಕಃ ॥ ೬ ॥
ಆಸ್ತಾಂ ಪುತ್ರಾವುಭೌ ತಸ್ಯಾಽಪ್ಯರ್ವಾವಸುಪರಾವಸೂ ।
ಷಡಂಗವೇದವಿದುಷೌ ಶ್ರೌತಸ್ಮಾರ್ತೇಷು ಕೋವಿದೌ ॥ ೭ ॥
ಕಾಣಾದೇ ಜೈಮಿನೀಯೇ ಚ ಸಾಂಖ್ಯೇ ವೈಯಾಸಿಕೇ ತಥಾ ।
ಗೌತಮೇ ಯೋಗಶಾಸ್ತ್ರೇ ಚ ಪಾಣಿನೀಯೇ ಚ ಕೋವಿದೌ ॥ ೮ ॥
ಮನ್ವಾದಿಸ್ಮೃತಿನಿಷ್ಣಾತೌ ಸರ್ವಶಾಸ್ತ್ರವಿಶಾರದೌ ।
ಸತ್ರಯಾಗೇ ಸಹಾಯಾರ್ಥಂ ಬೃಹದ್ದ್ಯುಮ್ನೇನ ಯಾಚಿತೌ ॥ ೯ ॥
ಭ್ರಾತರೌ ಸಮನುಜ್ಞಾತೌ ಪಿತ್ರಾ ರೈಭ್ಯೇಣ ಜಗ್ಮತುಃ ।
ಬೃಹದ್ದ್ಯುಮ್ನಸ್ಯ ಸತ್ರಂ ತಾವಶ್ವಿನಾವಿವ ರೂಪಿಣೌ ॥ ೧೦ ॥
ಅತಿಷ್ಠದಾಶ್ರಮೇ ರೈಭ್ಯಃ ಸ್ನುಷಯಾ ಜ್ಯೇಷ್ಠಯಾ ಸಹ ।
ತೌ ಗತ್ವಾ ಭ್ರಾತರೌ ತತ್ರ ರಾಜ್ಞಃ ಸತ್ರಮನುತ್ತಮಂ ॥ ೧೧ ॥
ಯಾಜಯಾಮಾಸತುಃ ಸತ್ರೇ ಬೃಹದ್ದ್ಯುಮ್ನಂ ಮಹೀಪತಿಂ ।
ನಾಽಭವತ್ಸ್ಖಲನಂ ಭ್ರಾತ್ರೋಃ ಸತ್ರೇ ಸಾಂಗೇಷು ಕರ್ಮಸು ॥ ೧೨ ॥
ಸತ್ರೇ ಸಂತನ್ಯಮಾನೇಽಸ್ಮಿನ್ಬೃಹದ್ದ್ಯುಮ್ನಸ್ಯ ಭೂಪತೇಃ ।
ಮುನಯೋಽಭ್ಯಾಗಮನ್ಸರ್ವೇ ರಾಜ್ಞಾಽಽಹೂತಾ ನಿರೀಕ್ಷಿತುಂ ॥ ೧೩ ॥

---

೬. ಅವನು ಇಂದ್ರಾದಿ ದೇವತೆಗಳನ್ನು ಸತ್ರಯಾಗದಿಂದ ಸಂತೋಷಗೊಳಿಸಿದನು. ಅವನಿಗೆ ಅತಿ ಧರ್ಮಿಷ್ಠನಾದ ರೈಭ್ಯಮುನಿವರ್ಯನು ಪುರೋಹಿತನಾಗಿದ್ದನು.

೭–೯. ಆ ರೈಭ್ಯನಿಗೆ ಸಾಂಗವೇದಾಧ್ಯಯನ ಮಾಡಿದವರೂ, ಶ್ರೌತಸ್ಮಾರ್ತ ಕರ್ಮಗಳಲ್ಲಿ ಕುಶಲರೂ, ವೈಶೇಷಿಕ, ಮೀಮಾಂಸಾ, ಸಾಂಖ್ಯ, ವೇದಾಂತ, ನ್ಯಾಯ, ಯೋಗ, ವ್ಯಾಕರಣಾದಿ ಶಾಸ್ತ್ರಗಳಲ್ಲಿ ಚತುರರೂ, ಮನ್ವಾದಿ ಸ್ಮೃತಿಗಳಲ್ಲಿ ಪಂಡಿತರೂ, ಸಮಸ್ತ ಶಾಸ್ತ್ರಗಳಲ್ಲಿ ನಿಪುಣರೂ ಆಗಿರುವ ಅರ್ವಾವಸು ಪರಾವಸುಗಳೆಂಬ ಇಬ್ಬರು ಮಕ್ಕಳಿದ್ದರು. ಅವರನ್ನು ಬೃಹದ್ಯುಮ್ನನು ಸತ್ರಯಾಗದ ಸಹಾಯಕ್ಕಾಗಿ ಬೇಡಿಕೊಂಡನು.

೧೦. ಅಶ್ವಿನಿದೇವತೆಗಳಂತೆ ಸುಂದರರಾದ ಅವರಿಬ್ಬರು ತಂದೆಯ ಅನುಮತಿಯಿಂದ ಬೃಹದ್ಯುಮ್ನನ ಸತ್ರಯಾಗದ ಸಹಾಯಕ್ಕಾಗಿ ಹೋದರು.

೧೧–೧೨. ಆಶ್ರಮದಲ್ಲಿ ರೈಭ್ಯಮುನಿವರ್ಯನು ದೊಡ್ಡ ಸೊಸೆಯೊಡನೆ ವಾಸಮಾಡುತ್ತಿದ್ದನು. ಆ ಅರ್ವಾವಸು ಪರಾವಸುಗಳು ಬೃಹದ್ಯುಮ್ನನಿಂದ ಸತ್ರಯಾಗವನ್ನು ಮಾಡಿಸಿದರು. ಆ ಸತ್ರಯಾಗವನ್ನು ಅವರಿಬ್ಬರು ಮಾಡಿಸುತ್ತಿರುವಾಗ ಯಾವ ವಿಧವಾದ ತಪ್ಪೂ ನಡೆಯಲಿಲ್ಲ.

೧೩. ಬೃಹದ್ಯುಮ್ನನು ಸತ್ರಯಾಗವನ್ನು ನೆರವೇರಿಸುತ್ತಿರುವಾಗ ಅವನಿಂದ

ವಸಿಷ್ಠೋ ಗೌತಮಶ್ಚಾತ್ರಿರ್ಜಾಬಾಲಿರಥ ಕಶ್ಯಪಃ ।
ಕ್ರತುರ್ದಕ್ಷಃ ಪುಲಸ್ತ್ಯಶ್ಚ ಪುಲಹೋ ನಾರದೋ ಮುನಿಃ ॥ ೧೪ ॥
ಮಾರ್ಕಂಡೇಯಃ ಶತಾನಂದೋ ವಿಶ್ವಾಮಿತ್ರಃ ಪರಾಶರಃ ।
ಭೃಗುಃ ಕುತ್ಸೋಽಥ ವಾಲ್ಮೀಕಿರ್ವ್ಯಾಸಧೌಮ್ಯಾದಯೋಽಪರೇ ॥ ೧೫ ॥
ಶಿಷ್ಯೈಃ ಪ್ರಶಿಷ್ಯೈರ್ಬಹುಭಿರಸಂಖ್ಯಾತೈಃ ಸಮಾವೃತಾಃ ।
ತಾನಾಗತಾನ್ಸಮಾಲೋಕ್ಯ ಬೃಹದ್ದ್ಯುಮ್ನೋ ಮಹೀಪತಿಃ ॥ ೧೬ ॥
ಅರ್ಘ್ಯಾದಿನಾ ಮುನೀನ್ಸರ್ವಾನ್ಪೂಜಯಾಮಾಸ ಸಾದರಂ ।
ನಾನಾದಿಗ್ಭ್ಯಃ ಸಮಾಯಾತಾಶ್ಚತುರಂಗಬಲೈರ್ಯುತಾಃ ॥ ೧೭ ॥
ಉಪದಾಸಹಿತಾ ಭೂಪಾಸ್ಸತ್ರಂ ವೀಕ್ಷಿತುಮಾದರಾತ್ ।
ವೈಶ್ಯಾಶ್ಶೂದ್ರಾ ಸ್ತಥಾ ವರ್ಣಾಶ್ಚತ್ವಾರೋಽಪಿ ಸಮಾಗತಾಃ ॥ ೧೮ ॥
ವರ್ಣಿನೋಽಥ ಗೃಹಸ್ಥಾಶ್ಚ ವಾನಪ್ರಸ್ಥಾಶ್ಚ ಭಿಕ್ಷವಃ ।
ಸತ್ರಂ ನಿರೀಕ್ಷಿತುಂ ತಸ್ಯ ಬೃಹದ್ದ್ಯುಮ್ನಸ್ಯ ಚಾಯಯುಃ ॥ ೧೯ ॥
ತಾನ್ಸರ್ವಾನ್ಪೂಜಯಾಮಾಸ ಯಥಾಽರ್ಹಂ ರಾಜಸತ್ತಮಃ ।
ದದೌ ಚಾಽನ್ನಾನಿ ಸರ್ವೇಭ್ಯೋ ಘೃತಸೂಪಾದಿಕಾಂಸ್ತಥಾ ॥ ೨೦ ॥
ವಸ್ತ್ರಾಣಿ ಚ ಸುವರ್ಣಾನಿ ಹಾರರತ್ನಾನ್ಯನೇಕಶಃ ।
ಏವಂ ಸತ್ಕಾರಯಾಮಾಸ ರಾಜಾ ಸತ್ರೇ ಸಮಾಗತಾನ್ ॥ ೨೧ ॥
ರೈಭ್ಯಪುತ್ರೌ ತದಾ ವಿಪ್ರಾ ಅರ್ವಾವಸುಪರಾವಸೂ ।
ಅಧ್ವರಾದೀನಿ ಸರ್ವಾಣಿ ಚಕ್ರತುಃ ಸ್ಖಲಿತಂ ವಿನಾ ॥ ೨೨ ॥

---

ಆಹೂತರಾದ ಸಕಲ ಮುನಿಗಳೂ ಯಾಗವನ್ನು ನೋಡುವುದಕ್ಕಾಗಿ ಅಲ್ಲಿಗೆ ಬಂದರು.

೧೪–೨೧. ಬೃಹದ್ಯುಮ್ನನು ಬಹಳಮಂದಿ ಶಿಷ್ಯರು, ಅವರ ಶಿಷ್ಯರು ಇವರಿಂದ ಸಹಿತರಾಗಿ ಯಾಗಕ್ಕೆ ಬಂದ ವಸಿಷ್ಠ, ಗೌತಮ, ಅತ್ರಿ, ಜಾಬಾಲಿ, ಕಶ್ಯಪ, ಕ್ರತು, ದಕ್ಷ, ಪುಲಸ್ತ್ಯ, ಪುಲಹ, ನಾರದ, ಮಾರ್ಕಂಡೇಯ, ಶತಾನಂದ, ವಿಶ್ವಾಮಿತ್ರ, ಪರಾಶರ, ಭೃಗು, ಕುತ್ಸ, ವಾಲ್ಮೀಕಿ, ವ್ಯಾಸ, ಧೌಮ್ಯನೇ ಮೊದಲಾದ ಮಹರ್ಷಿಗಳನ್ನು ಕಂಡು ಅವರನ್ನು ಅರ್ಘ್ಯ ಮೊದಲಾದವುಗಳನ್ನಿತ್ತು ಪ್ರೀತಿಯಿಂದ ಪೂಜಿಸಿದನು. ನಾನಾ ದಿಕ್ಕುಗಳಿಂದ ಚತುರಂಗ ಬಲಗಳೊಡನೆ ಕಾಣಿಕೆಯನ್ನು ತೆಗೆದುಕೊಂಡು ಸತ್ರವನ್ನು ನೋಡುವುದಕ್ಕೆ ಬಂದ ರಾಜರನ್ನೂ, ವೈಶ್ಯರನ್ನೂ, ಶೂದ್ರರನ್ನೂ, ಬ್ರಹ್ಮಚಾರಿಗಳು, ಗೃಹಸ್ಥರು, ವಾನಪ್ರಸ್ಥರು, ಸನ್ನ್ಯಾಸಿಗಳು ಇವರನ್ನೂ ಉಚಿತಕ್ರಮದಿಂದ ಮೃಷ್ಟಾನ್ನ ಭೋಜನಮಾಡಿಸಿ ವಸ್ತ್ರ, ಸುವರ್ಣ, ಹಾರ, ರತ್ನಗಳನ್ನಿತ್ತು ಸನ್ಮಾನಿಸಿದನು.

೨೨. ಆಗ ರೈಭ್ಯನ ಮಕ್ಕಳಾದ ಅರ್ವಾವಸು ಪರಾವಸುಗಳು ಯಾಗ ಮೊದಲಾದ ಕಾರ್ಯಗಳನ್ನು ತಪ್ಪಿಲ್ಲದೆ ನಡೆಯಿಸಿದರು.

ತದ್ದೃಷ್ಟ್ವಾ ಮುನಯಸ್ಸರ್ವೇ ಕೌಶಲಂ ರೈಭ್ಯಪುತ್ರಯೋಃ ।
ಶ್ಲಾಘಯಂತೇ ಸಶಿರಃಕಂಪಂ ವಸಿಷ್ಠಪ್ರಮುಖಾಸ್ತದಾ ॥ ೨೩ ॥
ಕರ್ಮಾಣಿ ಕಾನಿಚಿತ್ತತ್ರ ಕಾರಯಿತ್ವಾ ಪರಾವಸುಃ ।
ತೃತೀಯಸವನಸ್ಯಾಂತೇ ಗೃಹಕೃತ್ಯಂ ನಿರೀಕ್ಷಿತುಂ ॥ ೨೪ ॥
ಪ್ರಯಯೌ ಸ್ವಾಶ್ರಮಂ ಸಾಯಂ ವಿಸೃಜ್ಯಾಽರ್ವಾವಸುಂ ದ್ವಿಜಾಃ ।
ತಸ್ಮಿನ್ನವಸರೇ ರೈಭ್ಯಂ ಕೃಷ್ಣಾಜಿನಸಮಾವೃತಂ ॥ ೨೫ ॥
ವನೇ ಚರಂತಂ ಪಿತರಂ ದೃಷ್ಟ್ವಾ ಸ ಮೃಗಶಂಕಯಾ ।
ನಿದ್ರಾಕಲುಷಿತೋ ರಾತ್ರಾವಂಧೇ ತಮಸಿ ಸಂಕುಲೇ ॥ ೨೬ ॥
ಆತ್ಮಾನಂ ಹಂತುಮಾಯಾತಿ ಮೃಗೋಽಯಮಿತಿ ಚಿಂತಯನ್ ।
ಜಘಾನ ಪಿತರಂ ಸೋಽಯಂ ಮಹಾಽರಣ್ಯೇ ಪರಾವಸುಃ ॥ ೨೭ ॥
ರಿರಕ್ಷಿಷಾ ಶರೀರಂ ಸ್ವಂ ತೇನಾಕಾಮನಯಾ ಪಿತಾ ।
ರಜನ್ಯಾಂ ಹಿಂಸಿತೋ ವಿಪ್ರಾ ಮಹಾಪಾತಕಕಾರಿಣಾ ॥ ೨೮ ॥
ಅಂತಿಕಂ ಸ ಸಮಾಗತ್ಯ ವ್ಯಲೋಕಯತ ತಂ ಹತಂ ।
ಜ್ಞಾತ್ವಾ ಸ್ವಪಿತರಂ ರಾತ್ರೌ ಶುಶೋಚ ವ್ಯಥಿತೇಂದ್ರಿಯಃ ॥ ೨೯ ॥
ಪ್ರೇತಕಾರ್ಯಂ ತತಃ ಕೃತ್ವಾ ಪಿತುಃ ಸರ್ವಂ ಪರಾವಸುಃ ।
ಭೂಯೋಽಪಿ ನೃಪತೇಃ ಸತ್ರಂ ಪರಾವಸುರುಪಾಯಯೌ ॥ ೩೦ ॥

---

೨೩. ವಸಿಷ್ಠನೇ ಮೊದಲಾದ ಮಹರ್ಷಿಗಳು ರೈಭ್ಯತನಯರ ಚಾತುರ್ಯವನ್ನು ನೋಡಿ ತಲೆದೂಗುತ್ತ ಹೊಗಳಿದರು.

೨೪–೨೭. ವಿಪ್ರರೆ! ಪರಾವಸುವು ಆ ಯಾಗದಲ್ಲಿ ಕೆಲವು ಕರ್ಮಗಳನ್ನು ನೆರವೇರಿಸಿ ಮೂರನೆ ಸವನದ ಕೊನೆಯಲ್ಲಿ ತನ್ನ ಮನೆಯ ಕಾರ್ಯವನ್ನು ನೋಡುವುದಕ್ಕಾಗಿ ಅರ್ವಾವಸುವನ್ನು ಬಿಟ್ಟು ತಾನೊಬ್ಬನೆ ತನ್ನ ಆಶ್ರಮಕ್ಕೆ ಹೋದನು. ಆಗ ಅವನು ಕೃಷ್ಣಾಜಿನವನ್ನು ಹೊದ್ದುಕೊಂಡು ಕಾಡಿನಲ್ಲಿ ಸಂಚರಿಸುತ್ತಿರುವ ತಂದೆಯನ್ನು ನೋಡಿ ರಾತ್ರಿಯ ಹೆಗ್ಗತ್ತಲೆಯಲ್ಲಿ ಮೃಗವು ತನ್ನನ್ನು ಕೊಲ್ಲುವುದಕ್ಕೆ ಬರುತ್ತಿದೆಯೆಂದು ಶಂಕಿಸಿ ನಿದ್ರೆಯ ಕಣ್ಣಿನಲ್ಲಿ ವಿವೇಕವಿಲ್ಲದೆ ಆ ತಂದೆಯಾದ ರೈಭ್ಯನನ್ನು ವಧಿಸಿದನು.

೨೮. ಬ್ರಾಹ್ಮಣರೆ! ಹೀಗೆ ಪರಾವಸುವು ರಾತ್ರಿಯಲ್ಲಿ ತನ್ನ ಶರೀರವನ್ನು ಕಾಪಾಡಿಕೊಳ್ಳಲೋಸುಗ ಅಜ್ಞಾನದಿಂದ ತನ್ನ ತಂದೆಯನ್ನು ಕೊಂದು ಮಹಾಪಾತಕಿಯಾದನು.

೨೯–೩೦. ಅವನು ಹತ್ತಿರ ಬಂದು ತಾನು ಕೊಂದ ಪ್ರಾಣಿಯು ತನ್ನ ತಂದೆಯೆಂದರಿತು ಬಹಳ ದುಃಖಿಸಿದನು. ಅನಂತರ ಆ ಪರಾವಸುವು ತಂದೆಯ ಉತ್ತರಕ್ರಿಯೆಗಳನ್ನೆಲ್ಲ ಪೂರೈಸಿ ಮರಳಿ ಬೃಹದ್ಯುಮ್ನನ ಸತ್ರಕ್ಕೆ ಬಂದನು.

ಸ್ವಚೇಷ್ಟಿತಂ ತು ತತ್ಸರ್ವಂ ಅನುಜ್ಞಾಯ ತತೋಽಬ್ರವೀತ್ ।
ಮೃತಂ ಸ್ವಪಿತರಂ ಶ್ರುತ್ವಾ ಸೋಽಪಿ ಶೋಕಾಕುಲೋಽಭವತ್ ॥ ೩೧ ॥
ಜ್ಯೇಷ್ಠೋಽನುಜಂ ತತಃ ಪ್ರಾಹ ವಚನಂ ದ್ವಿಜಸತ್ತಮಾಃ ।
ಮಹತ್ಸತ್ರಂ ಸಮಾರಬ್ಧಂ ಬೃಹದ್ದ್ಯುಮ್ನಸ್ಯ ಭೂಪತೇಃ ॥ ೩೨ ॥
ವೋಢುತ್ವಶಕ್ತಿರ್ನಾಸ್ತ್ಯಸ್ಯ ಕರ್ಮಣೋ ಬಾಲಕಸ್ಯ ತೇ ।
ಜನಕಶ್ಚ ಹತೋ ರಾತ್ರೌ ಮಯಾಽಪಿ ಮೃಗಶಂಕಯಾ ॥ ೩೩ ॥
ಪ್ರಾಯಶ್ಚಿತ್ತಂ ಚ ಕರ್ತವ್ಯಂ ಬ್ರಹ್ಮಹತ್ಯಾವಿಶುದ್ಧಯೇ ।
ಮದರ್ಥಂ ವ್ರತಚರ್ಯಾಂ ತ್ವಂ ಚರ ತಾತ ಕನಿಷ್ಠಕ ॥ ೩೪ ॥
ಏಕಾಕೀ ಧುರುಮುದ್ವೋಢುಂ ಶಕ್ತೋಽಹಂ ಸತ್ರಕರ್ಮಣಃ ।
ಅರ್ವಾವಸುರಿತಿ ಪ್ರೋಕ್ತೋ ಜ್ಯೇಷ್ಠೇನ ಸ ತಮಭ್ಯದಾತ್ ॥ ೩೫ ॥
ತಥಾ ಭವತ್ವಹಂ ಜ್ಯೇಷ್ಠ ಚರಿಷ್ಯೇ ವ್ರತಮುತ್ತಮಂ ।
ಬ್ರಹ್ಮಹತ್ಯಾವಿಶುದ್ಧ್ಯರ್ಥಂ ತ್ವಂ ಸತ್ರಧುರಮಾವಹ ॥ ೩೬ ॥
ಇತ್ಯುಕ್ತ್ವಾ ಸೋಽನುಜೋ ಜ್ಯೇಷ್ಠಂ ತಸ್ಮಾತ್ಸತ್ರಾದ್ವಿನಿರ್ಯಯೌ ।
ಕಾರಯಾಮಾಸ ಕರ್ಮಾಣಿ ಜ್ಯೇಷ್ಠಸ್ತಸ್ಮಿನ್ಗತೇ ಕ್ರತೌ ॥ ೩೭ ॥
ದ್ವಾದಶಾಬ್ದಂ ಕನಿಷ್ಠೋಽಪಿ ಬ್ರಹ್ಮಹತ್ಯಾವ್ರತಂ ದ್ವಿಜಾಃ ।
ಚರಿತ್ವಾ ಸತ್ರಯಾಗೇಽಸ್ಮಿನ್ನಾಜಗಾಮ ಪುನರ್ಮುದಾ ॥ ೩೮ ॥

---

೩೧. ಅಲ್ಲಿ ತಾನು ಮಾಡಿದ ಕೆಲಸವನ್ನೆಲ್ಲ ತಮ್ಮನಿಗೆ ತಿಳಿಸಲು ಅರ್ವಾವಸುವು ತಂದೆಯ ಮರಣವನ್ನು ಕೇಳಿ ದುಃಖಗೊಂಡನು.

೩೨–೩೪. ಬಳಿಕ ಅಣ್ಣನು ತಮ್ಮನನ್ನು ಕುರಿತು "ಬೃಹದ್ಯುಮ್ನನ ಮಹಾ ಯಾಗವು ಆರಂಭಿಸಲ್ಪಟ್ಟದೆ. ಬಾಲಕನಾದ ನಿನಗೆ ಈ ಕೆಲಸವನ್ನು ನೆರವೇರಿಸುವ ಶಕ್ತಿಯಿಲ್ಲ. ನಾನು ರಾತ್ರಿಯಲ್ಲಿ ಮೃಗವೆಂದರಿತು ತಂದೆಯನ್ನು ವಧಿಸಿರುವೆನು. ಈ ಬ್ರಹ್ಮಹತ್ಯಾಪಾಪದ ಶುದ್ಧಿಗಾಗಿ ಪ್ರಾಯಶ್ಚಿತ್ತವನ್ನೆಸಗಬೇಕು. ಮಗು! ನೀನು ನನಗಾಗಿ ವ್ರತವನ್ನಾಚರಿಸು.

೩೫. ನಾನು ಒಬ್ಬಂಟಿಗನಾಗಿ ಈ ಸತ್ರದ ಕಾರ್ಯವನ್ನು ನೆರವೇರಿಸಲು ಶಕ್ತನಾಗಿರುವೆನು." ಹೀಗೆ ಅಣ್ಣನು ಹೇಳಲು ಅರ್ವಾವಸುವು ಅವನನ್ನು ಕುರಿತು ಇಂತೆಂದನು.

೩೬. "ಅಣ್ಣ! ಹಾಗೆಯೇ ಆಗಲಿ. ನಾನು ನಿನ್ನ ಬ್ರಹ್ಮಹತ್ಯಾದೋಷದ ಪರಿಹಾರಕ್ಕಾಗಿ ವ್ರತವನ್ನಾಚರಿಸುವೆನು. ನೀನು ಸತ್ರದ ಭಾರವನ್ನು ವಹಿಸು."

೩೭. ಅರ್ವಾವಸುವು ಹೀಗೆಹೇಳಿ ಆ ಸತ್ರಯಾಗದಿಂದ ಹೊರಟುಹೋದನು. ಅನಂತರ ಪರಾವಸುವು ಯಾಗವನ್ನು ಮಾಡಿಸಿದನು.

೩೮. ಬ್ರಾಹ್ಮಣರೆ! ಆ ತಮ್ಮನಾದ ಅರ್ವಾವಸುವು ಹನ್ನೆರಡು ವರ್ಷಕಾಲ

ತಂ ದೃಷ್ಟ್ವಾ ಭ್ರಾತರಂ ಜ್ಯೇಷ್ಠೋ ಬೃಹದ್ದ್ಯುಮ್ನಮುವಾಚ ಹ ।
ಅಯಂ ತೇ ಬ್ರಹ್ಮಹಾ ಸತ್ರಮರ್ವಾವಸುರುಪಾಗತಃ ॥ ೩೯ ॥
ಏನಮುತ್ಸಾರಯಾಶು ತ್ವಮಸ್ಮಾತ್ಸತ್ರಾನ್ನೃಪೋತ್ತಮ ।
ಅನ್ಯಥಾ ಸತ್ರಯಾಗಸ್ಯ ಫಲಹಾನಿರ್ಭವಿಷ್ಯತಿ ॥ ೪೦ ॥
ಇತೀರಿತಃ ಸ ಸ್ವಪ್ರೇಷ್ಯೈರ್ಯಾಗಾತ್ತಮುದವಾಸಯತ್ ।
ಉದ್ವಾಸ್ಯಮಾನೋ ರಾಜಾನಮರ್ವಾವಸುರಥಾಽಬ್ರವೀತ್ ॥ ೪೧ ॥
ನ ಮಯಾ ಬ್ರಹ್ಮಹತ್ಯೇಯಂ ಬೃಹದ್ದ್ಯುಮ್ನ ಕೃತಾಽನಘ ।
ಕಿಂ ತು ಜ್ಯೇಷ್ಠೇನ ಮೇ ಸಾ ಹಿ ಬ್ರಹ್ಮಹತ್ಯಾ ಕೃತಾ ವಿಭೋ ॥ ೪೨ ॥
ಬ್ರಹ್ಮಹತ್ಯಾವ್ರತಂ ಚೀರ್ಣಂ ತದರ್ಥಂ ಚ ಮಯಾಽಧುನಾ ।
ಏವಮುಕ್ತೋಽಪಿ ರಾಜಾಽಸೌ ವಚಸಾ ಸ ಪರಾವಸೋಃ ॥ ೪೩ ॥
ಅರ್ವಾವಸುಂ ನಿಜಾತ್ಸತ್ರಾದುದವಾಸಯದಾಶು ವೈ ।
ಧಿಕ್ಕೃತೋ ಬ್ರಾಹ್ಮಣೈಶ್ಚಾಽಯಂ ಯಯೌ ತೂಷ್ಣೀಂ ವಸನ್ ತದಾ ॥೪೪॥
ಮುನಿವೃಂದಸಮಾಕೀರ್ಣಂ ತಪೋವನಮುಪೇತ್ಯ ಸಃ ।
ಅರ್ವಾವಸುಸ್ತಪಶ್ಚಕ್ರೇ ದೇವೈರಪಿ ದುಷ್ಕರಂ ॥ ೪೫ ॥

---

ಬ್ರಹ್ಮಹತ್ಯಾಪರಿಹಾರಕ್ಕಾಗಿ ವ್ರತವನ್ನಾಚರಿಸಿ ಮರಳಿ ಸಂತೋಷದಿಂದ ಸತ್ರಯಾಗಕ್ಕೆ ಬಂದನು.

೩೯. ಆಗ ತಮ್ಮನನ್ನು ನೋಡಿ ಅಣ್ಣನು ಬೃಹದ್ಯುಮ್ನರಾಜನನ್ನು ಕುರಿತು ಹೀಗೆಂದನು. "ಬ್ರಹ್ಮಹತ್ಯೆಯನ್ನೆಸಗಿದ ಈ ಅರ್ವಾವಸುವು ನಿನ್ನ ಸತ್ರಕ್ಕೆ ಬಂದಿರುವನು.

೪೦. ರಾಜೇಂದ್ರ! ನೀನು ಇವನನ್ನು ಜಾಗ್ರತೆಯಾಗಿ ಯಾಗದಿಂದ ದೂರಮಾಡು. ಹಾಗೆ ಮಾಡದಲ್ಲಿ ಸತ್ರಯಾಗದ ಫಲವು ಕೆಡುವುದು."

೪೧. ಹೀಗೆ ಪರಾವಸುವು ಹೇಳಲು ಆ ದೊರೆಯು ತನ್ನ ಸೇವಕರಿಂದ ಆ ಅರ್ವಾವಸುವನ್ನು ದೂರಮಾಡಿದನು. ಹಾಗೆ ದೂರಕಳುಹಿಸುತ್ತಿರುವಾಗ ಅರ್ವಾವಸುವು ದೊರೆಯನ್ನು ಕುರಿತು ಇಂತೆಂದನು.

೪೨. "ಎಲೈ ನಿರ್ದುಷ್ಟನಾದ ದೊರೆಯೆ! ನಾನು ಬ್ರಹ್ಮಹತ್ಯೆಯನ್ನು ಮಾಡಿದವನಲ್ಲ. ನಮ್ಮ ಅಣ್ಣನೇ ಬ್ರಹ್ಮಹತ್ಯೆಯನ್ನು ಮಾಡಿರುವನು.

೪೩–೪೫. ಅವನು ಮಾಡಿದ ಬ್ರಹ್ಮಹತ್ಯೆಯ ಪಾಪದ ಪ್ರಾಯಶ್ಚಿತ್ತಕ್ಕಾಗಿ ನಾನು ವ್ರತವನ್ನಾಚರಿಸಿದೆನು." ಹೀಗೆಂದರೂ ರಾಜನು ಪರಾವಸುವಿನ ಮಾತನ್ನೇ ನಂಬಿ ಅರ್ವಾವಸುವನ್ನು ತನ್ನ ಸತ್ರದಿಂದ ಕೂಡಲೆ ಹೊರಡಿಸಿದನು. ಅಲ್ಲಿ ನೆರೆದ ಬ್ರಾಹ್ಮಣರೂ ಅರ್ವಾವಸುವನ್ನು ನಿಂದಿಸಿದ್ದರಿಂದ ಅವನು ಸುಮ್ಮನೆ ಕಾಡಿಗೆ ತೆರಳಿದನು. ಆ ಅರ್ವಾವಸುವು ಮುನಿಗಳಿಂದ ತುಂಬಿರುವ ತಪೋವನವನ್ನು ಹೊಕ್ಕು ಅಲ್ಲಿ ದೇವತೆಗಳಿಗೂ ಆಚರಿಸಲಾಗದ ತಪಸ್ಸನ್ನು ಮಾಡಿದನು.

ತಪಃ ಕುರ್ವಂಸ್ತಥಾದಿತ್ಯಮುಪತಸ್ಥೇ ಸಮಾಹಿತಃ ।
ಮೂರ್ತಿಮಾಂಸ್ತಪಸಾ ತಸ್ಯ ಮಹತಾಽದುಷ್ಟಧೀಃ ಸ್ವಯಂ ॥ ೪೬ ॥
ಆವಿರಾಸೀತ್ಸ್ವಯಾ ದೀಪ್ತ್ಯಾ ಭಾಸಯನ್ ಜಗತೀತಲಂ ।
ಕರ್ಮಸಾಕ್ಷೀ ಜಗಚ್ಚಕ್ಷುರ್ಭಾಸ್ಕರೋ ದೇವತಾಽಗ್ರಣೀಃ ॥ ೪೭ ॥
ಆವಿರ್ಬಭೂವುರ್ದೇವಾಶ್ಚ ಪುರಸ್ಕೃತ್ಯ ಶಚೀಪತಿಂ ।
ಇಂದ್ರಾದಯಸ್ತತೋ ದೇವಾಃ ಪ್ರೋಚುರರ್ವಾವಸುಂ ದ್ವಿಜಾಃ ॥ ೪೮ ॥
ಅರ್ವಾವಸೋ ತ್ವಂ ಪ್ರವರಸ್ತಪಸಾ ಬ್ರಹ್ಮಚರ್ಯತಃ ।
ಆಚಾರೇಣ ಶ್ರುತೇನಾಽಪಿ ವೇದಶಾಸ್ತ್ರಾದಿಶಿಕ್ಷಯಾ ॥ ೪೯ ॥
ನಿರಾಕೃತೋಽವಮಾನೇನ ತ್ವಂ ಪರಾವಸುನಾ ಬಹು ।
ತಥಾಽಪಿ ಕ್ಷಮಯಾ ಯುಕ್ತೋ ನ ಕುಪ್ಯತಿ ಭವಾನ್ಯತಃ ॥ ೫೦ ॥
ಯಸ್ಮಾಜ್ಜ್ಯೇಷ್ಠೋಽವಧೀತ್ತಾತಂ ನ ಹಿಂಸೀಸ್ತ್ವಂ ಮಹಾಮತೇ ।
ಬ್ರಹ್ಮಹತ್ಯಾವ್ರತಂ ಯಸ್ಮಾತ್ತದರ್ಥಂ ಚರಿತಂ ತ್ವಯಾ ॥ ೫೧ ॥
ಅತಃ ಸ್ವೀಕುರ್ಮಹೇ ತ್ವಾಂ ತು ಪರಾಕುರ್ಮಃ ಪರಾವಸುಂ ।
ಉಕ್ತ್ವೈವಂ ಬಲಭಿನ್ಮುಖ್ಯಾಃ ಸರ್ವೇ ಚ ತ್ರಿದಿವಾಲಯಾಃ ॥ ೫೨ ॥
ತಂ ತೇ ಪ್ರವರಯಾಮಾಸುರ್ನಿರಾಸುಶ್ಚ ಪರಾವಸುಂ ।
ಪುನರಿಂದ್ರಾದಯೋ ದೇವಾಃ ಪುರೋಧಾಯ ದಿವಾಕರಂ ॥ ೫೩ ॥

---

೪೬–೪೭. ತಪಸ್ಸನ್ನಾಚರಿಸುತ್ತ ಏಕಮನಸ್ಸಿನಿಂದ ಸೂರ್ಯದೇವನನ್ನು ಪೂಜಿಸಿದನು. ಅವನ ಘೋರತಪಸ್ಸಿನಿಂದ ಕರ್ಮಗಳಿಗೆ ಸಾಕ್ಷಿಯೂ, ಜಗತ್ತಿನ ಕಣ್ಣೂ, ದೇವವರ್ಯನೂ ಆದ ಭಾಸ್ಕರನು ತನ್ನ ಕಿರಣಗಳಿಂದ ಭೂಮಂಡಲವನ್ನು ಪ್ರಕಾಶಗೊಳಿಸುತ್ತ ಪ್ರತ್ಯಕ್ಷನಾದನು.

೪೮. ವಿಪ್ರರೆ! ದೇವತೆಗಳು ದೇವೇಂದ್ರನೊಡನೆ ಅಲ್ಲಿಗೆ ಬಂದು ಅರ್ವಾವಸುವನ್ನು ಕುರಿತು ಹೀಗೆಂದರು.

೪೯–೫೦. "ಅರ್ವಾವಸುವೆ! ನೀನು ತಪಸ್ಸು, ಬ್ರಹ್ಮಚರ್ಯೆ, ನಡತೆ, ಶಾಸ್ತ್ರಶ್ರವಣ, ವೇದಾಧ್ಯಯನ ವೊದಲಾದುವುಗಳಿಂದ ಉತ್ತಮನಾಗಿರುವೆ. ಪರಾವಸುವು ಹಲವು ವಿಧವಾಗಿ ನಿನ್ನನ್ನು ಅವಮಾನಮಾಡಿದರೂ ನೀನು ತಾಳ್ಮೆಯಿಂದ ಸಿಟ್ಟಾಗದ ಕಾರಣದಿಂದಲೂ ಶ್ರೇಷ್ಠನು.

೫೧. ಪ್ರಾಜ್ಞನೆ! ಅಣ್ಣನು ತಂದೆಯನ್ನು ಕೊಂದವನು. ನೀನು ಕೊಂದವನಲ್ಲ. ಆದರೂ ಅಣ್ಣನಿಗಾಗಿ ನೀನು ಬ್ರಹ್ಮಹತ್ಯಾವ್ರತವನ್ನು ಆಚರಿಸಿರುವೆ.

೫೨–೫೩. ಆದುದರಿಂದ ನಿನ್ನನ್ನು ನಾವು ಪರಿಗ್ರಹಿಸುವೆವು. ಪರಾವಸುವನ್ನು ತಿರಸ್ಕರಿಸುವೆವು." ಹೀಗೆ ದೇವೇಂದ್ರನೇ ವೊದಲಾದ ದೇವತೆಗಳು ಹೇಳಿ ಆ ಅರ್ವಾವಸುವನ್ನು ಸೇರಿಸಿಕೊಂಡರು. ಪರಾವಸುವನ್ನು ನಿರಾಕರಿಸಿದರು.

ಅರ್ವಾವಸುಂ ಪ್ರೋಚುರಿದಂ ವರಂ ತ್ವಂ ವರಯೇತಿ ವೈ ।
ಸ ಚಾಽಪಿ ಪ್ರಾರ್ಥಯಾಮಾಸ ಜನಕಸ್ಯೋತ್ಥಿತಿಂ ಪುನಃ ॥ ೫೪ ॥
ವಧೇ ಚಾಸ್ಮರಣಂ ದೇವಾನಾತ್ಮನೋ ಜನಕಸ್ಯ ವೈ ।
ತಥಾಽಸ್ತ್ವಿತಿ ಸುರಾಃ ಪ್ರೋಚುಃ ಪುನರೂಚುರಿದಂ ವಚಃ ॥ ೫೫ ॥
ವರಂ ಚಾಽನ್ಯಂ ಪ್ರದಾಸ್ಯಾಮೋ ವರಯ ತ್ವಂ ಮಹಾಮತೇ ।
ಏವಮುಕ್ತಃ ಸುರೈಃ ಸೋಽಯಂ ಅರ್ವಾವಸುರಭಾಷತ ॥ ೫೬ ॥
ಮಮ ಭ್ರಾತುರದುಷ್ಟತ್ವಂ ಭವತು ತ್ರಿದಶಾಲಯಾಃ ।
ಅರ್ವಾವಸೋರ್ವಚಃ ಶ್ರುತ್ವಾ ತ್ರಿದಶಾಃ ಪುನರಬ್ರುವನ್ ॥ ೫೭ ॥
ಬ್ರಾಹ್ಮಣಸ್ಯ ಪಿತುರ್ಘಾತಾನ್ಮಹಾದೋಷಃ ಪರಾವಸೋಃ ।
ನ ಹ್ಯನ್ಯಕೃತಪಾಪಸ್ಯ ಪರೇಣಾಽನುಷ್ಠಿತೇನ ವೈ ॥ ೫೮ ॥
ಪ್ರಾಯಶ್ಚಿತ್ತೇನ ಶಾಂತಿಃ ಸ್ಯಾನ್ಮಹಾಪಾತಕಪಂಚಕೇ ।
ಪಿತುರ್ಬ್ರಾಹ್ಮಣಹಂತುಸ್ತು ಸುತರಾಂ ನಾಸ್ತಿ ನಿಷ್ಕೃತಿಃ ॥ ೫೯ ॥
ಆತ್ಮನಾಽನುಷ್ಠಿತೇನಾಽಪಿ ವ್ರತೇನ ನ ಹಿ ದುಷ್ಕೃತಿಃ ।
ಪರಾವಸೋಸ್ತವ ಭ್ರಾತುರತೋ ನೈವಾಽಸ್ತಿ ನಿಷ್ಕೃತಿಃ ॥ ೬೦ ॥

---

ಮರಳಿ ಇಂದ್ರಾದಿ ದೇವತೆಗಳು ಸೂರ್ಯನನ್ನು ಮುಂದಿರಿಸಿಕೊಂಡು ಅರ್ವಾವಸುವನ್ನುಕುರಿತು "ನೀನು ವರವನ್ನು ಕೇಳಿಕೊ" ಎಂದರು. ಅವನೂ ತಂದೆಯು ತಿರುಗಿ ಬದುಕುವಿಕೆಯನ್ನೂ, ಆ ತಂದೆಗೆ ಕೊಲೆಯ ಸ್ಮರಣೆಯಿಲ್ಲದಿರುವಿಕೆಯನ್ನೂ ಬೇಡಿಕೊಂಡನು. ದೇವತೆಗಳು ಹಾಗೆಯೇ ಆಗಲೆಂದು ಹೇಳಿ ಮರಳಿ ಇಂತೆಂದರು.

೫೬. ನೀನು ಇನ್ನೊಂದು ವರವನ್ನು ಕೇಳಿಕೊ ಎಂದು ಆ ದೇವತೆಗಳು ಹೇಳಲು ಅರ್ವಾವಸುವು ಹೀಗೆಂದನು.

೫೭. "ದೇವತೆಗಳೆ! ನನ್ನ ಅಣ್ಣನ ದೋಷವು ಪರಿಹಾರವಾಗಲಿ" ಎಂದನು. ದೇವತೆಗಳು ಅವನ ಮಾತನ್ನು ಕೇಳಿ ತಿರುಗಿ ಹೇಳಿದರು.

೫೮-೫೯. ಪರಾವಸುವು ಬ್ರಾಹ್ಮಣನಾದ ತಂದೆಯನ್ನು ಕೊಲೆ ಮಾಡಿದುದರಿಂದ ಅವನಿಗೆ ಮಹಾಪಾಪವು ಸಂಭವಿಸಿದೆ. ಒಬ್ಬನು ಮಾಡಿದ ಪಾಪಕ್ಕೆ ಮತ್ತೊಬ್ಬನು ಪ್ರಾಯಶ್ಚಿತ್ತವನ್ನಾಚರಿಸುವುದರಿಂದ ಪಂಚಮಹಾಪಾತಕಗಳು ಶಾಂತವಾಗಲಾರವು. ಬ್ರಾಹ್ಮಣನಾದ ತಂದೆಯನ್ನು ವಧಿಸಿದುದರಿಂದುಂಟಾದ ಪಾತಕಕ್ಕೆ ಪರಿಹಾರವೆ ಇಲ್ಲ.

೬೦. ತಾನು ಆಚರಿಸಿದ ಪ್ರಾಯಶ್ಚಿತ್ತದಿಂದ ಪರಿಹಾರವಾಗದ ಪಾಪವು ಪರರ ಪ್ರಾಯಶ್ಚಿತ್ತಾಚರಣೆಯಿಂದ ಶಾಂತವಾಗುವುದೆ? ಆದುದರಿಂದ ಪರಾವಸುವೆಸಗಿದ ಪಾಪವು ಪರಿಹಾರವಾಗುವುದಿಲ್ಲ.

ಅತೋಽಸ್ಮಾಭಿರದುಷ್ಟತ್ವಮಸ್ಮೈ ದಾತುಂ ನ ಶಕ್ಯತೇ ।
ಅರ್ವಾವಸುಃ ಪುನಃ ಪ್ರಾಹ ದೇವಾನಿಂದ್ರಪುರೋಗಮಾನ್ ॥ ೬೧ ॥
ತಥಾಽಪಿ ಯುಷ್ಮನ್ಮಾಹಾತ್ಮ್ಯಾತ್ಪ್ರಸಾದಾದ್ಭವತಾಂ ತಥಾ ।
ಪಿತುರ್ಬ್ರಾಹ್ಮಣಹಂತುರ್ಮೇ ಭ್ರಾತುಸ್ತ್ರಿದಶಸತ್ತಮಾಃ ॥ ೬೨ ॥
ಯಥಾ ಸ್ಯಾನ್ನಿಷ್ಕೃತಿರ್ಬ್ರೂತ ತಥೈವ ಕೃಪಯಾ ಯುತಾಃ ।
ಏವಮರ್ವಾವಸೋಃ ಶ್ರುತ್ವಾ ವಚಸ್ತೇ ತ್ರಿದಶಾಲಯಾಃ ॥ ೬೩ ॥
ಧ್ಯಾತ್ವಾತು ಸುಚಿರಂ ಕಾಲಂ ವಿನಿಶ್ಚಿತ್ಯೇದಮಬ್ರುವನ್ ।
ಉಪಾಯಂ ತೇ ಪ್ರವಕ್ಷ್ಯಾಮಸ್ತತ್ಪಾತಕನಿವಾರಣಂ ॥ ೬೪ ॥
ದಕ್ಷಿಣಾಂಬುನಿಧೌ ಪುಣ್ಯೇ ರಾಮಸೇತೌ ವಿಮುಕ್ತಿದೇ ।
ಧನುಷ್ಕೋಟಿರಿತಿ ಖ್ಯಾತಂ ತೀರ್ಥಮಸ್ತಿ ವಿಮುಕ್ತಿದಂ ॥ ೬೫ ॥
ಬ್ರಹ್ಮಹತ್ಯಾಸುರಾಪಾನಸ್ವರ್ಣಸ್ತೇಯವಿನಾಶನಂ ।
ಗುರುತಲ್ಪಗಸಂಸರ್ಗದೋಷಾಣಾಮಪಿ ನಾಶನಂ ॥ ೬೬ ॥
ಅಕಾಮೇನಾಽಪಿ ಯಃ ಸ್ನಾಯಾದಪವರ್ಗಫಲಪ್ರದಂ ।
ದುಃಸ್ವಪ್ನನಾಶನಂ ಧನ್ಯಂ ನರಕಕ್ಲೇಶನಾಶನಂ ॥ ೬೭ ॥
ಕೈಲಾಸಾದಿಪದಪ್ರಾಪ್ತಿಕಾರಣಂ ಪರಮಾರ್ಥದಂ ।
ಸರ್ವಕಾಮಮಿದಂ ಪುಂಸಾಂ ಋಣದಾರಿದ್ರ್ಯನಾಶನಂ ॥ ೬೮ ॥

---

೬೧. ಆದುದರಿಂದ ಪರಾವಸುವನ್ನು ನಿರ್ದುಷ್ಟನನ್ನಾಗಿಸಲು ಸಾಧ್ಯವಿಲ್ಲ. ಎಂದು ದೇವತೆಗಳು ಹೇಳಲು ಅರ್ವಾವಸುವು ಮರಳಿ ಹೀಗೆಂದನು.

೬೨-೬೪. "ದೇವೋತ್ತಮರೆ! ಹಾಗಾದರೂ ನಿಮ್ಮ ಮಾಹಾತ್ಮ್ಯ ಯಿಂದಲೂ, ಅನುಗ್ರಹದಿಂದಲೂ, ನನ್ನ ಅಣ್ಣನ ಪಾಪದ ಪರಿಹಾರದ ಉಪಾಯವನ್ನು ದಯೆಯಿಂದ ತಿಳಿಸಿರಿ.'' ದೇವತೆಗಳು ಅರ್ವಾವಸುವಿನ ಈ ಮಾತನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ಇಂತೆಂದರು. ಆ ಪಾಪದ ಶಾಂತಿಗೆ ಉಪಾಯವನ್ನು ನಿನಗೆ ಹೇಳುವೆವು.

೬೫. ದಕ್ಷಿಣ ಸಮುದ್ರದಲ್ಲಿರುವ ರಾಮಸೇತುವಿನಲ್ಲಿ ಮೋಕ್ಷವನ್ನೀಯುವ ಧನುಷ್ಕೋಟಿಯೆಂಬ ತೀರ್ಥವಿರುವುದು.

೬೬-೬೯. ಆ ತೀರ್ಥವು ಬ್ರಹ್ಮಹತ್ಯಾ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನೀಸಂಗ ದೋಷಗಳನ್ನು ನಾಶಮಾಡುವುದೂ, ಅಪೇಕ್ಷೆಯಿಲ್ಲದೆ ಸ್ನಾನ ಮಾಡಿದರೂ ಮೋಕ್ಷವನ್ನೀಯುವುದೂ, ದುಸ್ಸ್ವಪ್ನವನ್ನು ಹೋಗಲಾಡಿಸುವುದೂ, ನರಕ ದುಃಖವನ್ನು ಪರಿಹರಿಸುವುದೂ, ಕೈಲಾಸವೊದಲ್ದಾದ ಸ್ಥಾನಗಳನ್ನು ದೊರಕಿಸುವುದೂ, ಸಕಲೇಷ್ಟಾರ್ಥಗಳನ್ನು ಕೊಡುವುದೂ, ಸಾಲ ಬಡತನಗಳನ್ನು ನೀಗಿಸುವುದೂ, ಮನುಷ್ಯರು ಮೂರುಸಲ ಧನುಷ್ಕೋಟಿಯೆಂದು

ಧನುಷ್ಕೋಟಿರ್ಧನುಷ್ಕೋಟಿರ್ಧನುಷ್ಕೋಟಿರಿತೀರಣಾತ್ ।
ಸ್ವರ್ಗಾಽಪವರ್ಗದಂ ಪುಂಸಾಂ ಮಹಾಪುಣ್ಯಫಲಪ್ರದಂ ॥ ೧೯ ॥
ತತ್ರ ಗತ್ವಾ ತವ ಭ್ರಾತಾ ಸ್ನಾಯಾದ್ಯದಿ ಪರಾವಸುಃ ।
ತತ್ಕ್ಷಣಾದೇವ ತೇ ಜ್ಯೇಷ್ಠೋ ಮುಚ್ಯತೇ ಬ್ರಹ್ಮಹತ್ಯಯಾ ॥ ೨೦ ॥
ಇದಂ ರಹಸ್ಯಂ ಸುಮಹತ್ಪ್ರಾಯಶ್ಚಿತ್ತಮುದೀರಿತಂ ।
ಉಕ್ತ್ವೇತ್ಯರ್ವಾವಸುಂ ದೇವಾಃ ಪ್ರಯಯುಃ ಸ್ವಪುರೀಂ ಪ್ರತಿ ॥ ೨೧ ॥
ತತ ಅರ್ವಾವಸುರ್ಜ್ಯೇಷ್ಠಂ ಸಮಾದಾಯ ಪರಾವಸುಂ ।
ರಾಮಚಂದ್ರಧನುಷ್ಕೋಟಿಂ ಪ್ರಯಯೌ ಮುಕ್ತಿದಾಯಿನೀಂ ॥ ೨೨ ॥
ಸೇತೌ ಸಂಕಲ್ಪಮುಕ್ತ್ವಾ ತು ನಿಯಮೇನ ಪರಾವಸುಃ ।
ಸಹ ಭ್ರಾತ್ರಾ ಧನುಷ್ಕೋಟೌ ಸಸ್ನೌ ಪಾತಕಶುದ್ಧಯೇ ॥ ೨೩ ॥
ಸ್ನಾತ್ವೋತ್ಥಿತಂ ಧನುಷ್ಕೋಟೌ ತಂ ಪ್ರೋವಾಚಾಽಶರೀರಿಣೀ ।
ಪರಾವಸೋ ವಿನಷ್ಟಾ ತೇ ಪಿತುರ್ಬ್ರಾಹ್ಮಣಘಾತಜಾ ॥ ೨೪ ॥
ಬ್ರಹ್ಮಹತ್ಯಾ ಮಹಾಘೋರಾ ನರಕಕ್ಲೇಶಕಾರಿಣೀ ।
ಇತ್ಯುಕ್ತ್ವಾ ವಿರರಾಮಾಽಥ ಸಾಽಪಿ ವಾಗಶರೀರಿಣೀ ॥ ೨೫ ॥
ಪರಾವಸುಸ್ತದಾ ವಿಪ್ರಾಃ ಕನಿಷ್ಠೇನ ಸಮನ್ವಿತಃ ।
ರಾಮಚಂದ್ರಧನುಷ್ಕೋಟಿಂ ಪ್ರಣಮ್ಯ ಚ ಸಭಕ್ತಿಕಂ ॥ ೨೬ ॥
ರಾಮನಾಥಂ ಮಹಾದೇವಂ ನತ್ವಾ ಭಕ್ತಿಪುರಸ್ಸರಂ ।
ವಿಮುಕ್ತಪಾತಕೋ ವಿಪ್ರಾಃ ಪ್ರಯಯೌ ಪಿತುರಾಶ್ರಮಂ ॥ ೨೭ ॥

---

ಉಚ್ಚರಿಸುವುದರಿಂದ ಅವರಿಗೆ ಸ್ವರ್ಗಮೋಕ್ಷಗಳನ್ನೂ, ಅತಿಶಯಪುಣ್ಯ ಫಲಗಳನ್ನೂ ಕೊಡುವುದೂ ಆಗಿರುವುದು.

೨೦. ನಿನ್ನ ಅಣ್ಣನಾದ ಪರಾವಸುವು ಆ ಕ್ಷೇತ್ರಕ್ಕೆ ಹೋಗಿ ಸ್ನಾನಮಾಡಿದರೆ ಕೂಡಲೆ ಅವನು ಬ್ರಹ್ಮಹತ್ಯಾದೋಷದಿಂದ ಮುಕ್ತನಾಗುವನು.

೨೧. ಇದು ಗುಟ್ಟಾದ ಮಹಾಪ್ರಾಯಶ್ಚಿತ್ತವಾಗಿದೆ ಎಂದು ಹೇಳಿ ದೇವತೆಗಳು ತಮ್ಮ ನಗರಿಗೆ ತೆರಳಿದರು.

೨೨. ಬಳಿಕ ಅರ್ವಾವಸುವು ಅಣ್ಣನಾದ ಪರಾವಸುವನ್ನು ಕರೆದುಕೊಂಡು ಮುಕ್ತಿಯನ್ನು ಕೊಡುವ ರಾಮಚಂದ್ರನ ಧನುಷ್ಕೋಟಿಗೆ ಹೊರಟನು.

೨೩. ಪರಾವಸುವು ತನ್ನ ಬ್ರಹ್ಮಹತ್ಯೆಯ ಪರಿಹಾರಕ್ಕಾಗಿ ಸೇತುವೆಯಲ್ಲಿ ಸಂಕಲ್ಪಪೂರ್ವಕವಾಗಿ ತಮ್ಮನೊಡನೆ ಮಿಂದನು.

೨೪–೨೫. ಅಲ್ಲಿ ಮಿಂದು ಮೇಲಕ್ಕೆದ್ದ ಪರಾವಸುವನ್ನು ಕುರಿತು ಅಶರೀರವಾಣಿಯು "ಪರಾವಸು! ನಿನ್ನ ಅತ್ಯಂತ ಭಯಂಕರವಾದ ನರಕದುಃಖವನ್ನೀಯುವ ಬ್ರಹ್ಮಹತ್ಯೆಯು ಈಗ ನಾಶವಾಯಿತು" ಎಂದು ಸುಮ್ಮನಾಯಿತು.

೨೬–೨೭. ಬ್ರಾಹ್ಮಣರೆ! ಆಗ ಪರಾವಸುವು ತಮ್ಮನೊಡನೆ ರಾಮನ

ಮೃತ್ವೋತ್ಥಿತಸ್ತದಾ ರೈಭ್ಯೋ ದೃಷ್ಟ್ವಾ ಪುತ್ರೌ ಸಮಾಗತೌ ।
ಸಂತುಷ್ಟಹೃದಯೋ ಹ್ಯಾಸ್ತೇ ಪುತ್ರಾಭ್ಯಾಂ ಸ್ವಾಶ್ರಮೇ ತದಾ ॥ ೭೮ ॥
ರಾಮಚಂದ್ರಧನುಷ್ಕೋಟೌ ಸ್ನಾನೇನ ಹತಪಾತಕಂ ।
ಏನಂ ಪರಾವಸುಂ ಸರ್ವೇ ಸ್ವೀಚಕ್ರುರ್ಮುನಯಸ್ತದಾ ॥ ೭೯ ॥
ಏವಂ ಪರಾವಸೋರುಕ್ತಂ ಬ್ರಹ್ಮಹತ್ಯಾವಿಮೋಕ್ಷಣಂ ।
ಸ್ನಾನಮಾತ್ರಾದ್ಧನುಷ್ಕೋಟೌ ಯುಷ್ಮಾಕಂ ಮುನಿಪುಂಗವಾಃ ॥ ೮೦ ॥
ಸುರಾಪಾನಾದಯೋ ವಿಪ್ರಾ ನಶ್ಯಂತ್ಯೇವಾಽತ್ರ ಮಜ್ಜನಾತ್ ।
ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ ॥ ೮೧ ॥
ಮಹಾಪಾತಕಸಂಘಾಶ್ಚ ನಶ್ಯೇಯುರ್ಮಜ್ಜನಾದಿಹ ।
ಯ ಇಮಂ ಪಠತೇಽಧ್ಯಾಯಂ ಬ್ರಹ್ಮಹತ್ಯಾವಿಮೋಕ್ಷಣಂ ॥ ೮೨ ॥
ಬ್ರಹ್ಮಹತ್ಯಾ ವಿನಶ್ಯೇತ ತತ್ಕ್ಷಣಾನ್ನಾಽಸ್ತಿ ಸಂಶಯಃ ।
ಸುರಾಪಾನಾದಯೋಽಪ್ಯಸ್ಯ ಶಾಂತಿಂ ಗಚ್ಛೇಯುರಂಜಸಾ ॥ ೮೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಧನುಷ್ಕೋಟಿ ಪ್ರಶಂಸಾಯಾಂ—ಪರಾವಸೋರ್ಬ್ರಹ್ಮಹತ್ಯಾ ವಿಮೋಕ್ಷಣಂ" ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

ಧನುಷ್ಕೋಟಿಯನ್ನೂ ರಾಮೇಶ್ವರನನ್ನೂ ಭಕ್ತಿಯಿಂದ ವಂದಿಸಿ ಪಾಪರಹಿತನಾಗಿ ತಂದೆಯ ಆಶ್ರಮಕ್ಕೆ ಹೊರಟುಹೋದನು.

೭೮. ಆಗ ಮೃತನಾಗಿ ಮರಳಿ ಹುಟ್ಟಿದ ರೈಭ್ಯಮುನಿಯು ಬಂದಿರುವ ತನಯರನ್ನು ಕಂಡು ಅವರೊಡನೆ ತನ್ನ ಆಶ್ರಮದಲ್ಲಿ ಸಂತೋಷದಿಂದಿದ್ದನು.

೭೯. ರಾಮನ ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದ ಪಾಪರಹಿತನಾದ ಈ ಪರಾವಸುವನ್ನು ಸಕಲಮುನಿಗಳೂ ಸ್ವೀಕರಿಸಿದರು.

೮೦. ಮುನಿವರ್ಯನೆ! ಹೀಗೆ ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದ ಪರಾವಸುವಿನ ಪಾಪವು ಪರಿಹಾರವಾದುದನ್ನು ನಿಮಗೆ ಹೇಳಿರುವೆನು.

೮೧. ಬ್ರಾಹ್ಮಣರೆ! ಸುರಾಪಾನ (ಹೆಂಡಕುಡಿಯುವುದು) ಮೊದಲಾದ ಮಹಾಪಾತಕಗಳೂ ಇಲ್ಲಿ ಸ್ನಾನಮಾಡುವುದರಿಂದ ನಾಶವಾಗುವುವು. ಇದು ನಿಜ. ಇದನ್ನು ತೋಳನ್ನು ಎತ್ತಿ ಹೇಳುವೆನು.

೮೨–೮೩. ಈ ಬ್ರಹ್ಮಹತ್ಯಾಪರಿಹಾರದ ಅಧ್ಯಾಯವನ್ನು ಓದುವವನ ಬ್ರಹ್ಮಹತ್ಯೆಯು ಕೂಡಲೆ ನಾಶವಾಗುವುದು. ಸುರಾಪಾನಾದಿ ಮಹಾಪಾತಕಗಳೂ ಜಾಗ್ರತೆಯಾಗಿ ಶಾಂತವಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಧನುಷ್ಕೋಟಿ ಪ್ರಶಂಸೆಯಲ್ಲಿ ಪರಾವಸುವಿನ ಬ್ರಹ್ಮಹತ್ಯಾವಿಮೋಕ್ಷಣ" ವೆಂಬ ಮೂವತ್ತಮೂರನೆ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಸ್ತ್ರಿಂಶೋಽಧ್ಯಾಯಃ

### ಸೃಗಾಲವಾನರಸಂವಾದೇಸುಮತಿಮಹಾಪಾತಕವಿಮೋಕ್ಷೋಪಾಯಕಥನಂ

ಶ್ರೀ ಸೂತ ಉವಾಚ :—

ಇತಿಹಾಸಂ ಪುನರ್ವಕ್ಷ್ಯೇ ಧನುಷ್ಕೋಟಿಪ್ರಶಂಸನಂ ।
ಸೃಗಾಲಸ್ಯ ಚ ಸಂವಾದಂ ವಾನರಸ್ಯ ಚ ಸತ್ತಮಾಃ ॥ ೧ ॥
ಸೃಗಾಲವಾನರೌ ಪೂರ್ವಂ ಆಸ್ತಾಂ ಜಾತಿಸ್ಮರಾವುಭೌ ।
ಪುರಾಽಪಿ ಮಾನುಷೇ ಭಾವೇ ಸಖಾಯೌ ತೌ ಬಭೂವತುಃ ॥ ೨ ॥
ಅನ್ಯಾಂ ಯೋನಿಂ ಸಮಾಪನ್ನೌ ಸಾರ್ಗಾಲೀಂ ವಾನರೀಂ ತಥಾ ।
ಸಖ್ಯಂ ಸಮೀಯತುರುಭೌ ಸೃಗಾಲೋ ವಾನರೋ ದ್ವಿಜಾಃ ॥ ೩ ॥
ಕದಾಚಿದ್ವ್ರದ್ರಭೂಮಿಷ್ಠಂ ಸೃಗಾಲಂ ವಾನರೋಽಬ್ರವೀತ್ ।
ಶ್ಮಶಾನಮಧ್ಯೇ ಸಂಪ್ರೇಕ್ಷ್ಯ ಪೂರ್ವಜಾತಿಮನುಸ್ಮರನ್ ॥ ೪ ॥

ವಾನರ ಉವಾಚ :—

ಸೃಗಾಲ ಪಾತಕಂ ಪೂರ್ವಂ ಕಿಮಕಾರ್ಷೀಃ ಸುದಾರುಣಂ ।
ಯಸ್ತ್ವಂ ಶ್ಮಶಾನೇ ಮೃತಕಾನ್ಪೂತಿಗಂಧಾಂಶ್ಚ ಕುತ್ಸಿತಾನ್ ।
ಅತ್ಸೀತ್ಯುಕ್ತೋಽಥ ಕಪಿನಾ ಸೃಗಾಲಸ್ತಮಭಾಷತ ॥ ೫ ॥

---

## ಕನ್ನಡದ ಅನುವಾದ

### ನರಿಕಪಿಸಂವಾದದಲ್ಲಿ ಸುಮತಿಮಹಾಪಾತಕವಿಮೋಕ್ಷೋಪಾಯಕಥನ

೧. ಶ್ರೀಸೂತನು ಹೇಳುತ್ತಾನೆ:—ಮುನಿವರ್ಯರೆ! ಧನುಷ್ಕೋಟಿಯನ್ನು ಹೊಗಳುವ ನರಿಕಪಿಸಂಭಾಷಣರೂಪವಾದ ಒಂದು ಕಥೆಯನ್ನು ಮರಳಿ ಹೇಳುವೆನು.

೨—೩. ಹಿಂದಿನ ಜನ್ಮಗಳ ಸ್ಮರಣೆಯುಳ್ಳ ನರಿ ಕಪಿಗಳೆರಡು ಇದ್ದುವು. ಅವು ಹಿಂದಿನ ಮನುಷ್ಯ ಜನ್ಮದಲ್ಲಿಯೂ ಗೆಳೆಯರಾಗಿದ್ದುವು. ನರಿ ಕಪಿ ಜನ್ಮದಲ್ಲಿಯೂ ಅವೆರಡು ಮಿತ್ರರಾದುವು.

೪. ಒಂದಾನೊಂದು ದಿನ ಕೋತಿಯು ಹಿಂದಿನ ಜನ್ಮವನ್ನು ಜ್ಞಾಪಿಸಿ ಕೊಂಡು ಶ್ಮಶಾನಮಧ್ಯದಲ್ಲಿರುವ ನರಿಯನ್ನು ಕುರಿತು ಇಂತೆಂದಿತು.

೫. ಕಪಿಯು ಹೇಳುತ್ತದೆ:—"ನರಿಯೆ! ನೀನು ಶ್ಮಶಾನದಲ್ಲಿ ದುರ್ವಾಸನೆಯುಳ್ಳ ಸತ್ತ ನೀಚಪ್ರಾಣಿಗಳನ್ನು ತಿನ್ನುತ್ತೀಯೆ. ನೀನು ಹಿಂದೆ ಎಂತಹ ಕಠಿನಪಾಪವನ್ನೆಸಗಿರುವೆ?" ಕೋತಿಯು ಹೀಗೆ ಕೇಳಲು ನರಿಯು ಇಂತೆಂದಿತು.

ಸೃಗಾಲ ಉವಾಚ:—

ಅಹಂ ಪೂರ್ವಭವೇ ಹ್ಯಾಸಂ ಬ್ರಾಹ್ಮಣೋ ವೇದಪಾರಗಃ ॥ ೬ ॥
ವೇದಶರ್ಮಾಽಭಿಧೋ ವಿದ್ವಾನ್ಸರ್ವಕರ್ಮಕಲಾಪವಿತ್ ।
ಬ್ರಾಹ್ಮಣಾಯ ಪ್ರತಿಶ್ರುತ್ಯ ನ ಮಯಾ ತತ್ರ ಜನ್ಮನಿ ॥ ೭ ॥
ಕಪೇ ಧನಂ ತದಾ ದತ್ತಂ ಸೃಗಾಲೋಽಹಂ ತತೋಽಭವಂ ।
ತಸ್ಮಾದೇವಂವಿಧಂ ಭಕ್ಷ್ಯಂ ಭಕ್ಷಯಾಮ್ಯತಿಕುತ್ಸಿತಂ ॥ ೮ ॥
ಪ್ರತಿಶ್ರುತ್ಯ ದುರಾತ್ಮಾನೋ ನ ಪ್ರಯಚ್ಛಂತಿ ಯೇ ನರಾಃ ।
ಕಪೇ ಸೃಗಾಲಯೋನಿಂ ತೇ ಪ್ರಾಪ್ನುವಂತ್ಯತಿಕುತ್ಸಿತಾಂ ॥ ೯ ॥
ಯೋ ನ ದದ್ಯಾತ್ಪ್ರತಿಶ್ರುತ್ಯ ಸ್ವಲ್ಪಂ ವಾ ಯದಿ ವಾ ಬಹು ।
ಸರ್ವಾಶಾಸ್ತಸ್ಯ ನಷ್ಟಾಃ ಸ್ಯುಃ ಷಂಡಸ್ಯೇವ ಪ್ರಜೋದ್ಭವಃ ॥ ೧೦ ॥
ಪ್ರತಿಶ್ರುತ್ಯಾಽಪ್ರದಾನೇ ತು ಬ್ರಾಹ್ಮಣಾಯ ಪ್ಲವಂಗಮ ।
ದಶಜನ್ಮಾರ್ಜಿತಂ ಪುಣ್ಯಂ ತತ್ಕ್ಷಣಾದೇವ ನಶ್ಯತಿ ॥ ೧೧ ॥
ಪ್ರತಿಶ್ರುತ್ಯಾಽಪ್ರದಾನೇನ ಯತ್ಪಾಪಮುಪಜಾಯತೇ ।
ನಾಽಶ್ವಮೇಧಶತೇನಾಽಪಿ ತತ್ಪಾಪಂ ಪರಿಶುದ್ಧ್ಯತಿ ॥ ೧೨ ॥
ನ ಜಾನೇಽಹಮಿದಂ ಪಾಪಂ ಕದಾ ನಷ್ಟಂ ಭವೇದಿತಿ ।
ತಸ್ಮಾತ್ಪ್ರತಿಶ್ರುತಂ ದ್ರವ್ಯಂ ದಾತವ್ಯಂ ವಿದುಷಾ ಸದಾ ॥ ೧೩ ॥

---

೬–೮. ನರಿಯು ಹೇಳುತ್ತದೆ:—ನಾನು ಹಿಂದಿನ ಜನ್ಮದಲ್ಲಿ ಸಕಲ ಕರ್ಮ ಕಲಾಪವನ್ನರಿತು ವೇದವನ್ನು ಸಂಪೂರ್ಣವಾಗಿ ಕಲಿತ ವೇದಶರ್ಮನೆಂಬ ವಿದ್ವಾಂಸನಾದ ಬ್ರಾಹ್ಮಣನಾಗಿದ್ದೆನು. ನಾನು ಆ ಜನ್ಮದಲ್ಲಿ ಬ್ರಾಹ್ಮಣನಿಗೆ ಹಣವನ್ನು ಕೊಡುತ್ತೇನೆಂದು ಪ್ರತಿಜ್ಞೆಮಾಡಿ ಕೊಡದಿದ್ದುದರಿಂದ ನರಿಯಾಗಿ ಹುಟ್ಟಿ ಇಂತಹ ಕೆಟ್ಟ ಆಹಾರವನ್ನು ಭಕ್ಷಿಸುತ್ತಿರುವೆನು.

೯. ಕಪಿಯೆ! ಹಣವನ್ನು ಕೊಡುತ್ತೇನೆಂದು ಪ್ರತಿಜ್ಞೆಮಾಡಿ ಕೊಡದಿರುವ ದುಷ್ಟರು ನೀಚ ನರಿಯ ಜನ್ಮವನ್ನು ಪಡೆಯುವರು.

೧೦. ಸ್ವಲ್ಪವಾಗಲಿ ಹೆಚ್ಚಾಗಲಿ ಕೊಡುತ್ತೇನೆಂದು ಹೇಳಿ ಕೊಡದಿರುವ ಮಾನವನ ಸಕಲ ಆಶೆಗಳು ನಪುಂಸಕನ ಸಂತತಿಯಾಶೆಯಂತೆ ಹಾಳಾಗುವುವು.

೧೧. ಕಪಿಯೆ! ಬ್ರಾಹ್ಮಣನಿಗೆ ಕೊಡುತ್ತೇನೆಂದು ಹೇಳಿ ಕೊಡದಿರುವ ಮನುಷ್ಯನ ಹತ್ತುಜನ್ಮದಲ್ಲಿ ಗಳಿಸಿದ ಪುಣ್ಯವು ಕೂಡಲೆ ನಷ್ಟವಾಗುವುದು.

೧೨. ಪ್ರತಿಜ್ಞೆಮಾಡಿದ ದಾನವನ್ನು ಕೊಡದಿದ್ದಲ್ಲಿ ಉಂಟಾಗುವ ಪಾಪವು ನೂರು ಅಶ್ವಮೇಧಯಾಗಗಳನ್ನು ಮಾಡಿದರೂ ಶಾಂತವಾಗುವುದಿಲ್ಲ.

೧೩. ನನ್ನ ಈ ಪಾಪವು ಯಾವಾಗ ನಷ್ಟವಾಗುವುದೊ ಅರಿಯೆನು. ಆದ್ದರಿಂದ ವಿದ್ವಾಂಸನು ಪ್ರತಿಶ್ರುತದ್ರವ್ಯವನ್ನು ದಾನಮಾಡಬೇಕು.

ಪ್ರತಿಶ್ರುತ್ಯಾಽಪ್ರದಾನೇನ ಸೃಗಾಲೋ ಭವತಿ ಧ್ರುವಂ ।
ತಸ್ಮಾತ್ಪ್ರಾಜ್ಞೇನ ವಿದುಷಾ ದಾತವ್ಯಂ ಹಿ ಪ್ರತಿಶ್ರುತಂ ॥ ೧೪ ॥
ಇತ್ಯುಕ್ತ್ವಾ ಸ ಸೃಗಾಲಸ್ತಂ ವಾನರಂ ಪುನರಬ್ರವೀತ್ ।
ಭವತಾ ಕಿಂ ಕೃತಂ ಪಾಪಂ ಯೇನ ವಾನರತಾಮಗಾಃ ॥ ೧೫ ॥
ಅನಾಗಸೋ ವನಚರಾನ್ಪಕ್ಷಿಣೋ ಹಿಂಸಿ ವಾನರ ।
ತತ್ಪಾತಕಂ ವದಸ್ವಾಽದ್ಯ ವಾನರತ್ವಪ್ರದಂ ಮಮ ।
ಇತ್ಯುಕ್ತಃ ಸ ಸೃಗಾಲೇನ ಸೃಗಾಲಂ ವಾನರೋಽಬ್ರವೀತ್ ॥ ೧೬ ॥

ವಾನರ ಉವಾಚ :—

ಪುರಾ ಜನ್ಮನ್ಯಹಂ ವಿಪ್ರೋ ವೇದನಾಥ ಇತಿ ಸ್ಮೃತಃ ॥ ೧೭ ॥
ವಿಶ್ವನಾಥೋ ಮಮ ಪಿತಾ ಮಮಾಂಬಾ ಕಮಲಾಲಯಾ ।
ಸೃಗಾಲ ಸಖ್ಯಮಭವದಾವಯೋಃ ಪ್ರಾಗ್ಭವೇಽಪಿ ಹಿ ॥ ೧೮ ॥
ತ್ವಂ ನ ಜಾನಾಸಿ ತತ್ಸರ್ವಂ ವೇದ್ಮ್ಯಹಂ ಪುಣ್ಯಗೌರವಾತ್ ।
ತಪಸಾರಾಧ್ಯ ಗಿರಿಶಂ ತತ್ಪ್ರಸಾದಾತ್ಪುರಾ ಮಮ ॥ ೧೯ ॥
ಅತೀತಭಾವಿವಿಜ್ಞಾನಮಸ್ತಿ ಜನ್ಮಾಂತರೇಽಪಿ ಚ ।
ಗೋಮಾಯೋ ತದ್ಭವೇ ಶಾಕಂ ಬ್ರಾಹ್ಮಣಸ್ಯ ಹೃತಂ ಮಯಾ ॥ ೨೦ ॥

---

೧೪. ದ್ರವ್ಯವನ್ನು ಕೊಡುತ್ತೇನೆಂದು ಹೇಳಿ ಕೊಡದಿದ್ದರೆ ನಿಶ್ಚಯವಾಗಿಯೂ ನರಿಯಾಗಿ ಹುಟ್ಟುವನು. ಆದ್ದರಿಂದ ಪ್ರಾಜ್ಞನು ಪ್ರತಿಜ್ಞೆ ಮಾಡಿದ್ದನ್ನು ಕೊಡಬೇಕು.

೧೫. ಆ ನರಿಯು ಹೀಗೆಂದು ಮರಳಿ ಕಪಿಯನ್ನು ಕುರಿತು ನೀನು ವಾನರನಾಗಿ ಹುಟ್ಟಲು ಯಾವ ಪಾಪವನ್ನಾಚರಿಸಿರುವೆ?

೧೬. ನೀನು ವನದಲ್ಲಿ ಸಂಚರಿಸುವ ತಪ್ಪಿಲ್ಲದ ಪಕ್ಷಿಗಳನ್ನು ಹಿಂಸಿಸುತ್ತಿರುವೆ. ನಿನಗೆ ಈ ವಾನರತ್ವವನ್ನು ಕೊಟ್ಟ ಪಾಪವು ಯಾವುದು? ಹೇಳೆಂದು ಕೇಳಲು ಅದನ್ನು ಕುರಿತು ಕಪಿಯು ಹೀಗೆಂದಿತು.

೧೭. ಕಪಿಯು ಹೇಳುತ್ತದೆ:—ನಾನು ಹಿಂದಿನ ಜನ್ಮದಲ್ಲಿ ವೇದನಾಥನೆಂಬ ಬ್ರಾಹ್ಮಣನಾಗಿದ್ದೆನು.

೧೮. ನರಿಯೆ! ನನ್ನ ತಂದೆಯು ವಿಶ್ವನಾಥನು. ತಾಯಿಯು ಕಮಲಾಲಯಳು. ಆ ಜನ್ಮದಲ್ಲಿಯೂ ನಮ್ಮಿರ್ವರಿಗೆ ಸ್ನೇಹವಾಗಿದ್ದಿತು.

೧೯—೨೦. ನಿನಗೆ ಅದೆಲ್ಲ ತಿಳಿಯದು. ಪುಣ್ಯಾತಿಶಯದಿಂದ ನಾನರಿತಿರುವೆನು. ಹಿಂದೆ ನಾನು ತಪಸ್ಸಿನಿಂದ ಶಿವನನ್ನಾರಾಧಿಸಿದಕಾರಣ ಅವನ ಅನುಗ್ರಹದಿಂದ ನನಗೆ ಬೇರೆ ಜನ್ಮದಲ್ಲಿಯೂ ಹಿಂದಿನ ಮುಂದಿನ ವಿಷಯಗಳು ತಿಳಿಯುವುವು. ಆ ಬ್ರಾಹ್ಮಣಜನ್ಮದಲ್ಲಿ ನಾನು ಒಬ್ಬ ಬ್ರಾಹ್ಮಣನ ತರಕಾರಿಯನ್ನು ಕದ್ದೆನು.

ತತ್ಪಾಪಾದ್ವಾನರೋ ಜಾತೋ ನರಕಾಽನುಭವಾದನು ।
ನಾಽಽಹರ್ತವ್ಯಂ ವಿಪ್ರಧನಂ ಹರಣಾನ್ನರಕಂ ಭವೇತ್ ॥ ೨೧ ॥
ಅನಂತರಂ ವಾನರತ್ವಂ ಭವಿಷ್ಯತಿ ನ ಸಂಶಯಃ ।
ತಸ್ಮಾನ್ನ ಬ್ರಾಹ್ಮಣಸ್ವಂ ತು ಹರ್ತವ್ಯಂ ವಿದುಷಾ ಸದಾ ॥ ೨೨ ॥
ಬ್ರಹ್ಮಸ್ವಹರಣಾತ್ಪಾಪಮಧಿಕಂ ನೈವ ವಿದ್ಯತೇ ।
ಪೀತವಂತಂ ವಿಷಂ ಹಂತಿ ಬ್ರಹ್ಮಸ್ವಂ ಸಕುಲಂ ದಹೇತ್ ॥ ೨೩ ॥
ಬ್ರಹ್ಮಸ್ವಹರಣಾತ್ಪಾಪೀ ಕುಂಭೀಪಾಕೇಷು ಪಚ್ಯತೇ ।
ಪಶ್ಚಾನ್ನರಕಶೇಷೇಣ ವಾನರೀಂ ಯೋನಿಮಶ್ನುತೇ ॥ ೨೪ ॥
ವಿಪ್ರದ್ರವ್ಯಂ ನ ಹರ್ತವ್ಯಂ ಕ್ಷಂತವ್ಯಂ ತೇಷ್ವತಃ ಸದಾ ।
ಬಾಲಾ ದರಿದ್ರಾಃ ಕೃಪಣಾ ವೇದಶಾಸ್ತ್ರಾದಿವರ್ಜಿತಾಃ ॥ ೨೫ ॥
ಬ್ರಾಹ್ಮಣಾ ನಾಽಪಮಂತವ್ಯಾಃ ಕೃದ್ಧಾಶ್ಛೇದನಲೋಪಮಾಃ ।
ಅತೀತಾನಾಗತಂ ಜ್ಞಾನಂ ಸೃಗಾಲಾಽಖಿಲಮಸ್ತಿ ಮೇ ॥ ೨೬ ॥

---

೨೧. ಆ ಪಾಪದಿಂದ ನಾನು ನರಕವನ್ನನುಭವಿಸಿ ಬಳಿಕ ಕಪಿಯಾದೆನು. ಬ್ರಾಹ್ಮಣನ ದ್ರವ್ಯವನ್ನು ಅಪಹರಿಸಬಾರದು. ಅಪಹರಿಸಿದರೆ ನರಕವು ದೊರೆಯುವುದು.

೨೨. ಆ ನರಕವನ್ನನುಭವಿಸಿದ ತರುವಾಯ ನಿಶ್ಚಯವಾಗಿಯೂ ವಾನರ ಜನ್ಮವು ಬರುವುದು. ಆದುದರಿಂದ ಪ್ರಾಜ್ಞನು ಬ್ರಾಹ್ಮಣನ ಸ್ವತ್ತನ್ನು ಅಪಹರಿಸಕೂಡದು.

೨೩. ಬ್ರಾಹ್ಮಣನ ಸ್ವತ್ತನ್ನು ಅಪಹಾರಮಾಡುವುದಕ್ಕಿಂತ ಮಿಗಿಲಾದ ಪಾಪವು ಮತ್ತೊಂದಿಲ್ಲ. ವಿಷವು ಕುಡಿದವನನ್ನು ಮಾತ್ರ ಕೊಲ್ಲುವುದು. ಬ್ರಾಹ್ಮಣರ ಸ್ವತ್ತು ಅಪಹರಿಸಿದವನನ್ನು ವಂಶಸಹಿತವಾಗಿ ನಿರ್ಮೂಲ ಮಾಡುವುದು.

೨೪. ಬ್ರಾಹ್ಮಣನ ಸ್ವತ್ತನ್ನು ಅಪಹರಿಸಿ ಪಾಪಿಯಾದವನು ಕುಂಭೀಪಾಕ ನರಕದಲ್ಲಿ ಕಷ್ಟವನ್ನನುಭವಿಸಿ ಅನಂತರ ಉಳಿದ ಪಾಪದಿಂದ ಕಪಿಯಾಗುವನು.

೨೫—೨೬. ಬ್ರಾಹ್ಮಣರ ದ್ರವ್ಯವನ್ನು ಅಪಹರಿಸಬಾರದು. ಅವರಲ್ಲಿ ಯಾವಾಗಲೂ ತಾಳ್ಮೆಯಿಂದಿರಬೇಕು. ಬ್ರಾಹ್ಮಣರು ಬಾಲಕರು, ಬಡವರು, ದೀನರು, ವೇದಶಾಸ್ತ್ರಗಳನ್ನು ಓದದವರು ಯಾರೇ ಆಗಲಿ ಅವರನ್ನು ಅವಮಾನ ಮಾಡಕೂಡದು. ಅವರು ಕೋಪಿಸಿಕೊಂಡರೆ ಬೆಂಕಿಯಂತಾಗುವರು. ನರಿಯೆ! ನನಗೆ ಭೂತ ಮತ್ತು ಭವಿಷ್ಯತ್ಕಾಲಗಳ ಎಲ್ಲ ಜ್ಞಾನವು ಇರುವುದು.

ಜ್ಞಾನಮಸ್ತಿ ನ ಮೇ ತ್ವೇಕಮೇತತ್ಪಾಪವಿಶೋಧನಂ ।
ಜಾತಿಸ್ಮರೋಽಪಿ ಹಿ ಭವಾನ್ ಭಾವಿಕಾರ್ಯಂ ನ ಬುಧ್ಯತೇ ॥ ೨೭ ॥
ಅತೀತೇಷ್ವಪಿ ಕಿಂಚಿಜ್ಜ್ಞಃ ಪ್ರತಿಬಂಧವಶಾದ್ಭವಾನ್ ।
ಅತೋ ಭವಾನ್ನ ಜಾನೀತೇ ಭಾವ್ಯತೀತಂ ತಥಾಽಖಿಲಂ ॥ ೨೮ ॥
ಕಿಯತ್ಕಾಲಂ ಸೃಗಾಲಾಽತೋ ಭುಕ್ತ್ವಂ ವ್ಯಸನಮೀದೃಶಂ ।
ಆವಯೋರಸ್ಯ ಪಾಪಸ್ಯ ಕೋ ವಾ ಮೋಚಯಿತಾ ಭವೇತ್ ॥ ೨೯ ॥
ಏವಂ ಪ್ರಬ್ರುವತೋಸ್ತತ್ರ ಪ್ಲವಂಗಮಸೃಗಾಲಯೋಃ ।
ಯದೃಚ್ಛಯಾ ದೈವಯೋಗಾತ್ ಪೂರ್ವಪುಣ್ಯವಶಾದ್ದ್ವಿಜಾಃ ॥ ೩೦ ॥
ಆಯಯೌ ಸ ಮಹಾತೇಜಾಃ ಸಿಂಧುದ್ವೀಪಾಹ್ವಯೋ ಮುನಿಃ ।
ಭಸ್ಮೋದ್ಧೂಲಿತಸರ್ವಾಂಗಸ್ತ್ರಿಪುಂಡ್ರಾಂಕಿತಮಸ್ತಕಃ ॥ ೩೧ ॥
ರುದ್ರಾಕ್ಷಮಾಲಾಭರಣಃ ಶಿವನಾಮಾನಿ ಕೀರ್ತಯನ್ ।
ಸೃಗಾಲವಾನರೌ ದೃಷ್ಟ್ವಾ ಸಿಂಧುದ್ವೀಪಾಭಿಧಂ ಮುನಿಂ ।
ಪ್ರಣಮ್ಯ ಮುದಿತೌ ಭೂತ್ವಾ ಪಪ್ರಚ್ಛತುರಿದಂ ತದಾ ॥ ೩೨ ॥

ಸೃಗಾಲವಾನರಾವೂಚತುಃ :—

ಭಗವನ್ಸರ್ವಧರ್ಮಜ್ಞ ಸಿಂಧುದ್ವೀಪ ಮಹಾಮುನೇ ॥ ೩೩ ॥
ಆವಾಂ ರಕ್ಷ ಕೃಪಾದೃಷ್ಟ್ಯಾ ವಿಲೋಕಯ ಮುಹುರ್ಮುದಾ ।
ಕಪಿತ್ವಂ ಚ ಸೃಗಾಲತ್ವಮಾವಯೋರ್ಯೇನ ನಶ್ಯತಿ ॥ ೩೪ ॥

---

೨೭. ಈ ಪಾಪವನ್ನು ನೀಗಿಸುವ ಉಪಾಯದ ಜ್ಞಾನವೊಂದು ಮಾತ್ರ ವಿಲ್ಲ. ನೀನು ಹಿಂದಿನ ಜನ್ಮದ ವೃತ್ತಾಂತವನ್ನು ಅರಿತವನಾದರೂ ಮುಂದಿನ ಕಾರ್ಯವನ್ನು ತಿಳಿಯುವುದಿಲ್ಲ.

೨೮. ನೀನು ಪ್ರತಿಬಂಧಕವಶದಿಂದ ಭೂತಕಾಲದ ಸ್ವಲ್ಪ ವಿಷಯವನ್ನೆ ಅರಿತವನು. ಅದರಿಂದ ಎಲ್ಲ ಭೂತಭವಿಷ್ಯದ್ವಿಷಯಗಳನ್ನು ತಿಳಿಯಲಾರೆ.

೨೯. ನರಿಯೆ! ನಾವಿಬ್ಬರು ಎಷ್ಟುಕಾಲ ಈ ಕಷ್ಟವನ್ನನುಭವಿಸಿದ ಮೇಲೆ ಈ ಪಾಪವನ್ನು ಪರಿಹರಿಸುವವನು ದೊರಕುವನೊ.

೩೦–೩೨. ವಿಪ್ರರೆ! ಅಲ್ಲಿ ಆ ಕಪಿನರಿಗಳು ಹೀಗೆ ಮಾತಾಡುತ್ತಿರುವಾಗ ಅಕಸ್ಮಾತ್ತಾಗಿ ಅದೃಷ್ಟವಶದಿಂದ ಅತಿತೇಜಸ್ವಿಯೂ, ಸರ್ವಾಂಗಗಳಿಗೆ ಭಸ್ಮ ವನ್ನು ಹಚ್ಚಿಕೊಂಡಿರುವವನೂ, ತ್ರಿಪುಂಡ್ರವನ್ನೂ ರುದ್ರಾಕ್ಷಮಾಲೆಯನ್ನೂ ಧರಿಸಿದವನೂ ಆದ ಸಿಂಧುದ್ವೀಪನೆಂಬ ಮುನಿಯು ಶಿವನಾಮಗಳನ್ನು ಉಚ್ಚರಿ ಸುತ್ತ ಅಲ್ಲಿಗೆ ಬಂದನು. ಆಗ ಆ ಕಪಿನರಿಗಳು ಆ ಮುನಿಯನ್ನು ಕಂಡು ನಮ ಸ್ಕರಿಸಿ ಆನಂದಗೊಂಡು ಹೀಗೆ ಪ್ರಶ್ನಿಸಿದುವು.

೩೩–೩೭. ಕಪಿನರಿಗಳು ಹೇಳುತ್ತವೆ:—ಪೂಜ್ಯನೂ, ಸಕಲ ಧರ್ಮವನ್ನರಿ ತವನೂ ಆದ ಸಿಂಧುದ್ವೀಪ ಮುನಿವರ್ಯನೆ! ನಮ್ಮನ್ನು ಕಾಪಾಡು. ಕೃಪಾದೃಷ್ಟಿ

ತಮುಪಾಯಂ ವದಸ್ವಾದ್ಯ ತ್ವಂ ಹಿ ಪುಣ್ಯವತಾಂ ವರಃ ।
ಅನಾಥಾನ್ಕೃಪಣಾನಜ್ಞಾನ್ಬಾಲಾನ್ರೋಗಾತುರಾನ್ಜನಾನ್ ॥ ೩೫ ॥
ರಕ್ಷಂತಿ ಸಾಧವೋ ನಿತ್ಯಂ ಕೃಪಯಾ ನಿರಪೇಕ್ಷಕಾಃ ।
ತಾಭ್ಯಾಮಿತೀರಿತಃ ಪ್ರಾಜ್ಞಃ ಸಿಂಧುದ್ವೀಪೋ ಮಹಾಮುನಿಃ ।
ಪ್ರಾಹ ತೌ ಕಪಿಗೋಮಾಯೂ ಧ್ಯಾತ್ವಾ ತು ಮನಸಾ ಚಿರಂ ॥ ೩೬ ॥

ಸಿಂಧುದ್ವೀಪ ಉವಾಚ :—

ಜಾನಾಮ್ಯಹಂ ಯುವಾಂ ಸಮ್ಯಗ್ವೇ ಸೃಗಾಲಪ್ಲವಂಗಮೌ ॥ ೩೭ ॥
ಸೃಗಾಲ ಪ್ರಾಗ್ಭವೇ ತ್ವಂ ವೈ ವೇದಶರ್ಮಾಽಭಿಧೋ ದ್ವಿಜಃ ।
ಬ್ರಾಹ್ಮಣಾಯ ಪ್ರತಿಶ್ರುತ್ಯ ಧಾನ್ಯಾನಾಮಾಢಕಂ ತ್ವಯಾ ॥ ೩೮ ॥
ನ ದತ್ತಂ ತೇನ ಪಾಪೇನ ಸಾರ್ಗಾಲೀಂ ಯೋನಿಮಾಪ್ತವಾನ್ ।
ತ್ವಂ ಚ ವಾನರ ಪೂರ್ವಸ್ಮಿನ್ವೇದನಾಥಾಽಭಿಧೋ ದ್ವಿಜಃ ॥ ೩೯ ॥
ಬ್ರಾಹ್ಮಣಸ್ಯ ಗೃಹಾಚ್ಛಾಕಂ ಹೃತಂ ಚೌರ್ಯಾತ್ತ್ವಯಾ ತತಃ ।
ಪ್ರಾಪ್ತೋಽಸಿ ವಾನರೀಂ ಯೋನಿಂ ಸರ್ವಪಕ್ಷಿಭಯಂಕರೀಂ ॥ ೪೦ ॥
ಯುವಯೋಃ ಪಾಪಶಾಂತ್ಯರ್ಥಮುಪಾಯಂ ಪ್ರವದಾಮ್ಯಹಂ ।
ದಕ್ಷಿಣಾಂಬುನಿಧೌ ರಾಮಧನುಷ್ಕೋಟೌ ಯುವಾಮರಂ ॥ ೪೧ ॥

---

ಯಿಂದ ನೋಡು. ಪುಣ್ಯವಂತರಲ್ಲಿ ಉತ್ತಮನಾದ ನೀನು ನಮ್ಮ ಕಪಿ ಮತ್ತು ನರಿಯರೂಪಗಳನ್ನು ಪರಿಹರಿಸುವ ಉಪಾಯವನ್ನು ಹೇಳು. ಸ್ವಪ್ರಯೋಜನದಲ್ಲಿ ಅಪೇಕ್ಷೆಯಿಲ್ಲದ ಸಜ್ಜನರು ಯಾವಾಗಲೂ ಅನಾಥರು, ದೀನರು, ಮೂಢರು, ಬಾಲಕರು, ರೋಗಪೀಡಿತರು ಆಗಿರುವ ಜನರನ್ನು ದಯೆಯಿಂದ ಸಲಹುತ್ತಾರೆ. ಆ ಕಪಿನರಿಗಳು ಹೀಗೆನ್ನಲು ಜ್ಞಾನಿಯಾದ ಸಿಂಧುದ್ವೀಪ ಮಹಾಮುನಿಯು ಬಹಳ ಹೊತ್ತು ಆಲೋಚಿಸಿ ನರಿಕಪಿಗಳನ್ನು ಕುರಿತು ಹೀಗೆಂದನು.

೩೭–೪೦. ಸಿಂಧುದ್ವೀಪನು ಹೇಳುತ್ತಾನೆ:—ಕಪಿನರಿಗಳೆ! ನಾನು ನಿಮ್ಮನ್ನು ಚೆನ್ನಾಗಿ ಅರಿತಿರುವೆನು. ನರಿಯೆ! ನೀನು ಹಿಂದಿನ ಜನ್ಮದಲ್ಲಿ ವೇದಶರ್ಮನೆಂಬ ಬ್ರಾಹ್ಮಣನಾಗಿ ಒಬ್ಬ ಬ್ರಾಹ್ಮಣನಿಗೆ ಆಢಕಪ್ರಮಾಣ ಧಾನ್ಯವನ್ನು ಕೊಡುತ್ತೇನೆಂದು ಹೇಳಿ ಕೊಡದಿರುವ ಕಾರಣ ನರಿಯಾಗಿ ಹುಟ್ಟಿರುವೆ. ಕಪಿಯೆ! ನೀನು ಹಿಂದಿನ ಜನ್ಮದಲ್ಲಿ ವೇದನಾಥನೆಂಬ ಬ್ರಾಹ್ಮಣನಾಗಿ ಬ್ರಾಹ್ಮಣನ ಮನೆಯಿಂದ ತರಕಾರಿಯನ್ನು ಕದ್ದಿರುವುದರಿಂದ ಈಗ ಸಕಲಪಕ್ಷಿಗಳಿಗೆ ಭಯವನ್ನುಂಟುಮಾಡುವ ಈ ಕಪಿಯಾಗಿ ಹುಟ್ಟಿರುವೆ.

೪೧–೪೩. ನಾನು ನಿಮ್ಮ ಪಾಪದ ಪರಿಹಾರಕ್ಕಾಗಿ ಒಂದುಪಾಯವನ್ನು ಹೇಳುತ್ತೇನೆ. ನೀವು ಶೀಘ್ರವಾಗಿ ದಕ್ಷಿಣಸಮುದ್ರದಲ್ಲಿರುವ ರಾಮಧನು

ಗತ್ವಾಽತ್ರ ಕುರುತಂ ಸ್ನಾನಂ ತೇನ ಪಾಪಾದ್ವಿಮೋಕ್ಷ್ಯಥಃ ।
ಪುರಾ ಕಿರಾತೀಸಂಸರ್ಗಾತ್ಸುಮತಿರ್ಬ್ರಾಹ್ಮಣಃ ಸುರಾಂ ।
ಪೀತವಾನ್ಸ ಧನುಷ್ಕೋಟೌ ಸ್ನಾತ್ವಾ ಪಾಪಾದ್ವಿಮೋಚಿತಃ ॥ ೪೨ ॥

ಸೃಗಾಲವಾನರಾವೂಚತುಃ :—

ಸುಮತಿಃ ಕಸ್ಯ ಪುತ್ರೋಽಸೌ ಕಥಂ ಚ ಸ ಸುರಾಂ ಪಪೌ ॥ ೪೩ ॥
ಕಥಂ ಕಿರಾತ್ಯಾಂ ಸಕ್ತೋಽಭೂತ್ಸಿಂಧುದ್ವೀಪ ಮಹಾಮತೇ ।
ಆವಯೋರ್ವಿಸ್ತರಾದೇತದ್ವದ ತ್ವಂ ಕೃಪಯಾಽಧುನಾ ॥ ೪೪ ॥

ಸಿಂಧುದ್ವೀಪ ಉವಾಚ :—

ಮಹಾರಾಷ್ಟ್ರಾಭಿಧೇ ದೇಶೇ ಬ್ರಾಹ್ಮಣಃ ಕಶ್ಚಿದಾಸ್ತಿಕಃ ।
ಯಜ್ಞದೇವ ಇತಿ ಖ್ಯಾತೋ ವೇದವೇದಾಂಗಪಾರಗಃ ॥ ೪೫ ॥
ದಯಾಲುರಾತಿಥೇಯಶ್ಚ ಶಿವನಾರಾಯಣಾರ್ಚಕಃ ।
ಸುಮತಿರ್ನಾಮ ಪುತ್ರೋಽಭೂದ್ಯಜ್ಞದೇವಸ್ಯ ತಸ್ಯ ವೈ ॥ ೪೬ ॥
ಪಿತರೌ ಸ ಪರಿತ್ಯಜ್ಯ ಭಾರ್ಯಾಮಪಿ ಪತಿವ್ರತಾಂ ।
ಪ್ರಯಯಾವುತ್ಕಲೇ ದೇಶೇ ವಿಟಗೋಷ್ಠೀಪರಾಯಣಃ ॥ ೪೭ ॥
ಕಾಚಿತ್ಕಿರಾತೀ ತದ್ದೇಶೇ ವಸಂತೀ ಯುವಮೋಹಿನೀ ।
ಯೂನಾಂ ಸಮಸ್ತದ್ರವ್ಯಾಣಿ ಪ್ರಲೋಭ್ಯ ಜಗೃಹೇ ಚಿರಂ ॥ ೪೮ ॥

---

ಷ್ಕೋಟಿಗೆ ಹೋಗಿ ಸ್ನಾನಮಾಡಿರಿ. ಆದರಿಂದ ಪಾಪಮುಕ್ತರಾಗುವಿರಿ. ಹಿಂದೆ ಸುಮತಿಯೆಂಬ ಬ್ರಾಹ್ಮಣನು ಬೇಡಸ್ತ್ರೀಯ ಸಂಗದಿಂದ ಹೆಂಡವನ್ನು ಕುಡಿದನು. ಅವನು ಧನುಷ್ಕೋಟಿಯಲ್ಲಿ ಮಿಂದು ಪಾಪದಿಂದ ಮುಕ್ತನಾಗಿರುವನು.

೪೩-೪೪. ನರಿಕಪಿಗಳು ಹೇಳುತ್ತವೆ:—ಸುಮತಿಯು ಯಾರ ಮಗನು? ಇವನು ಹೇಗೆ ಹೆಂಡವನ್ನು ಕುಡಿದನು? ಇವನು ಕಿರಾತಿಯಲ್ಲಿ ಹೇಗೆ ಆಸಕ್ತನಾದನು? ಸಿಂಧುದ್ವೀಪ! ನೀನೀಗ ಇದನ್ನೆಲ್ಲ ದಯೆಯಿಂದ ನಮಗೆ ಹೇಳು.

೪೫-೪೬. ಸಿಂಧುದ್ವೀಪನು ಹೇಳುತ್ತಾನೆ:—ಮಹಾರಾಷ್ಟ್ರದೇಶದಲ್ಲಿ ಆಸ್ತಿಕನೂ, ವೇದವೇದಾಂಗಗಳನ್ನು ಅಧ್ಯಯನಮಾಡಿದವನೂ, ದಯಾಲುವೂ ಅತಿಥಿಸತ್ಕಾರಮಾಡುವುದರಲ್ಲಾಸಕ್ತನೂ, ಹರಿಹರರನ್ನು ಪೂಜಿಸುವವನೂ ಆದ ಯಜ್ಞದೇವನೆಂಬ ಬ್ರಾಹ್ಮಣನಿದ್ದನು. ಅವನಿಗೆ ಸುಮತಿಯೆಂಬ ಮಗನಿದ್ದನು.

೪೭. ಅವನು ಜಾರರ ಸಭೆಯಲ್ಲಿ ಆಸಕ್ತನಾಗಿ ತಂದೆತಾಯಿಗಳನ್ನೂ, ಪತಿವ್ರತೆಯಾದ ಹೆಂಡತಿಯನ್ನೂ ತ್ಯಜಿಸಿ ಉತ್ಕಲದೇಶಕ್ಕೆ ಹೋದನು.

೪೮. ಆ ದೇಶದಲ್ಲಿ ಯುವಕರನ್ನು ಮೋಹಗೊಳಿಸುವ ಒಬ್ಬ ಬೇಡರ

ತಸ್ಯಾ ಗೃಹಂ ಸ ಪ್ರಯಯೌ ಸುಮತಿರ್ಬ್ರಾಹ್ಮಣಾಧಮಃ ।
ಸುಮತಿಂ ಸಾ ನ ಜಗ್ರಾಹ ಕಿರಾತೀ ನಿರ್ಧನಂ ದ್ವಿಜಂ ॥ ೪೯ ॥
ತಯಾ ತ್ಯಕ್ತೋಽಥ ಸುಮತಿಸ್ತತ್ಸಂಯೋಗೈಕತತ್ಪರಃ ।
ಇತಸ್ತತಶ್ಚೋರಯಿತ್ವಾ ಬಹುದ್ರವ್ಯಾಣಿ ಸಂತತಂ ॥ ೫೦ ॥
ದತ್ವಾ ತಯಾ ಚಿರಂ ರೇಮೇ ತದ್ಗೃಹೇ ಬುಭುಜೇ ಚ ಸಃ ।
ಏಕೇನ ಚಷಕೇಣಾಽಸೌ ತಯಾ ಸಹ ಸುರಾಂ ಪಪೌ ॥ ೫೧ ॥
ಏವಂ ಸ ಬಹುಕಾಲಂ ವೈ ರಮಮಾಣಸ್ತಯಾ ಸಹ ।
ಪಿತರೌ ನಿಜಪತ್ನೀಂ ಚ ನಾಽಸ್ಮರದ್ವಿಷಯಾತುರಃ ॥ ೫೨ ॥
ಸ ಕದಾಚಿತ್ಕಿರಾತೈಸ್ತು ಚೌರ್ಯಂ ಕರ್ತುಂ ಯಯೌ ಸಹ ।
ದ್ರವ್ಯಂ ಹರ್ತುಂ ಕಿರಾತಾಸ್ತೇ ಲಾಟಾನಾಂ ವಿಷಯಂ ಯಯುಃ ॥ ೫೩ ॥
ವಿಪ್ರಸ್ಯ ಕಸ್ಯಚಿದ್ಗೇಹೇ ಸೋಽಪಿ ಕೈರಾತವೇಷಧೃಕ್ ।
ಯಯೌ ಚೋರಯಿತುಂ ದ್ರವ್ಯಂ ಸಾಹಸೀ ಖಡ್ಗಹಸ್ತವಾನ್ ॥ ೫೪ ॥
ತದ್ಗೃಹಸ್ವಾಮಿನಂ ವಿಪ್ರಂ ಹತ್ವಾ ಖಡ್ಗೇನ ಸಾಹಸೀ ।
ಸಮಾದಾಯ ಬಹುದ್ರವ್ಯಂ ಕಿರಾತೀಭವನಂ ಯಯೌ ॥ ೫೫ ॥

---

ಹೆಂಗಸು ಕಾಮುಕರ ಸಮಸ್ತದ್ರವ್ಯಗಳನ್ನು ಬಹಳಕಾಲದಿಂದ ವಂಚಿಸಿ ತೆಗೆದುಕೊಳ್ಳುತ್ತಿದ್ದಳು.

೪೯. ನೀಚ ಬ್ರಾಹ್ಮಣನಾದ ಆ ಸುಮತಿಯು ಅವಳ ಮನೆಗೆ ಹೋಗಲು ಆ ಅಂಗನೆಯು ಬಡವನಾದ ಅವನನ್ನು ಪರಿಗ್ರಹಿಸಲಿಲ್ಲ.

೫೦-೫೧. ಬಳಿಕ ಸುಮತಿಯು ಅವಳಿಂದ ತ್ಯಜಿಸಲ್ಪಟ್ಟವನಾದರೂ ಅವಳ ಸಂಗದಲ್ಲಿ ಆಸಕ್ತನಾಗಿ ಇಲ್ಲಿ ಅಲ್ಲಿ ಯಾವಾಗಲೂ ಕದಿಯುತ್ತ ಬಹು ದ್ರವ್ಯಗಳನ್ನು ಅವಳಿಗಿತ್ತು ಅವಳೊಡನೆ ವಿಹರಿಸುತ್ತ ಅವಳ ಮನೆಯಲ್ಲಿ ಭುಂಜಿಸಿದನು. ಮತ್ತು ಅವಳೊಡನೆ ಒಂದೇ ಪಾತ್ರೆಯಲ್ಲಿ ಮದ್ಯವನ್ನು ಕುಡಿದನು.

೫೨. ಹೀಗೆ ಅವನು ವಿಷಯಾಸಕ್ತನಾಗಿ ಬಹಳಕಾಲ ಅವಳೊಡನೆ ವಿನೋದಪಡುತ್ತ ತಂದೆತಾಯಿಗಳನ್ನೂ ತನ್ನ ಹೆಂಡತಿಯನ್ನೂ ಸ್ಮರಿಸಲಿಲ್ಲ.

೫೩. ಅವನು ಒಂದಾನೊಂದು ದಿನ ಬೇಡರೊಡನೆ ದ್ರವ್ಯಗಳನ್ನು ಕದಿಯಲು ಲಾಟದೇಶಕ್ಕೆ ಹೋದನು.

೫೪. ಅವನು ಬೇಡರ ಉಡುಪನ್ನು ಧರಿಸಿ ಕತ್ತಿಯನ್ನು ಹಿಡಿದುಕೊಂಡು ಒಬ್ಬ ಬ್ರಾಹ್ಮಣನ ಮನೆಗೆ ಕದಿಯುವುದಕ್ಕೆ ಹೋದನು.

೫೫. ಬಲಶಾಲಿಯಾದ ಅವನು ಕತ್ತಿಯಿಂದ ಆ ಮನೆಯ ಯಜಮಾನನಾದ ಬ್ರಾಹ್ಮಣನನ್ನು ವಧಿಸಿ ಬಹು ದ್ರವ್ಯಗಳನ್ನು ತೆಗೆದುಕೊಂಡು ಕಿರಾತಿಯ ಮನೆಗೆ ಹೋದನು.

ತಂ ಯಾಂತಮನುಯಾತಿ ಸ್ಮ ಬ್ರಹ್ಮಹತ್ಯಾ ಭಯಂಕರೀ ।
ನೀಲವಸ್ತ್ರಧರಾ ಭೀಮಾ ಭೃಶಂ ರಕ್ತಶಿರೋರುಹಾ ॥ ೫೬ ॥
ಗರ್ಜಂತೀ ಸಾಽಟ್ಟಹಾಸಂ ಸಾ ಕಂಪಯಂತೀ ಚ ರೋದಸೀ ।
ಅನುದ್ರುತಸ್ತಯಾ ಸೋಽಯಂ ಬಭ್ರಾಮ ಜಗತೀತಲೇ ॥ ೫೭ ॥
ಏವಂ ಭ್ರಮನ್ಭುವಂ ಸರ್ವಾಂ ಕದಾಚಿತ್ಸುಮತಿಃ ಸ್ವಯಂ ।
ಸ್ವಂ ಗ್ರಾಮಂ ಪ್ರಯಯೌ ಭೀತ್ಯಾ ಹೇ ಸೃಗಾಲಪ್ಲವಂಗಮೌ ॥ ೫೮ ॥
ಅನುದ್ರುತಸ್ತಯಾ ಭೀತಃ ಪ್ರಯಯೌ ಸ್ವಗೃಹಂ ಪ್ರತಿ ।
ಬ್ರಹ್ಮಹತ್ಯಾಽಪ್ಯನುದ್ರುತ್ಯ ತೇನ ಸಾಕಂ ಗೃಹಂ ಯಯೌ ॥ ೫೯ ॥
ಪಿತರಂ ರಕ್ಷ ರಕ್ಷೇತಿ ಸುಮತಿಃ ಶರಣಂ ಯಯೌ ।
ಮಾ ಭೈಷೀರಿತಿ ತಂ ಪ್ರೋಚ್ಯ ಪಿತಾ ರಕ್ಷಿತುಮುದ್ಯತಃ ।
ತದಾನೀಂ ಬ್ರಹ್ಮಹತ್ಯೇಯಂ ತತ್ತಾತಂ ಪ್ರತ್ಯಭಾಷತ ॥ ೬೦ ॥

ಬ್ರಹ್ಮಹತ್ಯೋವಾಚ :—

ನೈನಂ ತ್ವಂ ಪ್ರತಿಗೃಹ್ಣೀಷ್ವ ಯಜ್ಞದೇವ ದ್ವಿಜೋತ್ತಮ ॥ ೬೧ ॥
ಅಸೌ ಸುರಾಪೀ ಸ್ತೇಯೀ ಚ ಬ್ರಹ್ಮಹಾ ಚಾಽತಿಪಾತಕೀ ।
ಮಾತೃದ್ರೋಹೀ ಪಿತೃದ್ರೋಹೀ ಭಾರ್ಯಾತ್ಯಾಗೀ ಚ ಪಾಪಕೃತ್ ॥ ೬೨ ॥
ಕಿರಾತೀಸಂಗದುಷ್ಟಶ್ಚ ನೈನಂ ಮುಂಚಾಮ್ಯಹಂ ದ್ವಿಜ ।
ಗೃಹ್ಣಾಸಿ ಚೇದಿಮಂ ವಿಪ್ರ ಮಹಾಪಾತಕಿನಂ ಸುತಂ ॥ ೬೩ ॥

---

೫೬–೫೭. ಹೋಗುತ್ತಿರುವ ಅವನನ್ನು ಭಯಂಕರವೂ, ನೀಲವಸ್ತ್ರವನ್ನು ಧರಿಸಿದುದೂ, ಅತಿ ಕೆಂಪಾದ ತಲೆಗೂದುಲುಳ್ಳುದೂ ಆದ ಬ್ರಹ್ಮಹತ್ಯೆಯು ಅಟ್ಟಹಾಸದಿಂದ ಆಕಾಶಭೂಮಿಗಳು ನಡುಗುವಂತೆ ಗರ್ಜಿಸುತ್ತ ಹಿಂಬಾಲಿಸಿತು. ಅದು ಹಿಂಬಾಲಿಸಲು ಅವನು ಪ್ರಪಂಚದಲ್ಲೆಲ್ಲ ಅಲೆದನು.

೫೮. ನರಿಕಪಿಗಳೆ! ಆ ಸುಮತಿಯು ಹೀಗೆ ಸಮಸ್ತ ಭೂಮಿಯಲ್ಲಿ ಸಂಚರಿಸುತ್ತ ಭಯದಿಂದ ತನ್ನ ಗ್ರಾಮಕ್ಕೆ ಹೋದನು.

೫೯–೬೦. ಅವನು ತಂದೆಯನ್ನು ಕಾಪಾಡೆಂದು ಮರೆಹೋಗಲು ತಂದೆಯು ಹೆದರಬೇಡವೆಂದು ಹೇಳಿ ಅವನನ್ನು ಕಾಪಾಡಲುದ್ಯುಕ್ತನಾದನು. ಆಗ ಬ್ರಹ್ಮಹತ್ಯೆಯು ಅವನನ್ನು ಕುರಿತು ಇಂತೆಂದಿತು.

೬೧. ಬ್ರಹ್ಮಹತ್ಯೆಯು ಹೇಳುತ್ತದೆ:—ಬ್ರಾಹ್ಮಣವರ್ಯನಾದ ಯಜ್ಞದೇವ! ಇವನನ್ನು ಸ್ವೀಕರಿಸಬೇಡ.

೬೨–೬೪. ಹೆಂಡವನ್ನು ಕುಡಿದವನೂ, ಕಳ್ಳನೂ, ಬ್ರಹ್ಮಹತ್ಯೆಮಾಡಿದವನೂ, ತಂದೆತಾಯಿಗಳಿಗೆ ದ್ರೋಹಮಾಡಿದವನೂ, ಹೆಂಡತಿಯನ್ನು ತ್ಯಜಿಸಿದವನೂ, ಪಾಪಿಯೂ ಆಗಿರುವ ಬೇಡಸ್ತ್ರೀ ಸಂಗದಿಂದ ದುಷ್ಟನಾದ ಇವನನ್ನು

ತ್ವದ್ಭಾರ್ಯಾಮಸ್ಯ ಭಾರ್ಯಾಂ ಚ ತ್ವಾಂ ಚ ಪುತ್ರಮಿಮಂ ದ್ವಿಜ ।
ಭಕ್ಷಯಿಷ್ಯಾಮಿ ವಂಶಂ ಚ ತಸ್ಮಾನ್ಮುಂಚ ಸುತಂ ತ್ವಿಮಂ ॥ ೬೪ ॥
ಇಮಂ ತ್ಯಜಸಿ ಚೇತ್ಪುತ್ರಂ ಯುಷ್ಮಾನ್ಮೋಕ್ಷ್ಯಾಮಿ ಸಾಂಪ್ರತಂ ।
ನೈಕಸ್ಯಾರ್ಥೇ ಕುಲಂ ಹಂತುಮರ್ಹಸಿ ತ್ವಂ ಮಹಾಮತೇ ।
ಇತ್ಯುಕ್ತಸ್ಸ ತಯಾ ತತ್ರ ಯಜ್ಞದೇವೋಽಬ್ರವೀಚ್ಚ ತಾಂ ॥ ೬೫ ॥

ಯಜ್ಞದೇವ ಉವಾಚ :—

ಬಾಧತೇ ಮಾಂ ಸುತಸ್ನೇಹಃ ಕಥಮೇನಂ ಪರಿತ್ಯಜೇ ।
ಬ್ರಹ್ಮಹತ್ಯಾ ತದಾಕರ್ಣ್ಯ ದ್ವಿಜೋಕ್ತಂ ತಮಭಾಷತ ॥ ೬೬ ॥

ಬ್ರಹ್ಮಹತ್ಯೋವಾಚ :—

ಅಯಂ ಹಿ ಪತಿತೋಽಭೂತ್ತೇ ವರ್ಣಾಶ್ರಮಬಹಿಷ್ಕೃತಃ ॥ ೬೭ ॥
ಪುತ್ರೇಽಸ್ಮಿನ್ಮಾಕುರು ಸ್ನೇಹಂ ನಿಂದಿತಂ ತಸ್ಯ ದರ್ಶನಂ ।
ಇತ್ಯುಕ್ತ್ವಾ ಬ್ರಹ್ಮಹತ್ಯಾ ಸಾ ಯಜ್ಞದೇವಸ್ಯ ಪಶ್ಯತಃ ॥ ೬೮ ॥
ತಲೇನ ಪ್ರಜಹಾರಾಸ್ಯ ಪುತ್ರಂ ಸುಮತಿನಾಮಕಂ ।
ರುರೋದ ತಾತ ತಾತೇತಿ ಪಿತರೌ ಪ್ರಬ್ರುವನ್ಮುಹುಃ ॥ ೬೯ ॥

---

ನಾನು ಬಿಡುವುದಿಲ್ಲ. ಬ್ರಾಹ್ಮಣ! ಮಹಾಪಾತಕಿಯಾದ ನಿನ್ನೀ ಮಗನನ್ನು ನೀನು ಪರಿಗ್ರಹಿಸಿದರೆ ನಿನ್ನ ಹೆಂಡತಿಯನ್ನೂ, ಇವನ ಹೆಂಡತಿಯನ್ನೂ, ನಿನ್ನನ್ನೂ, ಈ ಮಗನನ್ನೂ, ನಿನ್ನ ವಂಶದವರನ್ನೂ ಭಕ್ಷಿಸುವೆನು. ಆದ್ದರಿಂದ ಇವನನ್ನು ಬಿಟ್ಟುಬಿಡು.

೬೫. ಈ ಮಗನನ್ನು ನೀನೀಗ ಬಿಟ್ಟರೆ ನಿಮ್ಮನ್ನು ನಾನು ಬಿಡುವೆನು. ಪ್ರಾಜ್ಞನೆ! ಒಬ್ಬನಿಗಾಗಿ ನೀನು ವಂಶವನ್ನು ಹಾಳುಮಾಡಬೇಡ ಎಂದು ಹೇಳಲು ಯಜ್ಞದೇವನು ಆ ಬ್ರಹ್ಮಹತ್ಯೆಯನ್ನು ಕುರಿತು ಹೀಗೆಂದನು.

೬೬. ಯಜ್ಞದೇವನು ಹೇಳುತ್ತಾನೆ:—ಬ್ರಹ್ಮಹತ್ಯೆಯೆ! ನನ್ನನ್ನು ಮಗನಲ್ಲಿರುವ ಪ್ರೀತಿಯು ಪೀಡಿಸುತ್ತದೆ ಎಂದು ಬ್ರಾಹ್ಮಣನು ಹೇಳಲು ಅದನ್ನು ಕೇಳಿ ಬ್ರಹ್ಮಹತ್ಯೆಯು ಇಂತೆಂದಿತು.

೬೭. ಬ್ರಹ್ಮಹತ್ಯೆಯು ಹೇಳುತ್ತದೆ:—ಪಾತಕಿಯಾದ ನಿನ್ನ ಈ ಮಗನು ಜಾತಿ ಮತ್ತು ಆಶ್ರಮಗಳಿಂದ ಬಹಿಷ್ಕೃತನಾಗಿರುವನು.

೬೮–೬೯. ಇಂತಹ ಮಗನಲ್ಲಿ ಸ್ನೇಹಮಾಡಬೇಡ. ಇವನ ದರ್ಶನವೂ ನಿಂದ್ಯವಾದುದು. ಬ್ರಹ್ಮಹತ್ಯೆಯು ಹೀಗೆಂದು ಯಜ್ಞದೇವನು ನೋಡುತ್ತಿರುವಾಗಲೆ ಸುಮತಿಯನ್ನು ಮುಷ್ಟಿಯಿಂದ ಗುದ್ದಿತು. ಅವನು ಅಪ್ಪ! ಅಪ್ಪ! ಎಂದು ಬಾರಿಬಾರಿಗೂ ಕಿರುಚುತ್ತ ಅತ್ತನು.

ರುರುದುರ್ಜನಕೋ ಮಾತಾ ಭಾರ್ಯಾಽಪಿ ಸುಮತೇಸ್ತದಾ ।
ಏತಸ್ಮಿನ್ನಂತರೇ ತತ್ರ ದುರ್ವಾಸಾಃ ಶಂಕರಾಂಶಜಃ ॥ ೭೦ ॥
ದಿಷ್ಟ್ಯಾ ಸಮಾಯಯೌ ಯೋಗೀ ಹೇ ಸೃಗಾಲಪ್ಲವಂಗಮೌ ।
ಯಜ್ಞದೇವೋಽಥ ತಂ ದೃಷ್ಟ್ವಾ ಮುನಿಂ ರುದ್ರಾವತಾರಕಂ ।
ಶ್ರುತ್ವಾ ಪ್ರಣಮ್ಯ ಶರಣಂ ಯಯಾಚೇ ಪುತ್ರಕಾರಣಾತ್ ॥ ೭೧ ॥

ಪಿತೋವಾಚ :—

ದುರ್ವಾಸಸ್ತ್ವಂ ಮಹಾಯೋಗೀ ಸಾಕ್ಷಾದ್ವೈ ಶಂಕರಾಂಶಜಃ ॥ ೭೨ ॥
ತ್ವದ್ದರ್ಶನಮಪುಣ್ಯಾನಾಂ ಭವಿತಾ ನ ಕದಾಚನ ।
ಬ್ರಹ್ಮಹಾ ಚ ಸುರಾಪೀ ಚ ಸ್ತೇಯೀ ಚಾಽಭೂತ್ಸುತೋ ಮಮ ॥ ೭೩ ॥
ಏನಂ ಪ್ರಹರ್ತುಮಾಯಾತಾ ಬ್ರಹ್ಮಹತ್ಯಾ ವಿವರ್ತತೇ ।
ಭೂಯಾದ್ಯಥಾ ಮೇ ಪುತ್ರೋಽಯಂ ಮಹಾಪಾತಕಮೋಚಿತಃ ॥ ೭೪ ॥
ಘೋರಾ ಚ ಬ್ರಹ್ಮಹತ್ಯೇಯಂ ಯಥಾ ಶೀಘ್ರಂ ಲಯಂ ವ್ರಜೇತ್ ।
ತಮುಪಾಯಂ ವದಸ್ವಾಽದ್ಯ ಮಮ ಪುತ್ರೇ ದಯಾಂ ಕುರು ॥ ೭೫ ॥
ಅಯಮೇವ ಹಿ ಪುತ್ರೋ ಮೇ ನಾಽನ್ಯೋಽಸ್ತಿ ತನಯೋ ಮುನೇ ।
ಅಸ್ಮಿನ್ಮೃತೇ ತು ವಂಶೋ ಮೇ ಸಮುಚ್ಛಿದ್ಯೇತ್ಸಮೂಲತಃ ॥ ೭೬ ॥
ತತಃ ಪಿತೃಭ್ಯಃ ಪಿಂಡಾನಾಂ ದಾತಾಽಪಿ ನ ಭವೇದ್ಧ್ರುವಂ ।
ಅತಃ ಕೃಪಾಂ ಕುರುಷ್ವ ತ್ವಮಸ್ಮಾಸು ಭಗವನ್ಮುನೇ ॥ ೭೭ ॥

---

೭೦–೭೧. ಅವನ ತಂದೆಯೂ, ತಾಯಿಯೂ, ಹೆಂಡತಿಯೂ ಅತ್ತರು. ಈ ಮಧ್ಯದಲ್ಲಿ ಶಂಕರಾಂಶದಿಂದ ಹುಟ್ಟಿದ ದೂರ್ವಾಸಮುನಿಯು ಅದೃಷ್ಟವಶದಿಂದ ಅಲ್ಲಿಗೆ ಬಂದನು. ಯಜ್ಞದೇವನು ಆ ಮಹರ್ಷಿಯನ್ನು ಕಂಡು ಅವನು ರುದ್ರಾಂಶಸಂಭೂತನೆಂದರಿತು ನಮಸ್ಕರಿಸಿ ಮಗನಿಗಾಗಿ ಮರೆಹೊಕ್ಕನು.

೭೨. ತಂದೆಯು ಹೇಳುತ್ತಾನೆ :—ದುರ್ವಾಸನೆ! ನೀನು ಶಂಕರಾಂಶದಿಂದ ಜನಿಸಿದ ಮಹಾ ಯೋಗಿಯು.

೭೩. ನಿನ್ನ ದರ್ಶನವು ಪಾಪಿಗಳಿಗೆ ದೊರಕಲಾರದು. ನನ್ನ ಮಗನು, ಬ್ರಹ್ಮಹತ್ಯೆಮಾಡಿದವನೂ, ಹೆಂಡವನ್ನು ಕುಡಿದವನೂ, ಕಳ್ಳನೂ ಆಗಿರುವನು.

೭೪–೭೫. ಇವನನ್ನು ಹೊಡೆಯಲು ಬ್ರಹ್ಮಹತ್ಯೆಯು ಬಂದಿರುವುದು. ಈಗ ಈ ನನ್ನ ಮಗನು ಮಹಾಪಾತಕಮುಕ್ತನಾಗುವುದಕ್ಕೂ, ಭಯಂಕರವಾದ ಈ ಬ್ರಹ್ಮಹತ್ಯೆಯು ಶೀಘ್ರವಾಗಿ ನಾಶವಾಗುವುದಕ್ಕೂ ಉಪಾಯವನ್ನು ಹೇಳು. ನನ್ನ ಮಗನಲ್ಲಿ ಕೃಪೆಯಿಡು.

೭೬. ಮುನಿಯೆ! ನನಗೆ ಇವನ ಹೊರತು ಬೇರೆ ಪುತ್ರರಿಲ್ಲ. ಇವನು ಮಡಿದರೆ ನನ್ನ ವಂಶವು ಸಮೂಲವಾಗಿ ನಾಶವಾಗುವುದು.

೭೭. ಬಳಿಕ ಪಿತೃಗಳಿಗೆ ಪಿಂಡದಾನವನ್ನು ಮಾಡುವವನೂ ಇರಲಾರನು. ಪೂಜ್ಯಮುನಿವರ್ಯನೆ! ಆದುದರಿಂದ ನೀನು ನಮ್ಮಲ್ಲಿ ದಯೆಮಾಡು.

ಇತ್ಯುಕ್ತಃ ಸ ತದೋವಾಚ ದುರ್ವಾಸಾಃ ಶಂಕರಾಂಶಜಃ ।
ಧ್ಯಾತ್ವಾ ತು ಸುಚಿರಂ ಕಾಲಂ ಯಜ್ಞದೇವಂ ದ್ವಿಜೋತ್ತಮಂ ॥ ೭೮ ॥

ದುರ್ವಾಸಾ ಉವಾಚ :—

ಯಜ್ಞದೇವ ಕೃತಂ ಪಾಪಮತಿಕ್ರೂರಂ ಸುತೇನ ತೇ ।
ನಾಽಸ್ಯ ಪಾಪಸ್ಯ ಶಾಂತಿಃ ಸ್ಯಾತ್ ಪ್ರಾಯಶ್ಚಿತ್ತಾಽಯುತೈರಪಿ ॥ ೭೯ ॥
ಅಥಾಽಪಿ ತೇ ಸುತಸ್ಯಾಽಹಮಸ್ಯ ಪಾಪಸ್ಯ ಶಾಂತಯೇ ।
ಪ್ರಾಯಶ್ಚಿತ್ತಂ ವದಿಷ್ಯಾಮಿ ಶೃಣು ನಾಽನ್ಯಮನಾ ದ್ವಿಜ ॥ ೮೦ ॥
ಶ್ರೀರಾಮಧನುಷಃ ಕೋಟೌ ದಕ್ಷಿಣೇ ಸಲಿಲಾರ್ಣವೇ ।
ಸ್ನಾತಿ ಚೇತ್ತವ ಪುತ್ರೋಽಯಂ ಪಾತಕಾನ್ಮೋಕ್ಷ್ಯತೇ ಕ್ಷಣಾತ್ ॥ ೮೧ ॥
ದುರ್ವಿನೀತಾಽಭಿಧೋ ವಿಪ್ರೋ ಯತ್ರ ಸ್ನಾನಾದ್ದ್ವಿಜೋತ್ತಮ ।
ಗುರುಸ್ತ್ರೀಗಮಪಾಪೇಭ್ಯಸ್ತ್ವಕ್ಷಣಾದೇವ ಮೋಚಿತಃ ॥ ೮೨ ॥
ಸೈಷಾ ಶ್ರೀಧನುಷಃ ಕೋಟೀ ರಾಘವಸ್ಯ ಸ್ವಯಂ ಹರೇಃ ।
ಸ್ನಾನಮಾತ್ರೇಣ ಪಾಪೌಘಂ ನಾಶಯೇತ್ತ್ವತ್ಸುತಸ್ಯ ಸಾ ॥ ೮೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಧನುಷ್ಕೋಟಿ ಪ್ರಶಂಸಾಯಾಂ— ಸೃಗಾಲವಾನರಸಂವಾದೇ ಸುಮತಿ ಮಹಾಪಾತಕ ವಿಮೋಕ್ಷೋಪಾಯಕಥನಂ" ನಾಮ ಚತುಸ್ತ್ರಿಂಶೋಽಧ್ಯಾಯಃ

---

೭೮. ಹೀಗೆ ಯಜ್ಞದೇವನು ಹೇಳಲು ದುರ್ವಾಸನು ಬಹಳಕಾಲ ಆಲೋಚಿಸಿ ಅವನನ್ನು ಕುರಿತು ಇಂತೆಂದನು.

೭೯. ದುರ್ವಾಸನು ಹೇಳುತ್ತಾನೆ:—ಯಜ್ಞದೇವ! ನಿನ್ನ ಮಗನೆಸಗಿದ ಪಾಪವು ಅತಿ ಕಠಿನವಾದುದು. ಹತ್ತುಸಾವಿರ ಪ್ರಾಯಶ್ಚಿತ್ತಗಳಿಂದಲೂ ಈ ಪಾಪವು ಶಾಂತವಾಗಲಾರದು.

೮೦. ಆದರೂ ಈ ನಿನ್ನ ಮಗನ ಪಾಪದ ಪರಿಹಾರಕ್ಕೆ ಪ್ರಾಯಶ್ಚಿತ್ತವನ್ನು ಹೇಳುವೆನು. ಒಂದೇ ಮನಸ್ಸಿನಿಂದ ಅದನ್ನು ಕೇಳು.

೮೧. ನಿನ್ನೀ ಮಗನು ದಕ್ಷಿಣ ಸಮುದ್ರದಲ್ಲಿರುವ ಶ್ರೀರಾಮನ ಧನುಷ್ಕೋಟಿಯಲ್ಲಿ ಮಿಂದರೆ ಕೂಡಲೆ ಇವನ ಪಾತಕವು ಶಾಂತವಾಗುವುದು.

೮೨. ದ್ವಿಜವರ್ಯ! ಅಲ್ಲಿ ದುರ್ವಿನೀತನೆಂಬ ಬ್ರಾಹ್ಮಣನು ಸ್ನಾನಮಾಡಿದುದರಿಂದ ಗುರುಪತ್ನೀಗಮನ ಪಾಪದಿಂದ ಕೂಡಲೆ ಮುಕ್ತನಾದನು.

೮೩. ಆ ವಿಷ್ಣುರೂಪಿಯಾದ ಶ್ರೀರಾಮನ ಧನುಷ್ಕೋಟಿಯು ಸ್ನಾನ ಮಾಡುವುದರಿಂದಲೆ ನಿನ್ನ ಸುತನ ಪಾತಕವನ್ನೆಲ್ಲ ನಾಶಗೊಳಿಸೀತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಧನುಷ್ಕೋಟಿ ಪ್ರಶಂಸೆಯಲ್ಲಿ—ನರಿ ಕಪಿ ಸಂವಾದದಲ್ಲಿ ಸುಮತಿ ಮಹಾಪಾತಕ ವಿಮೋಕ್ಷೋಪಾಯಕಥನ"ವೆಂಬ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚತ್ರಿಂಶೋಽಧ್ಯಾಯಃ

### ಸೃಗಾಲ ವಾನರ ವಿಮೋಕ್ಷಣವರ್ಣನಂ

ಯಜ್ಞದೇವ ಉವಾಚ :—

ದುರ್ವಾಸರ್ಷೇ ಮಹಾಪ್ರಾಜ್ಞ ಪರಾಽಪರವಿಚಕ್ಷಣ ।
ದುರ್ವಿನೀತಾಽಭಿಧಃ ಕೋಽಯಂ ಯೋಽಸೌ ಗುರ್ವಂಗನಾಮನಾತ್ ॥೧॥
ಕಸ್ಯ ಪುತ್ರೋ ಧನುಷ್ಕೋಟೌ ಸ್ನಾನೇನ ಸ ಕಥಂ ದ್ವಿಜಃ ।
ತತ್ಕ್ಷಣಾನ್ಮುಮುಚೇ ಪಾಪಾದ್ಗುರುಸ್ತ್ರೀಗಮಸಂಭವಾತ್ ।
ಏತನ್ಮೇ ಶ್ರದ್ದಧಾನಸ್ಯ ವಿಸ್ತರಾದ್ವಕ್ತುಮರ್ಹಸಿ ॥ ೨ ॥

ದುರ್ವಾಸಾ ಉವಾಚ :—

ಪಾಂಡ್ಯದೇಶೇ ಪುರಾ ಕಶ್ಚಿದ್ಬ್ರಾಹ್ಮಣೋಽಭೂದ್ಬಹುಶ್ರುತಃ ॥ ೩ ॥
ಇಧ್ಮವಾಹಾಽಭಿಧೋ ನಾಮ್ನಾ ತಸ್ಯ ಭಾರ್ಯಾ ರುಚಿಸ್ತಥಾ ।
ಬಭೂವ ತಸ್ಯ ತನಯೋ ದುರ್ವಿನೀತಾಽಭಿಧೋ ದ್ವಿಜಃ ॥ ೪ ॥
ಬಾಲ್ಯೇ ವಯಸಿ ಪುತ್ರಸ್ಯ ಮಮಾರ ಜನಕೋಽಸ್ಯ ವೈ ।
ದುರ್ವಿನೀತಃ ಪಿತುಸ್ತಸ್ಯ ಸ ಕೃತ್ವಾ ಚೌರ್ಧ್ವದೈಹಿಕಂ ॥ ೫ ॥
ಕಂಚಿತ್ಕಾಲಂ ಗೃಹೇಽವಾಸೀನ್ಮಾತ್ರಾ ವಿಧವಯಾ ಸಹ ।
ತತೋ ದುರ್ಭಿಕ್ಷಮಭವದ್ದ್ವಾದಶಾಬ್ದಮವರ್ಷಣಾತ್ ॥ ೬ ॥

---

### ಕನ್ನಡದ ಅನುವಾದ

#### ಸೃಗಾಲ ವಾನರ ವಿಮೋಕ್ಷಣವರ್ಣನ

೧. ಯಜ್ಞದೇವನು ಹೇಳುತ್ತಾನೆ:—ಜ್ಞಾನಿಯೂ, ಪರಾಪರವಿದ್ಯೆಗಳಲ್ಲಿ ಕುಶಲನೂ ಆದ ದುರ್ವಾಸಮುನಿಯೆ! ಗುರುಪತ್ನೀಗಮನಮಾಡಿದ ಈ ದುರ್ವಿನೀತನಾವನು?

೨. ಯಾರ ಮಗನು? ಇವನು ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದ ಕೂಡಲೆ ಗುರುಸ್ತ್ರೀ ಸಂಗ ಪಾಪದಿಂದ ಹೇಗೆ ಮುಕ್ತನಾದನು? ಶ್ರದ್ಧೆಯಿಂದ ಕೇಳುತ್ತಿರುವ ನನಗೆ ಇದನ್ನು ವಿಸ್ತಾರವಾಗಿ ಹೇಳು.

೩–೪. ದುರ್ವಾಸನು ಹೇಳುತ್ತಾನೆ:—ಪಾಂಡ್ಯದೇಶದಲ್ಲಿ ಹಿಂದೆ ಬಹುವಿದ್ಯಾವಂತನಾದ ಇಧ್ಮವಾಹನೆಂಬ ಬ್ರಾಹ್ಮಣನಿದ್ದನು. ಅವನಿಗೆ ರುಚಿಯೆಂಬ ಹೆಂಡತಿಯೂ, ದುರ್ವಿನೀತನೆಂಬ ಸುತನೂ ಇದ್ದರು.

೫–೬. ಮಗನು ಬಾಲಕನಾಗಿರುವಾಗಲೆ ತಂದೆಯಾದ ಇಧ್ಮವಾಹನು ಮಡಿದನು. ಮಗನಾದ ದುರ್ವಿನೀತನು ತಂದೆಗೆ ಉತ್ತರಕ್ರಿಯೆಗಳನ್ನು ಮಾಡಿ

ತತೋ ದೇಶಾಂತರಮಗಾನ್ಮಾತ್ರಾ ಸಾಕಂ ದ್ವಿಜೋತ್ತಮ ।
ಗೋಕರ್ಣಂ ಸ ಸಮಾಸಾದ್ಯ ಸುಭಿಕ್ಷಂ ಧಾನ್ಯಸಂಚಯೈಃ ॥ ೭ ॥
ಉವಾಸ ಸುಚಿರಂ ಕಾಲಂ ಮಾತ್ರಾ ವಿಧವಯಾ ಸಹ ।
ತತೋ ಬಹುತಿಥೇ ಕಾಲೇ ದುರ್ವಿನೀತೋ ಗತೇ ಸತಿ ॥ ೮ ॥
ಪೂರ್ವದುಷ್ಕರ್ಮಪಾಕೇನ ಮೂಢಬುದ್ಧಿ ರಹೋ ಬತ ।
ಅನಂಗಶರವಿದ್ಧಾಂಗೋ ರಾಗಾದ್ವಿಕೃತಮಾನಸಃ ॥ ೯ ॥
ಮಾಮೇತಿ ವಾದಿನೀಮಂಬಾಂ ಬಲಾದಾಕೃಷ್ಯ ಪಾತಕೀ ।
ಬುಭುಜೇ ಕಾಮಮೋಹಾತ್ಮಾ ಮೈಥುನೇನ ದ್ವಿಜೋತ್ತಮ ॥ ೧೦ ॥
ಸ ಖಿನ್ನೋ ದುರ್ವಿನೀತೋಽಯಂ ರೇತಃಸೇಕಾದನಂತರಂ ।
ಮನಸಾ ಚಿಂತಯನ್ಪಾಪಂ ರುರೋದ ಭೃಶದುಃಖಿತಃ ॥ ೧೧ ॥
ಅಹೋಽತಿಪಾಪಕೃದಹಂ ಮಹಾಪಾತಕಿನಾಂ ವರಃ ।
ಅಗಮಂ ಜನನೀಂ ಯಸ್ಮಾತ್ಕಾಮಬಾಣವಶಾನುಗಃ ॥ ೧೨ ॥
ಇತಿ ಸಂಚಿಂತ್ಯ ಮನಸಾ ಸ ತತ್ರ ಮುನಿಸನ್ನಿಧೌ ।
ಜುಗುಪ್ಸಮಾನಶ್ಚಾತ್ಮಾನಂ ತಾನ್ಮುನೀನಿದಮಬ್ರವೀತ್ ॥ ೧೩ ॥

---

ಕೆಲವುಕಾಲ ಮನೆಯಲ್ಲಿ ವಿಧವೆಯಾದ ತಾಯಿಯೊಡನೆ ವಾಸಿಸಿದನು. ತರುವಾಯ ಅಲ್ಲಿ ಹನ್ನೆರಡು ವರ್ಷ ಮಳೆಯಿಲ್ಲದ್ದರಿಂದ ಕ್ಷಾಮವುಂಟಾಯಿತು.

೭–೧೦. ಆದುದರಿಂದ ದುರ್ವಿನೀತನು ತಾಯಿಯೊಡನೆ ದೇಶಾಂತರಕ್ಕೆ ಹೋದನು. ಅವನು ಧಾನ್ಯಸಮೂಹಗಳಿಂದ ಸುಭಿಕ್ಷವಾದ ಗೋಕರ್ಣಕ್ಕೆ ಹೋಗಿ ವಿಧವೆಯಾದ ತಾಯಿಯೊಡನೆ ಅಲ್ಲಿ ಬಹಳಕಾಲ ವಾಸಮಾಡಿದನು. ಬಳಿಕ ಅನೇಕ ವರ್ಷಕಾಲವು ಕಳೆಯಲು ಹಿಂದಿನ ಜನ್ಮದ ದುಷ್ಕರ್ಮದ ಪರಿಣಾಮದಿಂದ ಮೂಢಬುದ್ಧಿಯಾದ ದುರ್ವಿನೀತನು ಕಾಮಪೀಡಿತನೂ, ವಿಷಯಾನುರಾಗದಿಂದ ವಿಕಾರಗೊಂಡ ಮನಸ್ಸುಳ್ಳವನೂ ಆಗಿ ಬೇಡ ಬೇಡವೆಂದು ಹೇಳುತ್ತಿರುವ ತಾಯಿಯನ್ನು ಬಲಾತ್ಕಾರದಿಂದೆಳೆದು ರಮಿಸಿದನು.

೧೧. ರೇತಸ್ಖಲನವಾದ ಮೇಲೆ ವ್ಯಥೆಗೊಂಡ ಆ ದುರ್ವಿನೀತನು ಮನಸ್ಸಿನಿಂದ ತಾನು ಮಾಡಿದ ಪಾಪವನ್ನು ಆಲೋಚಿಸುತ್ತ ಬಹು ದುಃಖದಿಂದ ಅತ್ತನು.

೧೨. ಮನ್ಮಥನ ಬಾಣಕ್ಕೆ ವಶನಾದ ನಾನು ಜನನಿಯ ಸಂಗವನ್ನು ಮಾಡಿದ್ದರಿಂದ ಅತ್ಯಂತ ಪಾಪವನ್ನೆಸಗಿದ ಮಹಾ ಪಾತಕಗಳಲ್ಲಿ ಅಗ್ರನು.

೧೩. ಮುನಿಗಳ ಹತ್ತಿರವಿದ್ದ ಆ ದುರ್ವಿನೀತನು ಹೀಗೆ ಚಿಂತಿಸಿ ತನ್ನ ವಿಷಯದಲ್ಲಿ ಅಸಹ್ಯಪಡುತ್ತ ಆ ಮುನಿಗಳನ್ನು ಕುರಿತು ಹೀಗೆಂದನು.

ಗುರುಸ್ತ್ರೀಗಮಪಾಪಸ್ಯ ಪ್ರಾಯಶ್ಚಿತ್ತಂ ಮಮ ದ್ವಿಜಾಃ ।
ವದಧ್ವಂ ಶಾಸ್ತ್ರತತ್ವಜ್ಞಾಃ ಕೃಪಯಾ ಮಯಿ ಕೇವಲಂ ॥ ೧೪ ॥
ಮರಣಾನ್ನಿಷ್ಕೃತಿಃ ಸ್ಯಾಚ್ಚೇನ್ಮರಿಷ್ಯಾಮಿ ನ ಸಂಶಯಃ ।
ಭವದ್ಭಿರುಚ್ಯತೇ ಯತ್ತು ಪ್ರಾಯಶ್ಚಿತ್ತಂ ಮಮಾಽಧುನಾ ॥ ೧೫ ॥
ಕರಿಷ್ಯೇ ತದ್ದ್ವಿಜಾಃ ಸತ್ಯಂ ಮರಣಂ ವಾಽನ್ಯದೇವ ವಾ ।
ತಚ್ಛ್ರುತ್ವಾ ವಚನಂ ತಸ್ಯ ಕೇಚಿತ್ತತ್ರ ಮುನೀಶ್ವರಾಃ ॥ ೧೬ ॥
ಅನೇನ ಸಾಕಂ ವಾರ್ತಾ ತು ದೋಷಾಯೇತಿ ವಿನಿಶ್ಚಿತಾಃ ।
ಮೌನಿತ್ವಂ ಭೇಜಿರೇ ಕೇಚಿಸ್ಮನಯಃ ಕೇಚಿದಾಭೃಶಂ ॥ ೧೭ ॥
ದುಷ್ಟಾತ್ಮಾ ಮಾತೃಗಾಮೀ ತ್ವಂ ಮಹಾಪಾತಕಿನಾಂ ವರಃ ।
ಗಚ್ಛ ಗಚ್ಛೇತಿ ಬಹುಶೋ ವಾಚಮೂಚುರ್ದ್ವಿಜೋತ್ತಮಾಃ ॥ ೧೮ ॥
ತಾನ್ನಿವಾರ್ಯ ಕೃಪಾಶೀಲಃ ಸರ್ವಜ್ಞಃ ಕರುಣಾನಿಧಿಃ ।
ಕೃಷ್ಣದ್ವೈಪಾಯನಸ್ತತ್ರ ದುರ್ವಿನೀತಮಭಾಷತ ॥ ೧೯ ॥
ಗಚ್ಛಾಶು ರಾಮಸೇತೌ ತ್ವಂ ಧನುಷ್ಕೋಟೌ ಸಹಾಂಬಯಾ ।
ಮಕರಸ್ಥೇ ರವೌ ಮಾಘೇ ಮಾಸಮೇಕಂ ನಿರಂತರಂ ॥ ೨೦ ॥
ಜಿತೇಂದ್ರಿಯೋ ಜಿತಕ್ರೋಧಃ ಪರದ್ರೋಹವಿವರ್ಜಿತಃ ।
ಏಕಮಾಸಂ ನಿರಾಹಾರಃ ಕುರು ಸ್ನಾನಂ ಸಹಾಂಬಯಾ ॥ ೨೧ ॥

---

೧೪. ಬ್ರಾಹ್ಮಣರೆ! ಶಾಸ್ತ್ರಗಳ ಮರ್ಮವನ್ನರಿತ ನೀವು ನನ್ನಲ್ಲಿ ದಯೆಯಿಟ್ಟು ನನ್ನ ಮಾತೃಗಮನರೂಪವಾದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳಿರಿ.

೧೫–೧೭. ಈ ಪಾಪವು ಸಾಯುವುದರಿಂದ ಪರಿಹಾರವಾಗುವುದಾದರೆ ನಿಶ್ಚಯವಾಗಿಯೂ ನಾನು ಸಾಯುವೆನು. ಈಗ ನೀವು ನನಗೆ ಹೇಳುವ ಪ್ರಾಯಶ್ಚಿತ್ತವು ಮರಣವಾಗಲಿ, ಬೇರೆ ಏನಾದರೂ ಆಗಲಿ ಅದನ್ನು ನಾನು ಮಾಡುವೆನು. ಅವನ ಆ ಮಾತನ್ನು ಕೇಳಿ ಅಲ್ಲಿರುವ ಕೆಲವು ಮುನಿವರ್ಯರು ಇವನೊಡನೆ ಮಾತನಾಡುವುದರಿಂದಲೂ ಪಾಪವು ಸಂಭವಿಸುವುದೆಂದರಿತು ಮೌನವನ್ನು ಹೊಂದಿದರು.

೧೮. ವಿಪ್ರರೆ! ಕೆಲವು ಬ್ರಾಹ್ಮಣರು ನೀನು ದುಷ್ಟನೂ ತಾಯಿಯ ಸಂಗವನ್ನುಮಾಡಿದವನೂ ಮಹಾಪಾತಕಿಯೂ ಆಗಿರುವೆ. ಇಲ್ಲಿಂದ ಹೊರಡು ಎಂದರು.

೧೯. ಅಲ್ಲಿ ದಯಾಳುವೂ, ಸರ್ವಜ್ಞನೂ ಆದ ವ್ಯಾಸಮುನಿಯು ಅವರನ್ನೆಲ್ಲ ತಡೆದು ದುರ್ವಿನೀತನನ್ನು ಕುರಿತು ಹೀಗೆಂದನು.

೨೦–೨೧. ನೀನು ಕೂಡಲೆ ತಾಯಿಯೊಡನೆ ರಾಮಸೇತುವೆಯಲ್ಲಿರುವ ಧನುಷ್ಕೋಟಿಗೆ ಹೋಗು. ಸೂರ್ಯನು ಮಕರ ರಾಶಿಯಲ್ಲಿರುವಾಗ ಮಾಘ ಮಾಸದಲ್ಲಿ ಒಂದು ತಿಂಗಳು ಎಡೆಬಿಡದೆ ಜಿತೇಂದ್ರಿಯನೂ, ಸಿಟ್ಟಿಲ್ಲದವನೂ,

ಪೂತೋ ಭವಿಷ್ಯಸ್ಯದ್ಧಾ ತ್ವಂ ಗುರುಸ್ತ್ರೀಗಮದೋಷತಃ ।
ಯತ್ಪಾತಕಂ ನ ನಶ್ಯೇತ ಸೇತುಸ್ನಾನೇನ ತನ್ನಹಿ ॥ ೨೨ ॥
ಶ್ರುತಿಸ್ಮೃತಿಪುರಾಣೇಷು ಧನುಷ್ಕೋಟಿಪ್ರಶಂಸನಂ ।
ಬಹುಧಾ ಭಣ್ಯತೇ ಪಂಚಮಹಾಪಾತಕನಾಶನಂ ॥ ೨೩ ॥
ತಸ್ಮಾತ್ತ್ವಂ ತ್ವರಯಾ ಗಚ್ಛ ಧನುಷ್ಕೋಟಿಂ ಸಹಾಂಬಯಾ ।
ಪ್ರಮಾಣಂ ಕುರು ಮದ್ವಾಕ್ಯಂ ವೇದವಾಕ್ಯಮಿವ ದ್ವಿಜ ॥ ೨೪ ॥
ಶ್ರೀರಾಮಧನುಷಃ ಕೋಟೌ ಸ್ನಾತಸ್ಯ ದ್ವಿಜಪುತ್ರಕ ।
ಮಹಾಪಾತಕಕೋಟ್ಯೋಽಪಿ ನೈವ ಲಕ್ಷ್ಯಾ ಇತೀವ ಹಿ ॥ ೨೫ ॥
ಪ್ರಾಯಶ್ಚಿತ್ತಾಂತರಂ ಪ್ರೋಕ್ತಂ ಮನ್ವಾದಿಸ್ಮೃತಿಭಿಃ ಸ್ಮೃತೌ ।
ತದ್ಗಚ್ಛ ತ್ವಂ ಧನುಷ್ಕೋಟಿಂ ಮಹಾಪಾತಕನಾಶಿನೀಂ ॥ ೨೬ ॥
ಇತೀರಿತೋಽಥ ವ್ಯಾಸೇನ ದುರ್ವಿನೀತೋ ದ್ವಿಜೋತ್ತಮಾಃ ।
ಮಾತ್ರಾ ಸಾಕಂ ಧನುಷ್ಕೋಟಿಂ ನತ್ವಾ ವ್ಯಾಸಂ ಚ ನಿರ್ಯಯೌ ॥ ೨೭ ॥
ಮಕರಸ್ಥೇ ರವೌ ಮಾಘೇ ಮಾಸಮಾತ್ರಂ ನಿರಂತರಂ ।
ಮಾತ್ರಾ ಸಹ ನಿರಾಹಾರೋ ಜಿತಕ್ರೋಧೋ ಜಿತೇಂದ್ರಿಯಃ ॥ ೨೮ ॥

---

ಪರರಿಗೆ ದ್ರೋಹಮಾಡದವನೂ ಆಗಿ ಉಪವಾಸಮಾಡುತ್ತ ತಾಯಿಯೊಡನೆ ಸ್ನಾನಮಾಡು.

೨೨. ನಿನ್ನ ಮಾತೃಸಂಗಮಾಡಿದ ದೋಷವು ನಿಶ್ಚಯವಾಗಿಯೂ ನಾಶವಾಗುವುದು. ಸೇತು ಸ್ನಾನದಿಂದ ನಾಶವಾಗದ ಪಾಪವೇ ಇಲ್ಲ.

೨೩. ವೇದ, ಸ್ಮೃತಿ, ಪುರಾಣಗಳಲ್ಲಿ ಪಂಚಮಹಾಪಾತಕಗಳನ್ನು ಪರಿಹರಿಸುವ ಧನುಷ್ಕೋಟಿಯನ್ನು ಬಹುವಾಗಿ ಹೊಗಳಿರುತ್ತಾರೆ.

೨೪. ಬ್ರಾಹ್ಮಣ! ಆದ್ದರಿಂದ ನೀನು ನನ್ನ ನುಡಿಯನ್ನು ವೇದವಾಕ್ಯದಂತೆ ಪ್ರಮಾಣವಾಗಿಟ್ಟುಕೊಂಡು ತಾಯಿಯೊಡನೆ ಧನುಷ್ಕೋಟಿಗೆ ಶೀಘ್ರವಾಗಿ ತೆರಳು.

೨೫. ಶ್ರೀರಾಮಧನುಷ್ಕೋಟಿಯಲ್ಲಿ ಸ್ನಾನಮಾಡಿದವನಿಗೆ ಕೋಟಿ ಮಹಾಪಾತಕಗಳೂ ಲೆಕ್ಕವಿಲ್ಲ.

೨೬. ಹೀಗೆಂದು ಮನ್ವಾದಿಸ್ಮೃತಿಗಳು ಪ್ರಾಯಶ್ಚಿತ್ತವನ್ನುಸುರಿರುವುವು. ಆದ್ದರಿಂದ ನೀನು ಮಹಾ ಪಾತಕವನ್ನು ಪರಿಹರಿಸುವ ಧನುಷ್ಕೋಟಿಗೆ ಹೋಗು.

೨೭. ವ್ಯಾಸನು ಹೀಗೆನ್ನಲು ದುರ್ವಿನೀತನು ತಾಯಿಯೊಡನೆ ವ್ಯಾಸನನ್ನು ವಂದಿಸಿ ಧನುಷ್ಕೋಟಿಗೆ ಹೋದನು.

೨೮–೩೦. ಅಲ್ಲಿ ಸೂರ್ಯನು ಮಕರ ರಾಶಿಯಲ್ಲಿರಲು ಮಾಘಮಾಸದಲ್ಲಿ ಒಂದು ತಿಂಗಳು ನಿತ್ಯವೂ ತಾಯಿಯೊಡನೆ ಉಪವಾಸಮಾಡುತ್ತ ಸಿಟ್ಟಿಲ್ಲದವನೂ

ಶ್ರೀರಾಮಧನುಷಃ ಕೋಟೌ ಸಸ್ನೌ ಸಂಕಲ್ಪಪೂರ್ವಕಂ ।
ರಾಮನಾಥಂ ನಮಸ್ಕುರ್ವಂಸ್ತ್ರಿಕಾಲಂ ಭಕ್ತಿಪೂರ್ವಕಂ ॥ ೨೯ ॥
ಮಾಸಾಂತೇ ಪಾರಣಾಂ ಕೃತ್ವಾ ಮಾತ್ರಾ ಸಹ ವಿಶುದ್ಧಧೀಃ ।
ವ್ಯಾಸಾಂತಿಕಂ ಪುನಃ ಪ್ರಾಯಾತ್ತಸ್ಮೈ ವೃತ್ತಂ ನಿವೇದಿತುಂ ॥ ೩೦ ॥
ಸ ಪ್ರಣಮ್ಯ ಪುನರ್ವ್ಯಾಸಂ ದುರ್ವಿನೀತೋಽಬ್ರವೀದ್ವಚಃ ॥ ೩೧ ॥

ದುರ್ವಿನೀತ ಉವಾಚ :—

ಭಗವನ್ಕರುಣಾಸಿಂಧೋ ದ್ವೈಪಾಯನ ಮಹತ್ತಮ ।
ಭವತಃ ಕೃಪಯಾ ರಾಮಧನುಷ್ಕೋಟೌ ಸಹಾಂಬಯಾ ।
ಮಾಘಮಾಸೇ ನಿರಾಹಾರೋ ಮಾಸಮಾತ್ರಮತಂದ್ರಿತಃ ॥ ೩೨ ॥
ಅಹಂ ತ್ವಕರವಂ ಸ್ನಾನಂ ನಮಸ್ಕುರ್ವನ್ಮಹೇಶ್ವರಂ ।
ಇತಃ ಪರಂ ಮಯಾ ವ್ಯಾಸ ಭಗವನ್ಭಕ್ತವತ್ಸಲ ॥ ೩೩ ॥
ಯತ್ಕರ್ತವ್ಯಂ ಮುನೇ ತತ್ತ್ವಂ ಮಮೋಪದಿಶ ತತ್ವತಃ ।
ಇತಿ ತಸ್ಯ ವಚಃ ಶ್ರುತ್ವಾ ದುರ್ವಿನೀತಸ್ಯ ವೈ ಮುನಿಃ ।
ಬಭಾಷೇ ದುರ್ವಿನೀತಂ ತಂ ವ್ಯಾಸೋ ನಾರಾಯಣಾಂಶಕಃ ॥ ೩೪ ॥

ವ್ಯಾಸ ಉವಾಚ :—

ದುರ್ವಿನೀತ ಗತಂ ತೇಽದ್ಯ ಪಾತಕಂ ಮಾತೃಸಂಗಜಂ ॥ ೩೫ ॥

---

ಜಿತೇಂದ್ರಿಯನೂ ಆಗಿ ಸಂಕಲ್ಪಪೂರ್ವಕವಾಗಿ ಮಿಂದು ತ್ರಿಕಾಲದಲ್ಲಿಯೂ ಭಕ್ತಿಯಿಂದ ರಾಮೇಶ್ವರನನ್ನು ನಮಸ್ಕರಿಸುತ್ತ ಶುದ್ಧಮನಸ್ಸುಳ್ಳವನಾಗಿ ತಾಯಿಯೊಡನೆ ತಿಂಗಳ ಕೊನೆಯಲ್ಲಿ ಪಾರಣೆಮಾಡಿ ಎಲ್ಲ ಸಮಾಚಾರವನ್ನು ತಿಳಿಸಲು ಮರಳಿ ವ್ಯಾಸನ ಬಳಿಗೆ ಹೋದನು.

೩೧. ಆ ದುರ್ವಿನೀತನು ವ್ಯಾಸನನ್ನು ವಂದಿಸಿ ಹೀಗೆಂದನು.

೩೨–೩೪. ದುರ್ವಿನೀತನು ಹೇಳುತ್ತಾನೆ :—ದಯಾಳುವೂ, ಮಹಾತ್ಮನೂ, ಪೂಜ್ಯನೂ ಆದ ವ್ಯಾಸನೆ! ನಾನು ನಿನ್ನ ದಯೆಯಿಂದ ಶ್ರೀರಾಮನ ಧನುಷ್ಕೋಟಿಯಲ್ಲಿ ಜನನಿಯೊಡನೆ ಮಾಘಮಾಸದಲ್ಲಿ ಉಪವಾಸ ಮಾಡುತ್ತ ಒಂದುತಿಂಗಳು ಆಲಸ್ಯವಿಲ್ಲದೆ ರಾಮೇಶ್ವರನನ್ನು ನಮಸ್ಕರಿಸುತ್ತ ಮಿಂದೆನು. ಭಕ್ತಪ್ರಿಯನಾದ ವ್ಯಾಸನೆ! ನೀನು ಇನ್ನು ಮುಂದೆ ನಾನು ಮಾಡತಕ್ಕ ಕರ್ತವ್ಯವನ್ನುಪದೇಶಿಸು. ಎನ್ನಲು ಆ ದುರ್ವಿನೀತನ ಮಾತನ್ನು ಕೇಳಿ ನಾರಾಯಣಾಂಶಜನಾದ ವ್ಯಾಸ ಮುನಿಯು ಅವನನ್ನು ಕುರಿತು ಇಂತೆಂದನು.

೩೫–೩೭. ವ್ಯಾಸನು ಹೇಳುತ್ತಾನೆ :—ದುರ್ವಿನೀತ! ನಿನ್ನ ಮಾತೃಗಮನದಿಂದುಂಟಾದ ಪಾಪವು ಈಗ ಶಾಂತವಾಗಿದೆ. ನಿನ್ನ ಸಂಬಂಧದಿಂದ ನಿನ್ನ

ಮಾತುಶ್ಚ ಪಾತಕಂ ನಷ್ಟಂ ತ್ವತ್ಸಂಗತಿನಿಮಿತ್ತಜಂ ।
ಸಂದೇಹೋ ನಾಽತ್ರ ಕರ್ತವ್ಯಃ ಸತ್ಯಮುಕ್ತಂ ಮಯಾ ತವ ॥ ೩೬ ॥
ಬಾಂಧವಾಃ ಸ್ವಜನಾಃ ಸರ್ವೇ ತಥಾಽನ್ಯೇ ಬ್ರಾಹ್ಮಣಾಶ್ಚ ಯೇ ।
ಸರ್ವೇ ತ್ವಾಂ ಸಂಗ್ರಹೀಷ್ಯಂತಿ ದುರ್ವಿನೀತಾಽಂಬಯಾ ಸಹ ॥ ೩೭ ॥
ಮತ್ಪ್ರಸಾದಾದ್ಧನುಷ್ಕೋಟೌ ವಿಶುದ್ಧಸ್ತ್ವಂ ನಿಮಜ್ಜನಾತ್ ।
ದಾರಸಂಗ್ರಹಣಂ ಕೃತ್ವಾ ಗಾರ್ಹಸ್ಥ್ಯಂ ಧರ್ಮಮಾಚರ ॥ ೩೮ ॥
ತ್ಯಜ ತ್ವಂ ಪ್ರಾಣಿಹಿಂಸಾಂ ಚ ಧರ್ಮಂ ಭಜ ಸನಾತನಂ ।
ಸೇವಸ್ವ ಸಜ್ಜನಾನ್ನಿತ್ಯಂ ಭಕ್ತಿಯುಕ್ತೇನ ಚೇತಸಾ ॥ ೩೯ ॥
ಸಂಧ್ಯೋಪಾಸನಮುಖ್ಯಾನಿ ನಿತ್ಯಕರ್ಮಾಣಿ ನ ತ್ಯಜ ।
ನಿಗೃಹೀಷ್ವೇಂದ್ರಿಯಗ್ರಾಮಮರ್ಚಯಸ್ವ ಹರಿಂ ಹರಂ ॥ ೪೦ ॥
ಪರಾಽಪವಾದಂ ಮಾ ಬ್ರೂಯಾ ಮಾಽಸೂಯಾಂ ಭಜ ಕರ್ಹಿಚಿತ್ ।
ಅನ್ಯಸ್ಯಾಽಭ್ಯುದಯಂ ದೃಷ್ಟ್ವಾ ಸಂತಾಪಂ ಕೃಣು ಮಾ ವೃಥಾ ॥ ೪೧ ॥
ಮಾತೃವತ್ಪರದಾರಾಂಶ್ಚ ತ್ವನ್ನಿತ್ಯಮವಲೋಕಯ ।
ಅಧೀತವೇದಾನಖಿಲಾನ್ಮಾ ವಿಸ್ಮರ ಕದಾಚನ ॥ ೪೨ ॥
ಅತಿಥೀನ್ಮಾಽವಮನ್ಯಸ್ವ ಶ್ರಾದ್ಧಂ ಪಿತೃದಿನೇ ಕುರು ।
ಪೈಶುನ್ಯಂ ಮಾ ವದಸ್ವ ತ್ವಂ ಸ್ವಪ್ನೇಽಪ್ಯನ್ಯಸ್ಯ ಕರ್ಹಿಚಿತ್ ॥ ೪೩ ॥

---

ತಾಯಿಗೆ ಸಂಭವಿಸಿದ ಪಾಪವೂ ಪರಿಹಾರವಾಗಿದೆ. ನೀನು ಸಂದೇಹಪಡಬೇಡ. ನಾನು ನಿಜವಾಗಿ ಹೇಳಿರುವೆನು.

೩೭. ನಿನ್ನ ಬಂಧು ಬಳಗದವರೂ, ಇತರ ಬ್ರಾಹ್ಮಣರೂ ನಿನ್ನನ್ನು ತಾಯಿಯೊಡನೆ ಪರಿಗ್ರಹಿಸುವರು.

೩೮. ನನ್ನ ಅನುಗ್ರಹದಿಂದ ಧನುಷ್ಕೋಟಿಯಲ್ಲಿ ಸ್ನಾನಮಾಡಿದುದರಿಂದ ಶುದ್ಧನಾದ ನೀನು ವಿವಾಹಮಾಡಿಕೊಂಡು ಗೃಹಸ್ಥಧರ್ಮವನ್ನಾಚರಿಸು.

೩೯–೪೦. ನೀನು ಯಾವಾಗಲೂ ಪ್ರಾಣಿಹಿಂಸೆಯನ್ನು ತ್ಯಜಿಸು. ಸನಾತನ ಧರ್ಮವನ್ನು ಸೇವಿಸು. ಸಜ್ಜನರನ್ನು ಭಕ್ತಿಯಿಂದ ಸಹಿತವಾದ ಮನಸ್ಸಿನಿಂದ ಸೇವಿಸು. ಸಂಧ್ಯಾವಂದನೆ ಮೊದಲಾದ ನಿತ್ಯಕರ್ಮಗಳನ್ನು ಬಿಡಬೇಡ, ಇಂದ್ರಿಯಗಳನ್ನು ಜಯಿಸು, ಹರಿಹರರನ್ನು ಪೂಜಿಸು.

೪೧. ಇತರರ ಅಪವಾದವನ್ನು ಹೇಳಬೇಡ. ಯಾರಲ್ಲಿಯೂ ಅಸೂಯೆ ಪಡಬೇಡ. ಮತ್ತೊಬ್ಬನ ಏಳಿಗೆಯನ್ನು ಕಂಡು ವ್ಯರ್ಥವಾಗಿ ವ್ಯಥೆಪಡಬೇಡ.

೪೨. ಪರರ ಪತ್ನಿಯರನ್ನು ತಾಯಿಯರಂತೆ ನೋಡು. ಅಧ್ಯಯನ ಮಾಡಿದ ವೇದಗಳನ್ನೆಲ್ಲ ಒಂದುವೇಳೆಯೂ ಮರೆಯಬೇಡ.

೪೩. ಅತಿಥಿಗಳನ್ನು ಅವಮಾನಮಾಡಬೇಡ. ಪಿತೃಮರಣ ದಿನದಲ್ಲಿ

ಇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಸಂತತಂ ।
ಅವಲೋಕಯ ವೇದಾಂತಂ ವೇದಾಂಗಾನಿ ತಥಾ ಪುನಃ ॥ ೪೪ ॥
ಹರಿಶಂಕರನಾಮಾನಿ ಮುಕ್ತಲಜ್ಜೋಽನುಕೀರ್ತಯ ।
ಜಾಬಾಲೋಪನಿಷನ್ಮಂತ್ರೈಸ್ತ್ರಿಪುಂಡ್ರೋದ್ಧೂಲನಂ ಕುರು ॥ ೪೫ ॥
ರುದ್ರಾಕ್ಷಾನ್ಧಾರಯ ಸದಾ ಶೌಚಾಚಾರಪರೋ ಭವ ।
ತುಲಸ್ಯಾ ಬಿಲ್ವಪತ್ರೈಶ್ಚ ನಾರಾಯಣಹರಾವುಭೌ ॥ ೪೬ ॥
ಏಕಂ ಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾಽರ್ಚಯಸ್ವ ಭೋಃ ।
ತುಲಸೀದಲಸಂಮಿಶ್ರಂ ಸಿಕ್ತಂ ಪಾದೋದಕೇನ ಚ ॥ ೪೭ ॥
ನೈವೇದ್ಯಾನ್ನಂ ಸದಾ ಭುಂಕ್ಷ್ವ ಶಂಭುನಾರಾಯಣಾಗ್ರತಃ ।
ಕುರು ತ್ವಂ ವೈಶ್ವದೇವಾಖ್ಯಂ ಬಲಿಮನ್ನವಿಶುದ್ಧಯೇ ॥ ೪೮ ॥
ಯತೀಶ್ವರಾನ್ಬ್ರಹ್ಮನಿಷ್ಠಾನ್ತರ್ಪಯಾನ್ನೈರ್ಗೃಹಾಽಽಗತಾನ್ ।
ವೃದ್ಧಾನನ್ಯಾನನಾಥಾಂಶ್ಚ ರೋಗಿಣೋ ಬ್ರಹ್ಮಚಾರಿಣಃ ॥ ೪೯ ॥
ಕುರು ತ್ವಂ ಮಾತೃಶುಶ್ರೂಷಾಮೌಪಾಸನಪರೋ ಭವ ।
ಪಂಚಾಕ್ಷರಂ ಮಹಾಮಂತ್ರಂ ಪ್ರಣವೇನ ಸಮನ್ವಿತಂ ॥ ೫೦ ॥

---

ಶ್ರಾದ್ಧವನ್ನು ಮಾಡು. ನೀನು ಸ್ವಪ್ನದಲ್ಲಿಯೂ ಬೇರೆಯವರಿಗೆ ಚಾಡಿ ಹೇಳಬೇಡ.

೪೪. ಯಾವಾಗಲೂ ಇತಿಹಾಸ ಪುರಾಣಗಳನ್ನೂ, ಧರ್ಮಶಾಸ್ತ್ರಗಳನ್ನೂ ವೇದಾಂತವನ್ನೂ, ವೇದಾಂಗಗಳನ್ನೂ ಅವಲೋಕಿಸು.

೪೫. ಹರಿಹರರ ನಾಮಗಳನ್ನು ನಾಚಿಕೆಯಿಲ್ಲದೆ ಹೇಳು. ಜಾಬಾಲೋಪನಿಷತ್ತಿನ ಮಂತ್ರಗಳಿಂದ ತ್ರಿಪುಂಡ್ರವನ್ನು ಧರಿಸು.

೪೬–೪೮. ಯಾವಾಗಲೂ ರುದ್ರಾಕ್ಷಿಗಳನ್ನು ಧರಿಸು. ಶೌಚ ಮತ್ತು ಆಚಾರಗಳಲ್ಲಾಸಕ್ತನಾಗು. ತುಲಸಿಯಿಂದಲೂ, ಬಿಲ್ವಪತ್ರೆಗಳಿಂದಲೂ ಹರಿಹರರನ್ನು ಒಂದುಹೊತ್ತು, ಎರಡುಹೊತ್ತು ಅಥವಾ ಮೂರುಹೊತ್ತು ಪೂಜಿಸು. ತುಲಸೀದಲ ಮಿಶ್ರವಾಗಿಯೂ, ದೇವರ ಪಾದೋದಕದಿಂದ ಪ್ರೋಕ್ಷಿಸಲ್ಪಟ್ಟದ್ದಾಗಿಯೂ ಇರುವ ನೈವೇದ್ಯದ ಅನ್ನವನ್ನು ಯಾವಾಗಲೂ ನಾರಾಯಣಶಂಕರರ ಮುಂದೆ ಭುಂಜಿಸು. ಅನ್ನದ ಶುದ್ಧಿಗಾಗಿ ವೈಶ್ವದೇವ ಬಲಿಹರಣಗಳನ್ನು ಮಾಡು.

೪೯–೫೧. ಮನೆಗೆ ಬಂದ ಬ್ರಹ್ಮಜ್ಞಾನಿಗಳಾದ ಯತೀಶ್ವರರು, ವೃದ್ಧರು, ಅನಾಥರು, ರೋಗಿಗಳು, ಬ್ರಹ್ಮಚಾರಿಗಳು ಇವರನ್ನು ಅನ್ನದಿಂದ ಸಂತೋಷಗೊಳಿಸು. ತಾಯಿಯನ್ನು ಸೇವಿಸು. ಔಪಾಸನದಲ್ಲಿ ನಿರತನಾಗು. ಶುದ್ಧನಾಗಿ ಓಂಕಾರಸಹಿತವಾದ ಪಂಚಾಕ್ಷರ ಮಹಾಮಂತ್ರವನ್ನೂ, ಅಷ್ಟಾಕ್ಷರ

ತಥೈವಾಷ್ಟಾಕ್ಷರಂ ಮಂತ್ರಮನ್ಯಮಂತ್ರಾನಪಿ ದ್ವಿಜ ।
ಜಪ ತ್ವಂ ಪ್ರಯತೋ ಭೂತ್ವಾ ಧ್ಯಾಯನ್ಮಂತ್ರಾಧಿದೇವತಾಃ ॥ ೫೧ ॥
ಏವಮನ್ಯಾಂಸ್ತಥಾ ಧರ್ಮಾನ್ಸ್ಮೃತ್ಯುಕ್ತಾನ್ಸರ್ವದಾ ಕುರು ।
ಏವಂ ಕೃತವತಸ್ತೇ ಸ್ಯಾದ್ದೇಹಾಂತೇ ಮುಕ್ತಿರಪ್ಯಲಂ ॥ ೫೨ ॥
ಇತ್ಯುಕ್ತೋ ವ್ಯಾಸಮುನಿನಾ ದುರ್ವಿನೀತಃ ಪ್ರಣಮ್ಯ ತಂ ।
ತದುಕ್ತಮಖಿಲಂ ಕೃತ್ವಾ ದೇಹಾಂತೇ ಮುಕ್ತಿಮಾಪ್ತವಾನ್ ॥ ೫೩ ॥
ತನ್ಮಾತಾಽಪಿ ಮೃತಾ ಕಾಲೇ ಧನುಷ್ಕೋಟಿನಿಮಜ್ಜನಾತ್ ।
ಅವಾಪ ಪರಮಾಂ ಮುಕ್ತಿಮಪುನರ್ಭವದಾಯಿನೀಂ ॥ ೫೪ ॥

ದುರ್ವಾಸಾ ಉವಾಚ :—

ಏವಂ ತೇ ದುರ್ವಿನೀತಸ್ಯ ತನ್ಮಾತುಶ್ಚ ವಿಮೋಕ್ಷಣಂ ।
ಧನುಷ್ಕೋಟ್ಯಭಿಷೇಕೇಣ ಯಜ್ಞದೇವ ಮಯೇರಿತಂ ॥ ೫೫ ॥
ಪುತ್ರಮೇನಂ ತ್ವಮಪ್ಯಾಶು ಬ್ರಹ್ಮಹತ್ಯಾವಿಶುದ್ಧಯೇ ।
ಸಮಾದಾಯ ವ್ರಜ ಬ್ರಹ್ಮನ್ಧನುಷ್ಕೋಟಿಂ ವಿಮುಕ್ತಿದಾಂ ॥ ೫೬ ॥

ಸಿಂಧುದ್ವೀಪ ಉವಾಚ :—

ಇತಿ ದುರ್ವಾಸಸಾ ಪ್ರೋಕ್ತೋ ಯಜ್ಞದೇವೋ ನಿಜಂ ಸುತಂ ।
ಸಮಾದಾಯ ಯಯೌ ರಾಮಧನುಷ್ಕೋಟಿಂ ವಿಮುಕ್ತಿದಾಂ ॥ ೫೭ ॥

---

ಮಂತ್ರವನ್ನೂ, ಇತರ ಮಂತ್ರಗಳನ್ನೂ, ಮಂತ್ರದ ಅಧಿದೇವತೆಗಳನ್ನೂ ಧ್ಯಾನಿಸುತ್ತ ಜಪಿಸು.

೫೨. ಹೀಗೆಯೇ ಸ್ಮೃತಿವಿಹಿತವಾದ ಇತರ ಧರ್ಮಗಳನ್ನೂ ಯಾವಾಗಲೂ ಅನುಷ್ಠಾನಮಾಡು. ನೀನು ಹೀಗೆ ಮಾಡಿದರೆ ದೇಹಾವಸಾನದಲ್ಲಿ ನಿನಗೆ ಮೋಕ್ಷವೂ ಲಭಿಸುವುದು.

೫೩–೫೪. ವ್ಯಾಸಮುನಿಯು ಹೀಗೆ ಹೇಳಲು ದುರ್ವಿನೀತನು ಅವನನ್ನು ವಂದಿಸಿ ಅವನು ಹೇಳಿದುದನ್ನೆಲ್ಲಮಾಡಿ ದೇಹಾವಸಾನದಲ್ಲಿ ಮೋಕ್ಷವನ್ನು ಪಡೆದನು. ಅವನ ತಾಯಿಯೂ ಮೃತಳಾಗಿ ಧನುಷ್ಕೋಟಿಯಲ್ಲಿ ಮಿಂದಕಾರಣದಿಂದ ಮರಳಿ ಜನ್ಮವನ್ನೀಯದ ಮುಕ್ತಿಯನ್ನು ಹೊಂದಿದಳು.

೫೫. ದುರ್ವಾಸನು ಹೇಳುತ್ತಾನೆ:—ಯಜ್ಞದೇವ! ಹೀಗೆ ಧನುಷ್ಕೋಟಿಯಲ್ಲಿ ಮಿಂದುದರಿಂದ ದುರ್ವಿನೀತನಿಗೂ ಅವನ ತಾಯಿಗೂ ಮೋಕ್ಷವು ಲಭಿಸಿದ ರೀತಿಯನ್ನು ನಿನಗೆ ಹೇಳಿರುವೆನು.

೫೬. ನೀನೂ ಬ್ರಹ್ಮಹತ್ಯೆಯ ಶುದ್ಧಿಗಾಗಿ ಈ ಮಗನನ್ನು ಕರೆದುಕೊಂಡು ಮೋಕ್ಷವನ್ನೀಯುವ ಧನುಷ್ಕೋಟಿಗೆ ತೆರಳು.

೫೭. ಸಿಂಧುದ್ವೀಪನು ಹೇಳುತ್ತಾನೆ:—ಹೀಗೆ ದುರ್ವಾಸನು ಹೇಳಲು ಯಜ್ಞದೇವನು ತನ್ನ ಮಗನನ್ನು ಕರೆದುಕೊಂಡು ಧನುಷ್ಕೋಟಿಗೆ ಹೋದನು.

ಗತ್ವಾ ನಿವಾಸಮಕರೋತ್ಷಣ್ಮಾಸಂ ತತ್ರ ಸ ದ್ವಿಜಃ ।
ಪುತ್ರೇಣ ಸಾಕಂ ನಿಯತೋ ಹೇ ಸೃಗಾಲಪ್ಲವಂಗಮೌ ॥ ೫೮ ॥
ಸ ಸಸ್ನೌ ಚ ಧನುಷ್ಕೋಟೌ ಷಣ್ಮಾಸಂ ವೈ ಸಪುತ್ರಕಃ ।
ಷಣ್ಮಾಸಾಂತೇ ಯಜ್ಞದೇವಂ ಪ್ರಾಹ ವಾಗಶರೀರಿಣೀ ॥ ೫೯ ॥
ವಿಮುಕ್ತಾ ಯಜ್ಞದೇವಸ್ಯ ಬ್ರಹ್ಮಹತ್ಯಾ ಸುತಸ್ಯ ತೇ ।
ಸ್ವರ್ಣಸ್ತೇಯಾತ್ಸುರಾಪಾನಾತ್ಕಿರಾತೀಸಂಗಮಾತ್ತಥಾ ॥ ೬೦ ॥
ಅನ್ಯೇಭ್ಯೋಽಪಿ ಹಿ ಪಾಪೇಭ್ಯೋ ವಿಮುಕ್ತೋಽಯಂ ಸುತಸ್ತವ ।
ಸಂಶಯಂ ಮಾಕುರುಷ್ವ ತ್ವಂ ಯಜ್ಞದೇವ ದ್ವಿಜೋತ್ತಮ ॥ ೬೧ ॥
ಇತ್ಯುಕ್ತ್ವಾ ವಿರರಾಮಾಥ ಸಾ ತು ವಾಗಶರೀರಿಣೀ ।
ತದಾಽಶರೀರಿಣೀವಾಕ್ಯಂ ಯಜ್ಞದೇವಃ ಸ ಶುಶ್ರುವಾನ್ ॥ ೬೨ ॥
ಸಂತುಷ್ಟಃ ಪುತ್ರಸಹಿತೋ ರಾಮನಾಥಂ ನಿಷೇವ್ಯ ಚ ।
ಧನುಷ್ಕೋಟಿಂ ನಮಸ್ಕೃತ್ಯ ಪುತ್ರೇಣ ಸಹಿತಸ್ತದಾ ॥ ೬೩ ॥
ಸ್ವದೇಶಂ ಪ್ರಯಯೌ ಹೃಷ್ಟಃ ಸ್ವಗ್ರಾಮಂ ಸ್ವಗೃಹಂ ತಥಾ ।
ಸ ಪುತ್ರದಾರಃ ಸುಚಿರಂ ಸುಖಮಾಸ್ತೇ ಸುನಿರ್ವೃತಃ ॥ ೬೪ ॥

ಸಿಂಧುದ್ವೀಪ ಉವಾಚ :—

ಗೋಮಾಯುವಾನರಾವೇವಂ ಯುವಯೋಃ ಕಥಿತಂ ಮಯಾ ।
ಯಜ್ಞದೇವಸುತಸ್ಯಾಽಸ್ಯ ಸುಮತೇಃ ಪರಿಮೋಕ್ಷಣಂ ॥ ೬೫ ॥

---

೫೮. ನರಿಕಪಿಗಳೆ! ಆ ಯಜ್ಞದೇವನು ಅಲ್ಲಿ ಆರುತಿಂಗಳು ಮಗನೊಡನೆ ಪರಿಶುದ್ಧನಾಗಿ ವಾಸಿಸಿದನು.

೫೯–೬೧. ಅವನು ಮಗನೊಡನೆ ಆರುತಿಂಗಳು ಧನುಷ್ಕೋಟಿಯಲ್ಲಿ ಮಿಂದನು. ಆರುತಿಂಗಳಾದಮೇಲೆ ಅಶರೀರವಾಣಿಯು ಯಜ್ಞದೇವನನ್ನು ಕುರಿತು ಹೀಗೆಂದಿತು. ದ್ವಿಜವರ್ಯನಾದ ಯಜ್ಞದೇವನೆ! ನಿನ್ನ ಸುತನೀಗ ಬ್ರಹ್ಮಹತ್ಯೆ, ಸ್ವರ್ಣಸ್ತೇಯ, ಸುರಾಪಾನ, ಬೇಡರ ಸ್ತ್ರೀಸಂಗ ಇವುಗಳಿಂದಲೂ, ಇತರ ಪಾಪಗಳಿಂದಲೂ ಮುಕ್ತನಾಗಿರುವನು. ಸಂದೇಹಪಡಬೇಡ.

೬೨. ಆ ಅಶರೀರವಾಣಿಯು ಹೀಗೆಂದು ಸುಮ್ಮನಾಗಲು ಯಜ್ಞದೇವನು ಆ ಅಶರೀರಿಣಿ ವಾಕ್ಯವನ್ನು ಕೇಳಿದನು.

೬೩–೬೪. ಸಂತೋಷಗೊಂಡು ಮಗನೊಡನೆ ರಾಮೇಶ್ವರನನ್ನು ಸೇವಿಸಿ ಧನುಷ್ಕೋಟಿಯನ್ನು ವಂದಿಸಿ ತನ್ನ ದೇಶವನ್ನೂ, ಗ್ರಾಮವನ್ನೂ, ಮನೆಯನ್ನೂ ಸೇರಿ ಸತೀಪುತ್ರರೊಡನೆ ಅತಿಸುಖದಿಂದ ಬಹಳಕಾಲ ವಾಸಮಾಡುತ್ತಿದ್ದನು.

೬೫–೬೬. ಸಿಂಧುದ್ವೀಪನು ಹೇಳುತ್ತಾನೆ:—ನರಿಕಪಿಗಳೆ! ನಾನು ನಿಮಗೆ ಹೀಗೆ ಯಜ್ಞದೇವನ ಮಗನಾದ ಸುಮತಿಯು ಧನುಷ್ಕೋಟಿಯಲ್ಲಿ ಸ್ನಾನ

ಪಾತಕೇಭ್ಯೋ ಮಹದ್ಭ್ಯಶ್ಚ ಧನುಷ್ಕೋಟೌ ನಿಮಜ್ಜನಾತ್ ।
ಯುವಾಮತೋ ಧನುಷ್ಕೋಟಿಂ ಗಚ್ಛತಂ ಪಾಪಶುದ್ಧಯೇ ।
ನಾಽನ್ಯಥಾ ಪಾಪಶುದ್ಧಿಃ ಸ್ಯಾತ್ಪ್ರಾಯಶ್ಚಿತ್ತಾಽಯುತೈರಪಿ ॥ ೬೬ ॥

ಶ್ರೀ ಸೂತ ಉವಾಚಃ—

ಸಿಂಧುದ್ವೀಪಸ್ಯ ವಚನಮಿತಿ ಶ್ರುತ್ವಾ ದ್ವಿಜೋತ್ತಮಾಃ ॥ ೬೭ ॥
ಸೃಗಾಲವಾನರಾವಾಶು ವಿಲಂಘಿತಮಹಾಪಥೌ ।
ಧನುಷ್ಕೋಟಿಂ ಪ್ರಯಾಸೇನ ಗತ್ವಾ ಸ್ನಾತ್ವಾ ಚ ತಜ್ಜಲೇ ॥ ೬೮ ॥
ವಿಮುಕ್ತೌ ಸರ್ವಪಾಪೇಭ್ಯೋ ವಿಮಾನವರಸಂಸ್ಥಿತೌ ।
ದೇವೈಃ ಕುಸುಮವರ್ಷೇಣ ಕೀರ್ಯಮಾಣೌ ಸುತೇಜಸೌ ॥ ೬೯ ॥
ಹಾರಕೇಯೂರಮುಕುಟಕಟಕಾದಿವಿಭೂಷಿತೌ ।
ದೇವಸ್ತ್ರೀಧೂಯಮಾನಾಭ್ಯಾಂ ಚಾಮರಾಭ್ಯಾಂ ವಿರಾಜಿತೌ ।
ಗತ್ವಾ ದೇವಪುರೀಂ ರಮ್ಯಾಮಿಂದ್ರಸ್ಯಾಽರ್ಧಾಸನಂ ಗತೌ ॥ ೭೦ ॥

ಶ್ರೀ ಸೂತ ಉವಾಚ :—

ಯುಷ್ಮಾಕಮೇವಂ ಕಥಿತಂ ಸೃಗಾಲಸ್ಯ ಕಪೇರಪಿ ॥ ೭೧ ॥
ಪಾಪಾದ್ವಿಮೋಕ್ಷಣಂ ವಿಪ್ರಾ ಧನುಷ್ಕೋಟೌ ನಿಮಜ್ಜನಾತ್ ।
ಭಕ್ತ್ಯಾ ಯ ಇಮಮಧ್ಯಾಯಂ ಶೃಣೋತಿ ಪಠತೇಽಪಿ ವಾ ॥ ೭೨ ॥

---

ಮಾಡಿದ್ದರಿಂದ ಮಹಾಪಾಪಗಳಿಂದ ಮುಕ್ತನಾದುದನ್ನು ಹೇಳಿರುವೆನು. ಆದ್ದರಿಂದ ನೀವು ಪಾಪದ ಶುದ್ಧಿಗಾಗಿ ಆ ಧನುಷ್ಕೋಟಿಗೆ ಹೋಗಿ. ಬೇರೆ ಹತ್ತುಸಾವಿರ ಪ್ರಾಯಶ್ಚಿತ್ತಗಳಿಂದಲೂ ಪಾಪವು ನಾಶವಾಗಲಾರದು.

೬೭–೭೦. ಶ್ರೀ ಸೂತನು ಹೇಳುತ್ತಾನೆ:—ಬ್ರಾಹ್ಮಣರೆ! ಸಿಂಧುದ್ವೀಪನ ಈ ನುಡಿಯನ್ನು ಕೇಳಿ ಆ ನರಿಕಪಿಗಳು ಬಹುದೂರದಾರಿಯನ್ನು ನಡೆದು ಕಷ್ಟದಿಂದ ಧನುಷ್ಕೋಟಿಯನ್ನು ಸೇರಿ ಅದರ ನೀರಿನಲ್ಲಿ ಮಿಂದು ಸಕಲಪಾಪಗಳಿಂದ ಮುಕ್ತರಾದರು. ಬಳಿಕ ಉತ್ತಮ ವಿಮಾನವನ್ನೇರಿ ದೇವತೆಗಳಿಂದ ಹೂಮಳೆ ಸುರಿಸಲ್ಪಟ್ಟವರೂ, ಅತಿತೇಜಸ್ವಿಗಳೂ, ಹಾರ, ಭುಜಕೀರ್ತಿ, ಕಿರೀಟ, ಬಳೆ ಮೊದಲಾದುವುಗಳಿಂದ ಅಲಂಕರಿಸಲ್ಪಟ್ಟವರೂ, ಸುರಾಂಗನೆಯರು ಬೀಸುತ್ತಿರುವ ಚಾಮರಗಳಿಂದ ಪ್ರಕಾಶಮಾನರೂ ಆಗಿ ರಮ್ಯವಾದ ಅಮರಾವತಿಯನ್ನು ಸೇರಿ ಇಂದ್ರನ ಅರ್ಧಾಸನವನ್ನು ಪಡೆದರು.

೭೧–೭೩. ವಿಪ್ರರೆ! ನರಿಕಪಿಗಳು ಧನುಷ್ಕೋಟಿಯಲ್ಲಿ ಸ್ನಾನಮಾಡಿದುದರಿಂದ ಪಾಪಮುಕ್ತರಾದುದನ್ನು ನಿಮಗೆ ಹೇಳಿರುವೆನು. ಮಾನವನು ಭಕ್ತಿಯಿಂದ ಈ ಅಧ್ಯಾಯವನ್ನು ಕೇಳಿದರೆ ಮತ್ತು ಪಠಿಸಿದರೆ ಧನುಷ್ಕೋಟಿಸ್ನಾನದ ಫಲ

ಸ್ನಾನಜಂ ಫಲಮಾಪ್ನೋತಿ ಧನುಷ್ಕೋಟೌ ಸ ಮಾನವಃ ।
ಯೋಗಿವೃಂದೈರಸುಲಭಾಂ ಮುಕ್ತಿಮಪ್ಯಾಶು ವಿಂದತಿ ॥ ೭೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಧನುಷ್ಕೋಟಿ ಪ್ರಶಂಸಾಯಾಂ— ಸೃಗಾಲ ವಾನರ ವಿಮೋಕ್ಷಣವರ್ಣನಂ" ನಾಮ ಪಂಚತ್ರಿಂಶೋಽಧ್ಯಾಯಃ

---

ವನ್ನು ಪಡೆಯುವನು. ಯೋಗಿಗಳಿಗೂ ದುರ್ಲಭವಾದ ಮೋಕ್ಷವನ್ನೂ ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಧನುಷ್ಕೋಟಿಪ್ರಶಂಸೆಯಲ್ಲಿ ಸೃಗಾಲವಾನರ ವಿಮೋಕ್ಷಣ ವರ್ಣನ"ವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ತ್ರಿಂಶೋಽಧ್ಯಾಯಃ

### ದುರಾಚಾರ ಸಂಸರ್ಗದೋಷಶಾಂತಿವರ್ಣನಂ

ಶ್ರೀ ಸೂತ ಉವಾಚ :—

ಧನುಷ್ಕೋಟೇಸ್ತು ಮಾಹಾತ್ಮ್ಯಂ ಭೂಯೋಽಪಿ ಪ್ರಬ್ರವೀಮ್ಯಹಂ ।
ದುರಾಚಾರಾಽಭಿಧೋ ಯತ್ರ ಸ್ನಾತ್ವಾ ಮುಕ್ತೋಽಭವದ್ದ್ವಿಜಾಃ ॥ ೧ ॥

ಮುನಯ ಊಚುಃ :—

ದುರಾಚಾರಾಽಭಿಧಃ ಕೋಽಸೌ ಸೂತ ತತ್ವಾರ್ಥಕೋವಿದ ।
ಕಿಂ ಚ ಪಾಪಂ ಕೃತಂ ತೇನ ದುರಾಚಾರೇಣ ವೈ ಮುನೇ ॥ ೨ ॥
ಕಥಂ ವಾ ಪಾತಕಾನ್ಮುಕ್ತೋ ಧನುಷ್ಕೋಟೌ ನಿಮಜ್ಜನಾತ್ ।
ಏತಚ್ಛುಶ್ರೂಷಮಾಣಾನಾಂ ವಿಸ್ತರಾದ್ವದ ನೋ ಮುನೇ ॥ ೩ ॥

ಶ್ರೀ ಸೂತ ಉವಾಚ :—

ಮುನಯಃ ಶ್ರೂಯತಾಂ ತಸ್ಯ ದುರಾಚಾರಸ್ಯ ಪಾತಕಂ ।
ಸ್ನಾನೇನ ಧನುಷಃ ಕೋಟೌ ಯಥಾ ಮುಕ್ತಶ್ಚ ಪಾತಕಾತ್ ॥ ೪ ॥
ದುರಾಚಾರಾಽಭಿಧೋ ವಿಪ್ರೋ ಗೌತಮೀತೀರಮಾಶ್ರಿತಃ ।
ಕಶ್ಚಿದಸ್ತಿ ದ್ವಿಜಾಃ ಪಾಪೀ ಕ್ರೂರಕರ್ಮರತಃ ಸದಾ ॥ ೫ ॥

---

### ಕನ್ನಡದ ಅನುವಾದ

#### ದುರಾಚಾರ ಸಂಸರ್ಗದೋಷ ಶಾಂತಿವರ್ಣನ

೧. ಶ್ರೀ ಸೂತನು ಹೇಳುತ್ತಾನೆ:—ಬ್ರಾಹ್ಮಣರೆ! ಸ್ನಾನದಿಂದ ದುರಾಚಾರನೆಂಬ ಬ್ರಾಹ್ಮಣನ ಪಾಪವನ್ನು ಪರಿಹರಿಸಿದ ಧನುಷ್ಕೋಟಿಯ ಮಾಹಾತ್ಮ್ಯೆಯನ್ನು ತಿರುಗಿ ಹೇಳುವೆನು.

೨. ಮುನಿಗಳು ಹೇಳುತ್ತಾರೆ:—ತತ್ವಾರ್ಥವನ್ನರಿತ ಸೂತನೆ! ಈ ದುರಾಚಾರನಾರು? ಇವನೆಸಗಿದ ಪಾಪವಾವುದು?

೩. ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದ ಹೇಗೆ ಪಾಪಮುಕ್ತನಾದನು? ಮುನಿಯೆ! ಇದನ್ನೆಲ್ಲ ಕೇಳಬಯಸುವ ನಮಗೆ ವಿಸ್ತಾರವಾಗಿ ಹೇಳು.

೪. ಶ್ರೀ ಸೂತನು ಹೇಳುತ್ತಾನೆ:—ಮುನಿಗಳೆ! ಆ ದುರಾಚಾರನ ಪಾಪವನ್ನೂ, ಅವನು ಧನುಷ್ಕೋಟಿಯಲ್ಲಿ ಸ್ನಾನಮಾಡಿದುದರಿಂದ ಪಾಪವು ಪರಿಹಾರವಾದ ಬಗೆಯನ್ನೂ ಕೇಳಿರಿ.

೫. ಬ್ರಾಹ್ಮಣರೆ! ಗೌತಮೀನದಿಯ ದಡದಲ್ಲಿ ಯಾವಾಗಲೂ ಕಠಿನಕರ್ಮದಲ್ಲಾಸಕ್ತನಾದ ಓರ್ವ ದುರಾಚಾರನೆಂಬ ಬ್ರಾಹ್ಮಣನಿದ್ದನು.

ಬ್ರಹ್ಮಘ್ನೈಶ್ಚ ಸುರಾಪೈಶ್ಚ ಸ್ತೇಯಿಭಿರ್ಗುರುತಲ್ಪಗೈಃ ।
ಸದಾ ಸಂಸರ್ಗದುಷ್ಟೋಽಸೌ ತೈಃ ಸಾಕಂ ನ್ಯವಸದ್ದ್ವಿಜಾಃ ॥ ೬ ॥
ಮಹಾಪಾತಕಿಸಂಸರ್ಗದೋಷೇಣಾಽಸ್ಯ ದ್ವಿಜಸ್ಯ ವೈ ।
ಬ್ರಾಹ್ಮಣ್ಯಂ ಸಕಲಂ ನಷ್ಟಂ ನಿಃಶೇಷೇಣ ದ್ವಿಜೋತ್ತಮಾಃ ॥ ೭ ॥
ಮಹಾಪಾತಕಿಭಿಃ ಸಾರ್ಧಂ ದಿನಮೇಕಂ ತು ಯೋ ದ್ವಿಜಃ ।
ನಿವಸೇತ್ಸಾದರಂ ತಸ್ಯ ತತ್ಕ್ಷಣಾದ್ವೈ ದ್ವಿಜನ್ಮನಃ ॥ ೮ ॥
ಬ್ರಾಹ್ಮಣ್ಯಸ್ಯ ತುರೀಯೋಽಂಶೋ ನಶ್ಯತ್ಯೇವ ನ ಸಂಶಯಃ ।
ದ್ವಿದಿನಂ ಸೇವನಾತ್ಸ್ಪರ್ಶಾದ್ದರ್ಶನಾಚ್ಛಯನಾತ್ತಥಾ ॥ ೯ ॥
ಭೋಜನಾತ್ಸಹಪಂಕ್ತೌ ಚ ಮಹಾಪಾತಕಿಭಿರ್ದ್ವಿಜಾಃ ।
ದ್ವಿತೀಯಭಾಗೋ ನಶ್ಯೇತ ಬ್ರಾಹ್ಮಣಸ್ಯ ನ ಸಂಶಯಃ ॥ ೧೦ ॥
ತ್ರಿದಿನಾಚ್ಚ ತೃತೀಯೋಽಂಶೋ ನಶ್ಯತ್ಯೇವ ನ ಸಂಶಯಃ ।
ಚತುರ್ದಿನಾಚ್ಚತುರ್ಥಾಂಽಶೋ ವಿಲಯಂ ಯಾತಿ ಹಿ ಧ್ರುವಂ ॥ ೧೧ ॥
ಅತಃ ಪರಂ ತು ತೈಃ ಸಾಕಂ ಶಯನಾಸನಭೋಜನೈಃ ।
ತತ್ತುಲ್ಯಪಾತಕೀ ಭೂಯಾನ್ಮಹಾಪಾತಕಸಂಭವಾತ್ ॥ ೧೨ ॥
ತೇನ ಬ್ರಾಹ್ಮಣ್ಯಹೀನೋಽಯಂ ದುರಾಚಾರಾಽಭಿಧೋ ದ್ವಿಜಾಃ ।
ಗ್ರಸ್ತೋಽಭವದ್ಭೀಷಣೇನ ವೇತಾಲೇನ ಬಲೀಯಸಾ ॥ ೧೩ ॥

---

೬. ಇವನು ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನೀಗಮನ ಮಾಡಿದವರೊಡನೆ ಸೇರಿ ದುಷ್ಟನಾಗಿ ವಾಸಮಾಡುತ್ತಿದ್ದನು.

೭–೧೦. ಮಹಾ ಪಾತಕಿಗಳ ಸಂಬಂಧದಿಂದ ಇವನ ಬ್ರಾಹ್ಮಣ್ಯವೆಲ್ಲ ಹಾಳಾಯಿತು. ಬ್ರಾಹ್ಮಣನು ಮಹಾ ಪಾತಕಿಗಳೊಡನೆ ಪ್ರೀತಿಯಿಂದ ಒಂದು ದಿನ ವಾಸಮಾಡಿದರೆ ಕೂಡಲೆ ಅವನ ಬ್ರಾಹ್ಮಣ್ಯದ ನಾಲ್ಕನೆ ಒಂದಂಶವು ನಿಜವಾಗಿಯೂ ಹಾಳಾಗುವುದು. ಎರಡು ದಿವಸ ಮಹಾ ಪಾತಕಿಗಳ ಸೇವನೆ ಯಿಂದಲೂ, ಸ್ಪರ್ಶದಿಂದಲೂ, ದರ್ಶನದಿಂದಲೂ, ಒಂದೇ ಪಂಕ್ತಿಯಲ್ಲಿ ಭೋಜನ ಮಾಡುವುದರಿಂದಲೂ ಬ್ರಾಹ್ಮಣ್ಯದ ಎರಡನೆ ಭಾಗವು ಹಾಳಾದೀತು.

೧೧. ಮೂರು ದಿನಗಳಿಂದ ಬ್ರಾಹ್ಮಣ್ಯದ ಮೂರನೆ ಅಂಶವೂ, ನಾಲ್ಕು ದಿನಗಳಿಂದ ನಾಲ್ಕನೆ ಭಾಗವೂ ಹಾಳಾಗುವುದು.

೧೨. ಅದಕ್ಕಿಂತ ಹೆಚ್ಚು ದಿನಗಳು ಪಾತಕಿಯೊಡನೆ ಶಯನ, ಆಸನ, ಭೋಜನ ಇವುಗಳನ್ನು ಮಾಡುವುದರಿಂದ ಅತಿ ಪಾಪವು ಸಂಭವಿಸಿ ಅವನಂತೆಯೇ ಪಾಪಿಯಾಗುವನು.

೧೩. ಆದರಿಂದ ಬ್ರಾಹ್ಮಣ್ಯವನ್ನು ಕಳೆದುಕೊಂಡ ಈ ದುರಾಚಾರನು ಭಯಂಕರವೂ, ಬಲಿಷ್ಠವೂ ಆದ ಬೇತಾಳದಿಂದ ಹಿಡಿಯಲ್ಪಟ್ಟನು.

ಅಸೌ ಪರವಶಸ್ತೇನ ವೇತಾಲೇನಾಽತಿಪೀಡಿತಃ ।
ದೇಶಾದ್ದೇಶಂ ಭ್ರಮನ್ವಿಪ್ರಾ ವನಾಚ್ಚೈವ ವನಾಂತರಂ ॥ ೧೪ ॥
ಪೂರ್ವಪುಣ್ಯವಿಪಾಕೇನ ದೈವಯೋಗೇನ ಸ ದ್ವಿಜಃ ।
ರಾಮಚಂದ್ರಧನುಷ್ಕೋಟಿಂ ಮಹಾಪಾತಕನಾಶಿನೀಂ ॥ ೧೫ ॥
ಅನುದ್ರುತಃ ಪಿಶಾಚೇನ ತೇನಾವಿಷ್ಟೋ ಯಯೌ ದ್ವಿಜಾಃ ।
ನ್ಯಮಜ್ಜಯತ್ಸವೇತಾಲೋ ಧನುಷ್ಕೋಟಿಜಲೇ ತ್ವಮುಂ ॥ ೧೬ ॥
ಧನುಷ್ಕೋಟಿಜಲೇ ಸೋಽಯಂ ವೇತಾಲೇನ ಪ್ರವೇಶಿತಃ ।
ಉದತಿಷ್ಠತ್ಕ್ಷಣಾದೇವ ವೇತಾಲೇನ ವಿಮೋಚಿತಃ ॥ ೧೭ ॥
ಉತ್ಥಿತೋಽಸೌ ದ್ವಿಜೋ ವಿಪ್ರಾ ಧನುಷ್ಕೋಟಿಜಲಾತ್ತದಾ ।
ಸ್ವಸ್ಥೋ ವ್ಯಚಿಂತಯತ್ಕೋಽಯಂ ದೇಶೋ ಜಲಧಿತೀರತಃ ॥ ೧೮ ॥
ಕಥಂ ಮಯಾಗತಮಿಹ ಗೌತಮೀತೀರವಾಸಿನಾ ।
ಇತಿ ಚಿಂತಾಕುಲಃ ಸೋಽಯಂ ಧನುಷ್ಕೋಟಿನಿವಾಸಿನಂ ॥ ೧೯ ॥
ದತ್ತಾತ್ರೇಯಂ ಮಹಾತ್ಮಾನಂ ಯೋಗಿಪ್ರವರಮುತ್ತಮಂ ।
ಸಮಾಗಮ್ಯ ಪ್ರಣಮ್ಯಾಽಸೌ ದುರಾಚಾರೋಽಭ್ಯಭಾಷತ ॥ ೨೦ ॥
ನ ಜಾನೇ ಭಗವನ್ದೇಶಃ ಕತಮೋಽಯಂ ವದಾಽಧುನಾ ।
ಗೌತಮೀತೀರನಿಲಯೋ ದುರಾಚಾರಾಽಭಿಧೋ ಹ್ಯಹಂ ॥ ೨೧ ॥

---

೧೪–೧೬. ವಿಪ್ರರೆ! ಆ ಬೇತಾಳದಿಂದ ಪೀಡಿಸಲ್ಪಟ್ಟ ಈ ದುರಾಚಾರನು ದೇಶದಿಂದ ದೇಶಕ್ಕೂ, ಕಾಡಿನಿಂದ ಕಾಡಿಗೂ ಹೋಗುತ್ತ ಹಿಂದಿನ ಪುಣ್ಯದ ಪರಿಣಾಮದಿಂದ ಮಹಾಪಾತಕವನ್ನು ಪರಿಹರಿಸುವ ಧನುಷ್ಕೋಟಿಗೆ ಪಿಶಾಚದಿಂದ ಹಿಂಬಾಲಿಸಲ್ಪಡುತ್ತ ಹೋದನು. ಆಗ ಆ ಪಿಶಾಚವು ಇವನನ್ನು ಆ ಧನುಷ್ಕೋಟಿಯ ನೀರಿನಲ್ಲಿ ಮುಳುಗಿಸಿತು.

೧೭. ಪಿಶಾಚದೊಡನೆ ಧನುಷ್ಕೋಟಿಯ ನೀರಿನಲ್ಲಿ ಮುಳುಗಿದ ಈ ದುರಾಚಾರನು ಕೂಡಲೆ ಅದರಿಂದ ಮುಕ್ತನಾಗಿ ಮೇಲಕ್ಕೆದ್ದನು.

೧೮. ಹೀಗೆ ಧನುಷ್ಕೋಟಿಯ ನೀರಿನಿಂದ ಮೇಲಕ್ಕೆದ್ದ ಇವನು ಸುಖಚಿತ್ತನಾಗಿ ಸಮುದ್ರದ ದಡದಲ್ಲಿರುವ ಈ ದೇಶವು ಯಾವುದೆಂದು ಚಿಂತಿಸಿದನು.

೧೯–೨೦. ಗೌತಮೀತೀರದಲ್ಲಿ ವಾಸಿಸುತ್ತಿದ್ದ ನಾನಿಲ್ಲಿಗೆ ಹೇಗೆ ಬಂದೆನು? ಎಂದು ಚಿಂತಾಕ್ರಾಂತನಾದ ಇವನು ಧನುಷ್ಕೋಟಿಯಲ್ಲಿ ನೆಲೆಸಿದ್ದ ದತ್ತಾತ್ರೇಯನೆಂಬ ಯೋಗಿವರ್ಯನನ್ನು ಹೊಂದಿ ನಮಸ್ಕರಿಸಿ ಇಂತೆಂದನು.

೨೧. "ಪೂಜ್ಯನೆ! ಈ ದೇಶವಾವುದು? ಹೇಳು. ನನಗೆ ತಿಳಿಯದು. ನಾನು ಗೌತಮೀತೀರನಿವಾಸಿಯಾದ ದುರಾಚಾರನೆಂಬವನು.

ಕೃಪಯಾ ಬ್ರೂಹಿ ಮೇ ಬ್ರಹ್ಮನ್ಮಯಾಽತ್ರ ಕಥಮಾಗತಂ ।
ಇತಿ ಪೃಷ್ಟೋ ಮುನಿಸ್ತೇನ ದುರಾಚಾರೇಣ ಸುವ್ರತಃ ॥ ೨೨ ॥
ಧ್ಯಾತ್ವಾ ಮುಹೂರ್ತಮವದದ್ದುರಾಚಾರಂ ಘೃಣಾನಿಧಿಃ ।
ಮಹಾಪಾತಕಿಸಂಸರ್ಗೇ ದುರಾಚಾರ ಕೃತೇ ಪುರಾ ॥ ೨೩ ॥
ಬ್ರಾಹ್ಮಣ್ಯಂ ನಷ್ಟಮಭವದ್ವೇತಾಲಸ್ತ್ವಾಂ ತತೋಽಗ್ರಹೀತ್ ।
ತೇನಾವಿಷ್ಟಸ್ತ್ವಮಾಯಾತೋ ವಿವಶೋಽತ್ರ ವಿಮೂಢಧೀಃ ॥ ೨೪ ॥
ನ್ಯಮಜ್ಜಯತ್ತ್ವಾಂ ವೇತಾಲೋ ಧನುಷ್ಕೋಟಿಜಲೇಽತ್ರ ತು ।
ತತ್ರ ಮಜ್ಜನಮಾತ್ರೇಣ ವಿಮುಕ್ತಃ ಪಾತಕಾದ್ಭವಾನ್ ॥ ೨೫ ॥
ಧನುಷ್ಕೋಟೌ ತು ಯೇ ಸ್ನಾನಂ ಪುಣ್ಯೇ ಕುರ್ವಂತಿ ಮಾನವಾಃ ।
ತೇಷಾಂ ನಶ್ಯಂತಿ ವೈ ಸತ್ಯಂ ಪಂಚಪಾತಕಸಂಚಯಾಃ ॥ ೨೬ ॥
ರಾಮಚಂದ್ರಧನುಷ್ಕೋಟಾವತ್ರ ಮಜ್ಜನಮಾತ್ರತಃ ।
ಮಹಾಪಾತಕಿಸಂಸರ್ಗದೋಷಂ ತೇ ವಿಲಯಂ ಯಯೌ ॥ ೨೭ ॥
ತನ್ನಾಶಾದೇವ ವೇತಾಲಸ್ತ್ವಾಂ ಮುಕ್ತ್ವಾ ವಿಲಯಂ ಗತಃ ।
ತ್ವಾಮಗ್ರಹೀದ್ಯೋ ವೇತಾಲಃ ಪುರಾಽಯಂ ಬ್ರಾಹ್ಮಣೋಽಭವತ್॥ ೨೮ ॥
ಸೋಽಯಂ ಭಾದ್ರಪದೇ ಮಾಸೇ ಕೃಷ್ಣಪಕ್ಷೇ ಮಹಾಲಯಂ ।
ಪಾರ್ವಣೇನ ವಿಧಾನೇನ ಪಿತೃಣಾಂ ನಾಽಕರೋನ್ಮುದಾ ॥ ೨೯ ॥

---

೨೨–೨೪. ಮುನಿವರ್ಯನೆ! ನಾನಿಲ್ಲಿಗೆ ಹೇಗೆ ಬಂದೆನೆಂಬುದನ್ನು ದಯೆಯಿಟ್ಟು ತಿಳಿಸು.'' ಹೀಗೆ ದುರಾಚಾರನು ಕೇಳಲು ದಯಾಳುವಾದ ಮುನಿಯು ಸ್ವಲ್ಪ ಹೊತ್ತು ಆಲೋಚಿಸಿ ಇಂತೆಂದನು. ನೀನು ಮಹಾ ಪಾತಕಿಗಳ ಸಹವಾಸವನ್ನು ಮಾಡಿದುದರಿಂದ ನಿನ್ನ ಬ್ರಾಹ್ಮಣ್ಯವು ನಷ್ಟವಾಯಿತು. ಆದರಿಂದ ಪಿಶಾಚವು ನಿನ್ನನ್ನು ಹಿಡಿದುಕೊಂಡಿತು. ಪಿಶಾಚದ ಆವೇಶದಿಂದ ಮೂಢನಾದ ನೀನು ಪರಾಧೀನನಾಗಿ ಇಲ್ಲಿಗೆ ಬಂದೆ.

೨೫. ಬೇತಾಳವು ಈ ಧನುಷ್ಕೋಟಿಯ ನೀರಿನಲ್ಲಿ ನಿನ್ನನ್ನು ಮುಳುಗಿಸಿತು. ಅಲ್ಲಿ ಮುಳುಗುವುದರಿಂದಲೇ ನೀನು ಪಾಪಮುಕ್ತನಾದೆ.

೨೬. ಪವಿತ್ರವಾದ ಧನುಷ್ಕೋಟಿಯಲ್ಲಿ ಮಿಂದ ಮಾನವರ ಪಂಚಮಹಾಪಾತಕಗಳು ನಿಜವಾಗಿಯೂ ನಾಶವಾಗುವುವು.

೨೭. ಈ ರಾಮಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದಲೆ ನಿನ್ನ ಮಹಾ ಪಾತಕಿ ಸಂಬಂಧದ ದೋಷವು ಪರಿಹಾರವಾಯಿತು.

೨೮. ಆ ಪಾಪವು ನಾಶವಾದ್ದರಿಂದಲೇ ಪಿಶಾಚವು ನಿನ್ನನ್ನು ಬಿಟ್ಟು ಹೋಯಿತು. ನಿನ್ನನ್ನು ಹಿಡಿದ ಬೇತಾಳವು ಹಿಂದೆ ಬ್ರಾಹ್ಮಣನಾಗಿದ್ದಿತು.

೨೯. ಆ ಬ್ರಾಹ್ಮಣನು ಭಾದ್ರಪದ ಕೃಷ್ಣಪಕ್ಷದಲ್ಲಿ ಪಿತೃಗಳಿಗೆ ಪಾರ್ವಣ ಕ್ರಮದಿಂದ ಸಂತೋಷದಿಂದ ಮಹಾಲಯವನ್ನು ಮಾಡಲಿಲ್ಲ.

ತೇನ ಸ್ವಪಿತೃಭಿಃ ಶಪ್ತೋ ವೇತಾಲತ್ವಮುಗಾದಯಂ ।
ಸೋಽಪಿ ಚಾಸ್ಯ ಧನುಷ್ಕೋಟೇರವಲೋಕನಮಾತ್ರತಃ ॥ ೩೦ ॥
ವೇತಾಲತ್ವಂ ವಿಹಾಯೇಹ ವಿಷ್ಣುಲೋಕಮವಾಪ್ತವಾನ್ ।
ಅತೋ ಭಾದ್ರಪದೇ ಮಾಸೇ ಕೃಷ್ಣಪಕ್ಷೇ ಮಹಾಲಯಂ ॥ ೩೧ ॥
ಉದ್ದಿಶ್ಯ ಸ್ವಪಿತೄನ್ಯೇ ತು ನ ಕುರ್ವಂತ್ಯತಿಲೋಭತಃ ।
ಮಹಾಲೋಭಯುತಾಸ್ತೇಽದ್ಧಾ ವೇತಾಲಾಃ ಸ್ಯುರ್ನ ಸಂಶಯಃ ॥ ೩೨ ॥
ತಸ್ಮಾದ್ಭಾದ್ರಪದೇ ಮಾಸೇ ಕೃಷ್ಣಪಕ್ಷೇ ಮಹಾಲಯಂ ।
ಪಿತೄನುದ್ದಿಶ್ಯ ಭಕ್ತ್ಯಾ ಯೇ ಬ್ರಾಹ್ಮಣಾನ್ವೇದಪಾರಗಾನ್ ॥ ೩೩ ॥
ಭೋಜಯೇಯುರ್ಮಹಾಽನ್ನೇನ ನ ತೇ ವಿಂದಂತಿ ದುರ್ಗತಿಂ ।
ಯಸ್ತು ಭಾದ್ರಪದೇ ಮಾಸೇ ಕೃಷ್ಣಪಕ್ಷೇ ಮಹಾಲಯಂ ॥ ೩೪ ॥
ಸ್ವಶಕ್ತ್ಯನುಗುಣಂ ವಿಪ್ರಮೇಕಂ ದ್ವೌ ತ್ರೀನಕಿಂಚನಃ ।
ಭೋಜಯೇನ್ನ ಹಿ ದೌರ್ಗತ್ಯಂ ಭವೇದಸ್ಯ ಕದಾಚನ ॥ ೩೫ ॥
ಅಯಂ ಭಾದ್ರಪದೇ ಮಾಸೇ ಪಿತೄಣಾಮನುಪಾಸನಾತ್ ।
ಯಯೌ ವೇತಾಲತಾಂ ವಿಪ್ರೋ ಯಸ್ತ್ವಾಂ ಜಗ್ರಾಹ ಪಾಪಿನಂ ॥ ೩೬ ॥
ಕಾಲೋ ಭಾದ್ರಪದಂ ಮಾಸಮಾರಭ್ಯ ವೃಶ್ಚಿಕಾಽವಧಿ ।
ಮಹಾಲಯಸ್ಯ ಕಥಿತೋ ಮುನಿಭಿಸ್ತತ್ತ್ವದರ್ಶಿಭಿಃ ॥ ೩೭ ॥

---

೩೦–೩೨. ಆದರಿಂದ ಈ ಬ್ರಾಹ್ಮಣನು ಪಿತೃಗಳ ಶಾಪದಿಂದ ಪಿಶಾಚನಾದನು. ಇವನೂ ಈ ಧನುಷ್ಕೋಟಿಯನ್ನು ನೋಡುವುದರಿಂದಲೆ ಪಿಶಾಚರೂಪವನ್ನು ಬಿಟ್ಟು ವಿಷ್ಣುಲೋಕವನ್ನು ಸೇರಿದನು. ಆದ್ದರಿಂದ ಭಾದ್ರಪದ ಕೃಷ್ಣಪಕ್ಷದಲ್ಲಿ ಪಿತೃಗಳನ್ನುದ್ದೇಶಿಸಿ ಮಹಾಲಯವನ್ನು ಮಾಡದ ಲೋಭಿಗಳು ನಿಶ್ಚಯವಾಗಿಯೂ ಪಿಶಾಚಗಳಾಗುವರು.

೩೩–೩೫. ಆದ್ದರಿಂದ ಭಾದ್ರಪದಮಾಸದ ಕೃಷ್ಣಪಕ್ಷದಲ್ಲಿ ಪಿತೃಗಳನ್ನುದ್ದೇಶಿಸಿ ಮಹಾಲಯವನ್ನು ಮಾಡಿ ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರನ್ನು ಭೋಜನಮಾಡಿಸಿದ ಮಾನವರು ದುರ್ಗತಿಯನ್ನು ಹೊಂದುವುದಿಲ್ಲ. ಬಡವನು ಭಾದ್ರಪದಮಾಸದ ಕೃಷ್ಣಪಕ್ಷದಲ್ಲಿ ಮಹಾಲಯವನ್ನು ಮಾಡಿ ತನ್ನ ಶಕ್ತ್ಯನುಸಾರ ಒಬ್ಬನನ್ನಾಗಲಿ, ಇಬ್ಬರನ್ನಾಗಲಿ, ಮೂವರನ್ನಾಗಲಿ ಬ್ರಾಹ್ಮಣರನ್ನು ಭೋಜನಮಾಡಿಸಿದರೆ ಅವನು ದುರ್ಗತಿಯನ್ನು ಹೊಂದುವುದಿಲ್ಲ.

೩೬. ಈ ಬ್ರಾಹ್ಮಣನು ಭಾದ್ರಪದಮಾಸದಲ್ಲಿ ಪಿತೃಗಳನ್ನು ಸೇವಿಸದೆ ಇದ್ದುದರಿಂದ ಪಿಶಾಚನಾಗಿ ಪಾಪಿಯಾದ ನಿನ್ನನ್ನು ಹಿಡಿದುಕೊಂಡನು.

೩೭. ತತ್ವಜ್ಞಾನಿಗಳಾದ ಮುನಿಗಳು ಭಾದ್ರಪದ ಮಾಸವನ್ನಾರಂಭಿಸಿ ವೃಶ್ಚಿಕಮಾಸದವರೆಗೆ ಮಹಾಲಯದ ಕಾಲವನ್ನು ಹೇಳಿರುತ್ತಾರೆ.

ಮಾಸೋ ಭಾದ್ರಪದಃ ಕಾಲಸ್ತತ್ರಾಽಪಿ ಹಿ ವಿಶಿಷ್ಯತೇ ।
ಕೃಷ್ಣಪಕ್ಷೋ ವಿಶಿಷ್ಟಃ ಸ್ಯಾದ್ದುರಾಚಾರಕ ತತ್ರ ವೈ ॥ ೩೮ ॥
ತಸ್ಮಿನ್ಶುಭೇ ಕೃಷ್ಣಪಕ್ಷೇ ಪ್ರಥಮಾಯಾಂ ತಥಾ ತಿಥೌ ।
ಶ್ರಾದ್ಧಂ ಮಹಾಲಯಂ ಕುರ್ಯಾದ್ಯೋ ನರೋ ಭಕ್ತಿಪೂರ್ವಕಂ ॥ ೩೯ ॥
ತಸ್ಯ ಪ್ರೀಣಾತಿ ಭಗವಾನ್ ಪಾವಕಃ ಸರ್ವಪಾವನಃ ।
ಸ ವಹ್ನಿಲೋಕಮಾಪ್ನೋತಿ ವಹ್ನಿನಾ ಸಹ ಮೋದತೇ ॥ ೪೦ ॥
ತಸ್ಮೈ ಚ ಜ್ವಲನೋ ದೇವಃ ಸರ್ವೈಶ್ವರ್ಯಂ ದದಾತ್ಯಪಿ ।
ಪ್ರಥಮಾಯಾಂ ತಿಥೌ ಮರ್ತ್ಯೋ ಯೋ ನ ಕುರ್ಯಾನ್ಮಹಾಲಯಂ ॥೪೧॥
ವಹ್ನಿರ್ಗೃಹಂ ದಹೇತ್ತಸ್ಯ ಶ್ರಿಯಂ ಕ್ಷೇತ್ರಾದಿಕಂ ತಥಾ ।
ವೇದಜ್ಞೋ ಬ್ರಾಹ್ಮಣೋ ಭುಕ್ತೇ ಪ್ರಥಮಾಯಾಂ ಮಹಾಲಯೇ ॥ ೪೨ ॥
ದಶಕಲ್ಪಸಹಸ್ರಾಣಿ ಪಿತರೋ ಯಾಂತಿ ತೃಪ್ತತಾಂ ।
ದ್ವಿತೀಯಾಯಾಂ ತು ಯೋ ಭಕ್ತ್ಯಾ ಕುರ್ಯಾಚ್ಛ್ರಾದ್ಧಂ ಮಹಾಲಯಂ॥
ತಸ್ಯ ಪ್ರೀಣಾತಿ ಭಗವಾನ್ಭವಾನೀಪತಿರೀಶ್ವರಃ ।
ಸ ಕೈಲಾಸಮವಾಪ್ನೋತಿ ಶಿವೇನ ಸಹ ಮೋದತೇ ॥ ೪೪ ॥
ವಿಪುಲಾಂ ಸಂಪದಂ ತಸ್ಮೈ ಪ್ರೀತೋ ದದ್ಯಾನ್ಮಹೇಶ್ವರಃ ।
ದ್ವಿತೀಯಾಯಾಂ ತಿಥೌ ಮರ್ತ್ಯೋ ಯೋ ನ ಕುರ್ಯಾನ್ಮಹಾಲಯಂ ॥

---

೩೮. ದುರಾಚಾರನೆ! ಅದರಲ್ಲಿ ಭಾದ್ರಪದ ಮಾಸವು ಉತ್ತಮವು. ಅದರಲ್ಲಿಯೂ ಕೃಷ್ಣಪಕ್ಷವು ಶ್ರೇಷ್ಠವಾದುದು.

೩೯–೪೦. ಆ ಭಾದ್ರಪದಮಾಸದ ಕೃಷ್ಣಪಕ್ಷದ ಪ್ರಥಮ ತಿಥಿಯಲ್ಲಿ ಭಕ್ತಿಯಿಂದ ಮಹಾಲಯವನ್ನು ನೆರವೇರಿಸುವ ಮನುಷ್ಯನನ್ನು ಪೂಜ್ಯನಾದ ಅಗ್ನಿದೇವನು ಮೆಚ್ಚುವನು. ಆ ಮನುಷ್ಯನು ಅಗ್ನಿಲೋಕವನ್ನು ಸೇರಿ ಅಗ್ನಿಯೊಡನೆ ಸಂತೋಷಗೊಳ್ಳುತ್ತಾನೆ.

೪೧–೪೪. ಅವನಿಗೆ ಅಗ್ನಿಯು ಸಕಲೈಶ್ವರ್ಯವನ್ನೀಯುವನು. ಆ ಪ್ರಥಮ ತಿಥಿಯಲ್ಲಿ ಮಹಾಲಯವನ್ನು ಮಾಡದ ಮನುಷ್ಯನ ಮನೆ, ಸಂಪತ್ತು, ಕ್ಷೇತ್ರ ಮೊದಲಾದವುಗಳನ್ನು ಅಗ್ನಿಯು ಸುಡುವನು. ಪ್ರಥಮ ತಿಥಿಯಲ್ಲಿ ಮಾಡಿದ ಮಹಾಲಯದಲ್ಲಿ ವೇದಜ್ಞನಾದ ಬ್ರಾಹ್ಮಣನು ಭುಂಜಿಸಿದರೆ ಪಿತೃಗಳು ಹತ್ತು ಸಾವಿರ ಕಲ್ಪಗಳವರೆಗೆ ತೃಪ್ತಿಗೊಳ್ಳುವರು. ದ್ವಿತೀಯಾದಿನ ಭಕ್ತಿಯಿಂದ ಮಹಾಲಯ ಶ್ರಾದ್ಧಮಾಡಿದವನನ್ನು ಪೂಜ್ಯನಾದ ಮಹೇಶ್ವರನು ಮೆಚ್ಚುವನು. ಆ ಮನುಷ್ಯನು ಕೈಲಾಸವನ್ನು ಸೇರಿ ಶಿವನೊಡನೆ ಆನಂದಗೊಳ್ಳುವನು.

೪೫–೪೬. ಮತ್ತು ಮಹೇಶ್ವರನು ಸಂತುಷ್ಟನಾಗಿ ಅವನಿಗೆ ಹೆಚ್ಚು ಐಶ್ವರ್ಯವನ್ನು ಕೊಡುವನು. ಭಾದ್ರಪದ ಕೃಷ್ಣಪಕ್ಷ ಬಿದಿಗೆ ದಿನ ಮಹಾಲಯ

ತಸ್ಯ ವೈ ಕುಪಿತಃ ಶಂಭುರ್ನಾಶಯೇದ್ಬ್ರಹ್ಮವರ್ಚಸಂ ।
ರೌರವಂ ಕಾಲಸೂತ್ರಾಖ್ಯಂ ನರಕಂ ಚಾಽಸ್ಯ ದಾಸ್ಯತಿ ॥ ೪೬ ॥
ವೇದಜ್ಞೇ ಬ್ರಾಹ್ಮಣೇ ಭುಕ್ತೇ ದ್ವಿತೀಯಾಯಾಂ ಮಹಾಲಯೇ ।
ವಿಂಶತ್ಕಲ್ಪಸಹಸ್ರಾಣಿ ಪಿತರೋ ಯಾಂತಿ ತೃಪ್ತತಾಂ ॥ ೪೭ ॥
ಅನುಗ್ರಹಾತ್ಪಿತೄಣಾಂ ಚ ಸಂತತಿಶ್ಚಾಽಸ್ಯ ವರ್ಧತೇ ।
ತೃತೀಯಾಯಾಂ ನರೋ ಭಕ್ತ್ಯಾ ಕುರ್ಯಾಚ್ಛ್ರಾದ್ಧಂ ಮಹಾಲಯಂ ॥
ತಸ್ಯ ಪ್ರೀಣಾತಿ ಭಗವಾನ್ಲೋಕಪಾಲೋ ಧನಾಧಿಪಃ ।
ಮಹಾಪದ್ಮಾದಿನಿಧಯೋ ವರ್ತಂತೇ ತಸ್ಯ ವೈ ವಶೇ ॥ ೪೯ ॥
ತಸ್ಯಾಽನುಗಾಸ್ತ್ರಯೋ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।
ತೃತೀಯಾಯಾಂ ತಿಥೌ ಮರ್ತ್ಯೋ ಯೋ ನ ಕುರ್ಯಾನ್ಮಹಾಲಯಂ ॥
ಧನದೋ ಭಗವಾಂಸ್ತಸ್ಯ ಸಂಪದಂ ಹರತಿ ಕ್ಷಣಾತ್ ।
ದಾರಿದ್ರ್ಯಂ ಚ ದದಾತ್ಯಸ್ಮೈ ಬಹುದುಃಖಸಮಾಕುಲಂ ॥ ೫೧ ॥
ತೃತೀಯಾಯಾಂ ತಿಥೌ ಮರ್ತ್ಯೋ ಯಃ ಕರೋತಿ ಮಹಾಲಯಂ ।
ತೃಪ್ಯಂತಿ ಪಿತರಸ್ತಸ್ಯ ತ್ರಿಂಶತ್ಕಲ್ಪಸಹಸ್ರಕಂ ॥ ೫೨ ॥

---

ವನ್ನು ಮಾಡದ ಮನುಷ್ಯನಲ್ಲಿ ಶಿವನು ಸಿಟ್ಟಾಗಿ ಅವನ ಬ್ರಹ್ಮತೇಜಸ್ಸನ್ನು ನಾಶಗೊಳಿಸುವನು. ಮತ್ತು ಅವನಿಗೆ ಕಾಲಸೂತ್ರವೆಂಬ ರೌರವ ನರಕವನ್ನೀಯುವನು.

೪೭. ದ್ವಿತೀಯ ದಿನದ ಮಹಾಲಯದಲ್ಲಿ ವೇದಜ್ಞನಾದ ಬ್ರಾಹ್ಮಣನು ಭುಜಿಸಿದರೆ ಇಪ್ಪತ್ತುಸಾವಿರ ಕಲ್ಪಗಳವರೆಗೆ ಪಿತೃಗಳು ತೃಪ್ತಿಗೊಳ್ಳುವರು.

೪೮. ಪಿತೃಗಳ ಅನುಗ್ರಹದಿಂದ ಶ್ರಾದ್ಧಮಾಡಿದವನ ಸಂತತಿಯು ವೃದ್ಧಿಗೊಳ್ಳುವುದು. ಮನುಷ್ಯನು ತದಿಗೆ ದಿನ ಭಕ್ತಿಯಿಂದ ಮಹಾಲಯ ಶ್ರಾದ್ಧವನ್ನು ಮಾಡಬೇಕು.

೪೯. ಹಾಗೆ ಶ್ರಾದ್ಧಮಾಡಿದುದರಿಂದ ಕುಬೇರನು ಸಂತೋಷಗೊಂಡು ಶ್ರಾದ್ಧಮಾಡಿದವನಿಗೆ ಮಹಾಪದ್ಮಾದಿನಿಧಿಗಳನ್ನೀಯುವನು.

೫೦–೫೧. ಬ್ರಹ್ಮವಿಷ್ಣುಮಹೇಶ್ವರರು ಅವನನ್ನು ಹಿಂಬಾಲಿಸುತ್ತಿರುವರು. ತೃತೀಯಾತಿಥಿಯಲ್ಲಿ ಮಹಾಲಯ ಮಾಡದ ಮನುಷ್ಯನ ಸಂಪತ್ತನ್ನು ಕೂಡಲೆ ಪೂಜ್ಯನಾದ ಕುಬೇರನು ಅಪಹರಿಸಿ ಬಹು ದುಃಖಗಳಿಂದ ಕೂಡಿದ ಬಡತನವನ್ನು ಕೊಡುವನು.

೫೨. ಭಾದ್ರಪದ ಕೃಷ್ಣ ತದಿಗೆ ದಿನ ಮಹಾಲಯವನ್ನು ಮಾಡಿದ ಮನುಜನ ಪಿತೃಗಳು ಮೂವತ್ತುಸಾವಿರ ಕಲ್ಪಗಳು ತೃಪ್ತಿಗೊಳ್ಳುವರು.

ಚತುರ್ಥ್ಯಾಂ ತು ನರೋ ಭಕ್ತ್ಯಾ ಶ್ರಾದ್ಧಂ ಕುರ್ಯಾನ್ಮಹಾಲಯಂ ।
ತಸ್ಯ ಪ್ರೀಣಾತಿ ಭಗವಾನ್ಹೇರಂಬಃ ಪಾರ್ವತೀಸುತಃ ॥ ೫೩ ॥
ತಸ್ಯ ವಿಘ್ನಾಶ್ಚ ನಶ್ಯಂತಿ ಗಜವಕ್ತ್ರಪ್ರಸಾದತಃ ।
ಚತುರ್ಥ್ಯಾಂ ತು ತಿಥೌ ಮರ್ತ್ಯೋ ಯೋ ನ ಕುರ್ಯಾನ್ಮಹಾಲಯಂ ॥
ವಿಘ್ನೇಶೋ ಭಗವಾಂಸ್ತಸ್ಯ ಸದಾ ವಿಘ್ನಂ ಕರೋತಿ ಹಿ ।
ಚಂಡಕೋಲಾಹಲಾಽಭಿಖ್ಯೇ ನರಕೇ ಚ ಪತತ್ಯಥ ॥ ೫೫ ॥
ಚತುರ್ಥ್ಯಾಂ ವೈ ತಿಥೌ ಮರ್ತ್ಯೋ ಯಃ ಕರೋತಿ ಮಹಾಲಯಂ ।
ಪಿತರಃ ಕಲ್ಪಸಾಹಸ್ರಂ ಚತ್ವಾರಿಂಶತ್ಪ್ರಹರ್ಷಿತಾಃ ॥ ೫೬ ॥
ಬಹೂನ್ಪುತ್ರಾನ್ಪ್ರದಾಸ್ಯಂತಿ ಶ್ರಾದ್ಧಕರ್ತುರ್ನಿರಂತರಂ ।
ಪಂಚಮ್ಯಾಂ ತು ತಿಥೌ ಭಕ್ತ್ಯಾ ಯೋ ನ ಕುರ್ಯಾನ್ಮಹಾಲಯಂ ॥ ೫೭ ॥
ತಸ್ಯ ಲಕ್ಷ್ಮೀರ್ಭಗವತೀ ಪರಿತ್ಯಜತಿ ಮಂದಿರಂ ।
ಅಲಕ್ಷ್ಮೀಃ ಕಲಹಾಧಾರಾ ತಸ್ಯ ಪ್ರಾದುರ್ಭವೇದ್ಗೃಹೇ ॥ ೫೮ ॥
ಪಂಚಮ್ಯಾಂ ತು ತಿಥೌ ಮರ್ತ್ಯೋ ಯಃ ಕರೋತಿ ಮಹಾಲಯಂ ।
ತಸ್ಯ ತೃಪ್ಯಂತಿ ಪಿತರಃ ಪಂಚಕಲ್ಪಸಹಸ್ರಕೇ ॥ ೫೯ ॥
ಸಂತತಿಂ ಚಾಽಪ್ಯವಿಚ್ಛಿನ್ನಾಮಸ್ಮೈ ದಾಸ್ಯಂತಿ ತರ್ಪಿತಾಃ ।
ಪಾರ್ವತೀ ಚ ಪ್ರಸನ್ನಾ ಸ್ಯಾನ್ಮಹದೈಶ್ವರ್ಯದಾಯಿನೀ ॥ ೬೦ ॥

---

೫೩. ಚೌತಿಯ ದಿನ ಭಕ್ತಿಯಿಂದ ಮನುಷ್ಯನು ಮಹಾಲಯವನ್ನು ಮಾಡಿದರೆ ಅವನನ್ನು ಪಾರ್ವತೀಪುತ್ರನಾದ ಗಣೇಶನು ಮೆಚ್ಚುವನು.

೫೪–೫೮. ಆವನ ವಿಘ್ನಗಳೂ ಗಣೇಶನ ಅನುಗ್ರಹದಿಂದ ನಾಶವಾಗುವುವು. ಚತುರ್ಥೀದಿನ ಮಹಾಲಯ ಮಾಡದವನಿಗೆ ಗಣೇಶನು ಯಾವಾಗಲೂ ವಿಘ್ನಗಳನ್ನುಂಟುಮಾಡುವನು. ಅವನು ಚಂಡಕೋಲಾಹಲವೆಂಬ ನರಕದಲ್ಲಿ ಬೀಳುವನು. ಚತುರ್ಥೀದಿನ ಮಹಾಲಯಮಾಡಿದವನ ಪಿತೃಗಳು ನಲವತ್ತು ಸಾವಿರ ಕಲ್ಪಗಳ ಕಾಲ ಸಂತೋಷಗೊಂಡವರಾಗಿ ಶ್ರಾದ್ಧಮಾಡಿದವನಿಗೆ ಬಹಳ ಪುತ್ರರನ್ನೀಯುವವರು. ಪಂಚಮೀದಿನ ಮಹಾಲಯವನ್ನು ಭಕ್ತಿಯಿಂದ ಮಾಡದವನ ಮನೆಯನ್ನು ಪೂಜ್ಯಳಾದ ಲಕ್ಷ್ಮಿಯು ಬಿಡುವಳು. ಅವನ ಮನೆಯಲ್ಲಿ ಜಗಳಕ್ಕೆ ಆಶ್ರಯಳಾದ ಅಲಕ್ಷ್ಮಿಯು ಆವಿರ್ಭವಿಸುವಳು.

೫೯. ಪಂಚಮೀದಿನ ಮಹಾಲಯ ಮಾಡಿದರೆ ಪಿತೃಗಳು ಐದುಸಾವಿರ ಕಲ್ಪಗಳಕಾಲ ತೃಪ್ತರಾಗಿರುವರು.

೬೦. ಸಂತುಷ್ಟರಾದ ಅವರು ಇವನಿಗೆ ಅವಿಚ್ಛಿನ್ನವಾದ ಸಂತತಿಯನ್ನು ಕೊಡುವರು. ಬಹಳ ಐಶ್ವರ್ಯವನ್ನು ಕೊಡುವ ಪಾರ್ವತೀದೇವಿಯು ಪ್ರಸನ್ನಳಾಗುವಳು.

ಷಷ್ಠ್ಯಾಂ ತಿಥೌ ನರೋ ಭಕ್ತ್ಯಾ ಶ್ರಾದ್ಧಂ ಕುರ್ಯಾನ್ಮಹಾಲಯಂ ।
ತಸ್ಯ ಪ್ರೀಣಾತಿ ಭಗವಾನ್ ಷಣ್ಮುಖಃ ಪಾರ್ವತೀಸುತಃ ॥ ೬೧ ॥
ತಸ್ಯ ಪುತ್ರಾಶ್ಚ ಪೌತ್ರಾಶ್ಚ ಷಣ್ಮುಖಸ್ಯ ಪ್ರಸಾದತಃ ।
ಗ್ರಹೈರ್ಬಾಲಗ್ರಹೈಶ್ಚೈವ ನ ಬಾಧ್ಯಂತೇ ಕದಾಚನ ॥ ೬೨ ॥
ಷಷ್ಠ್ಯಾಂ ತಿಥೌ ನರೋ ಭಕ್ತ್ಯಾ ಯೋ ನ ಕುರ್ಯಾನ್ಮಹಾಲಯಂ ।
ತಸ್ಯ ಸ್ಕಂದೋ ಮಹಾಸೇನೋ ವಿಮುಖಃ ಸ್ಯಾನ್ನ ಸಂಶಯಃ ॥ ೬೩ ॥
ಗರ್ಭಾನ್ನಿರ್ಗತಮಾತ್ರೈವ ಪ್ರಜಾ ತಸ್ಯ ವಿನಶ್ಯತಿ ।
ಪೂತನಾದಿಗ್ರಹಕುಲೈರ್ಬಾಧ್ಯತೇ ಚ ನಿರಂತರಂ ॥ ೬೪ ॥
ವಹ್ನಿಜ್ವಾಲಾಪ್ರವೇಶಾಖ್ಯೇ ನರಕೇ ಚ ಪತತ್ಯಧಃ ।
ಷಷ್ಠ್ಯಾಂ ತಿಥೌ ಯಃ ಶ್ರದ್ಧಾವಾನ್ಕುರ್ಯಾಚ್ಛ್ರಾದ್ಧಂ ಮಹಾಲಯಂ ॥
ಷಷ್ಟಿಕಲ್ಪಸಹಸ್ರಂ ತು ಪಿತರೋ ಯಾಂತಿ ತೃಪ್ತತಾಂ ।
ಪುತ್ರಾನಪಿ ಪ್ರದಾಸ್ಯಂತಿ ಸಂಪದಂ ವಿಪುಲಾಂ ತಥಾ ॥ ೬೬ ॥
ಸಪ್ತಮ್ಯಾಂ ತು ತಿಥೌ ಮರ್ತ್ಯಃ ಶ್ರಾದ್ಧಂ ಕುರ್ಯಾನ್ಮಹಾಲಯಂ ।
ಹಿರಣ್ಯಪಾಣಿರ್ಭಗವಾನಾದಿತ್ಯಸ್ತಸ್ಯ ತುಷ್ಯತಿ ॥ ೬೭ ॥
ಅರೋಗೋ ದೃಢಗಾತ್ರಃ ಸ್ಯಾದ್ಭಾಸ್ಕರಸ್ಯ ಪ್ರಸಾದತಃ ।
ಹಿರಣ್ಯಪಾಣಿರ್ಭಗವಾನ್ಹಿರಣ್ಯಂ ಪಾಣಿನಾ ಸ್ವಯಂ ॥ ೬೮ ॥

---

೬೧. ಷಷ್ಠಿಯದಿನ ಭಕ್ತಿಯಿಂದ ಮಹಾಲಯ ಶ್ರಾದ್ಧಮಾಡಿದವನಲ್ಲಿ ಪಾರ್ವತೀಪುತ್ರನಾದ ಕುಮಾರಸ್ವಾಮಿಯು ಸಂತೋಷಗೊಳ್ಳುವನು.

೬೨. ಅವನ ಮಕ್ಕಳೂ, ಮೊಮ್ಮಕ್ಕಳೂ ಸುಬ್ರಹ್ಮಣ್ಯನ ಅನುಗ್ರಹದಿಂದ ಪಿಶಾಚ, ಬಾಲಗ್ರಹ ಇವುಗಳಿಂದ ಯಾವಾಗಲೂ ಪೀಡಿತರಾಗುವುದಿಲ್ಲ.

೬೩. ಷಷ್ಠಿಯ ದಿನ ಮಹಾಲಯ ಮಾಡದವನಲ್ಲಿ ಸ್ಕಂದನು ವಿಮುಖನಾಗುವನು. ಕುಪಿತನಾಗುವನು.

೬೪. ಅವನ ಮಕ್ಕಳು ಹುಟ್ಟಿದ ಕೂಡಲೆ ಸಾಯುವರು. ಅವನು ಪೂತನಾದಿ ಪಿಶಾಚಗಳಿಂದ ಯಾವಾಗಲೂ ಪೀಡಿಸಲ್ಪಡುವನು.

೬೫–೬೭. ವಹ್ನಿಜ್ವಾಲೆಯೆಂಬ ನರಕದಲ್ಲಿ ಬೀಳುವನು. ಷಷ್ಠಿಯ ದಿನ ಶ್ರದ್ಧೆಯಿಂದ ಮಹಾಲಯಶ್ರಾದ್ಧ ಮಾಡಿದವನ ಪಿತೃಗಳು ಅರವತ್ತುಸಾವಿರ ಕಲ್ಪಗಳಕಾಲ ಸಂತುಷ್ಟರಾಗಿ ಪುತ್ರರನ್ನೂ, ಅತಿಶಯ ಸಂಪತ್ತನ್ನೂ ಕೊಡುವರು. ಸಪ್ತಮಿಯದಿನ ಮಾನವನು ಮಹಾಲಯಶ್ರಾದ್ಧಗೈದರೆ ಅವನಲ್ಲಿ ಸುವರ್ಣಹಸ್ತನಾದ ಸೂರ್ಯನು ಸಂತೋಷಗೊಳ್ಳುವನು.

೬೮–೭೦. ಅವನು ಭಾಸ್ಕರನ ಅನುಗ್ರಹದಿಂದ ರೋಗವಿಲ್ಲದವನೂ, ದೃಢವಾದ ದೇಹವುಳ್ಳವನೂ ಆಗುವನು. ಸುವರ್ಣಕಿರಣನಾದ ಸೂರ್ಯನು

ಮಹಾಲಯಶ್ರಾದ್ಧಕರ್ತ್ರೇ ದದಾತಿ ಪ್ರೀತಮಾನಸಃ ।
ಸಪ್ತಮ್ಯಾಂ ತು ತಿಥೌ ಭಕ್ತ್ಯಾ ಯೋ ನ ಕುರ್ಯಾನ್ಮಹಾಲಯಮ್ ॥ ೬೯ ॥
ವ್ಯಾಧಿಭಿಃ ಕ್ಷಯರೋಗಾದ್ಯೈರ್ಬಾಧ್ಯತೇ ಸ ದಿವಾನಿಶಂ ।
ತೀಕ್ಷ್ಣಧಾರಾಽಸ್ತ್ರಶಯ್ಯಾಖ್ಯೇ ನರಕೇ ಚ ಪತತ್ಯಧಃ ॥ ೭೦ ॥
ಸಪ್ತಮ್ಯಾಂ ಯೋ ನರೋ ಭಕ್ತ್ಯಾ ಶ್ರಾದ್ಧಂ ಕುರ್ಯಾನ್ಮಹಾಲಯಮ್ ।
ಸಪ್ತತಿಂ ಕಲ್ಪಸಾಹಸ್ರಂ ಪ್ರೀಣಂತಿ ಪಿತರೋಽಸ್ಯ ವೈ ॥ ೭೧ ॥
ಸಂತತಿಂ ಚಾಽಪ್ಯವಿಚ್ಛಿನ್ನಾಂ ದದ್ಯುಃ ಪಿತೃಗಣಾಃ ಸದಾ ।
ಅಷ್ಟಮ್ಯಾಂ ತು ತಿಥೌ ಮರ್ತ್ಯಃ ಶ್ರಾದ್ಧಂ ಕುರ್ಯಾನ್ಮಹಾಲಯಮ್ ॥ ೭೨ ॥
ಮೃತ್ಯುಂಜಯಃ ಕೃತ್ತಿವಾಸಾಸ್ತಸ್ಯ ಪ್ರೀಣಾತಿ ಶಂಕರಃ ।
ಕರಸ್ಥಂ ತಸ್ಯ ಕೈವಲ್ಯಂ ಶಂಕರಸ್ಯ ಪ್ರಸಾದತಃ ॥ ೭೩ ॥
ಮಹಾಲಯೇನ ಶ್ರಾದ್ಧೇನ ತುಷ್ಟೇ ಸಾಕ್ಷಾತ್ತ್ರಿಯಂಬಕೇ ।
ಚತುರ್ದಶಸು ಲೋಕೇಷು ದುರ್ಲಭಂ ತಸ್ಯ ಕಿಂ ಭವೇತ್ ॥ ೭೪ ॥
ಮಹಾಲಯಂ ನ ಕುರ್ಯಾದ್ವೈ ಯೋಽಷ್ಟಮ್ಯಾಂ ಮೂಢಚೇತನಃ ।
ಸಂಸಾರಸಾಗರೇ ಘೋರೇ ಸದಾ ಮಜ್ಜತಿ ದುಃಖಿತಃ ॥ ೭೫ ॥
ಕದಾಚಿದಪಿ ತಸ್ಯೇಷ್ಟಂ ನೈವ ಸಿಧ್ಯತಿ ಭೂತಲೇ ।
ವೈತರಿಣ್ಯಾಖ್ಯನರಕೇ ಪತತ್ಯಾಚಂದ್ರತಾರಕಂ ॥ ೭೬ ॥

---

ಸಂತೋಷದಿಂದ ಚಿನ್ನವನ್ನು ತಾನೇ ಕೈಯಿಂದ ಮಹಾಲಯಶ್ರಾದ್ಧವನ್ನು ಮಾಡಿದವನಿಗೀಯುವನು. ಸಪ್ತಮಿಯದಿನ ಭಕ್ತಿಯಿಂದ ಮಹಾಲಯವನ್ನು ಮಾಡದವನು ಯಾವಾಗಲೂ ಕ್ಷಯವೇ ಮೊದಲಾದ ರೋಗಗಳಿಂದ ಪೀಡಿತನಾಗುವನು. ಅವನು ತೀಕ್ಷ್ಣಧಾರಾಸ್ತ್ರಶಯ್ಯೆಯೆಂಬ ನರಕದಲ್ಲಿಯೂ ಬೀಳುತ್ತಾನೆ.

೭೧–೭೩. ಸಪ್ತಮಿಯದಿನ ಮಹಾಲಯಶ್ರಾದ್ಧವನ್ನು ಮಾಡಿದವನ ಪಿತೃಗಳು ಎಪ್ಪತ್ತುಸಾವಿರ ಕಲ್ಪಗಳಕಾಲ ಸಂತುಷ್ಟರಾಗಿರುತ್ತಾರೆ. ಅವರು ಅವಿಚ್ಛಿನ್ನವಾದ ಸಂತತಿಯನ್ನೂ ಕೊಡುವರು. ಅಷ್ಟಮಿಯ ದಿನ ಮಹಾಲಯಶ್ರಾದ್ಧವನ್ನು ಮಾಡಿದವನ ವಿಷಯದಲ್ಲಿ ಗಜಚರ್ಮಧಾರಿಯಾದ ಶಂಕರನು ಸಂತೋಷಗೊಳ್ಳುವನು. ಶಿವನ ಅನುಗ್ರಹದಿಂದ ಅವನಿಗೆ ಮೋಕ್ಷವು ಕರಗತವಾಗುವುದು.

೭೪. ಮಹಾಲಯಶ್ರಾದ್ಧದಿಂದ ಮಹೇಶ್ವರನು ಸಂತುಷ್ಟನಾಗಲು ಶ್ರಾದ್ಧ ಮಾಡಿದವನಿಗೆ ಹದಿನಾಲ್ಕುಲೋಕಗಳಲ್ಲಿ ದೊರೆಯದಿರುವುದು ಯಾವುದಿದೆ !

೭೫. ಅಷ್ಟಮಿಯ ದಿನ ಮಹಾಲಯವನ್ನಾಚರಿಸದ ಮೂಢನು ಯಾವಾಗಲೂ ಭಯಂಕರವಾದ ಸಂಸಾರಸಮುದ್ರದಲ್ಲಿ ಮುಳುಗಿ ದುಃಖಗೊಳ್ಳುವನು.

೭೬. ಈ ಪ್ರಪಂಚದಲ್ಲಿ ಅವನ ಇಷ್ಟಾರ್ಥವು ಯಾವಾಗಲೂ ಕೈಗೂಡುವುದಿಲ್ಲ. ಅವನು ಚಂದ್ರ, ನಕ್ಷತ್ರಗಳಿರುವವರೆಗೂ ವೈತರಣಿಯೆಂಬ ನರಕದಲ್ಲಿ ಬೀಳುವನು.

ಯೋಽಷ್ಟಮ್ಯಾಂ ಶ್ರದ್ಧಯಾ ಶ್ರಾದ್ಧಂ ನರಃ ಕುರ್ಯಾನ್ಮಹಾಲಯಂ ।
ಅಶೀತಿಕಲ್ಪಸಾಹಸ್ರಂ ತೃಪ್ಯಂತಿ ಪಿತರೋಽಸ್ಯ ವೈ ॥ ೭೭ ॥
ಆಶೀರ್ಭಿರ್ವರ್ಧಯಂತ್ಯೇನಂ ವಿಘ್ನಶ್ಚಾಽಸ್ಯ ವ್ಯಪೋಹತಿ ।
ಸಂತತಿಂ ಚಾಽಪ್ಯವಿಚ್ಛಿನ್ನಾಂ ದದ್ಯುಃ ಪಿತೃಗಣಾಃ ಸದಾ ॥ ೭೮ ॥
ನವಮ್ಯಾಂ ತು ತಿಥೌ ಮರ್ತ್ಯಃ ಶ್ರಾದ್ಧಂ ಕುರ್ಯಾನ್ಮಹಾಲಯಂ ।
ದುರ್ಗಾದೇವೀ ಭಗವತೀ ತಸ್ಯ ಪ್ರೀಣಾತಿ ಶಾಂಭವೀ ॥ ೭೯ ॥
ಕ್ಷಯಾಽಪಸ್ಮಾರಕುಷ್ಠಾದೀನ್ಕ್ಷುದ್ರ ಪ್ರೇತಪಿಶಾಚಕಾನ್ ।
ನಾಶಯೇತ್ತಸ್ಯ ಸಂತುಷ್ಟಾ ದುರ್ಗಾ ಮಹಿಷಮರ್ದಿನೀ ॥ ೮೦ ॥
ನವಮ್ಯಾಂ ತು ತಿಥೌ ಮರ್ತ್ಯೋ ಯೋ ನ ಕುರ್ಯಾನ್ಮಹಾಲಯಂ ।
ಅಪಸ್ಮಾರೇಣ ಪೀಡ್ಯೇತ ತಥೈವ ಬ್ರಹ್ಮರಕ್ಷಸಾ ॥ ೮೧ ॥
ಆಭಿಚಾರಾರ್ಥಕೃತ್ಯಾಭಿರ್ಬಾಧ್ಯೇತ ಚ ನಿರಂತರಂ ।
ನವಮ್ಯಾಂ ಯಸ್ತಿಥೌ ಮರ್ತ್ಯಃ ಶ್ರಾದ್ಧಂ ಕುರ್ಯಾನ್ಮಹಾಲಯಂ ॥ ೮೨ ॥
ನವತಿಂ ಕಲ್ಪಸಾಹಸ್ರಂ ತೃಪ್ಯಂತಿ ಪಿತರೋಽಸ್ಯ ವೈ ।
ಸಂತತಿಂ ಚಾಽಪ್ಯವಿಚ್ಛಿನ್ನಾಂ ದದ್ಯುಃ ಪಿತೃಗಣಾಃ ಸದಾ ॥ ೮೩ ॥
ದಶಮ್ಯಾಂ ತು ತಿಥೌ ಮರ್ತ್ಯಃ ಶ್ರಾದ್ಧಂ ಕುರ್ಯಾನ್ಮಹಾಲಯಂ ।
ತಸ್ಯಾಽಮೃತಕಲಶ್ಚಂದ್ರಃ ಷೋಡಶಾತ್ಮಾ ಪ್ರಸೀದತಿ ॥ ೮೪ ॥

---

೭೭. ಅಷ್ಟಮಿಯ ದಿನ ಶ್ರದ್ಧೆಯಿಂದ ಮಹಾಲಯಶ್ರಾದ್ಧವನ್ನು ಮಾಡಿದ ಮಾನವನ ಪಿತೃಗಳು ಎಂಬತ್ತುಸಾವಿರ ಕಲ್ಪಗಳಕಾಲ ತೃಪ್ತಿಗೊಳ್ಳುವರು.

೭೮. ಅಂಥವನನ್ನು ಆ ಪಿತೃಗಳು ಆಶೀರ್ವದಿಸಿ ಅಭಿವೃದ್ಧಿಗೊಳಿಸುವರು. ಅವನ ವಿಘ್ನಗಳೆಲ್ಲವೂ ನಾಶವಾಗುವುವು. ಪಿತೃಗಳು ಅವನಿಗೆ ಅವಿಚ್ಛಿನ್ನವಾದ ಸಂತತಿಯನ್ನೀಯುವರು.

೭೯. ನವಮಿಯ ದಿನ ಶ್ರಾದ್ಧಮಾಡಿದವನಲ್ಲಿ ಪೂಜ್ಯಳಾದ ದುರ್ಗಾದೇವಿಯು ಸಂತೋಷಗೊಳ್ಳುವಳು.

೮೦. ಸಂತುಷ್ಟಳಾದ ಆಕೆಯು ಕ್ಷಯ, ಅಪಸ್ಮಾರ, ಕುಷ್ಠವೇ ಮೊದಲಾದ ರೋಗಗಳನ್ನೂ, ಅಲ್ಪರಾದ ಪ್ರೇತ ಪಿಶಾಚಗಳನ್ನೂ ನಿವಾರಿಸುವಳು.

೮೧. ನವಮಿಯ ದಿನ ಮಹಾಲಯವನ್ನು ಮಾಡದವನು ಮೂರ್ಛೆಯ ರೋಗದಿಂದಲೂ, ಬ್ರಹ್ಮರಾಕ್ಷಸನಿಂದಲೂ ಬಾಧಿಸಲ್ಪಡುತ್ತಾನೆ.

೮೨–೮೪. ಅಲ್ಲದೆ ಯಾವಾಗಲೂ ಮಾಟವೇ ಮೊದಲಾದವುಗಳಿಂದ ಕಷ್ಟಪಡುವನು. ನವಮಿಯ ದಿನ ಮಹಾಲಯಶ್ರಾದ್ಧವನ್ನು ಮಾಡಿದವನ ಪಿತೃಗಳು ತೊಂಬತ್ತುಸಾವಿರ ಕಲ್ಪಗಳಕಾಲ ತೃಪ್ತರಾಗುವರು. ಅವಿಚ್ಛಿನ್ನವಾದ ಸಂತತಿಯನ್ನೂ ಕೊಡುವರು. ದಶಮಿಯ ದಿನ ಮಹಾಲಯಶ್ರಾದ್ಧ ಮಾಡಿದವನ ವಿಷಯದಲ್ಲಿ ಷೋಡಶಕಲೆಗಳುಳ್ಳ ಚಂದ್ರನು ಪ್ರಸನ್ನನಾಗುವನು.

ಓಷಧೀನಾಮಧೀಶೇಽಸ್ಮಿನ್ ಶ್ರಾದ್ಧೇನಾಽನೇನ ತೋಷಿತೇ ।
ವ್ರೀಹ್ಯಾದೀನಿ ತು ಧಾನ್ಯಾನಿ ದದ್ಯುರೋಷಧಯಃ ಸದಾ ॥ ೮೫ ॥
ಯೋ ನ ಕುರ್ಯಾದ್ದಶಮ್ಯಾಂ ತು ಮಹಾಲಯಮನುತ್ತಮಂ ।
ಓಷಧ್ಯೋ ನಿಷ್ಫಲಾಸ್ತಸ್ಯ ಕೃಷಿಶ್ಚಾಽಪ್ಯಸ್ಯ ನಿಷ್ಫಲಾ ॥ ೮೬ ॥
ದಶಮ್ಯಾಂ ಯಸ್ತಿಥೌ ಮರ್ತ್ಯಃ ಶ್ರಾದ್ಧಂ ಕುರ್ಯಾನ್ಮಹಾಲಯಂ ।
ಶತಕಲ್ಪಸಹಸ್ರಾಣಿ ತೃಪ್ಯಂತಿ ಪಿತರೋಽಸ್ಯ ವೈ ॥ ೮೭ ॥
ಸಂತತಿಂ ಚಾಽಪ್ಯವಿಚ್ಛಿನ್ನಾಂ ದದ್ಯುಃ ಪಿತೃಗಣಾಃ ಸದಾ ।
ಏಕಾದಶ್ಯಾಂ ನರೋ ಭಕ್ತ್ಯಾ ಶ್ರಾದ್ಧಂ ಕುರ್ಯಾನ್ಮಹಾಲಯಂ ॥ ೮೮ ॥
ಸಂಹರ್ತಾ ಸರ್ವಲೋಕಸ್ಯ ತಸ್ಯ ರುದ್ರಃ ಪ್ರಸೀದತಿ ।
ರುದ್ರಸ್ಯ ಸರ್ವಸಂಹರ್ತುಃ ಪ್ರಸಾದೇನ ಜಗತ್ಪತೇಃ ॥ ೮೯ ॥
ಶತ್ರೂನ್ಪರಾಜಯತ್ಯೇಷ ಶ್ರಾದ್ಧಕರ್ತಾ ನಿರಂತರಂ ।
ಬ್ರಹ್ಮಹತ್ಯಾಽಯುತಂ ಚಾಽಪಿ ತಸ್ಯ ನಶ್ಯತಿ ತತ್ಕ್ಷಣಾತ್ ॥ ೯೦ ॥
ಅಗ್ನಿಷ್ಟೋಮಾದಿ ಯಜ್ಞಾನಾಂ ಫಲಮಾಪ್ನೋತಿ ಪುಷ್ಕಲಂ ।
ಏಕಾದಶ್ಯಾಂ ನರೋ ಭಕ್ತ್ಯಾ ಯೋ ನ ಕುರ್ಯಾನ್ಮಹಾಲಯಂ ॥ ೯೧ ॥
ತಸ್ಯ ವೈ ವಿಮುಖೋ ರುದ್ರೋ ನ ಪ್ರಸೀದತಿ ಕರ್ಹಿಚಿತ್ ।
ಸರ್ವತೋ ವರ್ಧಮಾನಾಶ್ಚ ಬಾಧಂತೇ ಶತ್ರವೋ ಹ್ಯಮುಂ ॥ ೯೨ ॥

---

೮೫. ಓಷಧಿಗಳಿಗೆ ಒಡೆಯನಾದ ಚಂದ್ರನು ಈ ಶ್ರಾದ್ಧದಿಂದ ಸಂತೋಷಗೊಳ್ಳಲು ಶ್ರಾದ್ಧಮಾಡಿದವನಿಗೆ ಓಷಧಿಗಳು ಯಾವಾಗಲೂ ಭತ್ತ ಮೊದಲಾದ ಧಾನ್ಯಗಳನ್ನು ಒದಗಿಸುವುವು.

೮೬. ದಶಮಿಯ ದಿನ ಶ್ರೇಷ್ಠವಾದ ಮಹಾಲಯವನ್ನು ಮಾಡದವನ ಸಸ್ಯಗಳೂ, ವ್ಯವಸಾಯಗಳೂ ನಿಷ್ಫಲವಾಗುತ್ತವೆ.

೮೭. ದಶಮಿಯ ದಿನ ಮಹಾಲಯಶ್ರಾದ್ಧವನ್ನು ಮಾಡಿದವನ ಪಿತೃಗಳು ಒಂದುಲಕ್ಷ ಕಲ್ಪಗಳಕಾಲ ತೃಪ್ತಿಗೊಳ್ಳುವರು.

೮೮–೯೦. ಅವರು ಅವಿಚ್ಛಿನ್ನವಾದ ಸಂತತಿಯನ್ನೂ ಕೊಡುವರು. ಏಕಾದಶಿಯದಿನ ಭಕ್ತಿಯಿಂದ ಮಹಾಲಯಶ್ರಾದ್ಧವನ್ನುಮಾಡಿದವನಿಗೆ ಸಮಸ್ತ ಜಗತ್ತುಗಳನ್ನೂ ಸಂಹರಿಸುವ ರುದ್ರನೇ ಪ್ರಸನ್ನನಾಗುವನು. ಆ ರುದ್ರನ ಅನುಗ್ರಹದಿಂದ ಈ ಶ್ರಾದ್ಧವನ್ನುಮಾಡಿದವನು ಶತ್ರುಗಳನ್ನು ಸೋಲಿಸುವನು. ಅವನು ಹತ್ತುಸಾವಿರ ಬ್ರಹ್ಮಹತ್ಯೆಗಳನ್ನು ಮಾಡಿದ್ದರೂ ಅವು ಕೂಡಲೆ ನಾಶವಾಗುವುವು.

೯೧–೯೨. ಅಗ್ನಿಷ್ಟೋಮುವೇ ಮೊದಲಾದ ಯಜ್ಞಗಳ ಪೂರ್ಣಫಲವನ್ನು ಅವನು ಪಡೆಯುವನು. ಏಕಾದಶಿಯ ದಿನ ಭಕ್ತಿಯಿಂದ ಮಹಾಲಯಶ್ರಾದ್ಧವನ್ನು ಮಾಡದ ಮನುಷ್ಯನಿಗೆ ರುದ್ರನು ವಿಮುಖನಾಗಿ ಯಾವಾಗಲೂ ಪ್ರಸನ್ನ

ಅಗ್ನಿಷ್ಟೋಮಾದಿಕಾ ಯಜ್ಞಾಃ ಕೃತಾಶ್ಚ ಬಹುದಕ್ಷಿಣಾಃ ।
ನಿಷ್ಫಲಾ ಏವ ತಸ್ಯ ಸ್ಯುರ್ಭಸ್ಮನಿ ನ್ಯಸ್ತ ಹವ್ಯವತ್ ॥ ೯೩ ॥
ಬ್ರಹ್ಮಘಾತಕತುಲ್ಯಃ ಸ್ಯಾಚ್ಛ್ರಾದ್ಧಾಕರಣದೋಷತಃ ।
ಏಕಾದಶ್ಯಾಂ ತಿಥೌ ಯಸ್ತು ಶ್ರಾದ್ಧಂ ಕುರ್ಯಾನ್ಮಹಾಲಯಂ ॥ ೯೪ ॥
ದ್ವಿಶತಂ ಕಲ್ಪಸಾಹಸ್ರಂ ತೃಪ್ಯಂತಿ ಪಿತರೋಽಸ್ಯ ವೈ ।
ಸಂತತಿಂ ಚಾಽಪ್ಯವಿಚ್ಛಿನ್ನಾಂ ದದ್ಯುಃ ಪಿತೃಗಣಾಃ ಸದಾ ॥ ೯೫ ॥
ದ್ವಾದಶ್ಯಾಂ ತು ತಿಥೌ ಮರ್ತ್ಯಃ ಶ್ರಾದ್ಧಂ ಕುರ್ಯಾನ್ಮಹಾಲಯಂ ।
ತಸ್ಯ ಲಕ್ಷ್ಮೀಪತಿಃ ಸಾಕ್ಷಾತ್ಪ್ರಸೀದತಿ ಜನಾರ್ದನಃ ॥ ೯೬ ॥
ಪ್ರಸನ್ನೇ ಸತಿ ದೇವೇಶೇ ದೇವದೇವೇ ಜನಾರ್ದನೇ ।
ಚರಾಚರಂ ಜಗತ್ಸರ್ವಂ ಪ್ರೀತಮೇವ ನ ಸಂಶಯಃ ॥ ೯೭ ॥
ಭೂಮಿರ್ಹರಿಪ್ರಿಯಾ ಚಾಽಸ್ಯ ಸಸ್ಯಂ ಸಂವರ್ಧಯತ್ಯಪಿ ।
ಲಕ್ಷ್ಮೀಶ್ಚ ವರ್ಧತೇ ತಸ್ಯ ಮಂದಿರೇ ಹರಿವಲ್ಲಭಾ ॥ ೯೮ ॥
ಗದಾ ಕೌಮೋದಕೀ ನಾಮ ನಾರಾಯಣಕರಸ್ಥಿತಾ ।
ಅಪಸ್ಮಾರಾದಿಭೂತಾನಿ ನಾಶಯತ್ಯೇವ ಸರ್ವದಾ ॥ ೯೯ ॥

---

ನಾಗುವುದಿಲ್ಲ. ಎಲ್ಲೆಡೆಯಲ್ಲಿಯೂ ಹೆಚ್ಚುತ್ತಿರುವ ಶತ್ರುಗಳು ಅವನನ್ನು ಪೀಡಿಸುತ್ತಿರುತ್ತಾರೆ.

೯೩. ಬಹಳ ದಕ್ಷಿಣೆಗಳನ್ನಿತ್ತು ಅವನು ನೆರವೇರಿಸಿದ ಅಗ್ನಿಷ್ಟೋಮಾದಿ ಯಜ್ಞಗಳೂ ಬೂದಿಯಲ್ಲಿ ಹೋಮಮಾಡಿದ ಹವಿಸ್ಸಿನಂತೆ ನಿಷ್ಫಲವಾಗುವುವು.

೯೪–೯೫. ಅವನು ಶ್ರಾದ್ಧವನ್ನಾಚರಿಸದ ದೋಷದಿಂದ ಬ್ರಹ್ಮಹತ್ಯೆಯನ್ನು ಮಾಡಿದವನಿಗೆ ಸಮಾನನಾಗುವನು. ಏಕಾದಶಿಯ ದಿನ ಮಹಾಲಯ ಶ್ರಾದ್ಧವನ್ನು ಮಾಡಿದವನ ಪಿತೃಗಳು ಎರಡುಲಕ್ಷ ಕಲ್ಪಗಳವರೆಗೆ ತೃಪ್ತರಾಗಿ ಅವನಿಗೆ ಅವಿಚ್ಛಿನ್ನವಾದ ಸಂತತಿಯನ್ನೀಯುವರು.

೯೬–೯೭. ದ್ವಾದಶಿಯ ದಿನ ಮಹಾಲಯಶ್ರಾದ್ಧವನ್ನು ಮಾಡಿದವನಿಗೆ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ಪ್ರಸನ್ನನಾಗುವನು. ದೇವತೆಗಳಿಗೂ ದೇವತೆಯಾದ ಜನಾರ್ದನನು ಪ್ರಸನ್ನನಾಗಲು ಚರಾಚರ ಜಗತ್ತೆಲ್ಲವೂ ಸಂತೋಷಗೊಂಡಂತೆಯೆ ಸರಿ!

೯೮. ವಿಷ್ಣುಪ್ರಿಯಳಾದ ಭೂದೇವಿಯು ಸಹ ಅವನ ಸಸ್ಯವನ್ನು ವೃದ್ಧಿಗೊಳಿಸುವಳು. ಅವನ ಮನೆಯಲ್ಲಿ ಹರಿಪ್ರಿಯಳಾದ ಲಕ್ಷ್ಮಿಯು ಐಶ್ವರ್ಯವನ್ನು ವೃದ್ಧಿಗೊಳಿಸುವಳು.

೯೯. ಶ್ರೀಮನ್ನಾರಾಯಣನ ಹಸ್ತದಲ್ಲಿರುವ ಕೌಮೋದಕೀ ಎಂಬ ಗದೆಯು ಯಾವಾಗಲೂ ಅಪಸ್ಮಾರವೇ ಮೊದಲಾದ ಭೂತಗಳನ್ನು ನಾಶಗೊಳಿಸುವುದು.

ತೀಕ್ಷ್ಣಧಾರಂ ತಥಾ ಚಕ್ರಂ ಶತ್ರೂನಸ್ಯ ದಹತ್ಯಪಿ ।
ಯಾತುಧಾನಪಿಶಾಚಾದೀನ್ ಶಂಖಶ್ಚಾಽಸ್ಯ ವ್ಯಪೋಹತಿ ॥ ೧೦೦ ॥
ಏವಂ ಸರ್ವಾತ್ಮನಾ ಪೀಡಾಂ ವಾರಯತ್ಯಸ್ಯ ಕೇಶವಃ ।
ಮಹಾಲಯಂ ನ ಕುರ್ಯಾದ್ಯೋ ದ್ವಾದಶ್ಯಾಂ ಮನುಜಾಽಧಮಃ ॥
ತಸ್ಯ ಕ್ಷೇತ್ರಾಣಿ ಸಂಪಚ್ಚ ವಿನಶ್ಯಂತಿ ನ ಸಂಶಯಃ ।
ಅಪಸ್ಮಾರಾದಿ ಭೂತಾನಿ ಶತ್ರವಶ್ಚ ಮಹಾಬಲಾಃ ॥ ೧೦೨ ॥
ಯಾತುಧಾನಾಶ್ಚ ಬಾಧಂತೇ ತಂ ವೈ ವಿಷ್ಣುಪರಾಙ್ಮುಖಂ ।
ಪಾತ್ಯತೇ ನರಕೇ ಚಾಽಪಿ ಅಸ್ಥಿಭೇದನನಾಮಕೇ ॥ ೧೦೩ ॥
ದ್ವಾದಶ್ಯಾಂ ಭಕ್ತಿಯುಕ್ತೋ ಯಃ ಶ್ರಾದ್ಧಂ ಕುರ್ಯಾನ್ಮಹಾಲಯಂ ।
ಷಟ್ಶತಂ ಕಲ್ಪಸಾಹಸ್ರಂ ಪ್ರೀಣಂತಿ ಪಿತರೋಽಸ್ಯ ವೈ ॥ ೧೦೪ ॥
ಸಂತತಿಂ ಚಾಽಪ್ಯವಿಚ್ಛಿನ್ನಾಂ ಪಿತರೋಽಸ್ಮೈ ದದತ್ಯಪಿ ।
ತ್ರಯೋದಶ್ಯಾಂ ನರೋ ಭಕ್ತ್ಯಾ ಶ್ರಾದ್ಧಂ ಕುರ್ಯಾನ್ಮಹಾಲಯಂ ॥ ೧೦೫ ॥
ಪ್ರಸೀದತ್ಯಸ್ಯ ಭಗವಾನ್ಕಂದರ್ಪೋ ರತಿನಾಯಕಃ ।
ಸ್ರಕ್ಚಂದನಾದಯೋ ಭೋಗಾ ಲಲನಾಶ್ಚ ಮನೋರಮಾಃ ॥ ೧೦೬ ॥
ಕಾಮದೇವಪ್ರಸಾದೇನ ತಸ್ಯ ಸಿಧ್ಯಂತಿ ಸರ್ವದಾ ।
ಆಜನ್ಮಮರಣಾಂತಂ ಚ ಸುಖಮೇವ ಸ ವಿಂದತೇ ॥ ೧೦೭ ॥

---

೧೦೦. ಹಾಗೆಯೇ ಹರಿತವಾದ ಅಲಗುಳ್ಳ ಚಕ್ರವು ಅವನ ಶತ್ರುಗಳನ್ನು ಸುಡುವುದು; ಶಂಖವು ರಾಕ್ಷಸ, ಪಿಶಾಚಾದಿಗಳನ್ನು ನಿವಾರಿಸುವುದು.

೧೦೧–೧೦೩. ಹೀಗೆ ಮಹಾವಿಷ್ಣುವು ಸರ್ವವಿಧದಿಂದಲೂ ಅವನ ಬಾಧೆಯನ್ನು ಪರಿಹರಿಸುವನು. ದ್ವಾದಶಿಯ ದಿನ ಮಹಾಲಯವನ್ನು ಮಾಡದ ನೀಚ ನರನ ಕ್ಷೇತ್ರಗಳೂ, ಸಂಪತ್ತೂ ನಾಶವಾಗುವುವು. ವಿಷ್ಣುವಿಗೆ ವಿರೋಧಿಯಾದ ಅವನನ್ನು ಅಪಸ್ಮಾರವೇ ಮೊದಲಾದ ರೋಗಗಳೂ, ಭೂತಗಳೂ, ಬಲಿಷ್ಠರಾದ ಶತ್ರುಗಳೂ, ರಾಕ್ಷಸರೂ ಪೀಡಿಸುತ್ತಾರೆ. ಅಲ್ಲದೆ ಅಸ್ಥಿಭೇದನವೆಂಬ ನರಕದಲ್ಲಿಯೂ ಅವನು ಬೀಳಿಸಲ್ಪಡುವನು.

೧೦೪. ದ್ವಾದಶಿಯ ದಿನ ಭಕ್ತಿಯಿಂದ ಮಹಾಲಯಶ್ರಾದ್ಧವನ್ನು ಮಾಡಿದ ಮಾನವನ ಪಿತೃಗಳು ಆರುಲಕ್ಷ ಕಲ್ಪಗಳಕಾಲ ತೃಪ್ತರಾಗುವರು.

೧೦೫–೧೦೭. ತೃಪ್ತರಾಗಿ ಅವನಿಗೆ ಅವಿಚ್ಛಿನ್ನವಾದ ಸಂತತಿಯನ್ನೂ ಕೊಡುವರು. ತ್ರಯೋದಶಿಯ ದಿನ ಭಕ್ತಿಯಿಂದ ಮಹಾಲಯಶ್ರಾದ್ಧವನ್ನು ಮಾಡಿದವನ ವಿಷಯದಲ್ಲಿ ರತಿದೇವಿಯ ವಲ್ಲಭನಾದ ಮನ್ಮಥನು ಸಂತುಷ್ಟನಾಗುವನು. ಅವನ ಅನುಗ್ರಹದಿಂದ ಹುವ್ವು, ಗಂಧ, ಮೊದಲಾದ ಭೋಗಸಾಧನ ವಸ್ತುಗಳೂ, ಸುಂದರಿಯರಾದ ತರುಣಿಯರೂ ದೊರಕುವರು. ಅವನು ಮರಣಕಾಲದವರೆಗೂ ಸುಖವನ್ನೇ ಹೊಂದುವನು.

ತೇನ ತೃಪ್ತಿಃ ಪಿತೄಣಾಂ ಸ್ಯಾದನಂತಾ ತುಷ್ಯತೇ ಶಿವಃ ।
ಬ್ರಹ್ಮಹತ್ಯಾದಯಃ ಪಂಚ ಪಾತಕಾ ನಾಶಮಾಪ್ನುಯುಃ ॥ ೧೨೪ ॥
ಕೃತಾಶ್ಚ ಸ್ಯುರ್ವಿಧಾನೇನ ಸರ್ವೇ ಯಜ್ಞಾಃ ಸದಕ್ಷಿಣಾಃ ।
ಅನುಷ್ಠಿತಾಸ್ಯುರ್ವಿಧಿವತ್ಸರ್ವೇ ಧರ್ಮಾಃ ಸನಾತನಾಃ ॥ ೧೨೫ ॥
ಅಮಾವಾಸ್ಯಾ ದಿನೇ ಯೇನ ಕೃತಂ ಶ್ರಾದ್ಧಂ ಮಹಾಲಯಂ ।
ಪ್ರತ್ಯಗ್ಬ್ರಹ್ಮೈಕತಾಂ ಜ್ಞಾತ್ವಾ ಸಾಯುಜ್ಯಂ ಯಾತ್ಯಸಂಶಯಂ ॥ ೧೨೬ ॥
ಯೋ ನ ಕುರ್ಯಾದಮಾವಾಸ್ಯಾಂ ಮಹಾಲಯಮಚೇತನಃ ।
ಬ್ರಹ್ಮಲೋಕಗತಾಶ್ಚಾಸ್ಯ ಪಿತರೋ ಯಾಂತಿ ನಾರಕಂ ॥ ೧೨೭ ॥
ಸಂತತಿಶ್ಚಾಸ್ಯ ಮೂಢಸ್ಯ ವಿಚ್ಛಿದ್ಯೇತೈವ ತತ್ಕ್ಷಣಾತ್ ।
ಸ ಏವ ಹಿ ಮಹಾನರ್ಥೋ ಯದಮಾಯಾಂ ತಿಥೌ ನರೈಃ ॥ ೧೨೮ ॥
ಮಹಾಲಯಾರ್ಥೋ ವಿಪ್ರೇಂದ್ರಾ ವಿಧಿವನ್ನೈವ ಭೋಜಿತಾಃ ।
ಮಾಸಿ ಭಾದ್ರಪದೇ ಪ್ರಾಪ್ತೇ ನೃತ್ಯಂತಿ ಪಿತೃದೇವತಾಃ ॥ ೧೨೯ ॥
ಅಸ್ಮಾನುದ್ದಿಶ್ಯ ಮತ್ಪುತ್ರಾ ಭೋಜಯೇಯುರ್ದ್ವಿಜೋತ್ತಮಾನ್ ।
ತೇನ ನೋ ನರಕಕ್ಲೇಶೋ ನ ಭವಿಷ್ಯತಿ ದಾರುಣಃ ॥ ೧೩೦ ॥

---

೧೨೪. ಇದರಿಂದ ಪಿತೃಗಳು ತೃಪ್ತರಾಗುವರು. ಶಿವನು ಸಂತುಷ್ಟನಾಗುವನು. ಬ್ರಹ್ಮಹತ್ಯೆಯೆ ಮೊದಲಾದ ಪಂಚಮಹಾಪಾತಕಗಳು ನಾಶವಾಗುವುವು.

೧೨೫. ಸಕಲ ಯಜ್ಞಗಳೂ ದಕ್ಷಿಣೆಯಿಂದ ಸಹಿತವಾಗಿ ಮಾಡಿದಂತಾಗುವುವು. ವಿಧಿಯಂತೆ ಸಕಲ ಸನಾತನ ಧರ್ಮಗಳನ್ನನುಷ್ಠಾನ ಮಾಡಿದಂತಾಗುವುದು.

೧೨೬. ಅಮಾವಾಸ್ಯೆಯ ದಿನ ಮಹಾಲಯಶ್ರಾದ್ಧವನ್ನು ಮಾಡಿದವನು ಪರಬ್ರಹ್ಮೈಕ್ಯವನ್ನರಿತು ಬ್ರಹ್ಮಸಾಯುಜ್ಯವನ್ನು ಪಡೆಯುವನು.

೧೨೭. ಅಮಾವಾಸ್ಯೆಯ ದಿನ ಮಹಾಲಯಶ್ರಾದ್ಧವನ್ನು ಮಾಡದ ಮೂಢನ ಪಿತೃಗಳು ಬ್ರಹ್ಮಲೋಕಕ್ಕೆ ತೆರಳಿದರೂ ಅವರು ಮರಳಿ ನರಕವನ್ನೇ ಸೇರುವರು.

೧೨೮-೧೨೯. ಅವನ ಸಂತತಿಯೂ ಕೂಡಲೆ ವಿಚ್ಛಿನ್ನವಾಗುವುದು. ನರನು ಅಮಾವಾಸ್ಯೆಯ ದಿನ ಮಹಾಲಯಶ್ರಾದ್ಧದ ವಿಧಿಯಂತೆ ಬ್ರಾಹ್ಮಣಭೋಜನ ಮಾಡಿಸದಿರುವುದು ದೊಡ್ಡ ಅನರ್ಥವೇ ಸರಿ. ಭಾದ್ರಪದಮಾಸವು ಬರಲು ಸಂತೋಷದಿಂದ ಪಿತೃದೇವತೆಗಳು ಕುಣಿಯುತ್ತಿರುತ್ತಾರೆ.

೧೩೦. "ನಮ್ಮ ಮಕ್ಕಳು ನಮ್ಮನ್ನುದ್ದೇಶಿಸಿ ಬ್ರಾಹ್ಮಣೋತ್ತಮರನ್ನು ಭೋಜನಮಾಡಿಸುವರು. ಅದರಿಂದ ಭಯಂಕರವಾದ ನರಕದುಃಖವು ನಮಗಾಗುವುದಿಲ್ಲ.

ವಾಸಶ್ಚ ಸ್ವರ್ಗಲೋಕೇ ಸ್ಯಾದ್ಯಾವದಾಚಂದ್ರತಾರಕಂ ।
ಮಾಸಿ ಭಾದ್ರಪದೇ ಪ್ರಾಪ್ತೇ ಪಿತೄಣಾಂ ತೃಪ್ತಿದಾಯಿನಿ ॥ ೧೩೧ ॥
ಏಕೈಕಂ ಭೋಜಯೇದ್ವಿಪ್ರಂ ಪ್ರತ್ಯಹಂ ಭಕ್ತಿಪೂರ್ವಕಂ ।
ಪಿತೃಮಾತೃಕುಲೋದ್ಭೂತಾಃ ಪಿತರಸ್ತೃಪ್ತಿಮಾಪ್ನುಯುಃ ॥ ೧೩೨ ॥
ಕೃಷ್ಣಪಕ್ಷೇ ವಿಶೇಷೇಣ ಬ್ರಾಹ್ಮಣಾನ್ಭೋಜಯೇತ್ಸುಧೀಃ ।
ಘೃತಸೂಪಾದಿಸಸ್ಯೈಶ್ಚ ತೈಲಾಽಭ್ಯಂಗಪುರಸ್ಸರಂ ॥ ೧೩೩ ॥
ಸುಧಾಂ ಪಾಸ್ಯಂತಿ ಪಿತರಸ್ತಸ್ಯಾಕಲ್ಪಂ ಪ್ರಹರ್ಷಿತಾಃ ।
ಸಪ್ತಮೀಂ ಕೃಷ್ಣಪಕ್ಷಸ್ಯ ಪ್ರಾರಭ್ಯ ಪ್ರತ್ಯಹಂ ನರಾಃ ॥ ೧೩೪ ॥
ವಿಪ್ರಾನ್ಯಾವದಮಾವಾಸ್ಯಾತ್ರೀಂಸ್ತ್ರೀನಭ್ಯರ್ಚ್ಯ ಭೋಜಯೇತ್ ।
ಆರಭ್ಯ ದ್ವಾದಶೀಂ ವಿಪ್ರಾಂಸ್ತ್ರೀನವಶ್ಯಂ ತು ಭೋಜಯೇತ್ ॥ ೧೩೫ ॥
ಅನ್ಯಥೈಶ್ವರ್ಯಹಾನಿಃ ಸ್ಯಾನ್ಮಹಾದಾರಿದ್ರ್ಯಭಾಗ್ಭವೇತ್ ।
ವಿತ್ತಲೋಭಂ ಪರಿತ್ಯಜ್ಯ ವಿಪ್ರಾನ್ಸೂಪಘೃತಾದಿಭಿಃ ॥ ೧೩೬ ॥
ಪಯಸಾ ಪಾಯಸಾಽನ್ನೇನ ದಧ್ನಾಽಪೂಪಾದಿಭಿಸ್ತಥಾ ।
ಪೇಯೈರ್ಲೇಹ್ಯೈಶ್ಚ ಚೋಷ್ಯೈಶ್ಚ ಭಕ್ಷ್ಯೈಶ್ಚ ವಿವಿಧೈರಪಿ ॥ ೧೩೭ ॥

---

೧೩೧–೧೩೨. ಚಂದ್ರನಕ್ಷತ್ರಗಳಿರುವವರೆಗೆ ಸ್ವರ್ಗಲೋಕವಾಸವು ದೊರೆಯುವುದು" ಎಂದು ಅವರು ಹಿರಿಹಿಗ್ಗುತ್ತಿರುತ್ತಾರೆ. ಆದಕಾರಣ ಭಾದ್ರಪದ ಮಾಸವು ಬರಲು ಪಿತೃಗಳ ತೃಪ್ತಿಗಾಗಿ ಪ್ರತಿದಿನವೂ ಭಕ್ತಿಯಿಂದ ಒಬ್ಬೊಬ್ಬ ಬ್ರಾಹ್ಮಣನನ್ನು ಭೋಜನ ಮಾಡಿಸಬೇಕು. ಆದರಿಂದ ಪಿತೃಮಾತೃವಂಶದ ಪಿತೃಗಳೆಲ್ಲರೂ ತೃಪ್ತಿಗೊಳ್ಳುವರು.

೧೩೩. ವಿಶೇಷವಾಗಿ ಕೃಷ್ಣಪಕ್ಷದಲ್ಲಿ ಪ್ರಾಜ್ಞನಾದ ಬ್ರಾಹ್ಮಣನು ದ್ವಿಜರನ್ನು ತೈಲಾಭ್ಯಂಜನಮಾಡಿಸಿ ತುಪ್ಪ, ತೊವ್ವೆ, ತರಕಾರಿ ಮೊದಲಾದುವುಗಳಿಂದ ಭೋಜನ ಮಾಡಿಸಬೇಕು.

೧೩೪–೧೩೫. ಆದರಿಂದ ಅವನ ಪಿತೃಗಳು ಕಲ್ಪಕಾಲದವರೆಗೆ ಸಂತೋಷದಿಂದ ಅಮೃತವನ್ನು ಕುಡಿಯುವರು. ಮಾನವನು ಭಾದ್ರಪದ ಕೃಷ್ಣಪಕ್ಷದ ಸಪ್ತಮಿಯನ್ನಾರಂಭಿಸಿ ಪ್ರತಿದಿನವೂ ಅಮಾವಾಸ್ಯೆಯವರೆಗೆ ಮೂವರು ಬ್ರಾಹ್ಮಣರನ್ನು ಪೂಜಿಸಿ ಭೋಜನ ಮಾಡಿಸಬೇಕು. ದ್ವಾದಶಿಯನ್ನಾರಂಭಿಸಿ ಮೂವರನ್ನು ಅವಶ್ಯವಾಗಿ ಭೋಜನ ಮಾಡಿಸಬೇಕು.

೧೩೬–೧೩೮. ಹಾಗೆ ಮಾಡದಿದ್ದರೆ ಮಾನವನ ಐಶ್ವರ್ಯವು ಹಾಳಾಗಿ ಕಡುಬಡವನಾಗುವನು. ಹಣದ ಲೋಭವಿಲ್ಲದೆ ಶ್ರೇಷ್ಠರಾದ ಬ್ರಾಹ್ಮಣರನ್ನು ತೊವ್ವೆ, ತುಪ್ಪ, ಹಾಲು, ಪಾಯಸ, ಅನ್ನ, ಮೊಸರು, ಅಪೂಪಗಳಿಂದಲೂ, ನಾನಾ ವಿಧವಾದ ಪಾನಕ, ಲೇಹ್ಯ, ಚೋಷ್ಯ, ಭಕ್ಷ್ಯಗಳಿಂದಲೂ ತೃಪ್ತಿಯಾಗುವಷ್ಟು

ಭೋಜಯೇದ್ವೇದವಿನ್ಮುಖ್ಯಾಂಸ್ತೃಪ್ತಿಸ್ತೇಷಾಂ ಯಥಾ ಭವೇತ್ ।
ತೇನ ಬ್ರಹ್ಮಾ ಹರಿಃ ಶಂಭುಸ್ತೃಪ್ತಾಃ ಸ್ಯುರ್ನಾತ್ರ ಸಂಶಯಃ ॥ ೧೩೮ ॥
ಅಗ್ನಿಷ್ವಾತ್ತಾದಿಪಿತರಸ್ತಥೈವೇಂದ್ರಾದಿದೇವತಾಃ ।
ಬಹುನಾಽತ್ರ ಕಿಮುಕ್ತೇನ ತುಷ್ಟಂ ತೇನ ಜಗತ್ರಯಂ ॥ ೧೩೯ ॥
ಪಾರ್ವಣೇನ ವಿಧಾನೇನ ಕುರ್ಯಾಚ್ಛ್ರಾದ್ಧೇ ಮಹಾಲಯಂ ।
ನರೋ ಮಹಾಲಯಶ್ರಾದ್ಧೇ ಪಿತೃವಂಶ್ಯಾನ್ಪಿತೄನಿವ ॥ ೧೪೦ ॥
ಮಾತೃವಂಶ್ಯಾನಪಿ ಪಿತೄನ್ಭೋಜಯೇಚ್ಛ್ರೇಯಸೇ ಮುದಾ ।
ದಕ್ಷಿಣಾಂ ಚ ಯಥಾಶಕ್ತಿ ದದ್ಯಾದ್ವಿತ್ತಾಽನುಸಾರತಃ ॥ ೧೪೧ ॥
ತಸ್ಮಿನ್ಮಹಾಲಯೇ ಶ್ರಾದ್ಧೇ ವಿತ್ತಶಾಠ್ಯಂ ನ ಕಾರಯೇತ್ ।
ದಕ್ಷಿಣಾ ಖಲು ಯಜ್ಞಾನಾಂ ಕಥಿತೇಯಂ ಪುರೋಗವಾ ॥ ೧೪೨ ॥
ಅನ್ನಃ ಪುರೋಗವೈರ್ಹೀನಂ ಕರಿಷ್ಯತಿ ಯಥಾ ಧ್ವನಿ ।
ಅದಕ್ಷಿಣಂ ತಥಾ ಸೋಽಯಂ ಪಿತೃಯಜ್ಞೋಽಪಿ ರಿಷ್ಯತಿ ॥ ೧೪೩ ॥
ತಸ್ಮಾದ್ಯಜ್ಞೇಷು ದಾತವ್ಯಾ ದಕ್ಷಿಣಾಽಲ್ಪಾ ಪಿಜಾನತಾ ।
ವಿಧವಾಭಿರಪಿ ಸ್ತ್ರೀಭಿರಪುತ್ರಾಭಿರ್ಮಹಾಲಯಃ ॥ ೧೪೪ ॥

---

ಭೋಜನ ಮಾಡಿಸಬೇಕು. ಅದರಿಂದ ಬ್ರಹ್ಮ ವಿಷ್ಣು ಮಹೇಶ್ವರರು ತೃಪ್ತರಾಗುವರು.

೧೩೯. ಅಗ್ನಿಷ್ವಾತ್ತಾದಿ ಪಿತೃಗಳೂ, ಇಂದ್ರಾದಿ ದೇವತೆಗಳೂ ತೃಪ್ತಿಗೊಳ್ಳುವರು. ಹೆಚ್ಚುಹೇಳಿ ಪ್ರಯೋಜನವೇನು. ಆ ಶ್ರಾದ್ಧದಿಂದ ಮೂರು ಲೋಕವೂ ತೃಪ್ತಿಗೊಳ್ಳುವುದು.

೧೪೦–೧೪೧. ಮಾನವನು ಮಹಾಲಯಶ್ರಾದ್ಧವನ್ನು ಪಾರ್ವಣವಿಧಾನದಿಂದ ಮಾಡಿ ಪಿತೃವಂಶದವರನ್ನೂ, ಮಾತೃವಂಶದವರನ್ನೂ ಪಿತೃಗಳಂತೆ ಸಂತೋಷದಿಂದ ಭೋಜನಮಾಡಿಸಿ ಶಕ್ತಿ ಮತ್ತು ದ್ರವ್ಯಗಳನ್ನನುಸರಿಸಿ ದಕ್ಷಿಣೆ ಕೊಡಬೇಕು.

೧೪೨. ಮಹಾಲಯಶ್ರಾದ್ಧದಲ್ಲಿ ದ್ರವ್ಯವಿಲ್ಲದಿದ್ದರೂ ಲೋಭದಿಂದ ದಕ್ಷಿಣೆ ಕೊಡದಿರಬಾರದು. ಗಾಡಿಗೆ ಮುಂದೆ ಕಟ್ಟಿರುವ ಎತ್ತಿನಂತೆ ದಕ್ಷಿಣೆಯು ಯಜ್ಞಗಳಿಗೆ ವಿಧಾಯಕವಾಗಿರುವುದು.

೧೪೩. ಎತ್ತಿಲ್ಲದಿದ್ದರೆ ಬಂಡಿಯು ಹೇಗೆ ದಾರಿಯಲ್ಲಿ ಮುಂದೆ ಸಾಗದೊ, ದಕ್ಷಿಣೆಯಿಲ್ಲದ ಪಿತೃಯಜ್ಞ (ಶ್ರಾದ್ಧ)ವೂ ಹಾಗೆಯೇ ಸಫಲವಾಗಲಾರದು.

೧೪೪–೧೪೫. ಆದುದರಿಂದ ಬಲ್ಲವನು ಯಜ್ಞಗಳಲ್ಲಿ ಸ್ವಲ್ಪವಾದರೂ ದಕ್ಷಿಣೆಯನ್ನು ಕೊಡಲೇಬೇಕು. ಮಕ್ಕಳಿಲ್ಲದ ವಿಧವೆಯರೂ ತಮ್ಮ ಗಂಡಂದಿ

ಭರ್ತೄನುದ್ದಿಶ್ಯ ಕರ್ತವ್ಯೋ ಭೂರಿಭೋಜನಕರ್ಮಣಾ ।
ಅನ್ಯಥಾ ಧರ್ಮಹಾನಿಃ ಸ್ಯಾನ್ನರಕಂ ಚ ಮಹದ್ಭವೇತ್ ॥ ೧೪೫ ॥
ಮಾಸಿ ಭಾದ್ರಪದೇ ಪ್ರಾಪ್ತೇ ಯೋ ನ ಕುರ್ಯಾನ್ಮಹಾಲಯಂ ।
ತತ್ಕುಲಂ ನಾಶಮಾಪ್ನೋತಿ ಬ್ರಹ್ಮಹತ್ಯಾಂ ಚ ವಿಂದತಿ ॥ ೧೪೬ ॥
ಮಹಾಲಯಂ ಪ್ರಕುರ್ವಂತಿ ಶ್ರದ್ಧಾವಂತಃ ಪಿತೄನ್ಪ್ರತಿ ।
ನ ತೇಷಾಂ ಸಂತತಿಚ್ಛೇದೋ ಭವೇತ್ಸಂಪದಭಂಗುರಾ ॥ ೧೪೭ ॥
ಆಲಯಂ ಹ್ಯಾಸ್ಪದಂ ಪ್ರೋಕ್ತಂ ಮಹಃ ಕಲ್ಯಾಣಮುಚ್ಯತೇ ।
ಕಲ್ಯಾಣಾನಾಮಾಸ್ಪದತ್ವಾನ್ಮಹಾಲಯಮುದೀರ್ಯತೇ ॥ ೧೪೮ ॥
ತಸ್ಮಾನ್ಮಹಾಲಯಂ ಮರ್ತ್ಯಃ ಕುರ್ಯಾತ್ಕಲ್ಯಾಣಸಿದ್ಧಯೇ ।
ಅಮಂಗಲಂ ಭವೇತ್ತಸ್ಯ ನ ಕುರ್ಯಾಚ್ಚೇನ್ಮಹಾಲಯಂ ॥ ೧೪೯ ॥
ನ ಕುರ್ಯಾದ್ಯದ್ಯಪಿ ಶ್ರಾದ್ಧಂ ಮಾತಾಪಿತ್ರೋರ್ಮೃತೇಽಹನಿ ।
ಕುರ್ಯಾನ್ಮಹಾಲಯ ಶ್ರಾದ್ಧಮಸ್ಮರನ್ನೇವ ಬುದ್ಧಿಮಾನ್ ॥ ೧೫೦ ॥
ಕರ್ತುಂ ಮಹಾಲಯಶ್ರಾದ್ಧಂ ಯದಿ ಶಕ್ತಿರ್ನ ವಿದ್ಯತೇ ।
ಯಾಚಿತ್ವಾಽಪಿ ನರಃ ಕುರ್ಯಾತ್ಪಿತೄಣಾಂ ತನ್ಮಹಾಲಯಂ ॥ ೧೫೧ ॥

---

ರನ್ನುದ್ದೇಶಿಸಿ ಬ್ರಾಹ್ಮಣರಿಗೆ ಭೂರಿಭೋಜನವನ್ನು ಮಾಡಿಸಿ ಮಹಾಲಯವನ್ನು ನೆರವೇರಿಸಬೇಕು. ಹಾಗೆ ಮಾಡದಿದ್ದರೆ ಧರ್ಮಹಾನಿಯೂ, ನರಕವೂ ಸಂಭವಿಸುವುದು.

೧೪೬. ಭಾದ್ರಪದಮಾಸದಲ್ಲಿ ಮಹಾಲಯವನ್ನು ಮಾಡದ ನರನ ವಂಶವು ಹಾಳಾಗುವುದು. ಬ್ರಹ್ಮಹತ್ಯೆಯೂ ಸಂಭವಿಸುವುದು.

೧೪೭. ಪಿತೃಗಳನ್ನುದ್ದೇಶಿಸಿ ಶ್ರದ್ಧೆಯಿಂದ ಮಹಾಲಯವನ್ನು ಮಾಡಿದವರ ಸಂತತಿಯು ಅವಿಚ್ಛಿನ್ನವಾಗುವುದು; ಸಂಪತ್ತು ಸ್ಥಿರಗೊಳ್ಳುವುದು.

೧೪೮. ಆಲಯವೆಂದರೆ ಆಶ್ರಯವು; ಮಹವೆಂದರೆ ಕಲ್ಯಾಣವು; ಕಲ್ಯಾಣಕ್ಕಾಶ್ರಯವಾದುದರಿಂದ ಮಹಾಲಯವೆನ್ನಿಸಿಕೊಳ್ಳುವುದು.

೧೪೯. ಆದುದರಿಂದ ಮನುಷ್ಯನು ಮಂಗಳದ ಲಾಭಕ್ಕಾಗಿ ಮಹಾಲಯವನ್ನು ಆಚರಿಸಬೇಕು. ಇದನ್ನು ಮಾಡದಿದ್ದರೆ ಅಶುಭವಾಗುವುದು.

೧೫೦. ಬಲ್ಲವನು ತಂದೆತಾಯಿಗಳ ಶ್ರಾದ್ಧವನ್ನು ಮೃತದಿನದಲ್ಲಿ ಮಾಡದಿದ್ದರೂ ಜ್ಞಾಪಕದಿಂದ ಮಹಾಲಯ ಶ್ರಾದ್ಧವನ್ನು ಮಾಡಬೇಕು.

೧೫೧. ಮಹಾಲಯ ಶ್ರಾದ್ಧವನ್ನು ಮಾಡಲು ಶಕ್ತಿಯಿಲ್ಲದಿದ್ದರೆ ಬೇಡಿಯಾದರೂ ದ್ರವ್ಯವನ್ನು ಸಂಪಾದಿಸಿ ಪಿತೃಗಳಿಗೆ ಆ ಮಹಾಲಯ ಶ್ರಾದ್ಧವನ್ನು ಮಾಡಲೇಬೇಕು.

ಬ್ರಾಹ್ಮಣೇಭ್ಯೋ ವಿಶಿಷ್ಟೇಭ್ಯೋ ಯಾಚೇತ ಧನಧಾನ್ಯಕಂ ।
ಪತಿತೇಭ್ಯೋ ನ ಗೃಹ್ಣೀಯಾದ್ಧನಧಾನ್ಯಂ ಕದಾಚನ ॥ ೧೩೨ ॥
ಬ್ರಾಹ್ಮಣೇಭ್ಯೋ ನ ಲಭ್ಯೇತ ಯದಿ ಧಾನ್ಯಧನಾದಿಕಂ ।
ಯಾಚೇತ ಕ್ಷತ್ರಿಯಶ್ರೇಷ್ಠಾನ್ಮಹಾಲಯಚಿಕೀರ್ಷಯಾ ॥ ೧೩೩ ॥
ದಾತಾರಶ್ಚೇನ್ನ ಭೂಪಾಲಾ ವೈಶ್ಯೇಭ್ಯೋಽಪಿ ಚ ಯಾಚಯೇತ್ ।
ವೈಶ್ಯಾ ಅಪಿ ಹಿ ದಾತಾರೋ ಯದಿ ಲೋಕೇ ನ ಸಂತಿ ವೈ ॥ ೧೩೪ ॥
ದದ್ಯಾದ್ಭಾದ್ರಪದೇ ಮಾಸೇ ಗೋಗ್ರಾಸಂ ಪಿತೃತೃಪ್ತಯೇ ।
ಅಥವಾ ರೋದನಂ ಕುರ್ಯಾದ್ಬಹಿರ್ನಿರ್ಗತ್ಯ ಕಾನನೇ ॥ ೧೩೫ ॥
ಪಾಣಿಭ್ಯಾಮುದರಂ ಸ್ವೀಯಮಾಹತ್ಯಾಽಶ್ರೂಣಿ ವರ್ತಯನ್ ।
ತೇಷ್ವರಣ್ಯಪ್ರದೇಶೇಷ್ವುಚ್ಚೈರೇವಂ ವದೇನ್ನರಃ ॥ ೧೩೬ ॥
ಶೃಣ್ವಂತು ಪಿತರಃ ಸರ್ವೇ ಮತ್ಕುಲೀನಾ ವಚೋ ಮಮ ।
ಅಹಂ ದರಿದ್ರಃ ಕೃಪಣೋ ನಿರ್ಲಜ್ಜಃ ಕ್ರೂರಕರ್ಮಕೃತ್ ॥ ೧೩೭ ॥
ಪ್ರಾಪ್ತೋ ಭಾದ್ರಪದೋ ಮಾಸಃ ಪಿತೄಣಾಂ ಪ್ರೀತಿವರ್ಧನಃ ।
ಕರ್ತುಂ ಮಹಾಲಯಶ್ರಾದ್ಧಂ ನ ಚ ಮೇ ಶಕ್ತಿರಸ್ತಿ ವೈ ॥ ೧೩೮ ॥
ಭ್ರಮಿತ್ವಾಽಪಿ ಮಹೀಂ ಕೃತ್ಸ್ನಾಂ ನ ಮೇ ಕಿಂಚನ ಲಭ್ಯತೇ ।
ಅತೋ ಮಹಾಲಯಶ್ರಾದ್ಧಂ ನ ಯುಷ್ಮಾಕಂ ಕರೋಮ್ಯಹಂ ॥ ೧೩೯ ॥

---

೧೩೨. ಉತ್ತಮ ಬ್ರಾಹ್ಮಣರಲ್ಲಿ ಧನಧಾನ್ಯಗಳನ್ನು ಯಾಚಿಸಬೇಕು. ಯಾವಾಗಲೂ ಪತಿತರಿಂದ ಧನಧಾನ್ಯಗಳನ್ನು ಪಡೆಯಬಾರದು.

೧೩೩. ಮಹಾಲಯವನ್ನು ಮಾಡಬಯಸಿ ಬ್ರಾಹ್ಮಣರಿಂದ ಹಣವನ್ನೂ, ಧಾನ್ಯವನ್ನೂ ಪಡೆಯಲಾಗದಿದ್ದರೆ ಉತ್ತಮ ಕ್ಷತ್ರಿಯರನ್ನು ಯಾಚಿಸಬೇಕು.

೧೩೪–೧೩೫. ದಾನಮಾಡುವ ರಾಜರಿಲ್ಲದಿದ್ದರೆ ವೈಶ್ಯರನ್ನು ಯಾಚಿಸಬೇಕು. ದಾನಮಾಡುವ ವೈಶ್ಯರೂ ಸಿಕ್ಕದಿದ್ದರೆ ಭಾದ್ರಪದಮಾಸದಲ್ಲಿ ಪಿತೃತೃಪ್ತಿಗಾಗಿ ಗೋಗ್ರಾಸವನ್ನು ನೀಡಬೇಕು. ಅಥವಾ ಹೊರಹೊರಟು ಕಾಡಿನಲ್ಲಿ ಈ ರೀತಿ ಅಳಬೇಕು.

೧೩೬–೧೩೯. ಅರಣ್ಯದಲ್ಲಿ ತನ್ನ ಹೊಟ್ಟೆಯನ್ನು ಎರಡು ಕೈಗಳಿಂದಲೂ ಬಡಿದುಕೊಂಡು ಕಣ್ಣೀರು ಸುರಿಸುತ್ತ, "ನನ್ನ ವಂಶದ ಪಿತೃಗಳೇ! ನನ್ನ ಮಾತನ್ನು ಕೇಳಿ. ನಾನು ಬಡವನೂ, ದೀನನೂ, ನಾಚಿಕೆಯಿಲ್ಲದವನೂ, ಕ್ರೂರಕರ್ಮಿಯೂ ಆಗಿರುವೆನು. ಪಿತೃಗಳಿಗೆ ಪ್ರೀತಿಯನ್ನು ಹೆಚ್ಚಿಸುವ ಭಾದ್ರಪದ ಮಾಸವು ಬಂದಿದೆ. ಮಹಾಲಯಶ್ರಾದ್ಧವನ್ನು ಮಾಡಲು ನನಗೆ ಶಕ್ತಿಯಿಲ್ಲದೆ ಹೋಗಿದೆ! ಸಮಗ್ರ ಭೂಮಂಡಲದಲ್ಲಿ ಎಲ್ಲಿ ಅಲೆದರೂ ನನಗೆ ಯಾರಿಂದಲೂ ಏನೂ ದೊರೆಯಲಿಲ್ಲ. ಆದುದರಿಂದ ನಾನು ನಿಮಗೆ ಮಹಾಲಯಶ್ರಾದ್ಧವನ್ನು ಮಾಡುವುದಿಲ್ಲ.

ಕ್ಷಮಧ್ವಂ ಮಮ ತದ್ಧ್ಯೇಯಂ ಭವಂತೋ ಹಿ ದಯಾಪರಾಃ ।
ದರಿದ್ರೋ ರೋದನಂ ಕುರ್ಯಾದೇವಂ ಕಾನನಭೂಮಿಷು ॥ ೧೬೦ ॥
ತಸ್ಯ ರೋದನಮಾಕರ್ಣ್ಯ ಪಿತರಸ್ತತ್ಕುಲೋದ್ಭವಾಃ ।
ಹೃಷ್ಟಾಸ್ತೃಪ್ತಿಂ ಪ್ರಯಾಂತ್ಯೇವ ಸುಧಾಂ ಪೀತ್ವೇವ ನಿರ್ಜರಾಃ ॥ ೧೬೧ ॥
ಮಹಾಲಯಾರ್ಥೇ ವಿಪ್ರೌಘೇ ಭುಕ್ತೇ ತೃಪ್ತಿರ್ಯಥಾ ಭವೇತ್ ।
ಗೋಗ್ರಾಸಾಽರಣ್ಯರುದಿತೈಃ ಪಿತೃತೃಪ್ತಿಸ್ತಥಾ ಭವೇತ್ ॥ ೧೬೨ ॥
ಮಾಸಿ ಭಾದ್ರಪದೇ ವಿಘ್ನೋ ಯದಿ ಸ್ಯಾತ್ಸೂತಕಾದಿನಾ ।
ಯಾತೇಷು ಸೂತಕಾಽಹಃಸು ಕುರ್ಯಾದಾವೃಶ್ಚಿಕಾಽವಧಿ ॥ ೧೬೩ ॥
ಬುಧೋ ಮಹಾಲಯಸ್ಯಾರ್ಥೇ ಬ್ರಾಹ್ಮಣಾನ್ವೃಣುಯಾನ್ನವ ।
ಪಿತ್ರರ್ಥಮೇಕಂ ವೃಣುಯಾತ್ಪಿತಾಮಹಕೃತೇ ತಥಾ ॥ ೧೬೪ ॥
ಪ್ರಪಿತಾಮಹಮುದ್ದಿಶ್ಯ ತಥೈಕಂ ವೃಣುಯಾದ್ದ್ವಿಜಃ ।
ತಥಾ ಮಾತಾಮಹಾರ್ಥಂ ತು ಏಕಂ ವೈ ವೃಣುಯಾದ್ದ್ವಿಜಂ ॥ ೧೬೫ ॥
ಮಾತುಃ ಪಿತಾಮಹಾರ್ಥಂ ಚ ವೃಣುಯಾದ್ದ್ವಿಜಮೇಕಕಂ ।
ವೃಣುಯಾದೇಕಮುದ್ದಿಶ್ಯ ಮಾತುಶ್ಚ ಪ್ರಪಿತಾಮಹಂ ॥ ೧೬೬ ॥
ತಥೈವ ವಿಶ್ವೇದೇವಾರ್ಥೇ ವೃಣುಯಾದ್ದ್ವೌ ದ್ವಿಜೋತ್ತಮೌ ।
ವಿಷ್ಣ್ವರ್ಥಂ ಬ್ರಾಹ್ಮಣಂ ತ್ವೇಕಂ ವೃಣುಯಾದ್ವೇದವಿತ್ತಮಂ ॥ ೧೬೭ ॥

---

೧೬೦. ದಯಾಳುಗಳಾದ ನೀವು ನನ್ನನ್ನು ಕ್ಷಮಿಸಿರಿ" ಎಂದು ಬಡವನು ಅಳಬೇಕು.

೧೬೧. ಅವನ ರೋಧನವನ್ನು ಕೇಳಿ ಅವನ ವಂಶದ ಪಿತೃಗಳು ಸಂತೋಷಗೊಂಡು ಅಮೃತವನ್ನು ಪಾನಮಾಡಿದ ದೇವತೆಗಳಂತೆ ತೃಪ್ತಿಗೊಳ್ಳುವರು.

೧೬೨. ಮಹಾಲಯಶ್ರಾದ್ಧದಲ್ಲಿ ಬ್ರಾಹ್ಮಣರು ಭೋಜನಮಾಡಿದರೆ ತೃಪ್ತಿಗೊಳ್ಳುವಂತೆಯೆ ಗೋಗ್ರಾಸ, ಅರಣ್ಯರೋದನಗಳಿಂದಲೂ ಅವರು ತೃಪ್ತರಾಗುತ್ತಾರೆ.

೧೬೩. ಭಾದ್ರಪದಮಾಸದಲ್ಲಿ ಸೂತಕಾದಿಗಳಿಂದ ವಿಘ್ನವು ಸಂಭವಿಸಿದರೆ ಆ ಸೂತಕ ದಿನಗಳು ಕಳೆದಮೇಲೆ ವೃಶ್ಚಿಕಮಾಸದವರೆಗೆ ಮಹಾಲಯವನ್ನು ಮಾಡಬಹುದು.

೧೬೪–೧೭೦. ಮಾನವನು ಮಹಾಲಯಶ್ರಾದ್ಧದಲ್ಲಿ ತಂದೆಗಾಗಿ ಒಬ್ಬನು, ಅಜ್ಜನಿಗಾಗಿ ಒಬ್ಬನು, ಮುತ್ತಜ್ಜನಿಗಾಗಿ ಒಬ್ಬನು, ತಾಯಿಯ ತಂದೆಗಾಗಿ ಒಬ್ಬನು, ತಾಯಿಯ ಅಜ್ಜನಿಗಾಗಿ ಒಬ್ಬನು, ತಾಯಿಯ ಮುತ್ತಜ್ಜನಿಗಾಗಿ ಒಬ್ಬನು, ವಿಶ್ವೇದೇವತೆಗಳಿಗಾಗಿ ಇಬ್ಬರು, ವಿಷ್ಣುವಿಗಾಗಿ ಒಬ್ಬನು ಹೀಗೆ ಒಂಬತ್ತುಮಂದಿ ಬ್ರಾಹ್ಮಣರನ್ನು ಭೋಜನಮಾಡಿಸಬೇಕು. ಅಥವಾ ಪಿತೃವರ್ಗ

ಏವಂ ಮಹಾಲಯ ಶ್ರಾದ್ಧೇ ಬ್ರಾಹ್ಮಣಾನ್ನ್ವ್ರಣುಯಾನ್ನವ ।
ಅಥವಾ ಪಿತೃವರ್ಗಾರ್ಥಂ ವರಯೇದ್ವಿಪ್ರಮೇಕಕಂ ॥ ೧೬೮ ॥
ಮಾತಾಮಹಾದೀನ್ನೋದ್ದಿಶ್ಯ ವರಯೇದ್ವಿಪ್ರಮೇಕಕಂ ।
ವಿಶ್ವೇದೇವಾರ್ಥಮೇಕಂ ಚ ವಿಷ್ಣ್ವರ್ಥಂ ಚ ತಥಾಽಪರಂ ॥ ೧೬೯ ॥
ಏವಂ ವೈ ವರಯೇದ್ವಿಪ್ರಾಶ್ಚತುರಸ್ತು ಮಹಾಲಯೇ ।
ಬ್ರಾಹ್ಮಣಾನ್ವೇದಸಂಪನ್ನಾನ್ಸುಶೀಲಾನ್ವರಯೇತ್ಸುಧೀಃ ॥ ೧೭೦ ॥
ದುಃಶೀಲಾನ್ವರಯೇದ್ಯಸ್ತು ಸ ವೈ ಶ್ರಾದ್ಧಸ್ಯ ಘಾತಕಃ ।
ಮಾಸಿ ಭಾದ್ರಪದೇ ಪ್ರಾಪ್ತೇ ಕೃಷ್ಣಪಕ್ಷೇ ವಿಶೇಷತಃ ॥ ೧೭೧ ॥
ಕುರ್ಯಾನ್ಮಹಾಲಯಶ್ರಾದ್ಧಂ ಯೋ ನರಃ ಶ್ರದ್ಧಯಾ ಸಹ ।
ಸ ಸ್ನಾತಃ ಸರ್ವತೀರ್ಥೇಷು ದುರಾಚಾರ ಮಹಾಮತೇ ॥ ೧೭೨ ॥
ಅಗ್ನಿಷ್ಟೋಮಾದಯೋಃ ಯಜ್ಞಾಃ ಶತಮಪ್ಯಮುನಾ ಕೃತಾಃ ।
ತುಲಾಪುರುಷಮುಖ್ಯಾನಿ ದಾನಾನ್ಯಪಿ ಕೃತಾನಿ ವೈ ॥ ೧೭೩ ॥
ಚಾಂದ್ರಾಯಣಾದಿಕೃಚ್ಛ್ರಾಣಿ ಕೃತಾನ್ಯೇವ ನ ಸಂಶಯಃ ।
ಚತುರ್ಣಾಂ ಸಾಂಗವೇದಾನಾಂ ಪಾರಾಯಣಫಲಂ ಲಭೇತ್ ॥ ೧೭೪ ॥
ಗಾಯತ್ರ್ಯಾದಿಮಹಾಮಂತ್ರಜಪಪುಣ್ಯಂ ಲಭೇತ್ತಥಾ ।
ಇತಿಹಾಸಪುರಾಣಾನಾಂ ಪಾರಾಯಣಫಲಂ ಲಭೇತ್ ॥ ೧೭೫ ॥
ಮಹಾಲಯಸಮಂ ಪುಣ್ಯಂ ವೃತ್ತಂ ನಾಽಸ್ತಿ ಮಹೀತಲೇ ।
ಬ್ರಹ್ಮವಿಷ್ಣುಮಹೇಶಾನಲೋಕಪ್ರಾಪ್ತಿರ್ಮಹಾಲಯಾತ್ ॥ ೧೭೬ ॥

---

ಕ್ಕಾಗಿ ಒಬ್ಬನನ್ನೂ, ಮಾತಾಮಹವರ್ಗಕ್ಕಾಗಿ ಒಬ್ಬನನ್ನೂ, ವಿಷ್ಣುವಿಶ್ವೇದೇವತೆಗಳಿಗಾಗಿ ಇಬ್ಬರನ್ನೂ ಹೀಗೆ ಮಹಾಲಯದಲ್ಲಿ ವೇದಾಧ್ಯಯನಮಾಡಿದವರೂ, ಸುಶೀಲರೂ ಆದ ನಾಲ್ಕು ಜನರನ್ನು ಭೋಜನಮಾಡಿಸಬೇಕು.

೧೭೧–೧೭೨. ದುಷ್ಟರನ್ನು ವರಿಸಿದರೆ ಅವರು ಶ್ರಾದ್ಧವನ್ನು ಕೆಡಿಸುವರು. ಭಾದ್ರಪದಮಾಸದ ಕೃಷ್ಣಪಕ್ಷದಲ್ಲಿ ಶುದ್ಧನಾಗಿ ಮಹಾಲಯಶ್ರಾದ್ಧವನ್ನು ಮಾಡಿದ ಮಾನವನು ಸಮಸ್ತ ತೀರ್ಥಗಳಲ್ಲಿಯೂ ಮಿಂದವನಂತಾಗುವನು.

೧೭೩–೧೭೪. ಅವನು ನೂರು ಅಗ್ನಿಷ್ಟೋಮಯಾಗಗಳನ್ನೂ, ತುಲಾಪುರುಷ ಮೊದಲಾದ ದಾನಗಳನ್ನೂ, ಚಾಂದ್ರಾಯಣಾದಿ ಕೃಚ್ಛ್ರಗಳನ್ನೂ ಮಾಡಿದವನಾಗುವನು. ನಾಲ್ಕುವೇದಗಳನ್ನು ಪಾರಾಯಣಮಾಡಿದ ಫಲವನ್ನೂ ಪಡೆಯುವನು.

೧೭೫. ಗಾಯತ್ರ್ಯಾದಿ ಮಹಾಮಂತ್ರಗಳನ್ನು ಜಪಿಸಿದ ಪುಣ್ಯವನ್ನೂ ಇತಿಹಾಸ, ಪುರಾಣಗಳನ್ನು ಪಾರಾಯಣಮಾಡಿದ ಫಲವನ್ನೂ ಹೊಂದುವನು.

೧೭೬. ಪ್ರಪಂಚದಲ್ಲಿ ಮಹಾಲಯಶ್ರಾದ್ಧವನ್ನು ಮಾಡುವುದರಿಂದ ಬ್ರಹ್ಮ

ಮಹಾಲಯಾದಿಕಂ ಶ್ರಾದ್ಧಂ ನಿತ್ಯಂ ಕಾಮ್ಯಮುಪೀಷ್ಯತೇ ।
ತಸ್ಮಾದಕರಣೇ ತಸ್ಯ ಪ್ರತ್ಯವಾಯೋ ಮಹಾನ್ಭವೇತ್ ॥ ೧೭೭ ॥
ಕರಣಾದಿಷ್ಟಸಿದ್ಧಿಶ್ಚ ಭವಿಷ್ಯತಿ ನ ಸಂಶಯಃ ।
ಮಹಾಲಯಸ್ಯ ಕರಣಾದ್ಭೂತವೇತಾಲಕಾದಯಃ ॥ ೧೭೮ ॥
ಅಪಸ್ಮಾರಗ್ರಹಾಶ್ಚಾಽಪಿ ಶಾಕಿನೀ ಡಾಕಿನೀ ಗಣಾಃ ।
ಯಾತುಧಾನಾಃ ಪಿಶಾಚಾಶ್ಚ ಪೇತಾಲಾಶ್ಚ ಭಯಾನಕಾಃ ॥ ೧೭೯ ॥
ನಶ್ಯಂತಿ ತತ್ಕ್ಷಣಾದೇವ ಭೂತಾನ್ಯನ್ಯಾನಿ ವೈ ತಥಾ ।
ಮಹಾಲಯಸ್ಯ ಕರಣಾದ್ವಿಪುಲಾಂ ಶ್ರಿಯಮಶ್ನುತೇ ॥ ೧೮೦ ॥
ಪುರಾ ದಶರಥೋ ರಾಜಾ ವಸಿಷ್ಠಸ್ಯೋಪದೇಶತಃ
ಮಾಸಿ ಭಾದ್ರಪದೇ ಪ್ರಾಪ್ತೇ ಕೃತ್ವಾ ಶ್ರಾದ್ಧಂ ಮಹಾಲಯಂ ॥ ೧೮೧ ॥
ರಾಮಾದೀಂಶ್ಚತುರಃ ಪುತ್ರಾನ್ಪ್ರಾಪ್ತವಾಂಲ್ಲೋಕಸಂಮತಾನ್ ।
ವಿಶ್ವಾಽತಿಶಾಯಿನೀಂ ಲಕ್ಷ್ಮೀಂ ಪ್ರಪೇದೇ ಕೀರ್ತಿಮುತ್ತಮಾಂ ॥ ೧೮೨ ॥
ಮಹಾಲಯಸ್ಯ ಕರಣಾದ್ಯಯಾತೀ ರಾಜಸತ್ತಮಃ ।
ಯದುಮುಖ್ಯಾನ್ಮಹಾಪುತ್ರಾನ್ಪ್ರಪೇದೇ ವಂಶವರ್ಧನಾನ್ ॥ ೧೮೩ ॥
ಅನನ್ಯದುರ್ಲಭಂ ಸ್ವರ್ಗಂ ಪ್ರಪೇದೇ ಶ್ರಾದ್ಧಪುಣ್ಯತಃ ।
ದುಷ್ಯಂತೋ ಭರತಂ ಲೇಭೇ ಮಹಾಲಯ ವಿಧಾನತಃ ॥ ೧೮೪ ॥

---

ವಿಷ್ಣು ಮಹೇಶ್ವರರ ಲೋಕಗಳು ಲಭಿಸುವುದರಿಂದ ಅದರ ಪುಣ್ಯಕ್ಕೆ ಸಮಾನವಾದ ಮತ್ತೊಂದು ಪುಣ್ಯವಿಲ್ಲ.

೧೭೭. ಮಹಾಲಯವೇ ಮೊದಲಾದ ಶ್ರಾದ್ಧಗಳು ನಿತ್ಯವೂ, ಕಾಮ್ಯವೂ ಆಗಿರುವುವು. ಆದುದರಿಂದ ಅದನ್ನು ಮಾಡದಿರುವುದರಿಂದ ಬಹಳ ಅನಿಷ್ಟಗಳು ಸಂಭವಿಸುವುವು.

೧೭೮–೧೮೦. ಮಾಡುವುದರಿಂದ ಇಷ್ಟವು ಕೈಗೂಡುವುದು. ಅಲ್ಲದೆ ಅಪಸ್ಮಾರಗ್ರಹವೂ, ಶಾಕಿನೀ, ಡಾಕಿನಿಗಳೂ, ರಾಕ್ಷಸರೂ, ಪಿಶಾಚಗಳೂ, ಭಯಂಕರವಾದ ಭೇತಾಳಗಳೂ, ಇತರ ಭೂತಗಳೂ ಕೂಡಲೆ ನಾಶವಾಗುವುವು. ಅತಿಶಯವಾದ ಸಂಪತ್ತೂ ಲಭಿಸುವುದು.

೧೮೧–೧೮೨. ಹಿಂದೆ ದಶರಥನೆಂಬ ದೊರೆಯು ವಸಿಷ್ಠಮುನಿಗಳ ಉಪದೇಶದಿಂದ ಭಾದ್ರಪದಮಾಸದಲ್ಲಿ ಮಹಾಲಯಶ್ರಾದ್ಧವನ್ನು ಮಾಡಿ ರಾಮನೇ ಮೊದಲಾದ ಲೋಕಪೂಜ್ಯರಾದ ನಾಲ್ಕುಮಂದಿ ಪುತ್ರರನ್ನೂ, ಅತಿಶಯವಾದ ಸಂಪತ್ತನ್ನೂ, ಉತ್ತಮವಾದ ಕೀರ್ತಿಯನ್ನೂ ಪಡೆದಿರುವನು.

೧೮೩–೧೮೪. ನೃಪವರ್ಯನಾದ ಯಯಾತಿಯು ಮಹಾಲಯಶ್ರಾದ್ಧವನ್ನು ಮಾಡಿದುದರಿಂದ ಸಂತತಿಯನ್ನು ವೃದ್ಧಿಗೊಳಿಸುವ ಯದುವೇ ಮೊದಲಾದ

ಮಹಾಲಯವಿಧಾನೇನ ದಮಯಂತೀಪತಿರ್ನಲಃ ।
ಕೃಚ್ಛ್ರಂ ಮಹತ್ತರಂ ತೀರ್ತ್ವಾ ಪುನರ್ಲೇಭೇ ಮಹೀಮಿಮಾಂ ॥ ೧೮೫ ॥
ನಿಜಗ್ರಾಹ ಕಲಿಂ ಘೋರಂ ಪುಷ್ಕರಂ ಚಾಽಪ್ಯರಾತಿನಂ ।
ಇಂದ್ರಸೇನಾಽಭಿಧಾನಂ ಚ ಪುತ್ರಂ ಲೇಭೇಽತಿಧಾರ್ಮಿಕಂ ॥ ೧೮೬ ॥
ಹರಿಶ್ಚಂದ್ರೋ ಮಹಾರಾಜೋ ಮಹಾಲಯವಿಧಾನತಃ ।
ವಿಶ್ವಾಮಿತ್ರಕೃತಾದ್ದುಃಖಾನ್ಮುಕ್ತಃ ಸತ್ಯವತಾಂ ವರಃ ॥ ೧೮೭ ॥
ಲೇಭೇ ಚಂದ್ರಮತೀಂ ಭಾರ್ಯಾಂ ಲೋಹಿತಾಽಶ್ವಂ ಸುತಂ ಪುನಃ ।
ಮಹಾಲಯವಿಧಾನೇನ ಕೃತವೀರ್ಯಸುತೋ ಬಲೀ ॥ ೧೮೮ ॥
ಅಷ್ಟಾದಶಾನಾಂ ದ್ವೀಪಾನಾಮಾಧಿಪತ್ಯಮವಾಪ್ತವಾನ್ ।
ರಾಮೋಽಪಿ ದಂಡಕಾಽರಣ್ಯೇ ಮಹಾಲಯವಿಧಾನತಃ ॥ ೧೮೯ ॥
ಹತ್ವಾ ತು ರಾವಣಂ ಸಾಂಖ್ಯೇ ಸೀತಾಂ ಪುನರವಾಪ್ತವಾನ್ ।
ಮಹಾಲಯಸ್ಯ ಕರಣಾದ್ಧರ್ಮಪುತ್ರೋ ಯುಧಿಷ್ಠಿರಃ ॥ ೧೯೦ ॥
ದುಃಖಸಾಗರಮುತ್ತೀರ್ಯ ಧಾರ್ತರಾಷ್ಟ್ರಾಂಜಘಾನ ಚ ।
ಮಹಾಲಯಸ್ಯ ಕರಣಾದ್ವಸಿಷ್ಠೋ ಮುನಿಸತ್ತಮಃ ॥ ೧೯೧ ॥
ಅತ್ರಿರ್ಭೃಗುಶ್ಚ ಕುತ್ಸಶ್ಚ ಗೌತಮಶ್ಚಾಽಂಗಿರಾಸ್ತಥಾ ।
ಕಶ್ಯಪಶ್ಚ ಭರದ್ವಾಜೋ ವಿಶ್ವಾಮಿತ್ರಶ್ಚ ಕುಂಭಜಃ ॥ ೧೯೨ ॥

---

ಪುತ್ರರನ್ನೂ, ಇತರರಿಗೆ ದೊರಕದ ಸ್ವರ್ಗವನ್ನೂ ಹೊಂದಿದನು. ದುಷ್ಯಂತನು ಮಹಾಲಯವನ್ನು ಮಾಡಿದುದರಿಂದ ಭರತನೆಂಬ ಸುತನನ್ನು ಪಡೆದನು.

೧೮೫. ದಮಯಂತಿಯ ಪತಿಯಾದ ನಳಮಹಾರಾಜನು ಈ ಮಹಾಲಯವನ್ನು ಮಾಡಿ ತನಗೆ ಸಂಭವಿಸಿದ ಮಹಾಕಷ್ಟವನ್ನು ದಾಟಿ ಈ ಭೂಮಿಯನ್ನು ಮರಳಿ ಪಡೆದನು.

೧೮೬. ಅವನು ಘೋರವಾದ ಕಲಿಯನ್ನೂ, ಶತ್ರುವಾದ ಪುಷ್ಕರನನ್ನೂ ನಿಗ್ರಹಿಸಿ ಇಂದ್ರಸೇನನೆಂಬ ಅತಿ ಧರ್ಮಿಷ್ಠನಾದ ಸುತನನ್ನು ಹೊಂದಿದನು.

೧೮೭–೧೯೫. ಸತ್ಯವಂತರಲ್ಲಿ ಉತ್ತಮನಾದ ಹರಿಶ್ಚಂದ್ರಮಹಾರಾಜನು ಮಹಾಲಯವನ್ನಾಚರಿಸಿ ವಿಶ್ವಾಮಿತ್ರನು ತನಗೆ ಉಂಟುಮಾಡಿದ ದುಃಖದಿಂದ ಮುಕ್ತನಾಗಿ ಮರಳಿ ಚಂದ್ರಮತಿಯೆಂಬ ಸತಿಯನ್ನೂ, ಲೋಹಿತಾಶ್ವನೆಂಬ ಸುತನನ್ನೂ ಪಡೆದನು. ಕೃತವೀರ್ಯನ ಮಗನಾದ ಕಾರ್ತವೀರ್ಯನು ಮಹಾಲಯವನ್ನು ಮಾಡಿದುದರಿಂದ ಹದಿನೆಂಟು ದ್ವೀಪಗಳಿಗೆ ಒಡೆಯನಾದನು. ಶ್ರೀರಾಮನು ದಂಡಕಾರಣ್ಯದಲ್ಲಿ ಮಹಾಲಯವನ್ನಾಚರಿಸಿದುದರಿಂದ ಯುದ್ಧದಲ್ಲಿ ರಾವಣನನ್ನು ವಧಿಸಿ ಸೀತೆಯನ್ನು ತಿರುಗಿ ಪಡೆದನು. ಧರ್ಮತನಯನಾದ ಯುಧಿಷ್ಠಿರನು ದುಃಖಸಮುದ್ರವನ್ನು ದಾಟಿ ಕೌರವರನ್ನು ಕೊಂದನು.

ಪರಾಶರೋ ಮೃಕಂಡುಶ್ಚ ಯೇಚಾಽನ್ಯೇ ಮುನಿಸತ್ತಮಾಃ ।
ವಿಧಾಯ ವಿಧಿವಚ್ಛ್ರಾದ್ಧಂ ಮಹಾಲಯಮನುತ್ತಮಂ ॥ ೯೩ ॥
ಅಣಿಮಾದ್ಯಷ್ಟಸಿದ್ಧೀನಾಂ ವ್ರತಾನಾಂ ತಪಸಾಂ ತಥಾ ।
ನಿವಾಸಭೂತಾ ಸಂಜಾತಾಸ್ತಥಾ ವಿಶ್ವಾಽತಿಶಾಯಿನಃ ॥ ೯೪ ॥
ಜೀವನ್ಮುಕ್ತಾಶ್ಚ ತೇ ಸರ್ವೇ ಹ್ಯಭವನ್ಮುನಿಸತ್ತಮಾಃ ।
ಅತೋ ಮಹಾಲಯಶ್ರಾದ್ಧಂ ಕರ್ತವ್ಯಂ ಭೂತಿಮಿಚ್ಛತಾ ॥ ೯೫ ॥
ಅತೋಽದ್ಯಾಽಪಿ ದುರಾಚಾರ ನ ಕುರ್ಯಾದ್ಯೋ ಮಹಾಲಯಂ ।
ಭೂತವೇತಾಲಕಾದಿಭ್ಯೋ ಭೂಯಾತ್ತಸ್ಯ ಮಹದ್ಭಯಂ ॥ ೯೬ ॥
ಮಹಾಲಯಸ್ಯಾಽಕರಣಾದ್ವೇತಾಲತ್ವಮವಾಪ್ನುಯಾತ್ ।
ತ್ವಯಾವಿಷ್ಟಮಿದಂ ಭೂತಂ ವಿಪ್ರಃಸನ್ಪೂರ್ವಜನ್ಮನಿ ॥ ೯೭ ॥
ನಾಮ್ನಾ ವೇದನಿಧಿಃ ಪುಣ್ಯೇ ಭರದ್ವಾಜಸ್ಯ ಚಾತ್ಮನಃ ।
ಕುಶಸ್ಥಲ್ಯಭಿಧಾನೇ ಚ ವಸನ್ಗ್ರಾಮೇ ಮಹಾಮನಾಃ ॥ ೯೮ ॥
ನ ಚಕಾರ ವಿಧಾನೇನ ಶ್ರಾದ್ಧಮೇತನ್ಮಹಾಲಯಂ ।
ತತೋಽಯಂ ಪಿತೃಶಾಪಾದ್ವೈವೇತಾಲತ್ವಮವಾಪ್ತವಾನ್ ॥ ೯೯ ॥
ತಸ್ಮಾದ್ಭಾದ್ರಪದೇ ಮಾಸೇ ದುರಾಚಾರ ಪಿತೄನ್ಪ್ರತಿ ।
ಬ್ರಾಹ್ಮಣಾನ್ಭೋಜಯಾಽನ್ನೇನ ಷಡ್ರಸೇನ ಸಭಕ್ತಿಕಂ ॥ ೧೦೦ ॥

---

ವಸಿಷ್ಠ, ಅತ್ರಿ, ಭೃಗು, ಕುತ್ಸ, ಗೌತಮ, ಅಂಗಿರಸ್ಸ, ಕಶ್ಯಪ, ಭರದ್ವಾಜ, ವಿಶ್ವಾಮಿತ್ರ, ಅಗಸ್ತ್ಯ, ಪರಾಶರ, ಮೃಕಂಡು ಇವರೇ ಮೊದಲಾದ ಮುನಿವರ್ಯರು ವಿಧಿಯಂತೆ ಶ್ರೇಷ್ಠವಾದ ಈ ಮಹಾಲಯವನ್ನಾಚರಿಸಿ ಅಣಿಮಾದಿ ಅಷ್ಟಸಿದ್ಧಿಗಳಿಗೂ, ತಪಸ್ಸುಗಳಿಗೂ ಆಶ್ರಯರಾಗಿ ಸರ್ವೋತ್ತಮರೂ, ಜೀವನ್ಮುಕ್ತರೂ ಆದರು. ಆದುದರಿಂದ ಅಭ್ಯುದಯವನ್ನು ಬಯಸುವ ಮಾನವನು ಅವಶ್ಯವಾಗಿ ಮಹಾಲಯಶ್ರಾದ್ಧವನ್ನು ಮಾಡಬೇಕು.

೯೬–೯೯. ಅಯ್ಯಾ ದುರಾಚಾರನೆ! ಈಗಲೂ ಮಹಾಲಯವನ್ನು ಮಾಡದವನಿಗೆ ಭೂತಭೇತಾಳಾದಿಗಳಿಂದ ಮಹಾಭಯವು ಸಂಭವಿಸುವುದು. ಅವನು ಭೇತಾಳನೂ ಆಗುವನು. ನಿನ್ನಿಂದ ಆವೇಶಗೊಂಡ ಈ ಭೂತವು ಪೂರ್ವಜನ್ಮದಲ್ಲಿ ಕುಶಸ್ಥಳಿಯೆಂಬ ಗ್ರಾಮದಲ್ಲಿ ವಾಸಿಸುತ್ತಿದ್ದ ಭರದ್ವಾಜನ ಮಗನಾದ ವೇದನಿಧಿಯೆಂಬ ಬ್ರಾಹ್ಮಣನು. ಇವನು ವಿಧಿಯಿಂದ ಮಹಾಲಯವನ್ನು ಮಾಡದಕಾರಣ ಪಿತೃಶಾಪದಿಂದ ಭೇತಾಳನಾದನು.

೧೦೦. ಎಲೈ ದುರಾಚಾರನೆ! ಆದುದರಿಂದ ನೀನು ಭಾದ್ರಪದಮಾಸದಲ್ಲಿ ಷಡ್ರಸಗಳಿಂದ ಕೂಡಿದ ಅನ್ನದಿಂದ ಭಕ್ತಿಪೂರ್ವಕವಾಗಿ ಬ್ರಾಹ್ಮಣರನ್ನು ಭೋಜನಮಾಡಿಸು.

ದಾರಿದ್ರ್ಯಂ ತೇನ ತೇ ನ ಸ್ಯಾತ್ಸುಖೀ ಚೈವ ಭವಾನ್ಭವೇತ್ ।
ಮಹಾಪಾತಕಿಸಂಸರ್ಗಂ ಮಾ ಕುರು ತ್ವಮಿತಃಪರಂ ॥ ೨೦೧ ॥
ತ್ವಯಾಽಸುಭೂತಂ ಯದ್ದುಃಖಂ ವೇತಾಲಗ್ರಹಣೋದ್ಭವಂ ।
ಗಚ್ಛ ತ್ವಮನುಜಾನಾಮಿ ಸ್ವದೇಶಂ ಪ್ರತಿ ಮಾ ಚಿರಂ ॥ ೨೦೨ ॥
ಇತೀರಿತಃ ಸ ಮುನಿನಾ ದತ್ತಾತ್ರೇಯೇಣ ಯೋಗಿನಾ ।
ತಂ ಪ್ರಣಮ್ಯ ಯಯೌ ದೇಶಂ ಕೃತಾರ್ಥೋಽಸಾವಂತರಾತ್ಮನಾ ॥ ೨೦೩ ॥
ಗತ್ವಾಚ ಸ್ವಗೃಹಂ ವಿಪ್ರೋ ದುರಾಚಾರೋ ದ್ವಿಜೋತ್ತಮಾಃ ।
ವಿಮುಕ್ತವೇತಾಲಭಯೋ ಗತಪಾತಕಕಂಚುಕಃ ॥ ೨೦೪ ॥
ದತ್ತಾತ್ರೇಯೇರಿತೇನಾಽಸೌ ಮಾರ್ಗೇಣ ಪ್ರೀತಮಾನಸಃ ।
ತ್ಯಕ್ತಪಾತಕಿಸಂಸರ್ಗಃ ಸ್ವಾಶ್ರಮಾಚಾರತತ್ಪರಃ ॥ ೨೦೫ ॥
ರಾಮಚಂದ್ರ ಧನುಷ್ಕೋಟಿ ತೀರ್ಥಮಜ್ಜನ ಗೌರವಾತ್ ।
ದೇಹಾಂತೇ ಪರಮಾಂ ಮುಕ್ತಿಂ ದುರಾಚಾರೋ ಯಯೌ ತದಾ ॥ ೨೦೬ ॥

ಶ್ರೀ ಸೂತ ಉವಾಚ :—

ಏವಂ ವಃ ಕಥಿತಂ ಪುಣ್ಯಂ ದುರಾಚಾರ ವಿಮೋಕ್ಷಣಂ ।
ಸೇಯಂ ಪುಣ್ಯಾ ಧನುಷ್ಕೋಟಿರ್ಮಹಾಪಾತಕನಾಶಿನೀ ॥ ೨೦೭ ॥
ಯತ್ರ ಹಿ ಸ್ನಾನಮಾತ್ರೇಣ ದುರಾಚಾರೋ ವಿಮೋಚಿತಃ ।
ಅಥವಾ ಧನುಷಃ ಕೋಟೇರಿಯತ್ತಾ ಕಿಂ ಹಿ ವೈ ಭವೇತ್ ॥ ೨೦೮ ॥

---

೨೦೧–೨೦೨. ಆದರಿಂದ ನಿನ್ನ ಬಡತನವು ನೀಗಿ ನೀನು ಸುಖಿಯಾಗಿರುವೆ. ನೀನು ಇನ್ನುಮುಂದೆ ಪಾತಕಿಗಳ ಸಹವಾಸವನ್ನು ಮಾಡಬೇಡ. ಅದರಿಂದಲೇ ನೀನು ಭೇತಾಳನಿಂದ ಆವಿಷ್ಟನಾಗಿ ದುಃಖವನ್ನನುಭವಿಸಿರುವೆ. ನೀನು ಜಾಗ್ರತೆಯಾಗಿ ನಿನ್ನ ದೇಶಕ್ಕೆ ತೆರಳು. ನಾನು ಅನುಮತಿಯನ್ನಿತ್ತಿರುವೆನು.''

೨೦೩. ದತ್ತಾತ್ರೇಯಯೋಗಿಯು ಹೀಗೆನ್ನಲು ದುರಾಚಾರನು ಅವನನ್ನು ವಂದಿಸಿ ಕೃತಕೃತ್ಯನಾಗಿ ತನ್ನ ದೇಶಕ್ಕೆ ಹೋದನು.

೨೦೪–೨೦೬. ಅಲ್ಲಿ ತನ್ನ ಮನೆಯನ್ನು ಸೇರಿ ಭೇತಾಳನ ಭಯವಿಲ್ಲದೆ ಪಾಪರಹಿತನಾಗಿ ದತ್ತಾತ್ರೇಯನು ಹೇಳಿದ ಕ್ರಮದಿಂದ ಪಾತಕಿಗಳ ಸಂಗವನ್ನು ತ್ಯಜಿಸಿ ಸಂತುಷ್ಟನಾಗಿ ತನ್ನ ಆಶ್ರಮದ ಆಚಾರದಲ್ಲಿ ನಿರತನಾಗಿ ಧನುಷ್ಕೋಟಿಯಲ್ಲಿ ಮಿಂದುದರಿಂದ ದೇಹಾವಸಾನದಲ್ಲಿ ಮೋಕ್ಷವನ್ನೈದಿದನು.

೨೦೭. ಶ್ರೀಸೂತನು ಹೇಳುತ್ತಾನೆ:—ಹೀಗೆ ನಿಮಗೆ ದುರಾಚಾರನಿಗೆ ಮೋಕ್ಷವಾದ ಬಗೆಯನ್ನೊಳಗೊಂಡ ಪುಣ್ಯಕಥೆಯನ್ನು ಹೇಳಿರುವೆನು. ಈ ಧನುಷ್ಕೋಟಿಯು ಪುಣ್ಯಕರವೂ ಪಾಪನಾಶಕವೂ ಆಗಿರುವುದು.

೨೦೮–೨೧೦. ಇದರಲ್ಲಿ ಸ್ನಾನಮಾಡುವುದರಿಂದ ದುರಾಚಾರನು ಮುಕ್ತ

ಯಾ ನಿಷ್ಕೃತಿವಿಹೀನಾನಿ ಪಾಪಾನ್ಯಪಿ ವಿನಾಶಯೇತ್ ।
ಪ್ರಾಯಶ್ಚಿತ್ತವಿಹೀನಾನಿ ಯಾನಿ ಪಾಪಾನಿ ಸಂತಿ ವೈ ॥ ೨೦೯ ॥
ತಾನ್ಯಪ್ಯತ್ರ ವಿನಶ್ಯಂತಿ ಧನುಷ್ಕೋಟೌ ನಿಮಜ್ಜನಾತ್ ।
ಶೂದ್ರೇಣ ಪೂಜಿತಂ ಲಿಂಗಂ ವಿಷ್ಣುಂ ವಾ ಯೋ ನಮೇದ್ದ್ವಿಜಃ॥ ೨೧೦ ॥
ಪ್ರಾಯಶ್ಚಿತ್ತಂ ನ ತಸ್ಯೋಕ್ತಂ ಸ್ಮೃತಿಭಿಃ ಪರಮರ್ಷಿಭಿಃ ।
ಸಶ್ಯೇತ್ತಸ್ಯಾಽಪಿ ತತ್ಪಾಪಂ ಧನುಷ್ಕೋಟಿನಿಮಜ್ಜನಾತ್ ॥ ೨೧೧ ॥
ವಿಪ್ರನಿಂದಾಕೃತಾಂ ನೃಣಾಂ ಪ್ರಾಯಶ್ಚಿತ್ತಂ ನ ವಿದ್ಯತೇ ।
ವಿಶ್ವಾಸಘಾತಕಾನಾಂ ಚ ಕೃತಘ್ನಾನಾಂ ನ ನಿಷ್ಕೃತಿಃ ॥ ೨೧೨ ॥
ಭ್ರಾತೃಭಾರ್ಯಾರತಾನಾಂ ಚ ಪ್ರಾಯಶ್ಚಿತ್ತಂ ನ ವಿದ್ಯತೇ ।
ಶೂದ್ರಾನ್ನೇ ನಿಯತಾನಾಂ ಚ ಶ್ರುತಿನಿಂದಾರತಾತ್ಮನಾಂ ॥ ೨೧೩ ॥
ಕನ್ಯಾವಿಕ್ರಯಿಣಾಂ ವಿಪ್ರಾ ಹಯವಿಕ್ರಯಿಣಾಂ ತಥಾ ।
ದೇವವಿಕ್ರಯಿಣಾಂ ವೇದವಿಕ್ರಯೇ ನಿರತಾತ್ಮನಾಂ ॥ ೨೧೪ ॥
ಧರ್ಮವಿಕ್ರಯಿಣಾಂ ಪುಂಸಾಂ ವ್ರತವಿಕ್ರಯಿಣಾಂ ತಥಾ ।
ತೀರ್ಥವಿಕ್ರಯಿಣಾಂ ಪುಂಸಾಂ ಪ್ರಾಯಶ್ಚಿತ್ತಂ ನ ವಿದ್ಯತೇ ॥ ೨೧೫ ॥
ತೇಷಾಂ ಪಾಪಾನಿ ನಶ್ಯಂತಿ ಧನುಷ್ಕೋಟೌ ನಿಮಜ್ಜನಾತ್ ।
ಮಾತೃದ್ರೋಹಪಿತೃದ್ರೋಹಯತಿದ್ರೋಹರತಾತ್ಮನಾಂ ॥ ೨೧೬ ॥
ಗುರುನಿಂದಾಪರಾಣಾಂ ಚ ಶಿವನಿಂದಾರತಾತ್ಮನಾಂ ।
ವಿಷ್ಣುನಿಂದಾಪರಾಣಾಂ ಚ ಯತಿನಿಂದಾರತಾತ್ಮನಾಂ ॥ ೨೧೭ ॥

---

ನಾದನು. ಇಂತಹ ಧನುಷ್ಕೋಟಿಯ ಮಾಹಾತ್ಮ್ಯೆಯನ್ನು ಇಷ್ಟೆಂದು ನಿರ್ಣಯಿಸಿ ಹೇಳಲಾಗದು. ಇದು ಪ್ರಾಯಶ್ಚಿತ್ತವಿಲ್ಲದ ಪಾಪಗಳನ್ನು ಸ್ನಾನಮಾಡುವುದರಿಂದ ನಾಶಗೊಳಿಸುವುದು. ಶೂದ್ರನು ಪೂಜಿಸಿದ ಮಹೇಶ್ವರ ಲಿಂಗವನ್ನಾಗಲಿ, ವಿಷ್ಣುವನ್ನಾಗಲಿ ವಂದಿಸುವುದರಿಂದ ನಿಷ್ಕೃತಿಯಿರುವುದಿಲ್ಲ.

೨೧೧. ಮುನಿವರ್ಯರು ಸ್ಮೃತಿಗಳಲ್ಲಿ ಪ್ರಾಯಶ್ಚಿತ್ತವಿಲ್ಲವೆಂದು ಹೇಳಿದ ಪಾಪವು ಕೂಡ ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದ ನಾಶವಾಗುವುದು.

೨೧೨-೨೧೮. ಬ್ರಾಹ್ಮಣರನ್ನು ನಿಂದಿಸುವವರೂ, ವಿಶ್ವಾಸಘಾತುಕರೂ, ಕೃತಘ್ನರೂ, ಸಹೋದರರ ಪತ್ನಿಯರಲ್ಲಿ ಆಸಕ್ತರೂ, ಶೂದ್ರಾನ್ನವನ್ನು ಭುಂಜಿಸುವವರೂ, ವೇದನಿಂದೆಯಲ್ಲಿ ನಿರತರೂ, ಕನ್ಯೆ, ಕುದುರೆ, ದೇವರು, ವೇದ, ಧರ್ಮ, ವ್ರತ, ತೀರ್ಥ ಇವುಗಳನ್ನು ಮಾರುವವರೂ ಆದ ಮಾನವರ ಪಾಪಕ್ಕೆ ಪ್ರಾಯಶ್ಚಿತ್ತವಿಲ್ಲ. ಆದರೂ ಆ ಪಾಪಗಳು ಧನುಷ್ಕೋಟಿ ಸ್ನಾನದಿಂದ ನೀಗುವುವು. ಮಾತೃ, ಪಿತೃ, ಯತಿಗಳಿಗೆ ದ್ರೋಹಮಾಡುವುದರಲ್ಲಿ ನಿರತರೂ, ಗುರು, ಶಿವ, ವಿಷ್ಣು, ಯತಿ ಇವರ ನಿಂದೆಯಲ್ಲಿ ಆಸಕ್ತರೂ, ಸತ್ಕಥೆಯನ್ನು

ಸತ್ಕಥಾದೂಷಕಾಣಾಂ ಚ ಪ್ರಾಯಶ್ಚಿತ್ತಂ ನ ವಿದ್ಯತೇ ।
ತೇಷಾಂ ಚಾಽತ್ರ ಧನುಷ್ಕೋಟೌ ಸ್ನಾನಾಚ್ಛುದ್ಧಿರ್ಭವಿಷ್ಯತಿ ॥ ೨೧೮ ॥
ಏವಂ ವಃ ಕಥಿತಂ ವಿಪ್ರಾ ಧನುಷ್ಕೋಟೇಸ್ತು ವೈಭವಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವೋ ಭುವಿ ॥೨೧೯॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಧನುಷ್ಕೋಟಿಪ್ರಶಂಸನಂ–ದುರಾಚಾರಸಂಸರ್ಗದೋಷಶಾಂತಿವರ್ಣನಂ" ನಾಮ ಷಟ್‌ತ್ರಿಂಶೋಽಧ್ಯಾಯಃ

---

ದೂಷಿಸುವವರೂ ಆದವರ ಪಾಪಕ್ಕೆ ಪ್ರಾಯಶ್ಚಿತ್ತವಿಲ್ಲ. ಆ ಪಾಪವೂ ಧನುಷ್ಕೋಟಿ ಸ್ನಾನದಿಂದ ಪರಿಹಾರವಾಗುವುದು.

೨೧೯. ಅಯ್ಯಾ ಬ್ರಾಹ್ಮಣರೆ! ಈ ರೀತಿ ನಿಮಗೆ ಧನುಷ್ಕೋಟಿಯ ಮಾಹಾತ್ಮ್ಯೆಯನ್ನು ಹೇಳಿರುವೆನು. ಈ ಲೋಕದಲ್ಲಿ ಇದನ್ನು ಕೇಳಿದ ಮಾನವನು ಸಕಲ ಪಾಪಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಧನುಷ್ಕೋಟಿಪ್ರಶಂಸನ – ದುರಾಚಾರಸಂಸರ್ಗದೋಷಶಾಂತಿವರ್ಣನ"ವೆಂಬ ಮೂವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತ್ರಿಂಶೋಽಧ್ಯಾಯಃ

### ಕ್ಷೀರಕುಂಡಸ್ವರೂಪಕಥನಂ

ಶ್ರೀ ಸೂತ ಉವಾಚ :—

ಭೋ ಭೋಸ್ತಪೋಧನಾಃ ಸರ್ವೇ ನೈಮಿಷಾಽರಣ್ಯವಾಸಿನಃ ।
ಯಾವದ್ರಾಮಧನುಷ್ಕೋಟಿ ಚಕ್ರತೀರ್ಥಮುಖಾನಿ ವಃ ॥ ೧ ॥
ಚತುರ್ವಿಂಶತಿ ತೀರ್ಥಾನಿ ಕಥಿತಾನಿ ಮಯಾಽಧುನಾ ।
ಇತೋಽನ್ಯದದ್ಭುತಂ ಯೂಯಂ ಕಿಂ ಭೂಯಃ ಶ್ರೋತುಮಿಚ್ಛಥ ॥ ೨ ॥

ಮುನಯ ಊಚು :—

ಕ್ಷೀರಕುಂಡಸ್ಯ ಮಾಹಾತ್ಮ್ಯಂ ಶ್ರೋತುಮಿಚ್ಛಾಮಹೇ ಮುನೇ ।
ಯತ್ಸಮೀಪೇ ತ್ವಯಾ ಚಕ್ರತೀರ್ಥಮಿತ್ಯುದಿತಂ ಪುರಾ ॥ ೩ ॥
ಕ್ಷೀರಕುಂಡಂ ಚ ತತ್ಕುತ್ರ ಕೀದೃಶಂ ತಸ್ಯ ವೈಭವಂ ।
ಕ್ಷೀರಕುಂಡಮಿತಿ ಖ್ಯಾತಿಃ ಕಥಂ ವಾಽಸ್ಯ ಸಮಾಗತಾ ॥ ೪ ॥
ಏತನ್ನಃ ಶ್ರದ್ಧಧಾನಾನಾಂ ವಿಸ್ತರಾದ್ವಕ್ತುಮರ್ಹಸಿ ।
ಬ್ರವೀಮಿ ಮುನಯಃ ಸರ್ವೇ ಶೃಣುಧ್ವಂ ಸುಸಮಾಹಿತಾಃ ॥ ೫ ॥

ಶ್ರೀ ಸೂತ ಉವಾಚ :—

ದೇವೀಪುರಾನ್ಮಹಾಪುಣ್ಯಾತ್ಪ್ರತೀಚ್ಯಾಂ ದಿಶ್ಯದೂರತಃ ।
ಫುಲ್ಲಗ್ರಾಮಮಿತಿ ಖ್ಯಾತಂ ಸ್ಥಾನಮಸ್ತಿ ಮಹತ್ತರಂ ॥ ೬ ॥

---

## ಕನ್ನಡದ ಅನುವಾದ

### ಕ್ಷೀರಕುಂಡಸ್ವರೂಪಕಥನ

೧—೨. ಶ್ರೀಸೂತನು ಹೇಳುತ್ತಾನೆ:— ಎಲೈ ನೈಮಿಷಾರಣ್ಯವಾಸಿಗಳಾದ ಮುನಿಗಳೆ! ನಾನೀಗ ನಿಮಗೆ ಧನುಷ್ಕೋಟಿ ಮತ್ತು ಚಕ್ರತೀರ್ಥವೇ ಮೊದಲಾದ ಇಪ್ಪತ್ತನಾಲ್ಕು ತೀರ್ಥಗಳ ವಿಚಾರವನ್ನು ಹೇಳಿರುವೆನು. ಇನ್ನೂ ಅದ್ಭುತವಾದ ಯಾವ ವಿಷಯವನ್ನು ಕೇಳಲು ಬಯಸುತ್ತೀರಿ?

೩. ಮುನಿಗಳು ಕೇಳುತ್ತಾರೆ:— ಎಲೈ ಸೂತಮಹರ್ಷಿಯೆ! ಚಕ್ರ ತೀರ್ಥದ ಬಳಿಯಿರುವ ಕ್ಷೀರಕುಂಡದ ಮಾಹಾತ್ಮ್ಯವನ್ನು ಕೇಳಲಿಚ್ಛಿಸುವೆವು.

೪—೫. ಕ್ಷೀರಕುಂಡವೆಲ್ಲಿರುವುದು? ಅದರ ಮಾಹಾತ್ಮ್ಯವೇನು? ಇದಕ್ಕೆ ಕ್ಷೀರಕುಂಡವೆಂದು ಹೆಸರುಬರಲು ಕಾರಣವೇನು? ಶ್ರದ್ಧೆಯಿಂದ ಕೇಳುತ್ತಿರುವ ನಮಗೆ ಇದನ್ನು ವಿಸ್ತಾರವಾಗಿ ಹೇಳು.

೬. ಶ್ರೀಸೂತನು ಹೇಳುತ್ತಾನೆ:—ಎಲೈ ಮುನಿಗಳೆ! ಹೇಳುತ್ತೇನೆ;

ಯತ ಆರಭ್ಯ ರಾಮೇಣ ಸೇತುಬಂಧೋ ಮಹಾರ್ಣವೇ ।
ತದ್ಧಿ ಪುಣ್ಯತಮಂ ಕ್ಷೇತ್ರಂ ಫುಲ್ಲಗ್ರಾಮಾಭಿಧಂ ಪುರಂ ॥ ೭ ॥
ಕ್ಷೀರಕುಂಡಂ ತು ತತ್ರೈವ ಮಹಾಪಾತಕನಾಶನಂ ।
ದರ್ಶನಾತ್ಸ್ಪರ್ಶನಾದ್ಧ್ಯಾನಾತ್ಕೀರ್ತನಾಚ್ಚಾಽಪಿ ಮೋಕ್ಷದಂ ॥ ೮ ॥
ತಸ್ಯ ತೀರ್ಥಸ್ಯ ಪುಣ್ಯಸ್ಯ ಕ್ಷೀರಕುಂಡಮಿತಿ ಪ್ರಥಾಂ ।
ಭವತಾಂ ಸಾದರಂ ವಕ್ಷ್ಯೇ ಶೃಣುಧ್ವಂ ಶ್ರದ್ಧಯಾ ಸಹ ॥ ೯ ॥
ಪುರಾ ಹಿ ಮುದ್ಗಲೋ ನಾಮ ಮುನಿರ್ವೇದೋಕ್ತಮಾರ್ಗಕೃತ್ ।
ದಕ್ಷಿಣಾಂಬುನಿಧೇಸ್ತೀರೇ ಫುಲ್ಲಗ್ರಾಮೇಽತಿಪಾವನೇ ॥ ೧೦ ॥
ನಾರಾಯಣಪ್ರೀತಿಕರಮಕರೋದ್ಯಜ್ಞಮುತ್ತಮಂ ।
ತಸ್ಯ ವಿಷ್ಣುಃ ಪ್ರಸನ್ನಾತ್ಮಾ ಯಾಗೇನ ಪರಿತೋಷಿತಃ ॥ ೧೧ ॥
ಪ್ರಾದುರ್ಬಭೂವ ಪುರತೋ ಯಜ್ಞವಾಟೇ ದ್ವಿಜೋತ್ತಮಾಃ ।
ತಂ ದೃಷ್ಟ್ವಾ ಮುದ್ಗಲೋ ವಿಷ್ಣುಂ ಲಕ್ಷ್ಮೀಶೋಭಿತವಿಗ್ರಹಂ ॥ ೧೨ ॥
ಕಾಲಮೇಘತನುಂ ಕಾಂತ್ಯಾ ಪೀತಾಂಬರವಿರಾಜಿತಂ ।
ವಿನತಾನಂದನಾರೂಢಂ ಕೌಸ್ತುಭಾಲಂಕೃತೋರಸಂ ॥ ೧೩ ॥

---

ಮನಸ್ಸಿಟ್ಟು ಕೇಳಿರಿ. ಪವಿತ್ರವಾದ ದೇವೀಪುರದಿಂದ ಪಶ್ಚಿಮದಿಕ್ಕಿನಲ್ಲಿ ಸಮೀಪದಲ್ಲಿಯೇ ಫುಲ್ಲಗ್ರಾಮವೆಂಬ ಮಹಾಕ್ಷೇತ್ರವಿರುವುದು.

೭. ಈ ಗ್ರಾಮದಿಂದ ಆರಂಭಿಸಿ ಶ್ರೀರಾಮನು ಸೇತುವೆಯನ್ನು ಕಟ್ಟಿರುವುದರಿಂದ ಇದು ಅತಿ ಪವಿತ್ರವಾದ ಕ್ಷೇತ್ರವಾಗಿರುವುದು.

೮. ಅಲ್ಲಿಯೇ ಮಹಾಪಾತಕಗಳನ್ನು ಪರಿಹರಿಸುವುದೂ, ದರ್ಶನ, ಸ್ಪರ್ಶನ, ಧ್ಯಾನ, ನಾಮಕೀರ್ತನಗಳಿಂದ ಮೋಕ್ಷವನ್ನೀಯುವುದೂ ಆಗಿರುವ ಕ್ಷೀರಕುಂಡವಿರುವುದು.

೯. ಇದಕ್ಕೆ ಕ್ಷೀರಕುಂಡವೆಂದು ಪ್ರಸಿದ್ಧಿಬರಲು ಕಾರಣವನ್ನು ಆದರದಿಂದ ಹೇಳುವೆನು. ನೀವೂ ಶ್ರದ್ಧೆಯಿಂದ ಕೇಳಿರಿ.

೧೦–೧೮. ಹಿಂದೆ ವೇದೋಕ್ತಮಾರ್ಗದಲ್ಲಿಯೆ ನಡೆಯುವ ಮುದ್ಗಲನೆಂಬ ಮುನಿಯು ದಕ್ಷಿಣಸಮುದ್ರದ ದಡದಲ್ಲಿರುವ ಅತಿಪಾವನವಾದ ಫುಲ್ಲಗ್ರಾಮದಲ್ಲಿ ನಾರಾಯಣನಿಗೆ ಸಂತೋಷವನ್ನುಂಟುಮಾಡುವ ಉತ್ತಮವಾದ ಯಜ್ಞವನ್ನು ಮಾಡಿದನು. ಆ ಯಾಗದಿಂದ ಪ್ರಸನ್ನನಾದ ವಿಷ್ಣುವು ಸಂತೋಷದಿಂದ ಯಜ್ಞಶಾಲೆಯಲ್ಲಿಯೆ ಪ್ರತ್ಯಕ್ಷನಾದನು. ಮುದ್ಗಲನು ಲಕ್ಷ್ಮೀಸಹಿತನೂ, ನೀಲಮೇಘದಂತೆ ಕಾಂತಿಯುಳ್ಳ ಶರೀರವುಳ್ಳವನೂ, ಪೀತಾಂಬರಧಾರಿಯೂ, ಗರುಡವಾಹನನೂ, ಕೌಸ್ತುಭದಿಂದ ಅಲಂಕೃತವಾದ ಎದೆಯುಳ್ಳವನೂ, ಶಂಖ ಚಕ್ರ ಗದಾ

ಶಂಖಚಕ್ರಗದಾಪದ್ಮರಾಜದ್ಬಾಹುಚತುಷ್ಟಯಂ ।
ಭಕ್ತ್ಯಾ ಪರವಶೋ ದೃಷ್ಟ್ವಾ ಪುಲಕಾಂಕುರಮಂಡಿತಃ ।
ಮುದ್ಗಲಃ ಪರಿತುಷ್ಟಾವ ಶಬ್ದೈಃ ಶ್ರೋತ್ರಸುಖಾವಹೈಃ ॥ ೧೪ ॥
ಮುದ್ಗಲ ಉವಾಚ :—
ಪ್ರಥಮಂ ಜಗತಃ ಸ್ರಷ್ಟ್ರೇ ಪಾಲಕಾಯ ತತಃ ಪರಂ ॥ ೧೫ ॥
ಸಂಹರ್ತ್ರೇ ಚ ತತಃ ಪಶ್ಚಾನ್ನಮೋ ನಾರಾಯಣಾಯ ತೇ ।
ನಮಃ ಶಫರರೂಪಾಯ ಕಮಠಾಯ ಚಿದಾತ್ಮನೇ ॥ ೧೬ ॥
ನಮೋ ವರಾಹವಪುಷೇ ನಮಃ ಪಂಚಾಸ್ಯರೂಪಿಣೇ ।
ವಾಮನಾಯ ನಮಸ್ತುಭ್ಯಂ ಜಮದಗ್ನಿಸುತಾಯತೇ ॥ ೧೭ ॥
ರಾಘವಾಯ ನಮಸ್ತುಭ್ಯಂ ಬಲಭದ್ರಾಯ ತೇ ನಮಃ ।
ಕೃಷ್ಣಾಯ ಕಲ್ಕಯೇ ತುಭ್ಯಂ ನಮೋ ವಿಜ್ಞಾನರೂಪಿಣೇ ॥ ೧೮ ॥
ರಕ್ಷ ಮಾಂ ಕರುಣಾಸಿಂಧೋ ನಾರಾಯಣ ಜಗತ್ಪತೇ ।
ನಿರ್ಲಜ್ಜಂ ಕೃಪಣಂ ಕ್ರೂರಂ ಪಿಶುನಂ ದಾಂಭಿಕಂ ಕೃಶಂ ॥ ೧೯ ॥
ಪರದಾರಪರದ್ರವ್ಯಪರಕ್ಷೇತ್ರೈಕಲೋಲುಪಂ ।
ಅಸೂಯಾವಿಷ್ಟಮನಸಂ ಮಾಂ ರಕ್ಷ ಕೃಪಯಾ ಹರೇ ॥ ೨೦ ॥
ಇತಿ ಸ್ತುತೋ ಹರಿಃ ಸಾಕ್ಷಾನ್ಮುದ್ಗಲೇನ ದ್ವಿಜೋತ್ತಮಾಃ ।
ತಮಾಹ ಮುದ್ಗಲಮುನಿಂ ಮೇಘಗಂಭೀರಯಾ ಗಿರಾ ॥ ೨೧ ॥

---

ಪದ್ಮಗಳಿಂದ ವಿರಾಜಿಸುವ ನಾಲ್ಕುತೋಳುಗಳುಳ್ಳವನೂ ಆಗಿರುವ ವಿಷ್ಣುವನ್ನು ಕಂಡು ಭಕ್ತಿಪರವಶನಾಗಿ ರೋಮಾಂಚಗೊಂಡು ಕಿವಿಗಿಂಪಾದ ಶಬ್ದಗಳಿಂದ ಈ ರೀತಿ ಸ್ತುತಿಸಿದನು.

೧೫–೧೮. ಮುದ್ಗಲನು ಸ್ತುತಿಸುತ್ತಾನೆ:— "ಮೊದಲು ಜಗತ್ತನ್ನು ಸೃಷ್ಟಿಸಿ, ಅನಂತರ ಅದನ್ನು ಕಾಪಾಡಿ, ಕೊನೆಗೆ ಸಂಹರಿಸುವ ಓ ನಾರಾಯಣನೆ! ನಿನಗೆ ನಮಸ್ಕಾರವು. ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ದಾಶರಥಿರಾಮ, ಬಲರಾಮ, ಕೃಷ್ಣ, ಕಲ್ಕಿರೂಪಿಯಾದ ಓ ನಾರಾಯಣ! ನಿನಗೆ ನಮಸ್ಕಾರವು.

೧೯–೨೦. ದಯಾಳುವೂ, ಜಗದೊಡೆಯನೂ ಆದ ಓ ಸ್ವಾಮಿಯೆ! ನಾಚಿಕೆಯಿಲ್ಲದವನೂ, ದೀನನೂ, ಕ್ರೂರನೂ, ಚಾಡಿಹೇಳುವವನೂ, ದಾಂಭಿಕನೂ, ಕೃಶನೂ, ಪರರ ಹೆಂಡರು, ದ್ರವ್ಯ, ಹೊಲ ಇವುಗಳಲ್ಲಿ ಆಸಕ್ತನೂ, ಅಸೂಯೆಯುಳ್ಳವನೂ ಆಗಿರುವ ನನ್ನನ್ನು ದಯೆಯಿಂದ ಕಾಪಾಡು."

೨೧. ಎಲೈ ವಿಪ್ರವರ್ಯರೆ! ಮುದ್ಗಲನು ಈ ರೀತಿಯಾಗಿ ಸ್ತುತಿಸಲು, ನಾರಾಯಣನು ಮೇಘಧ್ವನಿಯಂತೆ ಗಂಭೀರವಾದ ಮಾತಿನಿಂದ ಅವನನ್ನು ಕುರಿತು ಇಂತೆಂದನು:

ಶ್ರೀ ಹರಿರುವಾಚ :—

ಪ್ರೀತೋಽಸ್ಮ್ಯನೇನ ಸ್ತೋತ್ರೇಣ ಮುದ್ಗಲ ಕ್ರತುನಾ ಚ ತೇ ।
ಪ್ರತ್ಯಕ್ಷೇಣ ಹವಿರ್ಭೋಕ್ತುಂ ಅಹಂ ತೇ ಕ್ರತುಮಾಗತಃ ॥ ೨೨ ॥
ಇತ್ಯುಕ್ತೋ ಹರಿಣಾ ತತ್ರ ಮುದ್ಗಲಸ್ತುಷ್ಟಮಾನಸಃ ।
ಉವಾಚಾಽಧೋಕ್ಷಜಂ ವಿಪ್ರೋ ಭಕ್ತ್ಯಾ ಪರಮಯಾ ಯುತಃ ॥ ೨೩ ॥

ಮುದ್ಗಲ ಉವಾಚ :—

ಕೃತಾರ್ಥೋಽಸ್ಮಿ ಹೃಷೀಕೇಶ ಪತ್ನೀ ಮೇ ಧನ್ಯತಾಂ ಯಯೌ ।
ಅದ್ಯ ಮೇ ಸಫಲಂ ಜನ್ಮ ಹ್ಯದ್ಯ ಮೇ ಸಫಲಂ ತಪಃ ॥ ೨೪ ॥
ಅದ್ಯ ಮೇ ಸಫಲೋ ವಂಶೋ ಹ್ಯದ್ಯ ಮೇ ಸಫಲಾಃ ಸುತಾಃ ।
ಆಶ್ರಮಃ ಸಫಲೋಽದ್ಯೈವ ಸರ್ವಂ ಸಫಲಮದ್ಯ ಮೇ ॥ ೨೫ ॥
ಯದ್ಭವಾನ್ಯಜ್ಞವಾಟಂ ಮೇ ಹವಿರ್ಭೋಕ್ತುಮಿಹಾಗತಃ ।
ಯೋಗಿನೋ ಯೋಗನಿರತಾ ಹೃದಯೇ ಮೃಗಯಂತಿ ಯಂ ॥ ೨೬ ॥
ತಮದ್ಯ ಸಾಕ್ಷಾತ್ತ್ವಾಂ ಪಶ್ಯೇ ಸಫಲೋಽಯಂ ಮಮ ಕ್ರತುಃ ।
ಇತೀರಯಿತ್ವಾ ತಂ ವಿಷ್ಣುಮರ್ಚಯಿತ್ವಾಽಽಸನಾದಿಭಿಃ ॥ ೨೭ ॥
ಚಂದನೈಃ ಕುಸುಮೈರನ್ಯೈರ್ದತ್ವಾಚಾಽರ್ಘ್ಯಂ ಸ ವಿಷ್ಣವೇ ।
ಪ್ರದದೌ ವಿಷ್ಣವೇ ಪ್ರೀತ್ಯಾ ಪುರೋಡಾಶಾದಿಕಂ ಹವಿಃ ॥ ೨೮ ॥

---

೨೨. ಶ್ರೀಹರಿಯು ಹೇಳುತ್ತಾನೆ:— "ಮುದ್ಗಲ! ನಾನು ನಿನ್ನ ಸ್ತುತಿಯಿಂದಲೂ, ಯಜ್ಞದಿಂದಲೂ ಸಂತೋಷಗೊಂಡು ಪ್ರತ್ಯಕ್ಷನಾಗಿಯೆ ಹವಿಸ್ಸನ್ನು ಭಕ್ಷಿಸುವುದಕ್ಕಾಗಿ ನಿನ್ನ ಯಜ್ಞಕ್ಕೆ ಬಂದಿರುವೆನು."

೨೩. ಹರಿಯು ಹೀಗೆನ್ನಲು, ಮುದ್ಗಲನು ಸಂತೋಷಗೊಂಡ ಮನಸ್ಸುಳ್ಳವನಾಗಿ ಅತ್ಯಂತ ಭಕ್ತಿಯಿಂದ ಆ ನಾರಾಯಣನನ್ನು ಕುರಿತು ಇಂತೆಂದನು :

೨೪–೨೫. "ಇಂದ್ರಿಯಗಳಿಗೆ ಒಡೆಯನಾದ ನಾರಾಯಣನೆ! ನಾನು ಧನ್ಯನಾದೆನು. ನನ್ನ ಪತ್ನಿಯು ಧನ್ಯಳಾದಳು. ಇದೀಗ ನನ್ನ ಜನ್ಮವೂ, ತಪಸ್ಸೂ ಸಫಲವಾಯಿತು; ನನ್ನ ವಂಶವೂ, ಮಕ್ಕಳೂ, ಆಶ್ರಮವೂ, ಎಲ್ಲವೂ ಸಾರ್ಥಕವಾದುವು.

೨೬. ಯೋಗನಿರತರಾದ ಯೋಗಿಗಳಿಂದ ಸ್ವಹೃದಯದಲ್ಲಿ ಹುಡುಕಲ್ಪಡುತ್ತಿರುವ ನೀನು ಈಗ ನನ್ನ ಯಜ್ಞಶಾಲೆಗೆ ಹವಿಸ್ಸನ್ನು ಭಕ್ಷಿಸಲು ಬಂದಿರುವೆ.

೨೭–೨೮. ಇಂತಹ ನಿನ್ನನ್ನು ಪ್ರತ್ಯಕ್ಷವಾಗಿ ನೋಡುತ್ತಿರುವ ನನ್ನ ಯಜ್ಞವು ಸಫಲವಾಯಿತು" ಎಂದು ಅವನನ್ನು ಸ್ತುತಿಸಿ ಆಸನ, ಚಂದನ, ಹೂವು ಮೊದಲಾದವುಗಳಿಂದ ಅರ್ಚಿಸಿ, ಅರ್ಘ್ಯವನ್ನಿತ್ತು ಪುರೋಡಾಶವೇ ಮೊದಲಾದ ಹವಿಸ್ಸನ್ನು ಕೊಟ್ಟನು.

ಸ್ವಯಮೇವ ಸಮಾದಾಯ ಪಾಣಿನಾ ಲೋಕಭಾವನಃ ।
ಹವಿಸ್ತದ್ಬುಭುಜೇ ವಿಷ್ಣುರ್ಮುದ್ಗಲೇನ ಸಮರ್ಪಿತಂ ॥ ೨೯ ॥
ತಸ್ಮಿನ್ಹವಿಷಿ ಭುಕ್ತೇ ತು ವಿಷ್ಣುನಾ ಪ್ರಭವಿಷ್ಣುನಾ ।
ಸಾಽಗ್ನಯಸ್ತ್ರಿದಶಾಃ ಸರ್ವೇ ತೃಪ್ತಾಃ ಸಮಭವನ್ದ್ವಿಜಾಃ ॥ ೩೦ ॥
ಋತ್ವಿಜೋ ಯಜಮಾನಶ್ಚ ತತ್ರತ್ಯಾ ಬ್ರಾಹ್ಮಣಾಸ್ತಥಾ ।
ಯತ್ಕಿಂಚಿತ್ಪ್ರಾಣಿಲೋಕೇಽಸ್ಮಿಂಶ್ಚರಂ ವಾ ಯದಿ ವಾಽಚರಂ ॥ ೩೧ ॥
ಸರ್ವಮೇವ ಜಗತ್ತೃಪ್ತಂ ಭುಕ್ತೇ ಹವಿ ಹಿ ವಿಷ್ಣುನಾ ।
ತತೋ ಹರಿಃ ಪ್ರಸನ್ನಾತ್ಮಾ ಮುದ್ಗಲಂ ಪ್ರತ್ಯಭಾಷತ ॥ ೩೨ ॥
ಪ್ರೀತೋಽಹಂ ವರದೋಽಸ್ಮ್ಯೇಷ ವರಂ ವರಯ ಸುವ್ರತ ।
ಇತ್ಯುಕ್ತೇ ಕೇಶವೇನಾಽಥ ಮಹರ್ಷಿಸ್ತಮಭಾಷತ ॥ ೩೩ ॥

ಮುದ್ಗಲ ಉವಾಚ :—

ಯತ್ತ್ವಯಾ ಮೇ ಹವಿರ್ಭುಕ್ತಂ ಯಾಗೇ ಪ್ರತ್ಯಕ್ಷರೂಪಿಣಾ ।
ಅನೇನೈವ ಕೃತಾರ್ಥೋಽಸ್ಮಿ ಕಿಮಸ್ಮಾದಧಿಕಂ ವರಂ ॥ ೩೪ ॥
ತಥಾಽಪಿ ಭಗವನ್ವಿಷ್ಣೋ ತ್ವಯಿ ಮೇ ನಿಶ್ಚಲಾ ಸದಾ ।
ಭಕ್ತಿರ್ನಿಷ್ಕಪಟಾ ಭೂಯಾದಿದಂ ಮೇ ಪ್ರಥಮಂ ವರಂ ॥ ೩೫ ॥

---

೨೯. ಜಗತ್ತನ್ನು ಸೃಜಿಸುವ ಆ ವಿಷ್ಣುವು, ಮುದ್ಗಲನು ಸಮರ್ಪಿಸಿದ ಹವಿಸ್ಸನ್ನು ತಾನೇ ಕೈಯಾರ ತೆಗೆದುಕೊಂಡು ಭುಜಿಸಿದನು.

೩೦. ಎಲೈ ದ್ವಿಜರೆ! ಆ ಮಹಾವಿಷ್ಣುವು ಹವಿಸ್ಸನ್ನು ಭಕ್ಷಿಸಲು ಅಗ್ನಿಯೊಡಗೂಡಿದ ಸಕಲ ದೇವತೆಗಳೂ ತೃಪ್ತರಾದರು.

೩೧–೩೨. ಪುರೋಹಿತರೂ, ಯಜಮಾನನೂ, ಅಲ್ಲಿರುವ ಬ್ರಾಹ್ಮಣರೂ, ಪ್ರಪಂಚದ ಚರಾಚರಪ್ರಾಣಿಗಳೂ, ಸಮಸ್ತ ಪ್ರಪಂಚವೂ ಎಲ್ಲರೂ ತೃಪ್ತಿಗೊಂಡರು. ಬಳಿಕ ಶ್ರೀಹರಿಯು ಸಂತುಷ್ಟನಾಗಿ ಮುದ್ಗಲನನ್ನು ಕುರಿತು ಹೀಗೆಂದನು :

೩೩. "ಮುದ್ಗಲ! ನಾನು ಸಂತುಷ್ಟನಾಗಿದ್ದೇನೆ. ವರವನ್ನು ಕೊಡುವೆನು, ಕೇಳಿಕೊ" ಎಂದು ಹೇಳಲು ಆ ಮುನಿಯು ವಿಷ್ಣುವನ್ನು ಕುರಿತು ಹೀಗೆಂದನು :

೩೪. ಮುದ್ಗಲನು ಹೇಳುತ್ತಾನೆ:—"ನಾರಾಯಣ! ನೀನು ಪ್ರತ್ಯಕ್ಷನಾಗಿ ನನ್ನ ಯಾಗದಲ್ಲಿ ಹವಿಸ್ಸನ್ನು ಭುಜಿಸಿರುವುದರಿಂದ ನಾನು ಧನ್ಯನಾಗಿದ್ದೇನೆ. ಇದಕ್ಕಿಂತಲೂ ಹೆಚ್ಚಾದ ವರವೇನಿದೆ?

೩೫. ಎಲೈ ವಿಷ್ಣುವೆ! ಹಾಗಾದರೂ ನನಗೆ ನಿನ್ನಲ್ಲಿ ಯಾವಾಗಲೂ ದೃಢವೂ, ಕಪಟವಿಲ್ಲದುದೂ ಆದ ಭಕ್ತಿಯಿರಲಿ. ಇದೇ ನನ್ನ ಮೊದಲಿನ ವರವು.

ಮಾಧವಾऽಹಂ ಪ್ರತಿದಿನಂ ಸಾಯಂ ಪ್ರಾತರಿಹಾಗ್ನಯೇ ।
ತ್ವದ್ರೂಪಾಯ ತವ ಪ್ರೀತ್ಯೈ ಸುರಭೇಃ ಪಯಸಾ ಹರೇ ॥ ೩೬ ॥
ಹೋತುಮಿಚ್ಛಾಮಿ ವರದ ತನ್ಮೇ ದೇಹಿ ವರಾಂತರಂ ।
ಪಯಸಾ ನಿತ್ಯಹೋಮೋ ಹಿ ದ್ವಿಕಾಲಂ ಶ್ರುತಿಚೋದಿತಃ ॥ ೩೭ ॥
ನ ಮೇಸುರಭಯಃ ಸಂತಿ ತಾಪಸಸ್ಯಾऽಧನಸ್ಯ ಚ ।
ಇತ್ಯುಕ್ತೇ ಮುದ್ಗಲೇನಾऽಥ ದೇವೋ ನಾರಾಯಣೋ ಹರಿಃ ॥ ೩೮ ॥
ಆಹೂಯ ವಿಶ್ವಕರ್ಮಾಣಂ ತ್ವಷ್ಟಾರಮಮಿತಾऽಶಿನಂ ।
ಏಕಂ ಸರಃ ಕಾರಯಿತ್ವಾ ಶಿಲ್ಪಿನಾ ತೇನ ಶೋಭನಂ ॥ ೩೯ ॥
ಸ್ಫಟಿಕಾದಿ ಶಿಲಾಭೇದೈಸ್ತೇನಾऽಸೌ ವಿಶ್ವಕರ್ಮಣಾ ।
ಸಮಾಚಕಾರ ಚ ಪುನಸ್ತತ್ಪ್ರಾಕಾರಾದ್ಯಲಂಕೃತಂ ।
ತತ ಆಹೂಯ ಭಗವಾನ್ಸುರಭಿಂ ವಾಕ್ಯಮಬ್ರವೀತ್ ॥ ೪೦ ॥

ಶ್ರೀ ಹರಿರುವಾಚ :—

ಮುದ್ಗಲೋ ಮಮ ಭಕ್ತೋऽಯಂ ಸುರಭೇ ಪ್ರತ್ಯಹಂ ಮುದಾ ॥ ೪೧ ॥
ಮತ್ಪ್ರೀತ್ಯರ್ಥಂ ಪಯೋ ಹೋಮಂ ಕರ್ತುಮಿಚ್ಛತಿ ಸಾಂಪ್ರತಂ ।
ಮತ್ಪ್ರೀತ್ಯರ್ಥಮಿತೋ ದೇವಿ ತ್ವಮಿತೋ ಮತ್ಪ್ರಚೋದಿತಾ ॥ ೪೨ ॥
ಸಾಯಂ ಪ್ರಾತರಿಹಾಗತ್ಯ ಪ್ರತ್ಯಹಂ ಸುರಭೇ ಶುಭೇ ।
ಪಯಸಾ ತ್ವತ್ಪ್ರಸೂತೇನ ಸರ ಏತತ್ಪ್ರಪೂರಯ ॥ ೪೩ ॥

---

೩೬–೩೭. ಮಾಧವ! ನಾನು ಪ್ರತಿದಿನವೂ ಬೆಳಿಗ್ಗೆ ಸಾಯಂಕಾಲ ನಿನ್ನ ಪ್ರೀತಿಗಾಗಿ ನಿನ್ನ ರೂಪವೇ ಆದ ಅಗ್ನಿಯಲ್ಲಿ ಕಾಮಧೇನುವಿನ ಹಾಲಿನಿಂದ ಹೋಮಮಾಡಬಯಸುವೆನು. ನಿತ್ಯವೂ ಎರಡುವೇಳೆಯೂ ಹಾಲಿನಿಂದ ಹೋಮಮಾಡುವುದು ವೇದಬೋಧಿತವಾಗಿದೆ. ಈ ಮತ್ತೊಂದು ವರವನ್ನು ನನಗೆ ಕೊಡು.

೩೮–೪೦. ನಿರ್ಧನನೂ ಮುನಿಯೂ ಆದ ನನ್ನಲ್ಲಿ ಕಾಮಧೇನುಗಳಿಲ್ಲ." ಮುದ್ಗಲನು ಹೀಗೆಂದು ಕೇಳಿಕೊಳ್ಳಲು, ನಾರಾಯಣನು ಅಮೃತವನ್ನು ಕುಡಿದ ವಿಶ್ವಕರ್ಮನೆಂಬ ದೇವತೆಗಳ ಬಡಗಿಯನ್ನು ಕರೆಯಿಸಿ ಅವನಿಂದ ಚೆನ್ನಾಗಿರುವ ಒಂದು ಸರೋವರವನ್ನು ಮಾಡಿಸಿ ಆ ಸರೋವರಕ್ಕೆ ಸ್ಫಟಿಕಾದಿ ಶಿಲೆಗಳಿಂದ ಆವರಣಗಳನ್ನು ಕಟ್ಟಿಸಿ ಸರಿಗೊಳಿಸಿ ಕಾಮಧೇನುವನ್ನು ಕರೆದು ಇಂತೆಂದನು :

೪೧–೪೩. "ಎಲೈ ಕಾಮಧೇನುವೆ! ಮುದ್ಗಲನು ನನ್ನ ಭಕ್ತನು. ಪ್ರತಿದಿನವೂ ಸಂತೋಷದಿಂದ ನನ್ನ ಪ್ರೀತಿಗಾಗಿ ಪಯೋಹೋಮವನ್ನು ಮಾಡಲಿಚ್ಛಿಸುವನು. ದೇವಿ! ನನ್ನ ಮೆಚ್ಚಿಗೆಗಾಗಿ ನೀನು ನನ್ನ ಮಾತಿನಂತೆ ಬೆಳಗ್ಗೆ ಸಾಯಂಕಾಲ ಇಲ್ಲಿಗೆ ಬಂದು ನಿನ್ನ ಹಾಲಿನಿಂದ ಈ ಸರೋವರವನ್ನು ತುಂಬಿಸು.

ತೇನಾಽಸೌ ಪಯಸಾ ನಿತ್ಯಂ ಸಾಯಂ ಪ್ರಾತಶ್ಚ ಹೋಷ್ಯತಿ ।
ಓಮಿತ್ಯುಕ್ತ್ವಾಽಥ ಸುರಭಿರೇವಂ ನಾರಾಯಣೇರಿತಾ ॥ ೪೪ ॥
ಅಥ ನಾರಾಯಣೋ ದೇವೋ ಮುದ್ಗಲಂ ಪ್ರತ್ಯಭಾಷತ ।
ಸುರಭೇಃ ಪಯಸಾ ನಿತ್ಯಮಸ್ಮಿನ್ಸರಸಿ ತಿಷ್ಠತಾ ॥ ೪೫ ॥
ಸಾಯಂ ಪ್ರಾತಃ ಪ್ರತಿದಿನಂ ಮತ್ಪ್ರೀತ್ಯರ್ಥಮಿಹಾಽಗ್ನಯೇ ।
ಜುಹುಧಿ ತ್ವಂ ಮಹಾಭಾಗ ತೇನ ಪ್ರೀಣಾಮ್ಯಹಂ ತವ ॥ ೪೬ ॥
ಮತ್ಪ್ರೀತ್ಯಾ ತೇಽತುಲಾ ಸಿದ್ಧಿರ್ಭವಿಷ್ಯತಿ ಚ ಮುದ್ಗಲ ।
ಇದಂ ಕ್ಷೀರಸರೋನಾಮ ತೀರ್ಥಂ ಖ್ಯಾತಂ ಭವಿಷ್ಯತಿ ॥ ೪೭ ॥
ಅಸ್ಮಿನ್ಕ್ಷೀರಸರಸ್ತೀರ್ಥೇ ಸ್ನಾತಾನಾಂ ಪಂಚಪಾತಕಂ ।
ಅನ್ಯಾನ್ಯಪಿ ಚ ಪಾಪಾನಿ ನಾಶಂ ಯಾಸ್ಯಂತಿ ತತ್ಕ್ಷಣಾತ್ ॥ ೪೮ ॥
ಮುದ್ಗಲತ್ವಂ ಚ ಮಾಂ ಯಾಹಿ ದೇಹಾಂತೇ ಮುಕ್ತಬಂಧನಃ ।
ಇತ್ಯುಕ್ತ್ವಾ ಭಗವಾನ್ವಿಷ್ಣುಸ್ತಂ ಸಮಾಲಿಂಗ್ಯ ಮುದ್ಗಲಂ ॥ ೪೯ ॥
ನಮಸ್ಕೃತಶ್ಚ ತೇನಾಽಯಂ ತತ್ರೈವಾಂತರಧೀಯತ ।
ಮುದ್ಗಲೋಽಪಿ ಗತೇ ವಿಷ್ಣಾವನೇಕ ಶತವತ್ಸರಂ ॥ ೫೦ ॥

---

೪೪. ಈ ಮುದ್ಗಲನು ಆ ಹಾಲಿನಿಂದ ನಿತ್ಯವೂ ಬೆಳಗ್ಗೆ ಸಾಯಂಕಾಲ ಹೋಮಮಾಡುವನು" ಎಂದು ನಾರಾಯಣನು ಹೇಳಲು, ಕಾಮಧೇನುವು ಹಾಗೆಯೇ ಆಗಲೆಂದು ಒಪ್ಪಿತು.

೪೫–೪೬. ತರುವಾಯ ನಾರಾಯಣನು ಮುದ್ಗಲನನ್ನು ಕುರಿತು, "ಮಹಾಭಾಗ! ಈ ಸರೋವರದಲ್ಲಿರುವ ಕಾಮಧೇನುವಿನ ಹಾಲಿನಿಂದ ಪ್ರತಿದಿನವೂ ಬೆಳಗ್ಗೆ ಸಾಯಂಕಾಲ ನನ್ನ ಪ್ರೀತಿಗಾಗಿ ಇಲ್ಲಿ ಅಗ್ನಿಯಲ್ಲಿ ಹೋಮ ಮಾಡು. ಆದರಿಂದ ನಾನು ಸಂತೋಷಗೊಳ್ಳುವೆನು.

೪೭. ನನ್ನ ಸಂತೋಷದಿಂದ ನಿನ್ನ ಸಕಲೇಷ್ಟಾರ್ಥಗಳೂ ಕೈಗೂಡುವುವು. ಈ ತೀರ್ಥವು ಕ್ಷೀರಸರೋವರವೆಂದು ಪ್ರಖ್ಯಾತವಾಗುವುದು.

೪೮. ಈ ಕ್ಷೀರಸರೋವರದ ತೀರ್ಥದಲ್ಲಿ ಮಿಂದವರ ಪಂಚಮಹಾ ಪಾತಕಗಳೂ, ಇತರ ಪಾಪಗಳೂ ಕೂಡಲೆ ಮಾಯವಾಗುವುವು.

೪೯–೫೧. ಮುದ್ಗಲ! ನೀನೂ ಈ ದೇಹಾವಸಾನಕಾಲದಲ್ಲಿ ಸಂಸಾರ ಬಂಧರಹಿತನಾಗಿ ನನ್ನನ್ನು ಸೇರುವೆ." ಎಂದು ಹೇಳಿ ಪೂಜ್ಯನಾದ ವಿಷ್ಣುವು ಆ ಮುದ್ಗಲನನ್ನು ಆಲಿಂಗಿಸಿ ಅವನಿಂದ ವಂದಿಸಲ್ಪಟ್ಟವನಾಗಿ ಅಲ್ಲಿಯೇ ಅಂತರ್ಧಾನವಾದನು. ವಿಷ್ಣುವು ಹೊರಟುಹೋಗಲು ಮುದ್ಗಲನು ಅನೇಕ ನೂರು ವರ್ಷಗಳಕಾಲ ಶ್ರೀಹರಿಯ ಸಂತೋಷಕ್ಕಾಗಿ ಕಾಮಧೇನುವಿನ ಹಾಲಿ

ಸುರಭೇಃ ಪಯಸಾ ಜುಹ್ವನ್ನಗ್ನಯೇ ಹರಿತುಷ್ಟಯೇ ।
ಉವಾಸ ಪ್ರಯತೋ ನಿತ್ಯಂ ಫುಲ್ಲಗ್ರಾಮೇ ವಿಮುಕ್ತಿದೇ ।
ದೇಹಾಂತೇ ಮುಕ್ತಿಮಗಮದ್ವಿಷ್ಣುಸಾಯುಜ್ಯರೂಪಿಣೀಂ ॥ ೫೧ ॥

ಶ್ರೀ ಸೂತ ಉವಾಚ:—

ಏವಮೇತದ್ದ್ವಿಜವರಾ ಯುಷ್ಮಾಕಂ ಕಥಿತಂ ಮಯಾ ॥ ೫೨ ॥
ಯಥಾ ಕ್ಷೀರಸರೋ ನಾಮ ತೀರ್ಥಸ್ಯಾಽಸ್ಯ ಪುರಾಽಭವತ್ ।
ಇದಂ ಕ್ಷೀರಸರಃ ಪುಣ್ಯಂ ಸರ್ವಲೋಕೇಷು ವಿಶ್ರುತಂ ॥ ೫೩ ॥
ಕಾಶ್ಯಪಸ್ಯ ಮುನೇಃ ಪತ್ನೀ ಕದ್ರೂರ್ಯತ್ರ ದ್ವಿಜೋತ್ತಮಾಃ ।
ಸ್ನಾತ್ವಾ ಸ್ವಭರ್ತೃವಾಕ್ಯೇನ ನೋದಿತಾ ನಿಯಮಾನ್ವಿತಾ ॥ ೫೪ ॥
ಫಲೇನ ಮುಮುಚೇ ಸದ್ಯಃ ಸಪತ್ನೀಜಯದೋಷತಃ ।
ಅತೋಽತ್ರ ತೀರ್ಥೇ ಯೇ ಸ್ನಾಂತಿ ಮಾನವಾಃ ಶುದ್ಧಮಾನಸಾಃ ॥ ೫೫ ॥
ತೇಷಾಂ ವಿಮುಕ್ತಬಂಧಾನಾಂ ಮುಕ್ತಾನಾಂ ಪುಣ್ಯಕರ್ಮಿಣಾಂ ।
ಕಿಂ ಯಾಗೈಃ ಕಿಮು ವಾ ವೇದೈಃ ಕಿಂ ವಾ ತೀರ್ಥನಿಷೇವಣೈಃ ॥ ೫೬ ॥
ಜಪೈರ್ವಾ ನಿಯಮೈರ್ವಾಽಪಿ ಕ್ಷೀರಕುಂಡವಿಲೋಕಿನಾಂ ।
ಕ್ಷೀರಕುಂಡಸ್ಯ ವಾತೇನ ಸ್ಪೃಷ್ಟದೇಹೋ ನರೋ ದ್ವಿಜಾಃ ॥ ೫೭ ॥
ಬ್ರಹ್ಮಲೋಕಮನುಪ್ರಾಪ್ಯ ತತ್ರೈವ ಪರಿಮುಚ್ಯತೇ ।
ನಿಮಗ್ನಾಃ ಕ್ಷೀರಕುಂಡೇಽಸ್ಮಿನ್ನವಮತ್ಯಾಽಪಿ ಭಾಸ್ಕರಿಂ ॥ ೫೮ ॥

---

ನಿಂದ ಆ ಪ್ರದೇಶದಲ್ಲಿಯೆ ಅಗ್ನಿಯಲ್ಲಿ ಹೋಮಮಾಡುತ್ತ ಮೋಕ್ಷದಾಯಕವಾದ ಫುಲ್ಲಗ್ರಾಮದಲ್ಲಿ ವಾಸಮಾಡಿದನು. ತರುವಾಯ ಆತನು ದೇಹಾವಸಾನದಲ್ಲಿ ವಿಷ್ಣುಸಾಯುಜ್ಯರೂಪವಾದ ಮುಕ್ತಿಯನ್ನು ಹೊಂದಿದನು.

೫೨–೫೩. ಶ್ರೀಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರೆ! ಹಿಂದೆ ಈ ತೀರ್ಥಕ್ಕೆ ಕ್ಷೀರಸರಸ್ಸೆಂದು ಹೆಸರುಬಂದ ಕ್ರಮವನ್ನು ನಿಮಗೆ ಹೇಳಿರುವೆನು. ಪವಿತ್ರವಾದ ಈ ಕ್ಷೀರಸರೋವರವು ಸಮಸ್ತಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ.

೫೪–೬೧. ಎಲೈ ವಿಪ್ರವರ್ಯರೆ! ಕಾಶ್ಯಪಮುನಿಯ ಪತ್ನಿಯಾದ ಕದ್ರುವು ಪತಿಯ ವಚನದಂತೆ ನಿಯಮದಿಂದ ಈ ಕ್ಷೀರಸರಸ್ಸಿನಲ್ಲಿ ಮಿಂದು ಸವತಿಯನ್ನು ಮೋಸದಿಂದ ಜಯಿಸಿದ್ದರಿಂದುಂಟಾದ ದುಃಖದಿಂದ ಮುಕ್ತಳಾದಳು. ಆದುದರಿಂದ ಈ ತೀರ್ಥವನ್ನು ನೋಡಿ ಸ್ನಾನಮಾಡಿ ಶುದ್ಧಮನಸ್ಸುಳ್ಳವರೂ, ಸಂಸಾರಬಂಧನವಿಲ್ಲದವರೂ, ಪುಣ್ಯಶಾಲಿಗಳೂ ಆದ ಮಾನವರಿಗೆ ಯೋಗ, ವೇದ, ತೀರ್ಥಸೇವನೆ, ಜಪ, ವ್ರತ ಇವುಗಳಿಂದೇನುತಾನೆ ಪ್ರಯೋಜನ? ಕ್ಷೀರಕುಂಡದ ಗಾಳಿಯಿಂದ ಸ್ಪರ್ಶಗೊಂಡ ದೇಹವುಳ್ಳ ನರನು ಬ್ರಹ್ಮಲೋಕವನ್ನು ಸೇರಿ ಅಲ್ಲಿಯೇ ಮುಕ್ತನಾಗುವನು. ಈ ಕ್ಷೀರಕುಂಡದಲ್ಲಿ ಮಿಂದವರು

ತಸ್ಯ ಮೂರ್ಧನಿ ತಿಷ್ಠೇಯುರ್ಜ್ವಲಂತಃ ಪಾವಕೋಪಮಾಃ ।
ಮಗ್ನಾನಾಂ ಕ್ಷೀರಕುಂಡೇಽಸ್ಮಿನ್ಶೀತಾ ವೈತರಣೀ ನದೀ ॥ ೫೯ ॥
ಸರ್ವಾಣಿ ನರಕಾಣ್ಯದ್ಧಾ ವ್ಯರ್ಥಾನಿ ಚ ಭವಂತಿ ಹಿ ।
ಕಾಮಧೇನುಸಮೇ ತಸ್ಮಿನ್ಕ್ಷೀರಕುಂಡೇ ಸ್ಥಿತೇಽಪ್ಯಹೋ ॥ ೬೦ ॥
ಯೋಽನ್ಯತ್ರ ಭ್ರಮತೇ ಸ್ನಾತುಂ ಸ ನರೋ ವಿಪ್ರಸತ್ತಮಾಃ ।
ಗೋಕ್ಷೀರೇ ವಿದ್ಯಮಾನೇಽಪಿ ಹ್ಯರ್ಕಕ್ಷೀರಾಯ ಗಚ್ಛತಿ. ॥ ೬೧ ॥
ಸ್ನಾತಾನಾಂ ಕ್ಷೀರಕುಂಡೇಽಸ್ಮಿನ್ನಾಽಲಭ್ಯಂ ಕಿಂಚಿದಸ್ತಿ ಹಿ ।
ಕರಪ್ರಾಪ್ತೈವ ಮುಕ್ತಿಃ ಸ್ಯಾತ್ಕಿಮನ್ಯೈರ್ಬಹುಭಾಷಣೈಃ ॥ ೬೨ ॥
ಬ್ರವೀಮಿ ಭುಜಮುದ್ಧೃತ್ಯ ಸತ್ಯಂ ಸತ್ಯಂ ಬ್ರವೀಮಿ ವಃ ।
ಯಃ ಪಠೇದಿಮಮಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ಸ ಕ್ಷೀರಕುಂಡಸ್ನಾನಸ್ಯ ಲಭತೇ ಫಲಮುತ್ತಮಂ ॥ ೬೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಕ್ಷೀರಕುಂಡಸ್ವರೂಪಕಥನಂ" ನಾಮ ಸಪ್ತತ್ರಿಂಶೋಽಧ್ಯಾಯಃ

---

ಯಮನನ್ನು ಲೆಕ್ಕಿಸದೆ ಅವನ ತಲೆಯಮೇಲೆ ಬೆಂಕಿಯಂತೆ ಜ್ವಲಿಸುತ್ತಿರುವರು. ಇವರಿಗೆ ವೈತರಣೀನದಿಯೂ ತಣ್ಣಗಿರುತ್ತದೆ. ಸಕಲ ನರಕಗಳೂ ಏನೂ ಮಾಡಲಾರವು. ಕಾಮಧೇನುವಿನಂತಿರುವ ಆ ಕ್ಷೀರಕುಂಡವು ಇದ್ದರೂ ಸ್ನಾನಕ್ಕಾಗಿ ಬೇರೆ ಕಡೆ ಸಂಚರಿಸುವ ಮನುಷ್ಯನು ಹಸುವಿನ ಹಾಲಿದ್ದರೂ ಎಕ್ಕದ ಹಾಲಿಗಾಗಿ ಪ್ರಯತ್ನಿಸುತ್ತಾನೆಯೆಂದು ಹೇಳಬೇಕು.

೬೨. ಕ್ಷೀರಕುಂಡದಲ್ಲಿ ಮಿಂದವರಿಗೆ ದುರ್ಲಭವಾದುದು ಯಾವುದೂ ಇಲ್ಲ. ಮುಕ್ತಿಯು ಹಸ್ತಗತವಾಗುವುದು. ಬಹಳಮಾತಿನಿಂದೇನುಪ್ರಯೋಜನ?

೬೩. ತೋಳನ್ನೆತ್ತಿ ಸತ್ಯವಾಗಿ ಹೇಳುತ್ತೇನೆ. ಈ ಅಧ್ಯಾಯವನ್ನು ಸಮಾಧಾನಗೊಂಡ ಮನಸ್ಸಿಟ್ಟು ಓದಿದವನೂ, ಕೇಳಿದವನೂ ಕ್ಷೀರಕುಂಡದಲ್ಲಿ ಸ್ನಾನಮಾಡಿದ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಕ್ಷೀರಕುಂಡಸ್ವರೂಪಕಥನ" ವೆಂಬ ಮೂವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟತ್ರಿಂಶೋಽಧ್ಯಾಯಃ

### ಕದ್ರೂಕೃತಛಲದೋಷಶಾಂತಿಕಥಾವರ್ಣನಂ

ಋಷಯ ಊಚುಃ :—

ಸೂತ ಕದ್ರೂಃ ಕಥಂ ಮುಕ್ತಾ ಕ್ಷೀರಕುಂಡನಿಮಜ್ಜನಾತ್ ।
ಛಲಂ ಕಥಂ ಕೃತವತೀ ಸಪತ್ನ್ಯಾಂ ಪಾಪನಿಶ್ಚಯಾ ॥ ೧ ॥
ಕಸ್ಯ ಪುತ್ರೀ ಚ ಸಾ ಕದ್ರೂಃ ಸಪತ್ನೀ ಸಾ ಚ ಕಸ್ಯ ವೈ ।
ಕಿಮರ್ಥಮಜಯತ್ಕದ್ರೂಃ ಸ್ವಸಪತ್ನೀಂ ಛಲೇನ ತು ।
ಏತನ್ನಃ ಶ್ರದ್ದಧಾನಾನಾಂ ಬ್ರೂಹಿ ಸೂತ ಕೃಪಾನಿಧೇ ॥ ೨ ॥

ಶ್ರೀ ಸೂತ ಉವಾಚ :—

ಶೃಣುಧ್ವಂ ಮುನಯಃ ಸರ್ವೇ ಇತಿಹಾಸಂ ಮಹಾಫಲಂ ।
ಪುರಾ ಕೃತಯುಗೇ ವಿಪ್ರಾಃ ಪ್ರಜಾಪತಿಸುತೇ ಉಭೇ ॥ ೩ ॥
ಕದ್ರೂಶ್ಚ ವಿನತಾ ಚೇತಿ ಭಗಿನ್ಯೌ ಸಂಬಭೂವತುಃ ।
ಭಾರ್ಯೇ ತೇ ಕಾಶ್ಯಪಸ್ಯಾಸ್ತಾಂ ಕದ್ರೂಶ್ಚ ವಿನತಾ ತಥಾ ॥ ೪ ॥
ವಿನತಾ ಸುಷುವೇ ಪುತ್ರಾವರುಣಂ ಗರುಡಂ ತಥಾ ।
ಭರ್ತುಃ ಸಕಾಶಾತ್ಕದ್ರೂಶ್ಚ ಲೇಭೇ ಸರ್ಪಾನ್ಬಹೂನ್ಸುತಾನ್ ॥ ೫ ॥

---

## ಕನ್ನಡದ ಅನುವಾದ

### ಕದ್ರೂಕೃತಛಲದೋಷಶಾಂತಿಕಥಾವರ್ಣನ

೧. ಋಷಿಗಳು ಕೇಳುತ್ತಾರೆ:— ಎಲೈ ಸೂತನೆ! ಕದ್ರುವು ಕ್ಷೀರಕುಂಡ ಸ್ನಾನದಿಂದ ಹೇಗೆ ಮುಕ್ತಳಾದಳು? ಅವಳು ಪಾಪವನ್ನಾಚರಿಸಲು ನಿಶ್ಚಯಿಸಿ ಸವತಿಗೆ ಹೇಗೆ ಮೋಸಮಾಡಿದಳು?

೨. ಆ ಕದ್ರುವು ಯಾರು? ಅವಳು ಯಾರಿಗೆ ಸವತಿಯು? ಅವಳು ತನ್ನ ಸವತಿಯನ್ನು ಮೋಸದಿಂದ ಏಕೆ ಗೆದ್ದಳು? ದಯಾಳುವಾದ ಸೂತನೆ! ಇದನ್ನು ಶ್ರದ್ಧೆಯಿಂದ ಕೇಳುವ ನಮಗೆ ಹೇಳು.

೩–೪. ಶ್ರೀಸೂತನು ಹೇಳುತ್ತಾನೆ:— ಮುನಿಗಳೆ! ಅತಿಶಯಫಲವುಳ್ಳ ಈ ಇತಿಹಾಸವನ್ನು ಕೇಳಿರಿ. ಹಿಂದೆ ಪ್ರಜಾಪತಿಯ ಮಕ್ಕಳಾದ ಕದ್ರೂ, ವಿನತೆ ಎಂಬ ಸಹೋದರಿಯರಿದ್ದರು. ಅವರಿಬ್ಬರೂ ಕಶ್ಯಪಮುನಿಯ ಪತ್ನಿಯರಾಗಿದ್ದರು.

೫–೭. ವಿನತೆಯು ಅರುಣ, ಗರುಡ ಎಂಬ ಮಕ್ಕಳನ್ನೂ, ಕದ್ರುವು, ವಿಷ ಮತ್ತು ಅಹಂಕಾರಗಳಿಂದ ಮೆರೆಯುತ್ತಿರುವ ಅನಂತ, ವಾಸುಕಿ ಮೊದಲಾದ

ಅನಂತವಾಸುಕಿಮುಖಾನ್ವಿಷದರ್ಪಸಮನ್ವಿತಾನ್ ।
ಏಕದಾ ತು ಭಗಿನ್ಯೌ ತೇ ಕದ್ರೂಶ್ಚ ವಿನತಾ ತಥಾ ॥ ೬ ॥
ಅಪಶ್ಯತಾಂ ಸಮಾಯಾಂತಮುಚ್ಚೈಃಶ್ರವಸಮಂತಿಕಾತ್ ।
ವಿಲೋಕ್ಯ ಕದ್ರೂಸ್ತುರಗಂ ವಿನತಾಮಿದಮಬ್ರವೀತ್ ॥ ೭ ॥
ಶ್ವೇತೋಽಶ್ವವಾಲೋ ನೀಲೋ ವಾ ವಿನತೇ ಬ್ರೂಹಿ ತತ್ವತಃ ।
ಇತ್ಯುಕ್ತಾ ವಿನತಾ ವಿಪ್ರಾಃ ಕದ್ರೂಂ ತಾಮಿದಮಬ್ರವೀತ್ ॥ ೮ ॥
ತುರಂಗಃ ಶ್ವೇತವಾಲೋ ಮೇ ಪ್ರತಿಭಾತಿ ಸುಮಧ್ಯಮೇ ।
ಕಿಂ ವಾ ತ್ವಂ ಮನ್ಯಸೇ ಕದ್ರೂರಿತಿ ತಾಂ ವಿನತಾಽಬ್ರವೀತ್ ॥ ೯ ॥
ಪೃಷ್ಟೈವಂ ವಿನತಾಂ ಕದ್ರೂರ್ಬಭಾಷೇ ಸ್ವಮತಂ ಚ ಸಾ ।
ಕೃಷ್ಣವಾಲಮಹಂ ಮನ್ಯೇ ಹಯಮೇನಮನಿಂದಿತೇ ॥ ೧೦ ॥
ತತಃ ಪರಾಜಯೇ ಕೃತ್ವಾ ದಾಸೀಭಾವಂ ಪಣಂ ಮಿಥಃ ।
ವ್ಯತಿಷ್ಠೇತಾಂ ಮಹಾಭಾಗೇ ಸಪತ್ನ್ಯೌ ತೇ ದ್ವಿಜೋತ್ತಮಾಃ ॥ ೧೧ ॥
ತತಃ ಕದ್ರೂರ್ನಿಜಸುತಾನ್ವಾಸುಕಿಪ್ರಮುಖಾನಹೀನ್ ।
ತಸ್ಯಾ ನಾಽಹಂ ಯಥಾ ದಾಸೀ ತಥಾ ಕುರುತ ಪುತ್ರಕಾಃ ॥ ೧೨ ॥
ತಸ್ಯಾಽಭೀಪ್ಸಿತಸಿದ್ಧ್ಯರ್ಥಮಿತ್ಯವೋಚದ್ಭೃಶಾತುರಾ ।
ಯುಷ್ಮಾಭಿರುಚ್ಚೈಃಶ್ರವಸೋ ವಾಲಃ ಪ್ರಚ್ಛಾದ್ಯತಾಮಿತಿ ॥ ೧೩ ॥

---

ಅನೇಕ ಸರ್ಪಗಳನ್ನೂ ಪಡೆದರು. ಒಂದಾನೊಂದು ದಿನ ಆ ಕದ್ರುವು ವಿನತೆಯರು ಹತ್ತಿರದಲ್ಲಿಯೆ ಬರುತ್ತಿರುವ ಉಚ್ಚೈಃಶ್ರವಸ್ಸನ್ನು ನೋಡಿದರು. ಆಗ ಕದ್ರುವು ವಿನತೆಗೆ ಹೀಗೆಂದಳು:

೮. "ವಿನತೇ! ಈ ಉಚ್ಚೈಃಶ್ರವಸ್ಸಿನ ಬಾಲವು ಕಪ್ಪಗಿದೆಯೊ? ಬೆಳ್ಳಗಿದೆಯೊ? ನಿಜವಾಗಿ ಹೇಳು" ಎನ್ನಲು, ವಿನತೆಯು ಕದ್ರುವನ್ನು ಕುರಿತು ಇಂತೆಂದಳು :

೯. "ಈ ಕುದುರೆಯ ಬಾಲವು ಬೆಳ್ಳಗಿದೆಯೆಂದು ನನಗೆ ತೋರುತ್ತಿದೆ. ನಿನ್ನ ಅಭಿಪ್ರಾಯವೇನು?" ಎಂದಳು.

೧೦. ಕದ್ರುವು "ಈ ಕುದುರೆಯ ಬಾಲವು ಕಪ್ಪಗಿದೆಯೆಂದು ನಾನು ತಿಳಿಯುತ್ತೇನೆ?" ಎಂದು ತನ್ನ ಅಭಿಪ್ರಾಯವನ್ನು ತಿಳಿಸಿದಳು.

೧೧. ಬಳಿಕ ಅವರಿಬ್ಬರೂ ಸೋತವಳು ಗೆದ್ದವಳಿಗೆ ದಾಸಿಯಾಗಿರಬೇಕೆಂದು ಪಣವನ್ನು ಕಲ್ಪಿಸಿಕೊಂಡರು.

೧೨-೧೩. ಅನಂತರ ಕದ್ರುವು ತನ್ನ ಮಕ್ಕಳಾದ ವಾಸುಕಿ ಮೊದಲಾದ ಸರ್ಪಗಳನ್ನು ಕುರಿತು, "ಎಲೈ ಪುತ್ರರೆ! ನಾನು ವಿನತೆಗೆ ದಾಸಿಯಾಗದಂತೆ ಮಾಡಿರಿ" ಎಂದಳು. ತನ್ನ ಇಷ್ಟಸಿದ್ಧಿಗಾಗಿ ತವಕದಿಂದ "ನೀವು ಉಚ್ಚೈಃಶ್ರವಸ್ಸಿನ ಬಾಲವನ್ನು ಮುಚ್ಚಿರಿ" ಎಂದಳು.

ನಾಽಂಗೀಚಕ್ರುರ್ಮತಂ ತಸ್ಯಾ ನಾಗಾಃ ಕದ್ರೂ ರುಷಾ ತದಾ ।
ಅಶಪತ್ಸುಪಿತಾ ಪುತ್ರಾನ್ಜ್ವಲಂತೀ ರೋಷಮೂರ್ಛಿತಾ ॥ ೧೪ ॥
ಪರೀಕ್ಷಿತಸ್ಯ ಸರ್ವೇಽದ್ಧಾ ಯೂಯಂ ಸತ್ರೇ ಮರಿಷ್ಯಥ ।
ಇತಿ ಶಾಪೇ ಕೃತೇ ಮಾತ್ರಾ ತ್ರಸ್ತಃ ಕರ್ಕೋಟಕಸ್ತದಾ ॥ ೧೫ ॥
ಪ್ರಣಮ್ಯ ಪಾದಯೋಃ ಕದ್ರೂಂ ದೀನೋ ವಚನಮಬ್ರವೀತ್ ।
ಅಹಮುಚ್ಚೈಶ್ಶ್ರವೋವಾಲಂ ವಿಧಾಸ್ಯಾಮ್ಯಂಜನಪ್ರಭಂ ॥ ೧೬ ॥
ಮಾಭೀರಂಬ ತ್ವಯಾ ಕಾರ್ಯೇತ್ಯವಾದೀಚ್ಛಾಪವಿಕ್ಲವಃ ।
ಶ್ವೇತಮುಚ್ಚೈಶ್ಶ್ರವೋವಾಲಂ ತತಃ ಕರ್ಕೋಟಕೋರಗಃ ॥ ೧೭ ॥
ಛಾದಯಿತ್ವಾಸ್ವಭೋಗೇನ ವ್ಯತನೋದಂಜನದ್ಯುತಿಂ ।
ಅಥ ತೇ ವಿನತಾಕದ್ರ್ವೌ ದಾಸ್ಯೇ ಕೃತಪಣೇ ಉಭೇ ॥ ೧೮ ॥
ದೇವರಾಜಹಯಂ ದ್ರಷ್ಟುಂ ಸಂರಂಭಾದಭ್ಯಗಚ್ಛತಾಂ ।
ಶಶಾಂಕಶಂಖಮಾಣಿಕ್ಯಮುಕ್ತೈರಾವತಕಾರಣಂ ॥ ೧೯ ॥
ಯುಗಾಂತಕಾಲಶಯನಂ ಯೋಗನಿದ್ರಾಕೃತೋ ಹರೇಃ ।
ಅತೀತ್ಯ ಕದ್ರೂ ವಿನತೇ ಸಮುದ್ರಂ ಸರಿತಾಂಪತಿಂ ॥ ೨೦ ॥
ಹಯಂ ದದೃಶತುರ್ಗತ್ವಾ ದೇವರಾಜಸ್ಯ ವಾಹನಂ ।
ಕೃಷ್ಣವಾಲಂ ಹಯಂ ದೃಷ್ಟ್ವಾ ವಿನತಾ ದುಃಖಿತಾಽಭವತ್ ॥ ೨೧ ॥

---

೧೪–೨೧. ಅವಳ ಅಭಿಪ್ರಾಯವನ್ನು ಸರ್ಪಗಳು ಒಪ್ಪದಿರಲು ಕದ್ರುವು ಕೋಪದಿಂದ ಉರಿಯುತ್ತ ಮಕ್ಕಳನ್ನು ಕುರಿತು, "ನೀವೆಲ್ಲರೂ ಪರೀಕ್ಷಿದ್ರಾಜನ ಮಗನಾದ ಜನಮೇಜಯನ ಯಜ್ಞದಲ್ಲಿ ನಿಶ್ಚಯವಾಗಿಯೂ ಸಾಯುವಿರಿ" ಎಂದು ಶಪಿಸಿದಳು. ಹೀಗೆ ತಾಯಿಯು ಶಾಪಕೊಡಲು ಕರ್ಕೋಟಕನು ಹೆದರಿ ಅವಳ ಅಡಿಗಳಿಗೆರಗಿ, "ಅಮ್ಮ! ನಾನು ಉಚ್ಚೈಶ್ಶ್ರವಸ್ಸಿನ ಬಾಲವನ್ನು ಕಾಡಿಗೆಯಂತೆ ಕಪ್ಪುಮಾಡುವೆನು. ನೀನು ಹೆದರಬೇಡ" ಎಂದನು. ಅನಂತರ ಅವನು ಉಚ್ಚೈಶ್ಶ್ರವಸ್ಸಿನ ಬಾಲವನ್ನು ತನ್ನ ಶರೀರದಿಂದ ಮುಚ್ಚಿ ಕಾಡಿಗೆಯಂತೆ ಕಪ್ಪುಮಾಡಿದನು. ಬಳಿಕ ದಾಸ್ಯದಲ್ಲಿ ಪಣಮಾಡಿಕೊಂಡ ವಿನತಾ ಕದ್ರುಗಳು ಇಂದ್ರನ ಕುದುರೆಯಾದ ಉಚ್ಚೈಶ್ಶ್ರವಸ್ಸನ್ನು ನೋಡಲು ಹೋದರು. ಅವರು ಚಂದ್ರ, ಶಂಖ, ಮಾಣಿಕ್ಯ, ಮುತ್ತು, ಐರಾವತಗಳಿಗೆ ಕಾರಣವೂ, ಯೋಗನಿದ್ರೆಯನ್ನು ಮಾಡುವ ಶ್ರೀಮನ್ನಾರಾಯಣನ ಪ್ರಳಯಕಾಲದ ಶಯನವೂ ಆದ ನದೀಪತಿಯಾದ ಕ್ಷೀರಸಮುದ್ರವನ್ನು ದಾಟಿ ದೇವೇಂದ್ರನ ವಾಹನವಾದ ಉಚ್ಚೈಶ್ಶ್ರವಸ್ಸನ್ನು ನೋಡಿದರು. ವಿನತೆಯು ಕರಿಯ ಬಾಲವುಳ್ಳ ಆ ಕುದುರೆಯನ್ನು ಕಂಡು ದುಃಖಗೊಂಡಳು.

ದುಃಖಿತಾಂ ವಿನತಾಂ ಕದ್ರೂರ್ದಾಸೀಕೃತ್ಯೇ ನ್ಯಯುಙ್ಕ್ತ ಸಾ ।
ಏತಸ್ಮಿನ್ನಂತರೇ ತಾರ್ಕ್ಷ್ಯೋಽಪ್ಯಂಡಮುದ್ಭಿದ್ಯ ವಹ್ನಿವತ್ ॥ ೨೨ ॥
ಪ್ರಾದುರ್ಬಭೂವ ವಿಪ್ರೇಂದ್ರಾ ಗಿರಿಮಾತ್ರಶರೀರವಾನ್ ।
ದೃಷ್ಟ್ವಾ ತದ್ದೇಹಮಾಹಾತ್ಮ್ಯಮಭೂತ್ತ್ರಸ್ತಂ ಜಗತ್ತ್ರಯಂ ॥ ೨೩ ॥
ತತಸ್ತಂ ತುಷ್ಟುವುರ್ದೇವಾ ಗರುಡಂ ಪಕ್ಷಿಣಾಂ ವರಂ ।
ದೃಷ್ಟ್ವಾ ತದ್ದೇಹಮಾಹಾತ್ಮ್ಯಂ ತ್ರಸ್ತಂ ಸ್ಯಾದ್ಭುವನತ್ರಯಂ ॥ ೨೪ ॥
ಇತ್ಯಾಲೋಚ್ಯೋಪಸಂಹೃತ್ಯ ದೇಹಮತ್ಯಂತಭೀಷಣಂ ।
ಅರುಣಂ ಪೃಷ್ಠಮಾರೋಪ್ಯ ಮಾತುರಂತಿಕಮಭ್ಯಗಾತ್ ॥ ೨೫ ॥
ಅಥಾಹ ವಿನತಾಂ ಕದ್ರೂಃ ಪ್ರಣತಾಮತಿವಿಹ್ವಲಾಂ ।
ಚೇಟಿ ನಾಗಾಲಯಂ ಗಂತುಮುದ್ಯೋಗೋ ಮಮ ವರ್ತತೇ ॥ ೨೬ ॥
ತ್ವತ್ಪುತ್ರೋ ಗರುಡೋಽತೋ ಮಾಂ ಮತ್ಪುತ್ರಾಂಶ್ಚ ವಹತ್ವಿತಿ ।
ತತಶ್ಚ ವಿನತಾ ಪುತ್ರಂ ಗರುಡಂ ಪ್ರತ್ಯಭಾಷತ ॥ ೨೭ ॥
ಅಹಂ ಕದ್ರೂಮಿಮಾಂ ವಕ್ಷ್ಯೇ ತ್ವಂ ಸರ್ಪಾನ್ವಹ ತತ್ಸುತಾನ್ ।
ತಥೇತಿ ಗರುಡೋ ಮಾತುಃ ಪ್ರತ್ಯಗೃಹ್ಣದ್ವಚೋ ದ್ವಿಜಾಃ ॥ ೨೮ ॥
ಅವಹದ್ವಿನತಾ ಕದ್ರೂಂ ಸರ್ಪಾಂಸ್ತಾನ್ಗರುಡೋಽವಹತ್ ।
ರವಿಸಾಮೀಪ್ಯಗಾಃ ಸರ್ಪಾಸ್ತತ್ಕರೈರಾಹತಾಸ್ತದಾ ॥ ೨೯ ॥

---

೨೨–೨೩. ಹಾಗೆ ದುಃಖಗೊಂಡ ವಿನತೆಯನ್ನು ಆ ಕದ್ರುವು ತನ್ನ ದಾಸೀ ಕೆಲಸದಲ್ಲಿ ನೇಮಿಸಿದಳು. ಇಷ್ಟರಲ್ಲಿ ಗರುಡನು ಬೆಂಕಿಯಂತೆ ಮೊಟ್ಟೆಯನ್ನು ಒಡೆದುಕೊಂಡು ಬೆಟ್ಟದಂತಹ ದೇಹವುಳ್ಳವನಾಗಿ ಆವಿರ್ಭವಿಸಿದನು. ಅವನ ಮಹಾ ದೇಹವನ್ನು ಕಂಡು ಮೂರು ಲೋಕಗಳೂ ಭಯಗೊಂಡವು.

೨೪–೨೫. ಬಳಿಕ ಪಕ್ಷಿಶ್ರೇಷ್ಠನಾದ ಆ ಗರುಡನನ್ನು ದೇವತೆಗಳು ಸ್ತುತಿಸಿದರು. ಆ ಗರುಡನು, ತನ್ನ ದೇಹವನ್ನು ನೋಡಿ ಭಯಗೊಂಡ ಮೂರು ಲೋಕಗಳನ್ನು ಕಂಡು ಅತಿ ಭಯಂಕರವಾದ ತನ್ನ ದೇಹವನ್ನು ಸಣ್ಣದಾಗಿಸಿ ಅರುಣನನ್ನು ಬೆನ್ನಿನಮೇಲೆ ಏರಿಸಿಕೊಂಡು ತಾಯಿಯ ಹತ್ತಿರ ಬಂದನು.

೨೬–೨೭. ಬಳಿಕ ಕದ್ರುವು ನಮಸ್ಕರಿಸಿ ನಿಂತು ಅತಿ ದುಃಖಿತಳಾದ ವಿನತೆಯನ್ನು ಕುರಿತು, "ದಾಸಿ! ನಾನು ಪಾತಾಳಕ್ಕೆ ಹೋಗಲಿಚ್ಛಿಸುವೆನು. ಆದ್ದರಿಂದ ನಿನ್ನ ಸುತನಾದ ಗುರುಡನು ನನ್ನನ್ನೂ ನನ್ನ ಮಕ್ಕಳನ್ನೂ ಹೊತ್ತುಕೊಂಡು ಹೋಗಲಿ" ಎಂದಳು. ವಿನತೆಯು ಮಗನಾದ ಗರುಡನಿಗೆ ಹೇಳಿದಳು.

೨೮. "ನಾನು ಈ ಕದ್ರುವನ್ನು ಹೊರುವೆನು. ನೀನು ಅವಳ ಮಕ್ಕಳಾದ ಸರ್ಪಗಳನ್ನು ಹೊತ್ತುಕೊ." ಎಲೈ ವಿಪ್ರರೆ! ಗರುಡನು ಹಾಗೆಯೇ ಆಗಲೆಂದು ತಾಯಿಯ ಮಾತನ್ನು ಸ್ವೀಕರಿಸಿದನು.

೨೯. ವಿನತೆಯು ಕದ್ರುವನ್ನೂ, ಗರುಡನು ಆ ಸರ್ಪಗಳನ್ನೂ ಹೊತ್ತು

ಅಸ್ತೌಷೀದ್ವಜ್ರಿಣಂ ಕದ್ರೂಃ ಸುತಾನಾಂ ತಾಪಶಾಂತಯೇ ।
ಸರ್ವತಾಪಂ ಜಲಾಸಾರೈರ್ದೇವರಾಜೋಽಪ್ಯಶಾಮಯತ್ ॥ ೩೦ ॥
ನೀಯಮಾನಾಸ್ತದಾ ಸರ್ಪಾ ಗರುಡೇನ ಬಲೀಯಸಾ ।
ಗತ್ವಾ ತಂ ದೇಶಮಚಿರಾದವದನ್ವಿನತಾ ಸುತಂ ॥ ೩೧ ॥
ವಯಂ ದ್ವೀಪಾಂತರಂ ಗಂತುಂ ಸರ್ವೇ ದ್ರಷ್ಟುಂ ಕೃತತ್ವರಾಃ ।
ವಹತ್ವಮಸ್ಮಾನ್ಗರುಡ ಚೇಟೀಸುತ ತತಃ ಕ್ಷಣಾತ್ ॥ ೩೨ ॥
ತತೋ ಮಾತರಮಪ್ರಾಕ್ಷೀದ್ವಿನತಾಂ ಗರುಡೋ ದ್ವಿಜಾಃ ।
ಅಹಂ ಕಸ್ಮಾದ್ವಹಾಮೀಮಾಂಸ್ತ್ವಂ ಚೇಮಾಂ ವಹಸೇ ಸದಾ ॥ ೩೩ ॥
ಚೇಟೀಪುತ್ರೇತಿ ಮಾಮೇತೇ ಕಿಂ ಭಣಂತಿ ಸರೀಸೃಪಾಃ ।
ಸರ್ವಮೇತದ್ವದ ತ್ವಂ ಮೇ ಮಾತಸ್ತತ್ತ್ವೇನ ಪೃಚ್ಛತಃ ॥ ೩೪ ॥
ಪೃಷ್ಟೈವಂ ಜನನೀ ತೇನ ಗರುಡಂ ಪ್ರಾಽಬ್ರವೀತ್ಸುತಂ ।
ಭಗಿನ್ಯಾ ಕ್ರೂರಯಾ ಪುತ್ರ ಛಲೇನಾಽಹಂ ಪರಾಜಿತಾ ॥ ೩೫ ॥
ತಸ್ಯಾ ದಾಸೀ ಭವಾಮ್ಯದ್ಯ ಚೇಟೀಪುತ್ರಸ್ತತೋ ಭವಾನ್ ।
ಅತಸ್ತ್ವಂ ವಹಸೇ ಸರ್ಪಾನ್ವಹಾಮ್ಯೇನಾಮಹಂ ಸದಾ ॥ ೩೬ ॥

---

ಕೊಂಡುಹೋಗುತ್ತಿರಲು ಸೂರ್ಯನ ಹತ್ತಿರ ಹೋಗುತ್ತಿರುವಾಗ ಆ ಸರ್ಪಗಳು ಸೂರ್ಯನ ಕಿರಣಗಳಿಂದ ಸಂತಾಪಗೊಂಡುವು.

೩೦. ಆಗ ಕದ್ರುವು ಮಕ್ಕಳ ತಾಪಶಾಂತಿಗಾಗಿ ದೇವೇಂದ್ರನನ್ನು ಸ್ತುತಿಸಲು ಅವನು ಮಳೆಯನ್ನು ಸುರಿಸಿ ತಾಪವನ್ನು ನೀಗಿಸಿದನು.

೩೧–೩೨. ಬಲಿಷ್ಠನಾದ ಗರುಡನಿಂದ ಒಯ್ಯಲ್ಪಡುತ್ತಿದ್ದ ಆ ಸರ್ಪಗಳು ಪಾತಾಳವನ್ನು ಶೀಘ್ರವಾಗಿ ಸೇರಿ ಗರುಡನನ್ನು ಕುರಿತು, "ದಾಸಿಯ ಮಗನಾದ ಗರುಡನೆ! ನಾವು ಮತ್ತೊಂದು ದ್ವೀಪವನ್ನು ನೋಡುವುದಕ್ಕೆ ಹೋಗಲು ತ್ವರೆಯುಳ್ಳವರಾಗಿದ್ದೇವೆ. ನಮ್ಮನ್ನು ಕೂಡಲೆ ಅಲ್ಲಿಗೆ ಹೊತ್ತುಕೊಂಡು ಹೋಗು" ಎಂದುವು.

೩೩–೩೪. ಬ್ರಾಹ್ಮಣರೆ! ಬಳಿಕ ಗರುಡನು ತಾಯಿಯಾದ ವಿನತೆಯನ್ನು ಕುರಿತು, "ನಾನು ಈ ಸರ್ಪಗಳನ್ನು ಏಕೆ ಹೊರಬೇಕು? ನೀನು ಏತಕ್ಕೆ ಈ ಕದ್ರುವನ್ನು ಹೊರುತ್ತೀಯೆ? ಈ ಸರ್ಪಗಳು ನನ್ನನ್ನು 'ದಾಸಿಯ ಮಗನೆ!' ಎಂದು ಏತಕ್ಕೆ ಕರೆಯುತ್ತವೆ? ಅಮ್ಮ! ಇದನ್ನೆಲ್ಲ ನಿಜವಾಗಿ ನನಗೆ ಹೇಳು" ಎಂದು ಕೇಳಿದನು.

೩೫–೩೬. ಗರುಡನು ಹೀಗೆ ಕೇಳಲು ವಿನತೆಯು ಮಗನನ್ನು ಕುರಿತು, "ಮಗು! ಕ್ರೂರಳಾದ ನನ್ನ ಸಹೋದರಿ ಕದ್ರುವು ನನ್ನನ್ನು ಕಪಟದಿಂದ ಗೆದ್ದಿರುವಳು. ಆದುದರಿಂದ ನಾನು ಅವಳ ದಾಸಿಯಾಗಿರುವೆನು. ನೀನು

ಇತ್ಯಾದಿಸರ್ವವೃತ್ತಾಂತಮಾದಿತೋಽಸ್ಮೈ ನ್ಯವೇದಯತ್ ।
ಅಥ ತಾಂ ಗರುಡೋಽವಾದೀನ್ಮಾತರಂ ವಿನತಾಸುತಃ ॥ ೩೭ ॥
ಅಸ್ಮಾದ್ದಾಸ್ಯಾದ್ವಿಮೋಕ್ಷಾರ್ಥೆ ಕಿಂ ಕಾರ್ಯಂ ತೇ ಮಯಾಽಧುನಾ ।
ಇತಿ ಪೃಷ್ಟಾ ಸುತೇನಾಽಥ ವಿನತಾ ತಮಭಾಷತ ॥ ೩೮ ॥
ಸರ್ಪಾನ್ಪೃಚ್ಛಸ್ವ ಗರುಡ ಮಮ ಮಾತೃವಿಮೋಕ್ಷಣೇ ।
ಯುಷ್ಮಾಕಂ ಮಾತುಃ ಕಿಂ ಕಾರ್ಯಂ ಮಯೇತಿ ವದತಾಽಧುನಾ ॥ ೩೯ ॥
ಇತಿ ಮಾತ್ರಾ ಸಮುದಿತೋ ಗರುಡಃ ಪನ್ನಗಾನ್ಪ್ರತಿ ।
ಗತ್ವಾಽಪೃಚ್ಛದ್ದ್ವಿಜಶ್ರೇಷ್ಠಾಸ್ತೇಽಪ್ಯೇನಮವದಂಸ್ತದಾ ॥ ೪೦ ॥
ಯದಾ ಹರಿಷ್ಯಸೇ ಶೀಘ್ರಂ ಸುಧಾಂ ತ್ವಮಮರಾಲಯಾತ್ ।
ದಾಸ್ಯಾನ್ಮುಕ್ತಾ ಭವೇನ್ಮಾತಾ ವೈನತೇಯ ತವಾಽದ್ಯ ಹಿ ॥ ೪೧ ॥
ತತೋ ಮಾತರಮಾಗಮ್ಯ ಗರುಡಃ ಪ್ರಣತೋಽಬ್ರವೀತ್ ।
ಸುಧಾಮಂಬ ಸಮಾನೇತುಂ ಗಚ್ಛತೋ ಭಕ್ಷ್ಯಮರ್ಪಯ ॥ ೪೨ ॥
ಇತೀರಿತಾ ಸುತಂ ಪ್ರಾಹ ಮಾತಾ ತಂ ವಿನತಾ ಸುತಂ ।
ಸಮುದ್ರಮಧ್ಯೇ ವರ್ತಂತೇ ಶಬರಾಃ ಕತಿಚಿತ್ಸುತ ॥ ೪೩ ॥

---

ದಾಸಿಯ ಮಗನಾಗಿರುವೆ. ಅದರಿಂದಲೇ ನೀನು ಯಾವಾಗಲೂ ಸರ್ಪಗಳನ್ನು ಹೊರುತ್ತೀಯೆ. ನಾನೂ ಈ ಕದ್ರುವನ್ನು ಹೊರುತ್ತೇನೆ.''

೩೭. ವಿನತೆಯು ಇದೇ ಮೊದಲಾದ ಎಲ್ಲ ಸಮಾಚಾರಗಳನ್ನೂ ಮೊದಲಿನಿಂದ ಕಡೆಯವರೆಗೂ ತಿಳಿಸಲು ಗರುಡನು ತಾಯಿಯನ್ನು ಕುರಿತು ಇಂತೆಂದನು:

೩೮. "ಅಮ್ಮ! ನಿನ್ನ ಈ ದಾಸ್ಯದ ಬಿಡುಗಡೆಗೆ ನಾನೀಗ ಏನನ್ನು ಮಾಡಬೇಕು?'' ಸುತನು ಇಂತು ಕೇಳಲು ವಿನತೆಯು ಅವನನ್ನು ಕುರಿತು ಹೀಗೆಂದಳು:

೩೯. "ಗರುಡ! ನೀನು ಸರ್ಪಗಳನ್ನು ಕುರಿತು, 'ನಮ್ಮ ತಾಯಿಯ ದಾಸ್ಯವನ್ನು ನೀಗುವುದಕ್ಕಾಗಿ ನಾನು ನಿಮ್ಮ ತಾಯಿ ಕದ್ರುವಿಗೆ ಏನುಮಾಡಬೇಕು, ಹೇಳಿರಿ' ಎಂದು ಕೇಳು.''

೪೦. ಹೀಗೆ ವಿನತೆಯು ಹೇಳಲು ಅದರಂತೆ ಗರುಡನು ಹೋಗಿ ಸರ್ಪಗಳನ್ನು ಕೇಳಲು ಆ ಸರ್ಪಗಳು ಗರುಡನನ್ನು ಕುರಿತು ಹೀಗೆಂದುವು:

೪೧. "ಗರುಡ! ನೀನು ದೇವಲೋಕದಿಂದ ಅಮೃತವನ್ನು ತಂದಕೂಡಲೆ ನಿನ್ನ ತಾಯಿಯ ದಾಸ್ಯವು ನೀಗುವುದು.''

೪೨. ಬಳಿಕ ಗರುಡನು ತಾಯಿಯ ಬಳಿಗೆ ಬಂದು ನಮಸ್ಕರಿಸಿ, "ಅಮ್ಮ! ಅಮೃತವನ್ನು ತರಲು ಹೋಗುತ್ತಿರುವ ನನಗೆ ಏನಾದರೂ ಭಕ್ಷ್ಯವನ್ನು ಕೊಡು'' ಎಂದು ಕೇಳಿದನು.

೪೩–೪೫. ಅವಳು, "ಮಗು! ಸಮುದ್ರದ ಮಧ್ಯದಲ್ಲಿ ಕೆಲವು ಜನ

ತಾನ್ಭಕ್ಷಯಿತ್ವಾ ಶಬರಾನಮೃತಂ ತ್ವಮಿಹಾನಯ ।
ತತ್ರ ಕಶ್ಚಿದ್ದ್ವಿಜಃ ಕಾಮೀ ಶಬರೀಸಂಗಕೌತುಕೀ ॥ ೪೪ ॥
ತ್ಯಜ ತಂ ಬ್ರಾಹ್ಮಣಂ ಕಂಠಂ ದಹಂತಂ ಬ್ರಹ್ಮತೇಜಸಾ ।
ಪಕ್ಷಾದೀನಿ ತವಾಂಗಾನಿ ಪಾಂತು ದೇವಾ ಮರುನ್ಮುಖಾಃ ॥ ೪೫ ॥
ಇತಿ ಸ್ವಮಾತುರಾಶೀರ್ಭಿರ್ಗರುಡೋ ವರ್ಧಿತೋ ಯಯೌ ।
ಶಬರಾಲಯಮಭ್ಯೇತ್ಯ ತಸ್ಯ ಭಕ್ಷಯತೋ ಮುಖಂ ॥ ೪೬ ॥
ಆವೃತಂ ಪ್ರಾವಿಶನ್ವ್ಯಾಧಾ ವಯಾಂಸೀವ ದರೀಂ ಗಿರೇಃ ।
ಅಥ ಸ ಬ್ರಾಹ್ಮಣೋಽಪ್ಯಾಗಾತ್ತತ್ಕಂಠಂ ಮುನಿಪುಂಗವಾಃ ॥ ೪೭ ॥
ಕಂಠಂ ದಹಂತಂ ವಿಪ್ರಂ ತಮುವಾಚ ವಿನತಾಸುತಃ ।
ವಿಪ್ರ ಪಾಪೋಽಪ್ಯವಧ್ಯೋ ಹಿ ನಿರ್ಯಾಹಿ ತ್ವಮಿತೋ ಬಹಿಃ ॥ ೪೮ ॥
ಏವಮುಕ್ತಸ್ತದಾ ವಿಪ್ರೋ ಗರುಡಂ ಪ್ರತ್ಯಭಾಷತ ।
ಕಿರಾತೀ ಮಮ ಭಾರ್ಯಾಽಪಿ ನಿರ್ಗಂತವ್ಯಾ ಮಯಾ ಸಹ ॥ ೪೯ ॥
ಏವಮಸ್ತ್ವಿತಿ ತಂ ವಿಪ್ರಮುವಾಚ ಪತಗೇಶ್ವರಃ ।
ತತಃ ಸ ಗರುಡೋ ವಿಪ್ರಮುಜ್ಜಗಾರ ಸಭಾರ್ಯಕಂ ॥ ೫೦ ॥

---

ಬೇಡರಿದ್ದಾರೆ. ನೀನು ಅವರನ್ನು ತಿಂದು ಅಮೃತವನ್ನು ಇಲ್ಲಿಗೆ ತೆಗೆದುಕೊಂಡು ಬಾ. ಅಲ್ಲಿ ಒಬ್ಬ ಬೇಡಸ್ತ್ರೀಯ ಸಂಗದಲ್ಲಿ ನಿರತನಾದ ಕಾಮುಕಬ್ರಾಹ್ಮಣ ನಿರುವನು. ನೀನು ತಿನ್ನುತ್ತಿರುವಾಗ ಕಂಠವನ್ನು ಬ್ರಹ್ಮತೇಜಸ್ಸಿನಿಂದ ಸುಡುವ ಅವನನ್ನು ಬಿಟ್ಟುಬಿಡು. ವಾಯು ಮೊದಲಾದ ದಿವಿಜರು ನಿನ್ನ ರೆಕ್ಕೆ ಮೊದಲಾದ ಅವಯವಗಳನ್ನು ಕಾಪಾಡಲಿ."

೪೬–೪೭. ಹೀಗೆ ತನ್ನ ತಾಯಿಯ ಆಶೀರ್ವಾದವನ್ನು ಪಡೆದು ಗರುಡನು ವ್ಯಾಧರ ಮನೆಯನ್ನು ಸೇರಿ ಅವರನ್ನು ತಿನ್ನುತ್ತಿರಲು ಅವನ ತೆರೆದ ಬಾಯಿ ಯನ್ನು ಬೇಡರು ಬೆಟ್ಟದ ಗುಹೆಯನ್ನು ಪಕ್ಷಿಗಳು ಹೋಗುವಂತೆ ಪ್ರವೇಶಿಸಿ ದರು. ಮುನಿವರ್ಯರೆ! ಬಳಿಕ ಆ ಬ್ರಾಹ್ಮಣನೂ ಅವನ ಕಂಠವನ್ನು ಸೇರಿದನು.

೪೮. ಗರುಡನು ಕಂಠವನ್ನು ಸುಡುತ್ತಿರುವ ಬ್ರಾಹ್ಮಣನನ್ನು ಕುರಿತು, "ವಿಪ್ರ! ನೀನು ಪಾಪಿಯಾದರೂ ಕೊಲ್ಲಲರ್ಹನಲ್ಲ. ಆದುದರಿಂದ ಹೊರಗೆ ಹೊರಡು" ಎಂದನು.

೪೯. ಆಗ ಬ್ರಾಹ್ಮಣನು ಗರುಡನನ್ನು ಕುರಿತು, "ನನ್ನ ಭಾರ್ಯೆಯಾದ ಕಿರಾತಿಯನ್ನೂ ನನ್ನೊಡನೆ ಹೊರಗೆ ಬಿಡು" ಎಂದನು.

೫೦. ಗರುಡನು ಹಾಗೆಯೇ ಆಗಲೆಂದು ಆ ಬ್ರಾಹ್ಮಣನನ್ನು ಪತ್ನಿಯೊಡನೆ ವಮನಮಾಡಿದನು.

ವಿಪ್ರೋಽಪ್ಯಭೀಪ್ಸಿತಾನ್ದೇಶಾನ್ನಿಷಾದ್ಯಾ ಸಹ ನಿರ್ಯಯೌ ।
ಶಬರಾನ್ಭಕ್ಷಯಿತ್ವಾಽಥ ಗರುಡಃ ಪಕ್ಷಿಣಾಂ ವರಃ ॥ ೫೧ ॥
ಆತ್ಮನಃ ಪಿತರಂ ವೇಗಾತ್ಕಶ್ಯಪಂ ಸಮುಪೇಯಿವಾನ್ ।
ಕುತ್ರ ಯಾಸೀತಿ ತತ್ಪೃಷ್ಟೋ ಗರುಡಸ್ತಮಭಾಷತ ॥ ೫೨ ॥
ಮಾತುರ್ದಾಸ್ಯವಿಮೋಕ್ಷಾಯ ಸುಧಾಮಾಹರ್ತುಮಾಗಮಮ್ ।
ಬಹೂನ್ಕಿರಾತಾನ್ಜಗ್ಧ್ವಾಽಪಿ ತೃಪ್ತಿರ್ಮಮ ನ ಜಾಯತೇ ॥ ೫೩ ॥
ಅಪರ್ಯಂತಕ್ಷುಧಾ ಬ್ರಹ್ಮನ್ಬಾಧತೇ ಮಾಮಹರ್ನಿಶಮ್ ।
ತನ್ನಿವೃತ್ತಿಪ್ರದಂ ಭಕ್ಷ್ಯಂ ಮಮಾಽರ್ಪಯ ತಪೋಧನ ॥ ೫೪ ॥
ಯೇನಾಽಹಂ ಶಕ್ನುಯಾಂ ತಾತ ಸುಧಾಮಾಹರ್ತುಮೋಜಸಾ ।
ಇತೀರಿತಃ ಸುತಂ ಪ್ರಾಹ ಕಶ್ಯಪೋ ವಿನತೋದ್ಭವಮ್ ॥ ೫೫ ॥

ಕಶ್ಯಪ ಉವಾಚ :—

ಮುನಿರ್ವಿಭಾವಸುರ್ನಾಮ್ನಾ ಪುರಾಸೀತ್ತಸ್ಯ ಸಾಽನುಜಃ ।
ಸುಪ್ರತೀಕ ಇತಿ ಭ್ರಾತಾ ತಾವುಭೌ ವಂಶವೈರಿಣೌ ॥ ೫೬ ॥
ಅನ್ಯೋನ್ಯಂ ಶೇಪತುರ್ವಿಪ್ರಾ ಮಹಾಕ್ರೋಧಸಮಾಕುಲೌ ।
ಗಜೋಽಭವತ್ಸುಪ್ರತೀಕಃ ಕೂರ್ಮೋಽಭೂಚ್ಚ ವಿಭಾವಸುಃ ॥ ೫೭ ॥
ಏವಂ ವಿತ್ತವಿವಾದಾತ್ತೌ ಶೇಪತುರ್ಭ್ರಾತರೌ ಮಿಥಃ ।
ಗಜಃ ಷಡ್ಯೋಜನೋಚ್ಛ್ರಾಯೋ ದ್ವಿಗುಣಾಯಾಮಸಂಯುತಃ ॥ ೫೮ ॥

---

೫೧–೫೨. ಬ್ರಾಹ್ಮಣನೂ ಕಿರಾತಿಯೊಡನೆ ಇಷ್ಟಬಂದ ದೇಶಕ್ಕೆ ತೆರಳಿದನು. ಬಳಿಕ ಗರುಡನು ಬೇಡರನ್ನು ತಿಂದು ವೇಗದಿಂದ ತನ್ನ ತಂದೆಯಾದ ಕಶ್ಯಪನನ್ನು ಸಮೀಪಿಸಿದನು. ಅವನು 'ಎಲ್ಲಿಗೆ ಹೋಗುತ್ತೀಯೆ?' ಎಂದು ಕೇಳಲು ಗರುಡನು ಅವನನ್ನು ಕುರಿತು ಇಂತೆಂದನು :

೫೩. "ತಾಯಿಯ ದಾಸ್ಯದ ಬಿಡುಗಡೆಗಾಗಿ ಅಮೃತವನ್ನು ತರಲು ಬಂದಿರುವೆನು. ಅನೇಕ ಕಿರಾತರನ್ನು ತಿಂದರೂ ನನಗೆ ತೃಪ್ತಿಯಾಗಲಿಲ್ಲ.

೫೪. ಮುನಿಯೆ! ಹಸಿವು ನನ್ನನ್ನು ಯಾವಾಗಲೂ ಬಹಳವಾಗಿ ಪೀಡಿಸುತ್ತಿದೆ. ಅದನ್ನು ಪರಿಹರಿಸುವ ಭಕ್ಷ್ಯವನ್ನು ನನಗೆ ಕೊಡು.

೫೫. ಅದರಿಂದ ನಾನು ಅಮೃತವನ್ನು ತರಲು ಶಕ್ತನಾದೇನು" ಎನ್ನಲು, ಕಶ್ಯಪನು ಮಗನಾದ ಗರುಡನನ್ನು ಕುರಿತು ಹೀಗೆಂದನು :

೫೬–೫೮. "ಹಿಂದೆ ವಿಭಾವಸುವೆಂಬ ಮುನಿಯಿದ್ದನು. ಅವನಿಗೆ ಸಪ್ರತೀಕನೆಂಬ ಸಹೋದರನಿದ್ದನು. ಕುಲವೈರಿಗಳೂ, ಅತ್ಯಂತ ಕೋಪಿಷ್ಠರೂ ಆದ ಅವರಿಬ್ಬರೂ ದ್ರವ್ಯಕ್ಕಾಗಿ ಜಗಳವಾಡಿ ಪರಸ್ಪರವಾಗಿ ಶಪಿಸಿಕೊಂಡರು.

ಕೂರ್ಮಸ್ತ್ರಿಯೋಜನೋಚ್ಛ್ರಾಯೋ ದಶಯೋಜನವಿಸ್ತೃತಃ ।
ಬದ್ಧವೈರಾವುಭಾವೇತೌ ಸರಸ್ಯಸ್ಮಿನ್ವಿಹಂಗಮ ॥ ೫೯ ॥
ಪೂರ್ವವೈರಮನುಸ್ಮೃತ್ಯ ಯುಧ್ಯೇತೇ ಜೇತುಮಿಚ್ಛಯಾ ।
ಉಭೌ ತೌ ಭಕ್ಷಯಿತ್ವಾ ತ್ವಂ ಸುಧಾಮಾಹರ ತೃಪ್ತಿಮಾನ್ ॥ ೬೦ ॥
ಏವಂ ಪಿತ್ರೇರಿತಃ ಪಕ್ಷೀ ಗತ್ವಾ ತದ್ಗಜಕಚ್ಛಪೌ ।
ಸಮುದ್ಧೃತ್ಯ ಮಹಾಕಾಯೌ ಮಹಾಬಲಪರಾಕ್ರಮೌ ॥ ೬೧ ॥
ವಹನ್ನಖಾಭ್ಯಾಂ ಸಂತೀರ್ಥಂ ವಿಳಂಬಾಽಭಿಧಮಭ್ಯಗಾತ್ ।
ತತ್ರಾಗತಂ ಸಮಾಲೋಕ್ಯ ಪಕ್ಷಿರಾಜಂ ದ್ವಿಜೋತ್ತಮಾಃ ॥ ೬೨ ॥
ತತ್ತೀರಜೋ ಮಹಾವೃಕ್ಷೋ ರೋಹಿಣಾಖ್ಯೋ ಮಹೋಚ್ಛ್ರಯಃ ।
ವೈನತೇಯಮಿದಂ ಪ್ರಾಹ ಮಹಾಬಲಪರಾಕ್ರಮಂ ॥ ೬೩ ॥
ಏನಾಮಾರುಹ ಮಚ್ಛಾಖಾಂ ಶತಯೋಜನಮಾಯತಾಂ ।
ಸ್ಥಿತ್ವಾಽತ್ರ ಗಜಕೂರ್ಮೌ ತ್ವಂ ಭಕ್ಷಯಸ್ವ ಖಗೋತ್ತಮ ॥ ೬೪ ॥
ಇತ್ಯುಕ್ತಸ್ತರುಣಾ ಪಕ್ಷೀ ಸ ತತ್ರಾಸ್ತೇ ಮನೋಜವಃ ।
ತದ್ಭಾರಾತ್ಸಾ ತರೋಃ ಶಾಖಾ ಭಗ್ನಾಽಭೂದ್ದ್ವಿಜಸತ್ತಮಾಃ ॥ ೬೫ ॥

---

ಸುಪ್ರತೀಕನು ಆನೆಯೂ, ವಿಭಾವಸುವು ಆಮೆಯೂ ಆದರು. ಆನೆಯು ಆರು ಗಾವುದ ಎತ್ತರವೂ, ಹನ್ನೆರಡುಗಾವುದ ಅಗಲವೂ ಆಗಿರುವುದು.

೫೯-೬೦. ಆಮೆಯು ಮೂರುಗಾವುದ ಎತ್ತರವೂ, ಹತ್ತುಗಾವುದ ಅಗಲವೂ ಆಗಿರುವುದು. ಗರುಡನೆ! ಇವರಿಬ್ಬರೂ ಈ ಸರೋವರದಲ್ಲಿ ಹಿಂದಿನ ದ್ವೇಷವನ್ನು ಸ್ಮರಿಸಿಕೊಂಡು ಜಯಿಸಲಿಚ್ಛೆಯಿಂದ ಯುದ್ಧಮಾಡುತ್ತಿದ್ದಾರೆ. ಇವರಿಬ್ಬರನ್ನೂ ನೀನು ತಿಂದು ತೃಪ್ತಿಗೊಂಡು ಅಮೃತವನ್ನು ತೆಗೆದುಕೊಂಡು ಬಾ."

೬೧-೬೩. ಹೀಗೆ ತಂದೆಯಾದ ಕಾಶ್ಯಪನು ಹೇಳಲು ಗರುಡನು ಅಲ್ಲಿಗೆ ಹೋಗಿ ದೊಡ್ಡ ದೇಹವುಳ್ಳವರೂ, ಅತ್ಯಂತ ಪರಾಕ್ರಮಿಗಳೂ ಆದ ಆ ಆನೆ ಆಮೆಗಳನ್ನು ಉಗುರಿನಿಂದ ಎತ್ತಿಕೊಂಡು ವಿಳಂಬವೆಂಬ ತೀರ್ಥಕ್ಕೆ ಹೋದನು. ಬ್ರಾಹ್ಮಣರೆ! ಅಲ್ಲಿಗೆ ಬಂದ ಗರುಡನನ್ನು ನೋಡಿ ರೋಹಿಣ (ಹಾಲವಾಣ) ವೆಂಬ ಉನ್ನತವಾದ ಆ ಸರೋವರದ ದಡದಲ್ಲಿರುವ ದೊಡ್ಡ ಮರವು ಅತಿ ಬಲ ಶಾಲಿಯಾದ ಆ ಗರುಡನನ್ನು ಕುರಿತು ಹೀಗೆಂದಿತು:

೬೪. "ಪಕ್ಷಿವರ್ಯ! ನೂರುಯೋಜನ ವಿಶಾಲವಾದ ಈ ನನ್ನ ಕೊಂಬೆಯನ್ನು ಹತ್ತು. ನೀನು ಇದರಲ್ಲಿ ಕುಳಿತುಕೊಂಡು ಈ ಆನೆ ಆಮೆಗಳನ್ನು ತಿನ್ನು."

೬೫. ದ್ವಿಜವರ್ಯರೆ! ಆ ಮರವು ಹೀಗೆನ್ನಲು ಗರುಡನು ಆ ಕೊಂಬೆಯಲ್ಲಿ ಕುಳಿತುಕೊಂಡನು. ಅವನ ಭಾರದಿಂದ ಆ ಕೊಂಬೆಯು ಮುರಿಯಿತು.

ವಾಲಖಿಲ್ಯಮುನೀಂಸ್ತಸ್ಮಿಲ್ಲಂಬಮಾನಾನಧೋಮುಖಾನ್ ।
ದೃಷ್ಟ್ವಾ ತತ್ಪಾತಶಂಕಾವಾಂಸ್ತಾಂ ಶಾಖಾಂ ಗರುಡೋಽಗ್ರಹೀತ್ ॥೬೬॥
ಗಜಕೂರ್ಮೌ ಚ ತಾಂ ಶಾಖಾಂ ಗೃಹೀತ್ವಾ ಯಾಂತಮಂಬರೇ ।
ಪಿತಾ ತಸ್ಯಾಽಬ್ರವೀತ್ತತ್ರ ಗರುಡಂ ವಿನತಾಸುತಂ ॥ ೬೭ ॥
ತ್ಯಜೇಮಾಂ ನಿರ್ಜನೇ ಶೈಲೇ ಶಾಖಾಂ ತಾಂ ವಿನತೋದ್ಭವ ।
ಇತ್ಯುಕ್ತಃ ಸ ತಥಾ ಗತ್ವಾ ಶಾಖಾಂ ನಿಷ್ಪುರುಷೇ ನಗೇ ॥ ೬೮ ॥
ವಿನ್ಯಸ್ಯಾಽಭಕ್ಷಯತ್ಪಕ್ಷೀ ತೌ ತದಾ ಗಜಕಚ್ಛಪೌ ।
ಅಥೋತ್ಪಾತಃ ಸಮುಭವತ್ತಸ್ಮಿನ್ನವಸರೇ ದಿವಿ ॥ ೬೯ ॥
ದೃಷ್ಟ್ವೋತ್ಪಾತಂ ಬಲಾರಾತಿಃ ಪಪ್ರಚ್ಛ ಸ್ವಪುರೋಹಿತಂ ।
ಉತ್ಪಾತಕಾರಣಂ ಜೀವ ಕಿಮತ್ರೇತಿ ಪುನಃ ಪುನಃ ।
ಬೃಹಸ್ಪತಿಸ್ತದಾ ಶಕ್ರಂ ಪ್ರೋವಾಚ ದ್ವಿಜಸತ್ತಮಾಃ ॥ ೭೦ ॥

ಬೃಹಸ್ಪತಿರುವಾಚ :—

ಕಾಶ್ಯಪೋ ಹಿ ಮುನಿಃ ಪೂರ್ವಮಯಜತ್ಕ್ರತುನಾ ಹರೇ । ॥ ೭೧ ॥
ಸರ್ವಾನೃಷೀನ್ಸುರಾನ್ಸಿದ್ಧಾನ್ಯಕ್ಷಾನ್ಗಂಧರ್ವಕಿನ್ನರಾನ್ ।
ಯಜ್ಞಸಂಭಾರಸಿಧ್ಯರ್ಥಂ ಪ್ರೇಷಯಾಮಾಸ ಸ ದ್ವಿಜಾನ್ ॥ ೭೨ ॥

---

೬೬. ಗರುಡನು ಆ ಮರದಲ್ಲಿ ಕೆಳಮುಖರಾಗಿ ಜೋಲಾಡುತ್ತಿರುವ ವಾಲಖಿಲ್ಯಮುನಿಗಳನ್ನು ಕಂಡು ಅವರು ಬಿದ್ದಾರೆಂದು ಶಂಕಿಸಿ ಆ ಕೊಂಬೆಯನ್ನೂ ಹಿಡಿದುಕೊಂಡನು.

೬೭. ಆನೆ ಆಮೆಗಳನ್ನೂ, ಆ ಕೊಂಬೆಯನ್ನೂ ಹಿಡಿದುಕೊಂಡು ಆಕಾಶ ದಲ್ಲಿ ಹಾರುತ್ತಿರುವ ಗರುಡನನ್ನು ಕಂಡು ಕಶ್ಯಪನು ಇಂತೆಂದನು:

೬೮–೬೯. "ವಿನತಾಪುತ್ರ! ಈ ಕೊಂಬೆಯನ್ನು ಜನರಿಲ್ಲದ ಪರ್ವತದಲ್ಲಿ ಬಿಡು" ಕಶ್ಯಪನು ಹೀಗೆನ್ನಲು, ಗರುಡನು ಹಾಗೆಯೇ ಆ ಕೊಂಬೆಯನ್ನು ಜನರಿಲ್ಲದ ಬೆಟ್ಟದಲ್ಲಿಳಿಸಿ ಆ ಆನೆ, ಆಮೆಗಳನ್ನು ತಿಂದನು. ಆ ಸಮಯದಲ್ಲಿ ಆಕಾಶದಲ್ಲಿ ಉತ್ಪಾತವುಂಟಾಯಿತು.

೭೦. ದೇವೇಂದ್ರನು ಆ ಉತ್ಪಾತವನ್ನು ಕಂಡು ತನ್ನ ಪುರೋಹಿತನಾದ ಬೃಹಸ್ಪತಿಯನ್ನು ಉತ್ಪಾತದ ಕಾರಣವನ್ನು ಕೇಳಿದನು. ಅವನು ಇಂದ್ರನನ್ನು ಕುರಿತು ಇಂತೆಂದನು:

೭೧–೭೨. ಬೃಹಸ್ಪತಿಯು ಹೇಳುತ್ತಾನೆ:—"ಅಯ್ಯಾ ಇಂದ್ರನೆ! ಹಿಂದೆ ಕಾಶ್ಯಪಮುನಿಯು ಯಜ್ಞಮಾಡಲೋಸುಗ ಮುನಿಗಳು, ದೇವತೆಗಳು, ಸಿದ್ಧರು, ಯಕ್ಷರು, ಗಂಧರ್ವರು, ಕಿನ್ನರರು ಇವರೆಲ್ಲರನ್ನೂ ಯಜ್ಞಸಾಮಗ್ರಿಗಳನ್ನು ಸಿದ್ಧಮಾಡಲು ಕಳುಹಿಸಿದನು.

ವಾಲಖಿಲ್ಯಾನ್ಯಸಂಭಾರಾನ್ಹ್ರಸ್ವಾನಂಗುಷ್ಠಮಾತ್ರಕಾನ್ ।
ಮಜ್ಜತೋ ಗೋಷ್ಪದಜಲೇ ದೃಷ್ಟ್ವಾ ಹಸಿತವಾನ್ಭವಾನ್ ॥ ೭೩ ॥
ಭವತಾಽವಮತಾಃ ಕ್ರುದ್ಧಾ ವಾಲಖಿಲ್ಯಾಸ್ತದಾ ಹರೇ ।
ಜುಹುಯುರ್ಯಜ್ಞವಹ್ನೌ ತೇ ಕ್ರೋಧೇನ ಜ್ವಲಿತಾನನಾಃ ॥ ೭೪ ॥
ದೇವೇಂದ್ರಭಯದಃ ಶತ್ರುಃ ಕಶ್ಯಪಸ್ಯ ಸುತೋಽಸ್ತ್ವಿತಿ ।
ತಸ್ಯ ಪುತ್ರೋಽದ್ಯ ಗರುಡಃ ಸುಧಾಹರಣಕೌತುಕೀ ॥ ೭೫ ॥
ಸಮಾಗಚ್ಛತಿ ತದ್ಧೇತುರಯಮುತ್ಪಾತ ಆಗತಃ ।
ಇತ್ಯುಕ್ತಃ ಸೋಽಬ್ರವೀದಿಂದ್ರೋ ದೇವಾನಗ್ನಿಪುರೋಗಮಾನ್ ॥ ೭೬ ॥
ಸುಧಾಮಾಹರ್ತುಮಾಯಾತಿ ಪಕ್ಷೀ ಸಾ ರಕ್ಷ್ಯತಾಮಿತಿ ।
ಇತೀಂದ್ರಪ್ರೇರಿತಾ ದೇವಾ ರರಕ್ಷುಃ ಸಾಯುಧಾಃ ಸುಧಾಂ ॥ ೭೭ ॥
ಪಕ್ಷಿರಾಜಸ್ತದಾಽಭ್ಯಾಗಾದ್ದೇವಾನಾಯುಧಧಾರಿಣಃ ।
ಮಹಾಬಲಂ ತೇ ಗರುಡಂ ದೃಷ್ಟ್ವಾಽಕಂಪಂತ ವೈ ಸುರಾಃ ॥ ೭೮ ॥
ಗರುಡಸ್ಯ ಸುರಾಣಾಂ ಚ ತತೋ ಯುದ್ಧಮಭೂನ್ಮಹತ್ ।
ಅಖಂಡಿ ಪಕ್ಷಿತುಂಡೇನ ಭೌಮನೋಽಮೃತಪಾಲಕಃ ॥ ೭೯ ॥

---

೭೩. ಯಜ್ಞಸಾಮಗ್ರಿಗಳಿಂದ ಕೂಡಿದವರೂ, ಗೋಪಾದದಷ್ಟು ನೀರಿನಲ್ಲಿ ಮುಳುಗುತ್ತಿರುವವರೂ, ಕುಳ್ಳರೂ, ಅಂಗುಷ್ಠಪರಿಮಾಣವುಳ್ಳವರೂ ಆದ ವಾಲಖಿಲ್ಯರನ್ನು ನೋಡಿ ನೀನು ನಕ್ಕಿರುವೆ.

೭೪–೭೭. ಆಗ ನೀನು ಅವಮಾನ ಮಾಡಿದುದರಿಂದ ಕೋಪಗೊಂಡ ಆ ವಾಲಖಿಲ್ಯರು ಯಜ್ಞದ ಬೆಂಕಿಯಲ್ಲಿ ದೇವೇಂದ್ರನನ್ನು ಹೆದರಿಸುವ ಮಗನು ಕಶ್ಯಪನಿಗೆ ಜನಿಸಲಿ ಎಂದು ಹೋಮಮಾಡಿದರು. ಆ ಕಶ್ಯಪನ ಮಗನಾದ ಗರುಡನು ಈಗ ಅಮೃತವನ್ನು ತೆಗೆದುಕೊಂಡುಹೋಗಲು ಕುತೂಹಲವುಳ್ಳವನಾಗಿ ಬರುತ್ತಿದ್ದಾನೆ. ಅದಕ್ಕಾಗಿ ಈ ಉತ್ಪಾತವು ಉಂಟಾಗಿದೆ." ಹೀಗೆ ಬೃಹಸ್ಪತಿಯು ಹೇಳಲು ಇಂದ್ರನು ಅಗ್ನಿ ಮೊದಲಾದ ದೇವತೆಗಳನ್ನು ಕುರಿತು, 'ಗರುಡನು ಅಮೃತವನ್ನಪಹರಿಸಲು ಬರುತ್ತಿದ್ದಾನೆ. ನೀವು ಅದನ್ನು ರಕ್ಷಿಸಿರಿ' ಎನ್ನಲು, ಅವರು ಆಯುಧಗಳನ್ನು ಹಿಡಿದು ಅಮೃತವನ್ನು ಕಾಪಾಡತೊಡಗಿದರು.

೭೮. ಗರುಡನು ಆಯುಧಗಳನ್ನು ಧರಿಸಿ ನಿಂತಿರುವ ದೇವತೆಗಳ ಹತ್ತಿರ ಬರಲು ಅವರು ಬಲಿಷ್ಠನಾದ ಅವನನ್ನು ಕಂಡು ನಡುಗಿದರು.

೭೯. ಅನಂತರ ದೇವತೆಗಳಿಗೂ, ಗರುಡನಿಗೂ ಘೋರ ಯುದ್ಧವಾಯಿತು. ಗರುಡನು ತನ್ನ ಕೊಕ್ಕಿನಿಂದ ಅಮೃತವನ್ನು ಕಾಪಾಡುವ 'ಕುಜನನ್ನು ಕತ್ತರಿಸಿದನು.

ತದಾ ನಿಜಘ್ನುರ್ಗರುಡಂ ದೇವಾಶ್ಶಸ್ತ್ರೈರನೇಕಶಃ ।
ಅತೀವ ಗರುಡೋ ದೇವೈರ್ಬಾಧಿತಃ ಶಸ್ತ್ರಪಾಣಿಭಿಃ ॥ ೮೦ ॥
ಪಕ್ಷಾಭ್ಯಾಮಾಕ್ಷಿಪದ್ದೂರೇ ದೇವಾನಗ್ನಿಪುರೋಗಮಾನ್ ।
ತತ್ಪಕ್ಷವಿಕ್ಷತಾ ದೇವಾಸ್ತದಾ ಪರಮಕೋಪನಾಃ ॥ ೮೧ ॥
ನಾರಾಚಾನ್ಭಿಂಡಿಪಾಲಾಂಶ್ಚ ನಾನಾಶಸ್ತ್ರಾಣಿ ಚಾಽಕ್ಷಿಪನ್ ।
ತತಸ್ತು ಗರುಡೋ ವೇಗಾದ್ದೇವದೃಷ್ಟಿವಿಲೋಪಿನೀಂ ॥ ೮೨ ॥
ಧೂಲಿಮುತ್ಥಾಪಯಾಮಾಸ ಪಕ್ಷಾಭ್ಯಾಂ ವಿನತಾಸುತಃ ।
ವಾಯುನಾ ಶಮಯಾಮಾಸುಸ್ತಾನ್ಪಾಂಸೂಂಸ್ತ್ರಿದಶೋತ್ತಮಾಃ ॥ ೮೩ ॥
ರುದ್ರಾನ್ವಸೂಂಸ್ತಥಾಽಽದಿತ್ಯಾನ್ಮರುತೋಽನ್ಯಾನ್ಸುರಾಂಸ್ತಥಾ ।
ಗರುಡಃ ಪಕ್ಷತುಂಡಾಭ್ಯಾಂ ವ್ಯಥಿತಾನಕರೋದ್ದ್ವಿಜಾಃ ॥ ೮೪ ॥
ಪಲಾಯಿತೇಷು ದೇವೇಷು ಸೋಽದ್ರಾಕ್ಷೀಜ್ಜ್ವಲನಂ ಪುರಃ ।
ಜ್ವಲಂತಂ ಪರಿತಸ್ತ್ವಗ್ನಿಂ ಶಮಾಪಯಿತುಮುದ್ಯಯೌ ॥ ೮೫ ॥
ಸ ಸಹಸ್ರಮುಖೋ ಭೂತ್ವಾ ತೈಃ ಪಿಬನ್ಶತಶೋ ನದೀಃ ।
ತಮಗ್ನಿಂ ನಾಶಯಾಮಾಸ ತೈಃ ಪಯೋಭಿಸ್ತ್ವರಾನ್ವಿತಃ ॥ ೮೬ ॥

---

೮೦. ಆಗ ದೇವತೆಗಳು ಆಯುಧಗಳಿಂದ ಬಹಳವಾಗಿ ಗರುಡನನ್ನು ಹೊಡೆದರು. ಗರುಡನಿಗೆ ಆಯುಧಧಾರಿಗಳಾದ ದೇವತೆಗಳಿಂದ ಬಹಳ ತೊಂದರೆ ಯಾಯಿತು.

೮೧–೮೩. ಗರುಡನು ಎರಡು ರೆಕ್ಕೆಗಳಿಂದ ಅಗ್ನಿಯೆ ಮೊದಲಾದ ದೇವತೆಗಳನ್ನು ದೂರಕ್ಕೆಸೆದನು. ಅವನ ರೆಕ್ಕೆಗಳಿಂದ ಎಸೆಯಲ್ಪಟ್ಟ ದೇವತೆಗಳು ಅತಿ ಕೋಪಗೊಂಡು ನಾರಾಚ, ಭಿಂಡಿವಾಲ ಮೊದಲಾದ ಆಯುಧಗಳನ್ನು ಅವನ ಮೇಲೆ ಎಸೆಯಲು ಅವನು ಶೀಘ್ರವಾಗಿ ದೇವತೆಗಳ ದೃಷ್ಟಿಯನ್ನು ಹಾಳು ಮಾಡುವ ಧೂಳನ್ನು ರೆಕ್ಕೆಗಳಿಂದಲೇ ಎಬ್ಬಿಸಿದನು. ದೇವತೆಗಳು ಅದನ್ನು ಗಾಳಿಯಿಂದ ಅಣಗಿಸಿದರು.

೮೪. ಎಲೈ ಬ್ರಾಹ್ಮಣರೆ! ಗರುಡನು ರೆಕ್ಕೆ, ಕೊಕ್ಕುಗಳಿಂದ ರುದ್ರರು, ವಸುಗಳು, ಆದಿತ್ಯರು, ಮರುತ್ತುಗಳನ್ನೂ, ಇನ್ನೂ ಇತರ ದೇವತೆಗಳನ್ನೂ ವ್ಯಥೆಗೊಳಿಸಿದನು.

೮೫. ಅವರೆಲ್ಲರೂ ಓಡಿಹೋಗಲು ಆ ಗರುಡನು ಮುಂದೆ ಉರಿಯುತ್ತಿರುವ ಬೆಂಕಿಯನ್ನು ಕಂಡು ಅದನ್ನು ಆರಿಸುವುದಕ್ಕೆ ಪ್ರಯತ್ನಿಸಿದನು.

೮೬. ಅವನು ಸಾವಿರ ಮುಖಗಳುಳ್ಳವನಾಗಿ ನೂರಾರು ನದಿಗಳನ್ನು ಕುಡಿದು ಆ ನೀರಿನಿಂದ ಬೆಂಕಿಯನ್ನು ಬಹುಬೇಗನೆಯೆ ಆರಿಸಿದನು.

ಸಿತಧಾರಂ ಭ್ರಮಚ್ಚಕ್ರಂ ಸುಧಾರಕ್ಷಕಮಂತಿಕೇ ।
ದೃಷ್ಟ್ವಾ ತದದಂತರಂಧ್ರೇಣ ಸಂಕ್ಷಿಪ್ತಾಂಗೋಽಂತರಾವಿಶತ್ ॥ ೮೭ ॥
ತತೋ ದದರ್ಶ ದ್ವೌ ಸರ್ಪೌ ವ್ಯಕ್ತಾಸ್ಯೌ ಭೀಷಣಾಕೃತೀ ।
ಯಾಭ್ಯಾಂ ದೃಷ್ಟೋಽಪಿ ಭಸ್ಮ ಸ್ಯಾತ್ತೌ ಸರ್ಪೌ ಗರುಡಸ್ತದಾ ॥ ೮೮ ॥
ಆಚ್ಛಿದ್ಯ ಪಕ್ಷತುಂಡಾಭ್ಯಾಂ ಗೃಹೀತ್ವಾಽಮೃತಮುದ್ಯಯೌ ।
ಯಂತ್ರಮುತ್ಪಾದ್ಯ ಚೋದಂತಂ ಗರುಡಂ ಪ್ರಾಹ ಮಾಧವಃ ॥ ೮೯ ॥
ತವ ತುಷ್ಟೋಽಸ್ಮಿ ಪಕ್ಷೀಶ ವರಂ ವರಯ ಸುವ್ರತ ।
ಅಥ ಪಕ್ಷೀ ತಮಾಹ ಸ್ಮ ಕಮಲಾನಾಯಕಂ ಹರಿಂ ॥ ೯೦ ॥
ತವೋಪರಿ ಸ್ಥಿತಿರ್ಮೇಽಸ್ತ್ವಾನ್ಮಾ ಭೂತಾಂ ಚ ಜರಾಮೃತೀ ।
ತಥಾಽಸ್ತ್ವಿತಿ ಹರಿಃ ಪ್ರಾಹ ವರಂ ಮದ್ವಿ್ರಯತಾಮಿತಿ ॥ ೯೧ ॥
ಇತ್ಯುಕ್ತಸ್ತಂ ಹರಿಃ ಪ್ರಾಹ ಮಮ ತ್ವಂ ವಾಹನಂ ಭವ ।
ಸ್ಯಂದನೋಪರಿ ಕೇತುಶ್ಚ ಮಮ ತ್ವಂ ವಿನತಾ ಸುತ ॥ ೯೨ ॥
ತಥಾಽಸ್ತ್ವಿತಿ ಖಗೋಽಪ್ಯಾಹ ಕಮಲಾಪತಿಮಚ್ಯುತಂ ।
ಹೃತಾಽಮೃತಂ ಖಗಂ ಶ್ರುತ್ವಾ ತತ ಆಖಂಡಲೋ ಜವಾತ್ ॥ ೯೩ ॥

---

೮೭. ಅವನು ಹತ್ತಿರದಲ್ಲಿ ಅಮೃತವನ್ನು ರಕ್ಷಿಸುವ ಹರಿತವಾದ ಧಾರೆಯುಳ್ಳ ತಿರುಗುಚಕ್ರವನ್ನು ನೋಡಿ ತನ್ನ ದೇಹವನ್ನು ಸಣ್ಣಗೆ ಮಾಡಿಕೊಂಡು ಅದರ ತೂತಿನಲ್ಲಿ ಒಳಗೆ ಹೊಕ್ಕನು.

೮೮–೮೯. ಅನಂತರ ಅವನು ಬಾಯಿಯನ್ನು ತೆರೆದುಕೊಂಡಿರುವುವೂ, ಭಯಂಕರಾಕಾರವುಳ್ಳುವೂ, ನೋಡುವುದರಿಂದಲೇ ಸುಟ್ಟು ಬೂದಿಮಾಡುವುವೂ ಆದ ಎರಡು ಸರ್ಪಗಳನ್ನು ಕಂಡು ಅವುಗಳನ್ನು ರೆಕ್ಕೆ ಕೊಕ್ಕುಗಳಿಂದ ಕತ್ತರಿಸಿ ಅಮೃತವನ್ನು ತೆಗೆದುಕೊಂಡು ಮೇಲಕ್ಕೆ ಹಾರಿದನು. ಯಂತ್ರವನ್ನು ಮುರಿದು ಮೇಲಕ್ಕೆ ಹಾರುತ್ತಿರುವ ಗರುಡನನ್ನು ಕಂಡು ಶ್ರೀಹರಿಯು ಹೀಗೆಂದನು :

೯೦. "ಪಕ್ಷಿರಾಜ! ನಿನಗೆ ಪ್ರಸನ್ನನಾಗಿರುವೆನು. ವರವನ್ನು ಕೇಳಿಕೊ" ಎನ್ನಲು, ಗರುಡನು ಲಕ್ಷ್ಮೀಪತಿಯಾದ ನಾರಾಯಣನನ್ನು ಕುರಿತು ಹೀಗೆಂದನು:

೯೧–೯೨. "ನಾನು ನಿನ್ನ ರಥದಮೇಲೆ ಧ್ವಜವಾಗಿರಬೇಕು. ನನಗೆ ಮುಪ್ಪು, ಮರಣವೂ ಉಂಟಾಗಕೂಡದು" ಎಂದು ಕೇಳಿಕೊಳ್ಳಲು ಹರಿಯು ಹಾಗೆಯೇ ಆಗಲೆಂದನು. ಗರುಡನು ಹರಿಯನ್ನು ಕುರಿತು, "ನೀನು ನನ್ನಿಂದ ವರವನ್ನು ಕೇಳಿಕೊ" ಎಂದು ಹೇಳಲು, ವಿಷ್ಣುವು, "ನೀನು ನನ್ನ ವಾಹನವಾಗು. ನನ್ನ ರಥದಮೇಲೆ ಧ್ವಜವಾಗಿರು" ಎಂದು ಕೇಳಿಕೊಂಡನು.

೯೩–೯೪. ಗರುಡನು ಹಾಗೆಯೇ ಆಗಲೆಂದು ವಿಷ್ಣುವನ್ನು ಕುರಿತು ಹೇಳಿದನು. ಬಳಿಕ ಗರುಡನು ಅಮೃತವನ್ನಪಹರಿಸಿದುದನ್ನು ಕೇಳಿ ದೇವೇಂದ್ರನು

ಅಭಿದ್ರುತ್ಯಾಶು ಕುಲಿಶಂ ಪಕ್ಷೇ ಚಿಕ್ಷೇಪ ಪಕ್ಷಿಣಃ ।
ತತೋ ವಿಹಸ್ಯ ಗರುಡಃ ಪಾಕಶಾಸನಮಬ್ರವೀತ್ ॥ ೯೪ ॥
ಕುಲಿಶಸ್ಯ ನಿಪಾತಾನ್ಮೇ ನ ಹರೇ ಕಾಽಪಿ ವೇದನಾ ।
ಸಫಲೋ ವಜ್ರಪಾತಸ್ತೇ ಭೂಯಾಚ್ಚ ಸುರನಾಯಕ ॥ ೯೫ ॥
ಇತೀರಯನ್ಪತ್ರಮೇಕಂ ವ್ಯಸೃಜತ್ಪಕ್ಷತಸ್ತದಾ ।
ಶೋಭನಂ ಪರ್ಣಮಸ್ಯೇತಿ ಸುಪರ್ಣ ಇತಿ ಸೋಽಭವತ್ ॥ ೯೬ ॥
ತಸ್ಮಿನ್ಸುಪರ್ಣೇ ಹೇಮಾಭೇ ಸರ್ವೇ ವಿಸ್ಮಯಮಾಯಯುಃ ।
ತತಸ್ತು ಗರುಡಃ ಶಕ್ರಮಬ್ರವೀದ್ದ್ವಿಜಪುಂಗವಾಃ ॥ ೯೭ ॥
ಭವತಾ ಸಾಕಮಖಿಲಂ ಜಗದೇತಚ್ಚರಾಚರಂ ।
ದೇವೇಂದ್ರ ಸತತಂ ವೋಢುಮನೋಘಾ ಶಕ್ತಿರಸ್ತಿ ಮೇ ॥ ೯೮ ॥
ನಾಽಽಖಂಡಲಸಹಸ್ರಂ ಮೇ ರಣೇ ಲಭ್ಯಂ ಹರೇ ಭವೇತ್ ।
ಇತಿ ಬ್ರುವಾಣಂ ಗರುಡಮಬ್ರವೀತ್ಪಾಕಶಾಸನಃ ॥ ೯೯ ॥
ಕಿಂ ತೇಽಮೃತೇನ ಕಾರ್ಯಂ ಸ್ಯಾದ್ದೀಯತಾಮಮೃತಂ ಮಮ ।
ಇಮಾಂ ಸುಧಾಂ ಭವಾನ್ಯದ್ಯಾದ್ಯೇಭ್ಯೋ ಹಿ ವಿನತೋದ್ಭವ ॥ ೧೦೦ ॥
ತೇಽಧುನಾಽಮೃತಪಾನೇನ ಜರಾಮರಣವರ್ಜಿತಾಃ ।
ಅಸ್ಮದ್ಭ್ಯೋಽಧಿಕವೀರ್ಯಾಃ ಸ್ಯುರ್ಬಾಧೇರಂಸ್ತ್ರಿದಶಾಂಸ್ತದಾ ॥ ೧೦೧ ॥

---

ವೇಗದಿಂದ ಅವನನ್ನು ಅಟ್ಟಿಸಿಕೊಂಡು ಹೋಗಿ ಅವನ ರೆಕ್ಕೆಗೆ ವಜ್ರಾಯುಧವನ್ನು ಎಸೆದನು. ಗರುಡನು ನಕ್ಕು ಇಂದ್ರನನ್ನು ಕುರಿತು ಇಂತೆಂದನು:

೯೫. "ದೇವೇಂದ್ರ! ನಿನ್ನ ವಜ್ರಾಯುಧವು ಬೀಳುವುದರಿಂದ ನನಗೇನೂ ನೋವಾಗಲಿಲ್ಲ. ಆದರೂ ನಿನ್ನ ವಜ್ರಘಾತವು ಸಫಲವಾಗಲಿ."

೯೬. ಹೀಗೆ ಹೇಳುತ್ತ ತನ್ನ ರೆಕ್ಕೆಯಿಂದ ಒಂದು ಗರಿಯನ್ನು ಕೆಡವಿದನು. ಅವನು ಸುಂದರವಾದ ರೆಕ್ಕೆಯುಳ್ಳವನಾದ್ದರಿಂದ ಸುಪರ್ಣನೆಂದು ಪ್ರಸಿದ್ಧನಾದನು.

೯೭. ಆ ಗರುಡನು ಚಿನ್ನದ ಕಾಂತಿಯುಳ್ಳವನಾಗಲು ಎಲ್ಲರೂ ಅಚ್ಚರಿಗೊಂಡರು. ಬಳಿಕ ಅವನು ದೇವೇಂದ್ರನನ್ನು ಕುರಿತು ಹೀಗೆಂದನು:

೯೮. "ದೇವೇಂದ್ರ! ನನಗೆ ನಿನ್ನೊಡಗೂಡಿದ ಚರಾಚರ ಜಗತ್ತನ್ನು ಸಂಪೂರ್ಣವಾಗಿ ಹೊರಲು ಶಕ್ತಿಯಿದೆ.

೯೯. ಸಾವಿರ ಇಂದ್ರರು ಬಂದರೂ ಯುದ್ಧದಲ್ಲಿ ನನ್ನನ್ನು ಹಿಡಿಯಲಾರರು." ಹೀಗೆಂದು ಗರುಡನು ಹೇಳಲು, ಇಂದ್ರನು ಹೀಗೆಂದನು:

೧೦೦–೧೦೧. "ಗರುಡ! ನಿನಗೆ ಅಮೃತದಿಂದೇನುಪ್ರಯೋಜನ? ನನಗೆ ಕೊಡು. ನೀನು ಈ ಅಮೃತವನ್ನು ಯಾರಿಗಾದರೂ ಕೊಟ್ಟರೆ ಅವರು ಇದನ್ನು

ಇತಿ ಬ್ರುವಂತಂ ದೇವೇಂದ್ರಂ ಗರುಡೋಽಪ್ಯಬ್ರವೀದ್ದ್ವಿಜಾಃ ।
ಯತ್ರೈತತ್ಸ್ಥಾಪಯಿಷ್ಯಾಮಿ ತತ್ರಾಗತ್ಯ ಭವಾನಿದಂ ॥ ೧೦೩ ॥
ಗೃಹ್ಣಾತು ಝಟಿತೀತ್ಯುಕ್ತೋ ಗರುಡಂ ಪ್ರಾಹ ವೃತ್ರಹಾ ।
ಪ್ರೀತೋಽಹಂ ತವ ದಾಸ್ಯಾಮಿ ವರಂ ವೃಣು ಮಹಾಮತೇ ॥ ೧೦೪ ॥
ಇತ್ಯುಕ್ತವಂತಂ ಗರುಡಃ ಪಾಕಶಾಸನಮಬ್ರವೀತ್ ।
ದಾಸ್ಯೇ ಛಲಪ್ರಯೋಕ್ತಾರೋ ಮಮ ಮಾತುಃ ಸರೀಸೃಪಾಃ ॥ ೧೦೫ ॥
ಭಕ್ಷ್ಯಾ ಭವಂತು ನಿತ್ಯಂ ಮೇ ಪಾಕಶಾಸನ ವೃತ್ರಹನ್ ।
ಇತಿ ತೇನೇರಿತಃ ಶಕ್ರಸ್ತಥಾಽಸ್ತ್ವಿತ್ಯವದಚ್ಚ ತಂ ॥ ೧೦೬ ॥
ಅಥಾಽಯಂ ಗರುಡೋ ವಿಪ್ರಾ ಧಾರಯನ್ನಮೃತಂ ಯಯೌ ।
ಯಾಂತಂ ತಮನುಯಾತಿ ಸ್ಮ ಗರುಡಂ ಪಾಕಶಾಸನಃ ॥ ೧೦೭ ॥
ವೇಗೇನ ಸ ದ್ವಿಜಶ್ರೇಷ್ಠಾಃ ಸುಧಾಹರಣಕೌತುಕೀ ।
ಮಾತುರಭ್ಯಾಶಮಾಗತ್ಯ ಸರ್ಪಾನ್ಪ್ರಾಹ ಸ ಪಕ್ಷಿರಾಟ್ ॥ ೧೦೮ ॥
ಕುಶೇಷು ನ್ಯಸ್ಯತೇ ಸರ್ಪಾಸ್ಸುಧೈವಮಧುನಾ ಮಯಾ ।
ಸ್ನಾತ್ವಾ ತದ್ಭುಙ್ಧ್ವಮಮೃತಂ ಶುಚಯಃ ಸುಸಮಾಹಿತಾಃ ॥ ೧೦೯ ॥

---

ಕುಡಿದು ಜರಾಮರಣಗಳಿಲ್ಲದೆ ನಮಗಿಂತ ಹೆಚ್ಚು ಬಲಶಾಲಿಗಳಾಗಿ ನಮ್ಮನ್ನೇ ಪೀಡಿಸಿಯಾರು."

೧೦೩–೧೦೪. ಹೀಗೆ ಹೇಳುತ್ತಿರುವ ದೇವೇಂದ್ರನನ್ನು ಕುರಿತು ಗರುಡನು 'ನಾನು ಎಲ್ಲಿ ಈ ಅಮೃತವನ್ನಿಡುವೆನೊ ನೀನು ಅಲ್ಲಿಗೆ ಬಂದು ಕೂಡಲೆ ತೆಗೆದುಕೊ' ಎಂದು ಹೇಳಲು, ದೇವೇಂದ್ರನು, "ಪಕ್ಷೀಶ! ನಾನು ನಿನಗೆ ಪ್ರಸನ್ನನಾಗಿದ್ದೇನೆ. ವರವನ್ನು ಕೇಳಿಕೊ" ಎಂದನು.

೧೦೫–೧೦೬. ಗರುಡನು ಇಂದ್ರನನ್ನು ಕುರಿತು, 'ನನ್ನ ತಾಯಿಯ ದಾಸ್ಯದ ವಿಷಯದಲ್ಲಿ ಕಪಟವನ್ನಾಚರಿಸಿದ ಹಾವುಗಳು ಯಾವಾಗಲೂ ನನಗೆ ಭಕ್ಷ್ಯಗಳಾಗಲಿ' ಎಂದು ವರವನ್ನು ಕೇಳಿಕೊಳ್ಳಲು ಇಂದ್ರನು ಹಾಗೆಯೇ ಆಗಲೆಂದನು.

೧೦೭. ಬಳಿಕ ಗರುಡನು ಅಮೃತವನ್ನು ಹೊತ್ತುಕೊಂಡುಹೋದನು. ಹೋಗುತ್ತಿರುವ ಅವನನ್ನು ಇಂದ್ರನೂ ಹಿಂಬಾಲಿಸಿದನು.

೧೦೮. ಬ್ರಾಹ್ಮಣವರ್ಯರೆ! ಅಮೃತವನ್ನು ಒಯ್ಯುವುದರಲ್ಲಿ ಕುತೂಹಲವುಳ್ಳ ಆ ಗರುಡನು ತಾಯಿಯ ಬಳಿಗೆ ಬಂದು ಸರ್ಪಗಳನ್ನು ಕುರಿತು ಇಂತೆಂದನು :

೧೦೯. "ಎಲೈ ಸರ್ಪಗಳೆ! ನಾನು ಅಮೃತವನ್ನು ಈಗ ದರ್ಭೆಗಳಲ್ಲಿಡುವೆನು. ನೀವು ಮಿಂದು ಪರಿಶುದ್ಧರಾಗಿ ಒಮ್ಮನಸ್ಸಿನಿಂದ ಅದನ್ನು ಕುಡಿಯಿರಿ.

ಮೋಕ್ಷೋಽಪಿ ಮಮ ಮಾತುಃ ಸ್ಯಾದ್ದಾಸೀಭಾವಾದ್ಧಿ ಪನ್ನಗಾಃ ।
ತಥಾಽಸ್ತ್ವಿತ್ಯವದನ್ಸರ್ಪಾ ಗರುಡಂ ವಿನತಾಸುತಮ್ ॥ ೧೦೯ ॥
ಮುಕ್ತಾ ತಥೈವ ವಿನತಾ ದಾಸೀಭಾವಾದ್ದ್ವಿಜೋತ್ತಮಾಃ ।
ಸರ್ಪಾಸ್ತೇಽಮೃತಭಕ್ಷಾರ್ಥಂ ಸ್ನಾತುಂ ಸರ್ವೇ ಯಯುಸ್ತದಾ ॥೧೧೦॥
ತಸ್ಮಿನ್ನವಸರೇ ಶಕ್ರಸ್ತ್ವಾಮಾದಾಯ ಸುಧಾಂ ಯಯೌ ।
ಸ್ನಾತ್ವಾಽಽಗತ್ಯ ಭುಜಂಗಾಸ್ತೇ ತತ್ರಾಽದೃಷ್ಟ್ವಾ ತದಾ ಸುಧಾಮ್ ॥ ೧೧೧ ॥
ಜಿಹ್ವಾಭಿರ್ಲಿಲಿಹುರ್ದರ್ಭಾನ್ನೇಷು ನ್ಯಸ್ತಾ ಸುಧೇತಿ ಹಿ ।
ತದಾ ಪ್ರಭೃತಿ ಸರ್ಪಾಣಾಂ ಜಿಹ್ವಾ ದರ್ಭಾಗ್ರಪಾಟಿತಾಃ ॥ ೧೧೨ ॥
ದ್ವಿಧಾಽಭವನ್ಮುನಿಶ್ರೇಷ್ಠಾ ದ್ವಿಜಿಹ್ವಾಸ್ತೇನ ತೇ ಸ್ಮೃತಾಃ ।
ಸುಧಾಸಂಯೋಗತೋ ದರ್ಭಾಃ ಪ್ರಯಯುಶ್ಚ ಪವಿತ್ರತಾಮ್ ॥ ೧೧೩ ॥
ಮೋಚಯಿತ್ವಾ ಚ ಗರುಡೋ ದಾಸೀಭಾವಾತ್ಸ್ವಮಾತರಮ್ ।
ಶಶಾಪ ಕುಪಿತಃ ಕದ್ರೂಂ ಛದ್ಮನಾ ಜಿತಮಾತರಮ್ ॥ ೧೧೪ ॥
ಕದ್ರೂಸ್ತ್ವಂ ಜನನೀಂ ಯನ್ಮೇ ಛಲೇನ ಜಿತವತ್ಯಸಿ ।
ಭರ್ತುಸ್ತ್ವಂ ಪರಿಚರ್ಯಾಯಾಮತೋ ನಾಽರ್ಹಾ ಭವಿಷ್ಯಸಿ ॥ ೧೧೫ ॥
ಶಪ್ತ್ವೈವಂ ಗರುಡಃ ಕದ್ರೂಂ ಪ್ರಯಯೌ ಸ ಯಥೇಚ್ಛಯಾ ।
ಕದ್ರೂಶ್ಚ ವಿನತಾ ಚೋಭೇ ಯಯತುರ್ಭರ್ತುರಂತಿಕಮ್ ॥ ೧೧೬ ॥

---

೧೦೯. ನಮ್ಮ ತಾಯಿಯಾದ ವಿನತೆಯು ದಾಸ್ಯದಿಂದ ಮುಕ್ತಳಾಗಲಿ" ಎನ್ನಲು, ಆ ಸರ್ಪಗಳು ಗರುಡನನ್ನು ಕುರಿತು ಹಾಗೆಯೇ ಆಗಲೆಂದುವು.

೧೧೦–೧೧೩. ಬ್ರಾಹ್ಮಣರೆ! ವಿನತೆಯು ಆಗಲೇ ದಾಸ್ಯದಿಂದ ಬಿಡುಗಡೆಯನ್ನು ಹೊಂದಿದಳು. ಆ ಸರ್ಪಗಳು ಅಮೃತವನ್ನು ಕುಡಿಯಲೋಸುಗ ಸ್ನಾನ ಮಾಡಲು ಹೊರಟವು. ಆ ಸಮಯದಲ್ಲಿ ದೇವರಾಜನು ಅಮೃತವನ್ನು ತೆಗೆದುಕೊಂಡು ಹೊರಟುಹೋದನು. ಸರ್ಪಗಳು ಸ್ನಾನಮಾಡಿ ಮರಳಿ ಬಂದು ಅಲ್ಲಿ ಅಮೃತವನ್ನು ಕಾಣದೆ ಅದನ್ನು ಇಟ್ಟಿದ್ದ ದರ್ಭೆಗಳನ್ನು ನೆಕ್ಕಿದುವು. ಸರ್ಪಗಳ ನಾಲಿಗೆಯು ದರ್ಭೆಗಳ ತುದಿಯಿಂದ ಸೀಳಿದ್ದರಿಂದ ಅದು ಮೊದಲ್ಗೊಂಡು ಎರಡಾದುವು. ಆದಕಾರಣ ಸರ್ಪಗಳು ದ್ವಿಜಿಹ್ವಗಳೆಂಬ ಹೆಸರನ್ನು ಪಡೆದುವು. ಅಮೃತದ ಸಂಬಂಧದಿಂದ ದರ್ಭೆಗಳು ಪವಿತ್ರವಾದುವು.

೧೧೪. ಗರುಡನು ತನ್ನ ತಾಯಿಯಾದ ವಿನತೆಯ ದಾಸ್ಯವನ್ನು ಕಳೆದು, ಕಪಟದಿಂದ ಅವಳನ್ನು ಸೋಲಿಸಿದ ಕದ್ರುವನ್ನು ಕೋಪದಿಂದ ಶಪಿಸಿದನು.

೧೧೫. "ಕದ್ರು! ನೀನು ನನ್ನ ತಾಯಿಯನ್ನು ಮೋಸದಿಂದ ಗೆದ್ದುದರಿಂದ ಪತಿಯಸೇವೆಗೆ ಅರ್ಹಳಾಗದಿರು."

೧೧೬. ಆ ಗರುಡನು ಹೀಗೆ ಕದ್ರುವನ್ನು ಶಪಿಸಿ ಸ್ವೇಚ್ಛೆಯಿಂದ ಹೊರಟು ಹೋಗಲು, ಕದ್ರು ವಿನತೆಯರು ಪತಿಯಾದ ಕಶ್ಯಪನ ಬಳಿಗೆ ಹೋದರು.

ಕಶ್ಯಪೋ ವಿಮುಖಸ್ತತ್ರ ಕದ್ರೂಂ ಕೋಪಾದಥಾಽಬ್ರವೀತ್ ।
ಯಸ್ಮಾಚ್ಛಲೇನ ವಿನತಾಂ ಕದ್ರೂರ್ನಿರ್ಜಿತವತ್ಯಸಿ ॥ ೧೧೭ ॥
ಅತೋ ಮತ್ಪರಿಚರ್ಯಾಯಾಂ ನ ಯೋಗ್ಯಾಽಸಿ ದುರಾತ್ಮಿಕೇ ।
ಸ್ತ್ರಿಯಂ ವಾ ಪುರುಷಂ ವಾಽಪಿ ನಾರೀ ವಾ ಪುರುಷೋಽಪಿ ವಾ ॥ ೧೧೮ ॥
ಛಲಾದ್ವಿಜಯತೇ ಯೋಽಸೌ ಸ ಮಹಾಪಾತಕೀ ಭವೇತ್ ।
ಛಲಾದ್ವಿಜಯಿನಾ ಸಾರ್ಧಂ ಸಂಭಾಷ್ಯ ಬ್ರಹ್ಮಹಾ ಭವೇತ್ ॥ ೧೧೯ ॥
ಸ್ತೇಯೀ ಸುರಾಪೀ ವಿಜ್ಞೇಯೋ ಗುರುದಾರರತಶ್ಚ ಸಃ ।
ಸಂಸರ್ಗದೋಷದುಷ್ಟಶ್ಚ ಮುನಿಭಿಃ ಪರಿಕೀರ್ತ್ಯತೇ ॥ ೧೨೦ ॥
ತ್ವಯಾ ಸಂಭಾಷಣಾದ್ದೋಷೋ ಮಮ ಸ್ಯಾನ್ನರಕಪ್ರದಃ ।
ತಸ್ಮಾತ್ತ್ವಯಾಹಿ ಕದ್ರೂಸ್ತ್ವಂ ಮತ್ಸಮೀಪಾದ್ಧಿ ದಾರುಣೇ ॥ ೧೨೧ ॥
ಛಲಜೇತ್ರಾ ಸಪಙ್ಕ್ತೌ ಯೋ ಭುಂಜೀತ ಮನುಜೋ ಭುವಿ ।
ತೇನ ಸಂಭಾಷಣಾತ್ಸದ್ಯಃ ಪತೇದ್ಧಿ ನರಕಾಽರ್ಣವೇ ॥ ೧೨೨ ॥
ವಿಲೋಕ್ಯ ಛಲಜೇತಾರಂ ತಸ್ಯ ಪಾಪಸ್ಯ ಶಾಂತಯೇ ।
ಆದಿತ್ಯಂ ವಾ ಜಲಂ ವಾಽಪಿ ಪಾವಕಂ ವಾ ವಿಲೋಕಯೇತ್ ॥ ೧೨೩ ॥
ಛಲಜೇತಾ ಯತ್ರ ತಿಷ್ಠೇದಾಶ್ರಮೇಽಪಿ ಗೃಹೇಽಪಿ ವಾ ।
ವಸ್ತವ್ಯಂ ನ ಹಿ ತತ್ರಾಽನ್ಯೈರ್ವಸನ್ನರಕಮಶ್ನುತೇ ॥ ೧೨೪ ॥

---

೧೧೭. ಕಶ್ಯಪನು ಕದ್ರುವಿನಲ್ಲಿ ವಿಮುಖನಾಗಿ ಕೋಪದಿಂದ ಹೀಗೆಂದನು: "ಕದ್ರು! ನೀನು ಮೋಸದಿಂದ ವಿನತೆಯನ್ನು ಗೆದ್ದಿರುವೆ.

೧೧೮-೧೨೦. ಎಲೆ ದುಷ್ಟೆ! ಆದುದರಿಂದ ನೀನು ನನ್ನ ಸೇವೆಗರ್ಹಳಲ್ಲ. ಹೆಂಗಸಾಗಲಿ, ಗಂಡಸಾಗಲಿ, ಗಂಡಸನ್ನಾಗಲಿ, ಹೆಂಗಸನ್ನಾಗಲಿ ಮೋಸದಿಂದ ಗೆದ್ದರೆ ಅವರು ಪಾತಕಿಗಳಾಗುವರು. ಅಂತಹ ಪಾತಕಿಗಳೊಡನೆ ಮಾತಾಡುವವನೂ ಬ್ರಹ್ಮಹತ್ಯೆಗೈದವನಾಗುವನು. ಅವನು ಕಳ್ಳನೂ, ಸುರಾಪಾನ ಮಾಡಿದವನೂ, ಗುರುತಲ್ಪಗಾಮಿಯೂ ಆಗುವನೆಂದು ಮುನಿಗಳು ಹೇಳುತ್ತಾರೆ.

೧೨೧. ಕ್ರೂರಳಾದ ಕದ್ರುವೆ! ನಿನ್ನೊಡನೆ ಮಾತಾಡುವುದರಿಂದ ನನಗೆ ನರಕವನ್ನೀಯುವ ಪಾಪವು ಸಂಭವಿಸೀತು. ಆದುದರಿಂದ ನೀನು ನನ್ನ ಹತ್ತಿರದಿಂದ ದೂರಹೋಗು.

೧೨೨. ಮೋಸದಿಂದ ಜಯಿಸಿದವನ ಪಙ್ಕ್ತಿಯಲ್ಲಿ ಊಟಮಾಡುವವನೂ, ಅವನೊಡನೆ ಮಾತಾಡುವವನೂ ನರಕಸಮುದ್ರದಲ್ಲಿ ಬೀಳುವರು.

೧೨೩. ಮೋಸದಿಂದ ಗೆದ್ದವನನ್ನು ನೋಡಿದರೆ ಆ ಪಾಪದ ಶಾಂತಿಗಾಗಿ ಸೂರ್ಯ, ನೀರು, ಅಗ್ನಿಗಳನ್ನು ನೋಡಬೇಕು.

೧೨೪-೧೨೫. ಅವನು ಆಶ್ರಮದಲ್ಲಾಗಲಿ, ಮನೆಯಲ್ಲಾಗಲಿ ವಾಸ

ಅತೋ ನಿರ್ಯಾಹಿ ನಿರ್ಯಾಹಿ ಮಮ ತ್ವಂ ದೃಷ್ಟಿಮಾರ್ಗತಃ ।
ಸ್ವಾಶ್ರಮಾತ್ಸರಲಾಮೇನಾಂ ವಿನತಾಂ ಜಿತವತ್ಯಸಿ ॥ ೧೨೫ ॥
ಇತಿ ಧಿಕ್ಕೃತ್ಯ ಸಹಸಾ ಕದ್ರೂಂ ತಾಂ ಕಶ್ಯಪಸ್ತದಾ ।
ವಿನತಾಂ ಸ್ವಚ್ಛಶೀಲಾಂ ತಾಂ ಸ್ವೀಚಕಾರ ಮಹಾಮತಿಃ ॥ ೧೨೬ ॥
ಕದ್ರೂರಿತ್ಥಂ ಸಪರುಷಂ ಕಥಿತಾ ಕಶ್ಯಪೇನ ಸಾ ।
ರುದಂತೀ ಭೃಶದುಃಖಾರ್ತಾ ಪಾದಯೋಸ್ತಸ್ಯ ಚಾಽಪತತ್ ॥ ೧೨೭ ॥
ಪತಿತಾಂ ಪಾದಯೋರ್ದೃಷ್ಟ್ವಾ ಕಶ್ಯಪೋ ಮುನಿಪುಂಗವಃ ।
ನ ಜಗ್ರಾಹೈವ ಕದ್ರೂಂ ತಾಂ ಸ್ಮರನ್ಪಾಪಂ ತಯಾ ಕೃತಂ ॥ ೧೨೮ ॥
ತತಃ ಪ್ರಣಮ್ಯ ವಿನತಾ ಕಶ್ಯಪಂ ವಾಕ್ಯಮಬ್ರವೀತ್ ।
ಭಗವನ್ಭಗಿನೀಮೇನಾಂ ಸ್ವೀಕುರುಷ್ವ ಕೃಪಾನಿಧೇ ॥ ೧೨೯ ॥
ಅಜ್ಞಾನಾನ್ಮುಗ್ಧಯಾ ಪಾಪಂ ಕದ್ರ್ವಾ ಯದಧುನಾ ಕೃತಂ ।
ಕ್ಷಂತುಮರ್ಹಸಿ ತತ್ಸರ್ವಂ ದಯಾಶೀಲಾ ಹಿ ಸಾಧವಃ ॥ ೧೩೦ ॥
ಜನನ್ಯಾ ಗರುಡಸ್ಯೈವಂ ಕಥಿತಃ ಕಶ್ಯಪೋ ಮುನಿಃ ।
ಉವಾಚ ವಿನತೇ ನೈನಾಂ ವಿನಾ ಪಾಪಸ್ಯ ನಿಷ್ಕೃತಿಂ ॥ ೧೩೧ ॥
ಗ್ರಹೀಷ್ಯಾಮಿ ದುರಾಚಾರಾಂ ತ್ರಿಸ್ತ್ವಾಂ ಶಪಥಯಾಮ್ಯಹಂ ।
ಕಶ್ಯಪಸ್ಯ ವಚಃ ಶ್ರುತ್ವಾ ವಿನತಾ ಪುನರಬ್ರವೀತ್ ॥ ೧೩೨ ॥

---

ಮಾಡುತ್ತಿದ್ದರೆ ಅಲ್ಲಿ ಇತರರು ವಾಸಮಾಡಕೂಡದು. ವಾಸಮಾಡಿದರೆ ನರಕವನ್ನು ಅನುಭವಿಸುವರು. ನೀನು ಸಾಧುವಾದ ವಿನತೆಯನ್ನು ಕಪಟದಿಂದ ಗೆದ್ದಕಾರಣ ನನ್ನ ಕಣ್ಣಿಗೆ ಕಾಣದಂತೆ ಈ ಆಶ್ರಮದಿಂದ ಹೊರಡು.

೧೨೬. ಪ್ರಾಜ್ಞನಾದ ಕಶ್ಯಪನು ಹೀಗೆ ಕದ್ರುವನ್ನು ನಿಂದಿಸಿ ನಿರ್ದುಷ್ಟಳಾದ ವಿನತೆಯನ್ನು ಸ್ವೀಕರಿಸಿದನು.

೧೨೭. ಕಶ್ಯಪನು ಹೀಗೆ ಕಠಿನವಾಗಿ ಬಯ್ಯಲು ಕದ್ರುವು ದುಃಖಪೀಡಿತಳಾಗಿ ಬಹಳವಾಗಿ ಅಳುತ್ತ ಅವನ ಅಡಿಗಳಲ್ಲಿ ಬಿದ್ದಳು.

೧೨೮–೧೩೦. ಕಶ್ಯಪಮುನಿಯು ಅಡಿಗೆರಗಿದ ಕದ್ರುವನ್ನು ನೋಡಿ ಅವಳೆಸಗಿದ ಪಾಪವನ್ನು ಸ್ಮರಿಸುತ್ತ ಅವಳನ್ನು ಸ್ವೀಕರಿಸಲೇ ಇಲ್ಲ. ಅನಂತರ ವಿನತೆಯು ಕಶ್ಯಪನಿಗೆರಗಿ ಅವನನ್ನು ಕುರಿತು ಹೀಗೆಂದಳು: "ಎಲೈ ದಯಾಳುವೆ! ಈ ನನ್ನ ಸಹೋದರಿಯನ್ನು ಸ್ವೀಕರಿಸು. ಅಜ್ಞಾನದಿಂದ ಮೂಢಳಾದ ಕದ್ರುವು ಮಾಡಿದ ಪಾಪವನ್ನೆಲ್ಲ ಈಗ ಕ್ಷಮಿಸು. ಸಜ್ಜನರು ದಯಾಳುಗಳಷ್ಟೆ.

೧೩೧–೧೩೨. ಗರುಡನ ತಾಯಿಯಾದ ವಿನತೆಯು ಹೀಗೆ ಹೇಳಲು ಕಶ್ಯಪನು ಇಂತೆಂದನು: "ವಿನತೆ! ಇವಳ ಪಾಪವು ಪರಿಹಾರವಾದ ಹೊರತು ದುಷ್ಟಳಾದ ಇವಳನ್ನು ನಾನು ಸ್ವೀಕರಿಸುವುದಿಲ್ಲ. ಮೂರಾವೃತ್ತಿ ನಿನಗೆ

ಭಗಿನ್ಯಾ ಮಮ ಪಾಪಸ್ಯ ಬ್ರಹ್ಮಂಸ್ತ್ವಂ ಬ್ರೂಹಿ ನಿಷ್ಕೃತಿಂ ।
ಯೇನೇಯಂ ಪರಿಚರ್ಯಾಯಾಂ ತವ ಯೋಗ್ಯಾ ಭವಿಷ್ಯತಿ ॥ ೧೩೩ ॥
ತಯೈವಮುದಿತೋ ವಿಪ್ರಾ ಮಾರೀಚಃ ಕಶ್ಯಪಸ್ತದಾ ।
ಧ್ಯಾತ್ವಾ ಮುಹೂರ್ತಂ ಮನಸಾ ಪಶ್ಚಾದಿದಮಭಾಷತ ॥ ೧೩೪ ॥
ದಕ್ಷಿಣಾಂಬುನಿಧೇಸ್ತೀರೇ ಫುಲ್ಲಗ್ರಾಮೇ ವಿಮುಕ್ತಿದೇ ।
ಅಸ್ತಿ ಕ್ಷೀರಸರೋ ನಾಮ ತೀರ್ಥಂ ಪಾಪವಿನಾಶನಂ ॥ ೧೩೫ ॥
ತತ್ತೀರ್ಥಸ್ನಾನಮಾತ್ರೇಣ ದೋಷಶ್ಚಾಽಸ್ಯಾ ವಿನಶ್ಯತಿ ।
ಪ್ರಾಯಶ್ಚಿತ್ತಾಽಯುತೇನಾಽಪಿ ತತ್ತೀರ್ಥೇ ಮಜ್ಜನಂ ವಿನಾ ॥ ೧೩೬ ॥
ನ ನಶ್ಯತ್ಯೇಷ ದೋಷೋ ಸ್ಯಾತ್ತದೇಷಾ ಯಾತು ತತ್ಸರಃ ।
ಭರ್ತ್ರೈವಮುದಿತೇ ಕದ್ರೂಸ್ತಂ ಪ್ರಣಮ್ಯ ಮುನೀಶ್ವರಂ ॥ ೧೩೭ ॥
ತತ್ಕ್ಷಣಾತ್ಪ್ರಯಯೌ ಕ್ಷೀರಸರಃ ಪುತ್ರಸಹಾಯಿನೀ ।
ಸಾ ಕದ್ರೂಃ ಪುತ್ರಸಹಿತಾ ಗತ್ವಾ ಕತಿಪಯೈರ್ದಿನೈಃ ॥ ೧೩೮ ॥
ಪ್ರಾಪ್ಯ ಕ್ಷೀರಸರಃ ಪುಣ್ಯಂ ಪ್ರಯತಾ ವಿಜಿತೇಂದ್ರಿಯಾ ।
ಸಸ್ನೌ ನಿಯಮಪೂರ್ವಂ ಚ ಸಂಕಲ್ಪ್ಯ ಕ್ಷೀರಕುಂಡಕೇ ॥ ೧೩೯ ॥

---

ಆಣೆಯಿಟ್ಟು ಹೇಳುತ್ತೇನೆ." ಕಶ್ಯಪನ ಮಾತನ್ನು ಕೇಳಿ ವಿನತೆಯು ಮರಳಿ ಹೀಗೆಂದಳು:

೧೩೩. "ನನ್ನ ಸಹೋದರಿಯಾದ ಇವಳು ನಿನ್ನ ಸೇವೆಗೆ ಯೋಗ್ಯಳಾಗಲು ಪಾಪದ ಪರಿಹಾರಕ್ರಮವನ್ನು ಹೇಳು."

೧೩೪. ವಿನತೆಯು ಹೀಗೆ ಹೇಳಲು, ಮರೀಚಿಯ ಮಗನಾದ ಕಶ್ಯಪನು ಸ್ವಲ್ಪಹೊತ್ತು ಮನಸ್ಸಿನಿಂದಾಲೋಚಿಸಿದನು.

೧೩೫. "ದಕ್ಷಿಣಸಮುದ್ರದ ದಡದಲ್ಲಿರುವ ಮೋಕ್ಷಪ್ರದವಾದ ಫುಲ್ಲ ಗ್ರಾಮದಲ್ಲಿ ಪಾಪನಾಶಕವಾದ ಕ್ಷೀರಸರಸ್ಸೆಂಬ ತೀರ್ಥವಿದೆ.

೧೩೬–೧೩೯. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದಲೇ ಇವಳ ಪಾಪವು ಪರಿಹಾರವಾಗುವುದು. ಇವಳು ಹತ್ತುಸಾವಿರ ಪ್ರಾಯಶ್ಚಿತ್ತಗಳನ್ನು ಆಚರಿಸಿದರೂ ಆ ತೀರ್ಥದಲ್ಲಿ ಸ್ನಾನಮಾಡಿದ ಹೊರತು ಇವಳ ಪಾಪವು ನಾಶವಾಗುವುದಿಲ್ಲ. ಆದುದರಿಂದ ಇವಳು ಆ ಸರೋವರಕ್ಕೆ ತೆರಳಲಿ." ಪತಿಯು ಹೀಗೆನ್ನಲು ಕದ್ರುವು ಅವನನ್ನು ವಂದಿಸಿ ಕೂಡಲೆ ಮಕ್ಕಳೊಡನೆ ಆ ಕ್ಷೀರಕುಂಡಕ್ಕೆ ಹೋದಳು. ಅವಳು ಕೆಲವು ದಿವಸಗಳಲ್ಲಿ ಮಕ್ಕಳೊಡನೆ ಪವಿತ್ರವಾದ ಆ ಕ್ಷೀರಕುಂಡವನ್ನು ಸೇರಿ ಜಿತೇಂದ್ರಿಯಳಾಗಿ ಸಂಕಲ್ಪಮಾಡಿ ವಿಧಿಯಂತೆ ಅದರಲ್ಲಿ ಮಿಂದಳು.

ಉಪೋಷ್ಯ ತ್ರಿದಿನಂ ಸಸ್ನೌ ತಸ್ಮಿನ್ಕ್ಷೀರಸರೋಜಲೇ ।
ಚತುರ್ಥೇ ದಿವಸೇ ತಸ್ಯಾಂ ಕುರ್ವತ್ಯಾಂ ಸ್ನಾನಮಾದರಾತ್ ।
ಅದೇಹಾ ವ್ಯೋಮಗಾ ವಾಣೀ ಸಮುತ್ತಸ್ಥೌ ದ್ವಿಜೋತ್ತಮಾಃ ॥ ೧೪೦ ॥
ಅಶರೀರಿಣ್ಯುವಾಚ :—
ಕದ್ರೂಸ್ತ್ವಂ ಮಜ್ಜನಾದತ್ರ ಛಲಜೇತ್ರುತ್ವದೋಷತಃ ॥ ೧೪೧ ॥
ವಿಮುಕ್ತಾ ಭರ್ತೃಶುಶ್ರೂಷಾಯೋಗ್ಯಾ ಚಾಽಸಿ ನ ಸಂಶಯಃ ।
ಶಾಪೋಽಪಿ ಗರುಡೋಕ್ತಸ್ತೇ ಲಯಂ ಯಾತೋಽತ್ರ ಮಜ್ಜನಾತ್ ॥
ಗಚ್ಛ ಭರ್ತೃಸಕಾಶಂ ತ್ವಂ ಸೋಽಪಿ ತ್ವಾಂ ಸ್ವೀಕರಿಷ್ಯತಿ ।
ಇತ್ಯುಕ್ತ್ವಾ ವಿರರಾಮಾಽಥ ವ್ಯೋಮವಾಗಶರೀರಿಣೀ ॥ ೧೪೩ ॥
ತಸ್ಯೈ ವಾಚೇ ನಮಸ್ಕೃತ್ಯ ಕದ್ರೂಃ ಸಾ ಪ್ರೀತಮಾನಸಾ ।
ತೀರ್ಥಂ ಪ್ರದಕ್ಷಿಣೀಕೃತ್ಯ ನತ್ವಾ ಪುತ್ರಸಮನ್ವಿತಾ ॥ ೧೪೪ ॥
ಪ್ರಯಯೌ ಭರ್ತುರಭ್ಯಾಶಂ ತಚ್ಛುಶ್ರೂಷಣಕೌತುಕಾತ್ ।
ಆಗತಾಂ ತಾಂ ಸಮಾಲೋಕ್ಯ ಸ್ನಾತಾಂ ಕ್ಷೀರಸರೋಜಲೇ ॥ ೧೪೫ ॥
ಜ್ಞಾತ್ವಾ ವಿಧೂತಪಾಪಾಂ ಚ ಕಶ್ಯಪಃ ಸ ಸಮಾಧಿನಾ ।
ಅಂಗೀಚಕಾರ ಪತ್ನೀಂ ತಾಮಾತ್ಮಶುಶ್ರೂಷಣೋಚಿತಾಂ ॥ ೧೪೬ ॥
ಏವಂ ವಃ ಕಥಿತಂ ವಿಪ್ರಾಃ ಕದ್ರೂಪಾಪವಿಮೋಕ್ಷಣಂ ।
ಮಜ್ಜನಾನ್ಮುಕ್ತಿದಂ ಪುಂಸಾಂ ಪುಣ್ಯೇ ಕ್ಷೀರಸರೋಜಲೇ ॥ ೧೪೭ ॥

---

೧೪೦. ಎಲೈ ಬ್ರಾಹ್ಮಣೋತ್ತಮರೆ! ಅವಳು ಉಪವಾಸಮಾಡಿ ಮೂರು ದಿನ ಆ ತೀರ್ಥದಲ್ಲಿ ಮಿಂದಳು. ನಾಲ್ಕನೆಯ ದಿನ ಅವಳು ಶ್ರದ್ಧೆಯಿಂದ ಸ್ನಾನಮಾಡುತ್ತಿರಲು ಆಕಾಶವಾಣಿಯುಂಟಾಯಿತು.

೧೪೧–೧೪೩. ಅಶರೀರವಾಣಿಯು ಹೇಳುತ್ತದೆ :—"ಕದ್ರು! ಇಲ್ಲಿ ಸ್ನಾನ ಮಾಡಿದುದರಿಂದ ನೀನು ಮೋಸದಿಂದ ನಿನ್ನ ಸವತಿಯನ್ನು ಗೆದ್ದುದರಿಂದುಂಟಾದ ಪಾಪವು ನೀಗಿತು. ಈಗ ಪತಿಸೇವೆಗೆ ಅರ್ಹಳಾಗಿದ್ದೀಯೆ. ನಿನಗೆ ಗರುಡನು ಕೊಟ್ಟ ಶಾಪವೂ ಪರಿಹಾರವಾಯಿತು. ನೀನು ಪತಿಯ ಬಳಿಗೆ ಹೋಗು. ಅವನು ನಿನ್ನನ್ನು ಪರಿಗ್ರಹಿಸುವನು" ಎಂದು ಹೇಳಿ ಅಶರೀರವಾಣಿಯು ಸುಮ್ಮನಾಯಿತು.

೧೪೪–೧೪೬. ಕದ್ರುವು ಆ ಅಶರೀರವಾಣಿಗೆ ನಮಸ್ಕರಿಸಿ ಸಂತುಷ್ಟಳಾಗಿ ಆ ತೀರ್ಥವನ್ನು ಮಕ್ಕಳೊಡನೆ ಪ್ರದಕ್ಷಿಣೆಗೈದು ವಂದಿಸಿ ಪತಿಸೇವೆಯಲ್ಲಿ ಕುತೂಹಲವುಳ್ಳವಳಾಗಿ ಅವನ ಹತ್ತಿರ ಹೋದಳು. ಕಶ್ಯಪನು ಕ್ಷೀರಕುಂಡದಲ್ಲಿ ಮಿಂದುಬಂದ ಕದ್ರುವನ್ನು ಕಂಡು ಯೋಗದೃಷ್ಟಿಯಿಂದ ಅವಳನ್ನು ಪಾಪರಹಿತಳನ್ನಾಗಿ ತಿಳಿದು ತನ್ನ ಸೇವೆಗರ್ಹಳಾದ ಅವಳನ್ನು ಪರಿಗ್ರಹಿಸಿದನು.

೧೪೭. ವಿಪ್ರರೆ! ಹೀಗೆ ನಿಮಗೆ ಕದ್ರುವಿನ ಪಾಪಪರಿಹಾರದ ಕ್ರಮವನ್ನು

ಯಃ ಶೃಣೋತೀಮಮಧ್ಯಾಯಂ ಪಠತೇ ವಾಽಪಿ ಮಾನವಃ ।
ಸ ಕ್ಷೀರಕುಂಡಸ್ನಾನಸ್ಯ ಲಭತೇ ಫಲಮುತ್ತಮಂ ॥ ೧೪೮ ॥
ಅಶ್ವಮೇಧಾದಿಯಜ್ಞಾನಾಂ ಸಮಗ್ರಂ ಫಲಮಶ್ನುತೇ ।
ಗಂಗಾದಿಸರ್ವತೀರ್ಥೇಷು ಸ ಸ್ನಾತೋ ಭವತಿ ಧ್ರುವಂ ॥ ೧೪೯ ॥
ಯಃ ಪಠೇದಿಮಮಧ್ಯಾಯಂ ಕ್ಷೀರಕುಂಡಪ್ರಶಂಸನಂ ।
ಗೋಸಹಸ್ರಪ್ರದಾತೄಣಾಂ ಪ್ರಾಪ್ನೋತ್ಯವಿಕಲಂ ಫಲಂ ॥ ೧೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಕದ್ರೂಕೃತಛಲದೋಷಶಾಂತಿಕಥಾವರ್ಣನಂ" ನಾಮ ಅಷ್ಟತ್ರಿಂಶೋಽಧ್ಯಾಯಃ

---

ಹೇಳಿರುವೆನು. ಕ್ಷೀರಕುಂಡದ ನೀರು ಸ್ನಾನಮಾಡುವುದರಿಂದಲೇ ಮಾನವರಿಗೆ ಮೋಕ್ಷವನ್ನೀಯುವುದು.

೧೪೮. ಈ ಅಧ್ಯಾಯವನ್ನು ಕೇಳಿದ ಅಥವಾ ಓದಿದ ನರನು ಕ್ಷೀರಕುಂಡದಲ್ಲಿ ಸ್ನಾನಮಾಡಿದ ಫಲವನ್ನು ಪಡೆಯುವನು.

೧೪೯. ಅವನು ಅಶ್ವಮೇಧವೇ ಮೊದಲಾದ ಯಜ್ಞಗಳ ಸಂಪೂರ್ಣ ಫಲವನ್ನು ಹೊಂದುವನು. ಗಂಗೆ ಮೊದಲಾದ ಸಕಲ ತೀರ್ಥಗಳಲ್ಲಿ ಸ್ನಾನ ಮಾಡಿದಂತಾಗುವನು.

೧೫೦. ಕ್ಷೀರಕುಂಡವನ್ನು ಹೊಗಳುವ ಈ ಅಧ್ಯಾಯವನ್ನು ಓದಿದವನು ಸಾವಿರ ಗೋವುಗಳನ್ನು ದಾನಮಾಡಿದ ಸಂಪೂರ್ಣ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಕದ್ರೂಕೃತಛಲದೋಷಶಾಂತಿಕಥಾವರ್ಣನ"ವೆಂಬ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಚತ್ವಾರಿಂಶೋಽಧ್ಯಾಯಃ

### ಕಪಿತೀರ್ಥಪ್ರಶಂಸನಂ — ರಂಭಾಘೃತಾಚೀಶಾಪವಿಮೋಕ್ಷಣವರ್ಣನಂ

ಶ್ರೀ ಸೂತ ಉವಾಚ :—

ಅಥಾತಃ ಸಂಪ್ರವಕ್ಷ್ಯಾಮಿ ಕಪಿತೀರ್ಥಸ್ಯ ವೈಭವಂ ।
ತತ್ತೀರ್ಥಂ ಸಕಲೈಃ ಪೂರ್ವಂ ಗಂಧಮಾದನಪರ್ವತೇ ॥ ೧ ॥
ಸರ್ವೇಷಾಮುಪಕಾರಾಯ ಕಪಿಭಿರ್ನಿರ್ಮಿತಂ ದ್ವಿಜಾಃ ।
ರಾವಣಾದಿಷು ರಕ್ಷಸ್ಸು ಹತೇಷು ತದನಂತರಂ ॥ ೨ ॥
ತೀರ್ಥಂ ನಿರ್ಮಾಯ ತತ್ರೈವ ಸಸ್ನುಸ್ತೇ ಕಪಯೋ ಮುದಾ ।
ತೀರ್ಥಾಯ ಚ ವರಂ ಪ್ರಾದುಃ ಕಪಯಃ ಕಾಮರೂಪಿಣಃ ॥ ೩ ॥
ಅಸ್ಮಿಂಸ್ತೀರ್ಥೇ ನಿಮಗ್ನಾ ಯೇ ಭಕ್ತಿಪ್ರವಣಚೇತಸಃ
ತೇ ಸರ್ವೇ ಮುಕ್ತಿಭಾಜಃ ಸ್ಯುರ್ಮಹಾಪಾತಕಮೋಚಿತಾಃ ॥ ೪ ॥
ಅತ್ರ ತೀರ್ಥೇ ನಿಮಗ್ನಾನಾಂ ನ ಸ್ಯಾನ್ನರಕಜಂ ಭಯಂ ।
ಅತ್ರ ಸ್ನಾತಾ ನರಾಃ ಸರ್ವೇ ದಾರಿದ್ರ್ಯಂ ನಾಪ್ನುವಂತಿ ಹಿ ॥ ೫ ॥
ಅತ್ರ ತೀರ್ಥೇ ನಿಮಗ್ನಾನಾಂ ಯಮಪೀಡಾಽಪಿ ನೋ ಭವೇತ್ ।
ಕಪಿತೀರ್ಥಂ ಪ್ರಯಾಸ್ಯೇಽಹಮಿತಿ ಯಃ ಸತತಂ ಬ್ರುವನ್ ॥ ೬ ॥

---

## ಕನ್ನಡದ ಅನುವಾದ

### ಕಪಿತೀರ್ಥಪ್ರಶಂಸನ—ರಂಭಾಘೃತಾಚೀಶಾಪವಿಮೋಕ್ಷಣವರ್ಣನ

೧–೩. ಶ್ರೀಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರೆ! ಬಳಿಕ ಕಪಿತೀರ್ಥದ ಮಾಹಾತ್ಮ್ಯವನ್ನು ಹೇಳುವೆನು. ಗಂಧಮಾದನಪರ್ವತದಲ್ಲಿ ಹಿಂದೆ ಆ ತೀರ್ಥವನ್ನು ಸಮಸ್ತ ಕಪಿಗಳೂ ಸಕಲ ಜನರ ಉಪಕಾರಕ್ಕಾಗಿ ನಿರ್ಮಿಸಿದರು. ರಾವಣಾದಿಗಳನ್ನು ಕೊಂದ ಬಳಿಕ ಕಪಿಗಳು ಈ ತೀರ್ಥವನ್ನು ನಿರ್ಮಿಸಿ ಇಲ್ಲಿಯೇ ಮಿಂದು ಇದಕ್ಕೆ ವರವನ್ನು ಕೊಟ್ಟಿರುವರು.

೪. ಈ ತೀರ್ಥದಲ್ಲಿ ಭಕ್ತಿಯಿಂದ ಮಿಂದ ಜನರು ಮಹಾಪಾತಕಮುಕ್ತರಾಗಿ ಮುಕ್ತಿಯನ್ನೈದುವರು.

೫. ಈ ತೀರ್ಥದಲ್ಲಿ ಮಿಂದ ಜನರಿಗೆ ನರಕಭಯವಿಲ್ಲ. ಅವರು ಬಡತನವನ್ನು ಹೊಂದುವುದಿಲ್ಲ.

೬–೭. ಇಲ್ಲಿ ಮಿಂದವರಿಗೆ ಯಮಬಾಧೆಯಿರುವುದಿಲ್ಲ. ಕಪಿತೀರ್ಥಕ್ಕೆ ಹೋಗುವೆನು ಎಂದು ನಿತ್ಯವೂ ಹೇಳುತ್ತ ನೂರು ಹೆಜ್ಜೆಯನ್ನು ನಡೆಯುವವರೂ

ವ್ರಜೇಚ್ಛ್ರತಪದಂ ವಿಪ್ರಾಃ ಸ ಯಾಯಾತ್ಪರಮಂ ಪದಂ ।
ಏತತ್ತೀರ್ಥಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ॥ ೭ ॥
ಏವಂ ವರಂ ತು ತೇ ದತ್ವಾ ತೀರ್ಥಾಯಾಸ್ಮೈ ಕಪೀಶ್ವರಾಃ ।
ರಾಮಂ ದಾಶರಥಿಂ ಸರ್ವೇ ಪ್ರಣಮ್ಯಾಥ ಯಯಾಚಿರೇ ॥ ೮ ॥
ಸ್ವಾಮಿಂಸ್ತ್ವಯಾಸ್ಮೈ ತೀರ್ಥಾಯ ದೀಯತಾಂ ವರಮದ್ಭುತಂ ।
ಕಪಿಭಿಃ ಪ್ರಾರ್ಥಿತೋ ವಿಪ್ರಾ ರಾಮಚಂದ್ರೋऽತಿಹರ್ಷಿತಃ ॥ ೯ ॥
ತತ್ತೀರ್ಥಾಯ ವರಂ ಪ್ರಾದಾತ್ಕಪೀನಾಂ ಪ್ರೀತಿಕಾರಣಾತ್
ಅತ್ರ ತೀರ್ಥೇ ನಿಮಗ್ನಾನಾಂ ಗಂಗಾಸ್ನಾನಫಲಂ ಲಭೇತ್ ॥ ೧೦ ॥
ಪ್ರಯಾಗಸ್ನಾನಜಂ ಪುಣ್ಯಂ ಸರ್ವತೀರ್ಥಫಲಂ ತಥಾ ।
ಅಗ್ನಿಷ್ಟೋಮಾದಿಯಾಗಾನಾಂ ಫಲಂ ಭೂಯಾದನುತ್ತಮಂ ॥ ೧೧ ॥
ಗಾಯತ್ರ್ಯಾದಿಮಹಾಮಂತ್ರಜಪಪುಣ್ಯಂ ತಥಾ ಭವೇತ್ ।
ಗೋಸಹಸ್ರಪ್ರದಂ ನೃಣಾಂ ಪ್ರಾಪ್ನೋತ್ಯವಿಕಲಂ ಫಲಂ ॥ ೧೨ ॥
ಚತುರ್ಣಾಮಪಿ ವೇದಾನಾಂ ಪಾರಾಯಣಫಲಂ ಲಭೇತ್ ।
ಬ್ರಹ್ಮವಿಷ್ಣುಮಹೇಶಾದಿದೇವಪೂಜಾಫಲಂ ಲಭೇತ್ ॥ ೧೩ ॥
ಕಪಿತೀರ್ಥಾಯ ರಾಮೋऽಯಂ ಪ್ರಾದಾದೇವಂ ವರಂ ದ್ವಿಜಾಃ ।
ಏವಂ ರಾಮೇಣ ದತ್ತೇ ತು ವರೇ ತತ್ರ ಕುತೂಹಲಾತ್ ॥ ೧೪ ॥

---

ಮೋಕ್ಷವನ್ನು ಪಡೆಯುವರು. ಈ ತೀರ್ಥಕ್ಕೆ ಸಮವಾದ ತೀರ್ಥವು ಹಿಂದೆಯೂ ಇರಲಿಲ್ಲ; ಮುಂದೆಯೂ ಇರುವುದಿಲ್ಲ.

೮. ಕಪಿಗಳು ಈ ತೀರ್ಥಕ್ಕೆ ಹೀಗೆ ವರವನ್ನಿತ್ತು, ಎಲ್ಲರೂ ರಾಮನನ್ನು ವಂದಿಸಿ ಬೇಡಿಕೊಂಡರು.

೯–೧೧. "ಸ್ವಾಮಿ! ನೀನು ಈ ತೀರ್ಥಕ್ಕೆ ಆಶ್ಚರ್ಯಕರವಾದ ವರವನ್ನು ಕೊಡು" ಎಂದು ಕೇಳಿಕೊಳ್ಳಲು ರಾಮಚಂದ್ರನು ಸಂತೋಷಗೊಂಡು ಕಪಿಗಳ ಪ್ರೀತಿಗಾಗಿ ಆ ತೀರ್ಥಕ್ಕೆ ಈ ರೀತಿ ವರವನ್ನಿತ್ತನು. "ಈ ತೀರ್ಥದಲ್ಲಿ ಮಿಂದ ವರಿಗೆ ಗಂಗಾಸ್ನಾನಫಲವೂ, ಪ್ರಯಾಗದಲ್ಲಿ ಮಿಂದ ಪುಣ್ಯವೂ, ಸಕಲತೀರ್ಥ ಸ್ನಾನದ ಫಲವೂ, ಅಗ್ನಿಷ್ಟೋಮಾದಿ ಯಾಗಫಲವೂ ಉಂಟಾಗಲಿ.

೧೨–೧೩. ಗಾಯತ್ರ್ಯಾದಿ ಮಹಾಮಂತ್ರಗಳ ಜಪದ ಪುಣ್ಯವೂ, ಸಹಸ್ರ ಗೋದಾನದ ಫಲವೂ, ನಾಲ್ಕು ವೇದಗಳನ್ನು ಪಾರಾಯಣಮಾಡಿದ ಫಲವೂ, ಬ್ರಹ್ಮಾದಿ ದೇವತೆಗಳನ್ನು ಪೂಜಿಸಿದ ಫಲವೂ ಲಭಿಸಲಿ.

೧೪–೧೮. ಎಲೈ ದ್ವಿಜರೆ! ರಾಮನು ಕಪಿತೀರ್ಥಕ್ಕೆ ಹೀಗೆ ವರವನ್ನೀಯಲು ಶಿವ, ಬ್ರಹ್ಮ, ಇಂದ್ರ, ಯಮ, ವರುಣ, ಅಗ್ನಿ, ವಾಯು, ಕುಬೇರ, ಚಂದ್ರ, ಸೂರ್ಯ, ನಿರ್ಋತಿಗಳೂ, ಸಾಧ್ಯರೂ, ವಸುಗಳೂ, ಇತರ ಎಲ್ಲಾ ದೇವತೆಗಳೂ,

ಷಡರ್ಧನಯನೋ ಬ್ರಹ್ಮಾ ಸಹಸ್ರಾಕ್ಷೋ ಯಮಸ್ತಥಾ ।
ವರುಣೋಽಗ್ನಿಸ್ತಥಾ ವಾಯುಃ ಕುಬೇರಶ್ಚಂದ್ರಮಾ ಅಪಿ ॥ ೧೫ ॥
ಆದಿತ್ಯೋ ನಿರ್ಋತಿಶ್ಚೈವ ಸಾಧ್ಯಾಶ್ಚ ವಸವಸ್ತಥಾ ।
ಅನ್ಯೇಽಪಿ ತ್ರಿದಶಾಃ ಸರ್ವೇ ವಿಶ್ವೇದೇವಾದಯಸ್ತಥಾ ॥ ೧೬ ॥
ಅತ್ರಿರ್ಭೃಗುಸ್ತಥಾ ಕುತ್ಸೋ ಗೌತಮಶ್ಚ ಪರಾಶರಃ ।
ಕಣ್ವೋಽಗಸ್ತ್ಯಃ ಸುತೀಕ್ಷ್ಣಶ್ಚ ವಿಶ್ವಾಮಿತ್ರಾದಯೋಽಪರೇ ॥ ೧೭ ॥
ಯೋಗಿನಃ ಸನಕಾದ್ಯಾಶ್ಚ ನಾರದಾದ್ಯಾಃ ಸುರರ್ಷಯಃ ।
ರಾಮದತ್ತವರಂ ತೀರ್ಥಂ ಶ್ಲಾಘಂತೇ ಬಹುಧಾ ತದಾ ॥ ೧೮ ॥
ಸಸ್ನುಶ್ಚ ತತ್ರ ತೀರ್ಥೇ ತೇ ಸರ್ವಾಽಭೀಷ್ಟಪ್ರದಾಯಿನಿ ।
ಕಪಿಭಿರ್ನಿರ್ಮಿತಂ ಯಸ್ಮಾದೇತತ್ತೀರ್ಥಮನುತ್ತಮಂ ॥ ೧೯ ॥
ಕಪಿತೀರ್ಥಮಿತಿ ಖ್ಯಾತಿಮತೋ ಲೋಕೇ ಪ್ರಯಾಸ್ಯತಿ ।
ಇತ್ಯಪ್ಯವೋಚಂಸ್ತೇ ಸರ್ವೇ ದೇವಾಶ್ಚ ಮುನಯಸ್ತಥಾ ॥ ೨೦ ॥
ತಸ್ಮಾದವಶ್ಯಂ ಗಂತವ್ಯಂ ಕಪಿತೀರ್ಥಂ ಮುಮುಕ್ಷುಭಿಃ ।
ರಂಭಾ ಕೌಶಿಕಶಾಪೇನ ಶಿಲಾಭೂತಾ ಪುರಾ ದ್ವಿಜಾಃ ॥ ೨೧ ॥
ತತ್ರ ಸ್ನಾತ್ವಾ ನಿಜಂ ರೂಪಂ ಪ್ರಪೇದೇ ಚ ದಿವಂ ಯಯೌ ।
ಅಸ್ಯ ತೀರ್ಥಸ್ಯ ಮಾಹಾತ್ಮ್ಯಂ ಮಯಾ ವಕ್ತುಂ ನ ಶಕ್ಯತೇ ॥ ೨೨ ॥

ಮುನಯ ಊಚುಃ:—

ರಂಭಾಂ ಕಿಮರ್ಥಮಶಪತ್ಕೌಶಿಕಃ ಸೂತನಂದನ ।
ಕಥಂ ಗತಾ ಶಿಲಾಭೂತಾ ಕಪಿತೀರ್ಥಂ ಸುರಾಂಗನಾ ।
ಏತನ್ನಃ ಸರ್ವಮಾಚಕ್ಷ್ವ ವಿಸ್ತರಾನ್ಮುನಿಸತ್ತಮ ॥ ೨೩ ॥

---

ವಿಶ್ವೇದೇವರೂ, ಅತ್ರಿ, ಭೃಗು, ಕುತ್ಸ, ಗೌತಮ, ಪರಾಶರ, ಕಣ್ವ, ಅಗಸ್ತ್ಯ, ಸುತೀಕ್ಷ್ಣ, ವಿಶ್ವಾಮಿತ್ರ ಮೊದಲಾದ ಯೋಗಿಗಳೂ, ಸನಕ, ನಾರದ ಮೊದಲಾದ ದೇವರ್ಷಿಗಳೂ ಆ ವರವನ್ನು ಬಹುಬಗೆಯಿಂದ ಹೊಗಳಿದರು.

೧೯–೨೦. ಆ ದೇವತೆಗಳೂ, ಋಷಿಗಳೂ ಸಮಸ್ತೇಷ್ಟಾರ್ಥವನ್ನೀಯುವ ಆ ತೀರ್ಥದಲ್ಲಿ ಮಿಂದರು. ಆ ತೀರ್ಥವನ್ನು ಕಪಿಗಳು ನಿರ್ಮಿಸಿದುದರಿಂದ ಅದು ಕಪಿತೀರ್ಥವೆಂದು ಪ್ರಖ್ಯಾತವಾಗುವುದೆಂದರು.

೨೧–೨೨. ದ್ವಿಜರೆ! ಆದುದರಿಂದ ಮೋಕ್ಷವನ್ನು ಬಯಸುವವರು ಅವಶ್ಯವಾಗಿ ಕಪಿತೀರ್ಥಕ್ಕೆ ಹೋಗಬೇಕು. ಹಿಂದೆ ವಿಶ್ವಾಮಿತ್ರನ ಶಾಪದಿಂದ ಕಲ್ಲಾದ ರಂಭೆಯು ಅಲ್ಲಿ ಮಿಂದು ತನ್ನ ಸ್ವರೂಪವನ್ನು ಪಡೆದು ಅಮರಾವತಿಗೆ ತೆರಳಿದಳು. ಈ ತೀರ್ಥದ ಮಾಹಾತ್ಮ್ಯೆಯನ್ನು ಹೇಳಲು ನನಗೆ ಶಕ್ತಿಯಿಲ್ಲ.

೨೩. ಮುನಿಗಳು ಹೇಳುತ್ತಾರೆ:—ಸೂತನೆ! ಕೌಶಿಕನು ರಂಭೆಯನ್ನು

ಶ್ರೀ ಸೂತ ಉವಾಚ :—
ವಿಶ್ವಾಮಿತ್ರಾಽಭಿಧೋ ರಾಜಾ ಪ್ರಾಗಭೂತ್ಕುಶಿಕಾಽನ್ವಯೇ ॥ ೨೪ ॥
ಸ ಕದಾಚಿನ್ಮಹಾರಾಜಃ ಸೇನಾಪತಿವೃತೋ ಬಲೀ ।
ಮೇದಿನೀಂ ಪರಿಚಕ್ರಾಮ ರಾಜ್ಯವೀಕ್ಷಣಕೌತುಕೀ ॥ ೨೫ ॥
ಅಟಿತ್ವಾ ಸ ಬಹೂನ್ದೇಶಾನ್ವಸಿಷ್ಠಸ್ಯಾಶ್ರಮಂ ಯಯೌ ।
ಆತಿಥ್ಯಾಯ ವೃತಃ ಸೋಽಯಂ ವಸಿಷ್ಠೇನ ಮಹಾತ್ಮನಾ ॥ ೨೬ ॥
ತಥಾಽಸ್ತ್ವಿತ್ಯಬ್ರವೀತ್ಸೋಽಯಂ ದಂಡವತ್ಪ್ರಣತೋ ನೃಪಃ ।
ಕಾಮಧೇನುಪ್ರಭಾವೇನ ವಿಶ್ವಾಮಿತ್ರಾಯ ಭೂಭುಜೇ ॥ ೨೭ ॥
ಆತಿಥ್ಯಮಕರೋದ್ವಿಪ್ರೋ ವಸಿಷ್ಠೋ ಬ್ರಹ್ಮನಂದನಃ ।
ಕಾಮಧೇನುಪ್ರಭಾವಂ ವೈ ಜ್ಞಾತ್ವಾ ಕುಶಿಕನಂದನಃ ॥ ೨೮ ॥
ವಸಿಷ್ಠಂ ಪ್ರಾರ್ಥಯಾಮಾಸ ಕಾಮಧೇನುಮಭೀಷ್ಟದಾಂ ।
ಪ್ರತ್ಯಾಖ್ಯಾತೋ ವಸಿಷ್ಠೇನ ಪ್ರಚಕರ್ಷ ಚ ತಾಂ ಬಲಾತ್ ॥ ೨೯ ॥
ಕಾಮಧೇನುವಿಸೃಷ್ಟೈಸ್ತು ಮ್ಲೇಚ್ಛಾದ್ಯೈಃ ಸ ಪರಾಜಿತಃ ।
ಮಹಾದೇವಂ ಸಮಾರಾಧ್ಯ ಶಸ್ತ್ರಾದಸ್ತ್ರಾಣ್ಯವಾಪ್ಯ ಚ ॥ ೩೦ ॥

---

ಏತಕ್ಕೆ ಶಪಿಸಿದನು? ಆ ಸುರರಮಣಿಯು ಶಿಲೆಯಾಗಿ ಕಪಿತೀರ್ಥಕ್ಕೆ ಹೇಗೆ ಹೋದಳು? ಇದನ್ನೆಲ್ಲ ನಮಗೆ ವಿಸ್ತಾರವಾಗಿ ಹೇಳು.

೨೪–೨೫. ಶ್ರೀಸೂತನು ಹೇಳುತ್ತಾನೆ:—ಹಿಂದೆ ಕುಶಿಕವಂಶದಲ್ಲಿ ವಿಶ್ವಾಮಿತ್ರನೆಂಬ ದೊರೆಯಿದ್ದನು. ಬಲಿಷ್ಠನಾದ ಅವನು ಒಂದಾನೊಂದು ದಿನ ಸೇನೆಯೊಡನೆ ರಾಜ್ಯವನ್ನು ನೋಡಲು ಕುತೂಹಲವುಳ್ಳವನಾಗಿ ಭೂಮಂಡಲದಲ್ಲಿ ಸಂಚರಿಸಿದನು.

೨೬. ಅವನು ಬಹು ದೇಶಗಳಲ್ಲಿ ಸಂಚರಿಸುತ್ತ ವಸಿಷ್ಠಮುನಿಯ ಆಶ್ರಮಕ್ಕೆ ಹೋದನು. ವಸಿಷ್ಠನು ಅತಿಥಿಸತ್ಕಾರವನ್ನು ಸ್ವೀಕರಿಸಬೇಕೆಂದು ಅವನನ್ನು ಕೇಳಿಕೊಂಡನು.

೨೭–೨೯. ವಿಶ್ವಾಮಿತ್ರರಾಜನು ವಸಿಷ್ಠನಿಗೆ ಸಾಷ್ಟಾಂಗ ಪ್ರಣಾಮಗೈದು ಹಾಗೆಯೇ ಆಗಲೆಂದು ಅಂಗೀಕರಿಸಿದನು. ಬ್ರಹ್ಮತನಯನಾದ ವಸಿಷ್ಠನು ಕಾಮಧೇನುವಿನ ಮಾಹಾತ್ಮ್ಯೆಯಿಂದ ವಿಶ್ವಾಮಿತ್ರನಿಗೆ ಅತಿಥಿಸತ್ಕಾರ ಮಾಡಿದನು. ವಿಶ್ವಾಮಿತ್ರನು ಕಾಮಧೇನುವಿನ ಮಾಹಾತ್ಮ್ಯೆಯನ್ನರಿತು ಇಷ್ಟಾರ್ಥವನ್ನೀಯುವ ಕಾಮಧೇನುವನ್ನು ತನಗೆ ಕೊಡಬೇಕೆಂದು ಬೇಡಿಕೊಂಡನು. ವಸಿಷ್ಠನು ಒಪ್ಪದಿರಲು ಅದನ್ನು ಬಲಾತ್ಕಾರದಿಂದ ಎಳೆದನು.

೩೦–೩೧. ಅವನು ಕಾಮಧೇನುವು ಸೃಷ್ಟಿಸಿದ ಮ್ಲೇಚ್ಛರೇ ಮೊದಲಾದವರಿಂದ ಸೋತವನಾಗಿ ಶಂಕರನನ್ನು ಪೂಜಿಸಿ ಅವನಿಂದ ಅಸ್ತ್ರಗಳನ್ನು ಪಡೆದು

ವಸಿಷ್ಠಸ್ಯಾಶ್ರಮಂ ಗತ್ವಾ ವ್ಯಸೃಜಚ್ಛರಸಂಚಯಾನ್ ।
ಸರ್ವಾಣ್ಯಸ್ತ್ರಾಣಿ ಮುಮುಚೇ ಬ್ರಹ್ಮಾಸ್ತ್ರಂ ಚ ನೃಪೋತ್ತಮಃ ॥ ೩೧ ॥
ತಾನಿ ಸರ್ವಾಣಿ ಚಾಸ್ತ್ರಾಣಿ ವಸಿಷ್ಠೋ ಬ್ರಹ್ಮನಂದನಃ ।
ಏಕೇನ ಬ್ರಹ್ಮದಂಡೇನ ನಿಜಘ್ನೇ ಸ್ವತಪೋಬಲಾತ್ ॥ ೩೨ ॥
ತತಃ ಪರಾಜಿತೋ ವಿಪ್ರಾ ವಿಶ್ವಾಮಿತ್ರೋಽತಿಲಜ್ಜಿತಃ ।
ಬ್ರಾಹ್ಮಣ್ಯಾವಾಪ್ತಯೇ ಸ್ವಸ್ಯ ತಪಃ ಕರ್ತುಂ ವನಂ ಯಯೌ ॥ ೩೩ ॥
ಪೂರ್ವಾಸು ಪಶ್ಚಿಮಾಂತಾಸು ತ್ರಿಷು ದಿಕ್ಷು ತಪೋಽಚರತ್ ।
ಪ್ರಾದುರ್ಭೂತಮಹಾವಿಘ್ನಸ್ತತ್ತದ್ದಿಕ್ಷು ಸ ಕೌಶಿಕಃ ॥ ೩೪ ॥
ಉತ್ತರಾಂ ದಿಶಮಾಸಾದ್ಯ ಹಿಮವತ್ಪರ್ವತೇಽಮಲೇ ।
ಕೌಶಿಕ್ಯಾಸ್ಸರಿತಸ್ತೀರೇ ಪುಣ್ಯೇ ಪಾಪವಿನಾಶಿನಿ ॥ ೩೫ ॥
ದಿವ್ಯಂ ವರ್ಷಸಹಸ್ರಂ ತು ನಿರಾಹಾರೋ ಜಿತೇಂದ್ರಿಯಃ ।
ನಿರಾಲೋಕೋ ಜಿತಶ್ವಾಸೋ ಜಿತಕ್ರೋಧಃ ಸುನಿಶ್ಚಲಃ ॥ ೩೬ ॥
ಗ್ರೀಷ್ಮೇ ಪಂಚಾಗ್ನಿಮಧ್ಯಸ್ಥಃ ಶಿಶಿರೇ ವಾರಿಷು ಸ್ಥಿತಃ ।
ವರ್ಷಾಸ್ವಾಕಾಶಗೋ ನಿತ್ಯಮೂರ್ಧ್ವಬಾಹುರ್ನಿರಾಶ್ರಯಃ ॥ ೩೭ ॥
ಬ್ರಾಹ್ಮಣ್ಯಸಿದ್ಧಯೇಽತ್ಯುಗ್ರಂ ಚಚಾರ ಸುಮಹತ್ತಪಃ ।
ಉದ್ವಿಗ್ನಮನಸಸ್ತಸ್ಯ ತ್ರಿದಶಾಸ್ತ್ರಿದಿವಾಲಯಾಃ ।
ಜಂಭಾರಿಣಾ ಚ ಸಹಿತಾ ರಂಭಾಂ ಪ್ರೋಚುರಿದಂ ವಚಃ ॥ ೩೮ ॥

---

ವಸಿಷ್ಠನ ಆಶ್ರಮವನ್ನು ಹೊಕ್ಕು ಬ್ರಹ್ಮಾಸ್ತ್ರವೇ ಮೊದಲಾದ ಎಲ್ಲ ಅಸ್ತ್ರಗಳನ್ನೂ ಪ್ರಯೋಗಿಸಿದನು.

೩೨. ವಸಿಷ್ಠನು ತನ್ನ ತಪೋಬಲದಿಂದ ಬ್ರಹ್ಮದಂಡವೊಂದರಿಂದಲೆ ಆ ವಿಶ್ವಾಮಿತ್ರನ ಎಲ್ಲ ಅಸ್ತ್ರಗಳನ್ನು ತಡೆದನು.

೩೩. ಬಳಿಕ ವಿಶ್ವಾಮಿತ್ರನು ಸೋತು ಅತಿಯಾಗಿ ನಾಚಿ, ತಾನೂ ಬ್ರಾಹ್ಮಣ್ಯವನ್ನು ಪಡೆಯುವುದಕ್ಕಾಗಿ ತಪಸ್ಸನ್ನು ಮಾಡಲು ಕಾಡಿಗೆ ಹೋದನು.

೩೪–೩೮. ಅವನು ಪೂರ್ವ, ದಕ್ಷಿಣ, ಪಶ್ಚಿಮ ದಿಕ್ಕುಗಳಲ್ಲಿ ತಪಸ್ಸನ್ನು ಆಚರಿಸಿ ಅಲ್ಲಿ ವಿಘ್ನಗಳು ಉಂಟಾದುದರಿಂದ ಉತ್ತರ ದಿಕ್ಕನ್ನು ಹೊಂದಿ ಪವಿತ್ರವಾದ ಹಿಮಾಲಯದಲ್ಲಿರುವ ಪಾಪವನ್ನು ನೀಗಿಸುವ ಕೌಶಿಕೀನದಿಯ ದಡದಲ್ಲಿ ಒಂದುಸಾವಿರ ವರ್ಷಕಾಲ ಆಹಾರವಿಲ್ಲದವನೂ, ಜಿತೇಂದ್ರಿಯನೂ, ಬೆಳಕನ್ನು ಕಾಣದವನೂ, ಶ್ವಾಸವನ್ನು ತಡೆದವನೂ, ಕೋಪವನ್ನು ಜಯಿಸಿದವನೂ, ದೃಢಮನಸ್ಸುಳ್ಳವನೂ, ಗ್ರೀಷ್ಮಕಾಲದಲ್ಲಿ ಪಂಚಾಗ್ನಿಮಧ್ಯದಲ್ಲಿದ್ದವನೂ, ಶಿಶಿರರ್ತುವಿನಲ್ಲಿ ನೀರಿನಲ್ಲಿ ನಿಂತವನೂ, ಮಳೆಗಾಲದಲ್ಲಿ ಬಯಲಿನಲ್ಲಿದ್ದವನೂ, ತೋಳುಗಳನ್ನು ಮೇಲಕ್ಕೆತ್ತಿದವನೂ, ಅವಲಂಬನೆಯಿಲ್ಲದವನೂ ಆಗಿ

ದೇವಾ ಊಚುಃ :—
ರಂಭೇ ತ್ವಂ ಹಿಮವಚ್ಛೈಲೇ ಕೌಶಿಕೀತೀರಗಂ ಮುನಿಂ ॥ ೩೯ ॥
ವಿಶ್ವಾಮಿತ್ರಂ ತಪಸ್ಯಂತಂ ವಿಲೋಭಯ ವಿಚೇಷ್ಟಿತೈಃ ।
ಯಥಾ ತತ್ತಪಸೋ ವಿಘ್ನೋ ಭವಿಷ್ಯತಿ ತಥಾ ಕುರು ॥ ೪೦ ॥
ಏವಮುಕ್ತಾ ತದಾ ರಂಭಾ ದೇವೈರಿಂದ್ರಪುರೋಗಮೈಃ ।
ಪ್ರತ್ಯುವಾಚ ಸುರಾನ್ಸರ್ವಾನ್ಪ್ರಾಂಜಲಿಃ ಪ್ರಣತಾ ತದಾ ॥ ೪೧ ॥
ರಂಭೋವಾಚ :—
ಅತಿಕ್ರೂರೋ ಮಹಾಕ್ರೋಧೋ ವಿಶ್ವಾಮಿತ್ರೋ ಮಹಾಮುನಿಃ ।
ಸ ಶಪ್ಸ್ಯತೇ ಮಾಂ ಕ್ರೋಧೇನ ಬಿಭೇಮ್ಯಸ್ಮಾದಹಂ ಸುರಾಃ ॥ ೪೨ ॥
ತ್ರಾಯಧ್ವಂ ಕೃಪಯಾ ಯೂಯಂ ಮಾಂ ಯುಷ್ಮತ್ಪರಿಚಾರಿಕಾಂ ।
ಇತ್ಯುಕ್ತೋ ರಂಭಯಾ ಚಾಥ ಜಂಭಾರಿಸ್ತಾಮಭಾಷತ ॥ ೪೩ ॥
ಇಂದ್ರ ಉವಾಚ :—
ರಂಭೇ ತ್ವಯಾ ನ ಭೀಃ ಕಾರ್ಯಾ ವಿಶ್ವಾಮಿತ್ರಾತ್ತಪೋಧನಾತ್ ।
ಅಹಮಪ್ಯಾಗಮಿಷ್ಯಾಮಿ ತ್ವತ್ಸಹಾಯಃ ಸಮನ್ಮಥಃ ॥ ೪೪ ॥

---

ಬ್ರಾಹ್ಮಣ್ಯದ ಸಿದ್ಧಿಗಾಗಿ ಅತಿ ಕಠಿನವಾದ ಮಹಾ ತಪಸ್ಸನ್ನಾಚರಿಸಿದನು. ಅವನ ತಪಸ್ಸಿನಿಂದ ಚಕಿತರಾದ ದೇವತೆಗಳು ಇಂದ್ರನೊಡನೆ ರಂಭೆಯನ್ನು ಕುರಿತು ಇಂತೆಂದರು :

೩೯—೪೦. ದೇವತೆಗಳು ಹೇಳುತ್ತಾರೆ:—"ರಂಭೇ! ನೀನು ಹಿಮಾಲಯದಲ್ಲಿ ಕೌಶಿಕೀನದಿಯ ದಡದಲ್ಲಿ ತಪಸ್ಸನ್ನಾಚರಿಸುತ್ತಿರುವ ವಿಶ್ವಾಮಿತ್ರಮುನಿಯನ್ನು ನಿನ್ನ ಹಾವಭಾವಗಳಿಂದ ವಶಮಾಡಿಕೊಂಡು ಅವನ ತಪಸ್ಸಿಗೆ ವಿಘ್ನವನ್ನುಂಟುಮಾಡು."

೪೧. ಇಂದ್ರಾದಿ ದೇವತೆಗಳು ಹೀಗೆನ್ನಲು ರಂಭೆಯು ಕೈಮುಗಿದುಕೊಂಡು ದೇವತೆಗಳಿಗೆ ವಂದಿಸಿ ಇಂತೆಂದಳು.

೪೨. ರಂಭೆಯು ಹೇಳುತ್ತಾಳೆ:— "ದೇವತೆಗಳೆ! ವಿಶ್ವಾಮಿತ್ರನು ಅತಿ ಕ್ರೂರಿಯೂ, ಬಹು ಕೋಪಿಷ್ಠನೂ ಆಗಿರುವನು. ಅವನು ಸಿಟ್ಟಿನಿಂದ ಶಪಿಸುವನೆಂದು ನಾನು ಹೆದರುತ್ತೇನೆ.

೪೩. ನೀವು ನಿಮ್ಮ ಸೇವಕಳಾದ ನನ್ನನ್ನು ಕಾಪಾಡಿರಿ" ಎಂದು ಹೇಳಲು ಅವಳನ್ನು ಕುರಿತು ದೇವೇಂದ್ರನು ಹೀಗೆಂದನು.

೪೪. ಇಂದ್ರನು ಹೇಳುತ್ತಾನೆ:— "ರಂಭೆ! ನೀನು ವಿಶ್ವಾಮಿತ್ರನಿಗೆ ಹೆದರಬೇಕಾದುದಿಲ್ಲ. ನಾನೂ ಮನ್ಮಥನೊಡನೆ ನಿನ್ನ ಸಹಾಯಕ್ಕಾಗಿ ಬರುವೆನು.

ಕೋಕಿಲಾಲಾಪಮಧುರೋ ವಸಂತೋಽಪ್ಯಾಗಮಿಷ್ಯತಿ ।
ಅತಿಸುಂದರರೂಪಾ ತ್ವಂ ಪ್ರಲೋಭಯ ಮಹಾಮುನಿಂ ॥ ೪೫ ॥
ಇತೀಂದ್ರಕಥಿತಾ ರಂಭಾ ವಿಶ್ವಾಮಿತ್ರಾಶ್ರಮಂ ಯಯೌ ।
ತದ್ದೃಷ್ಟಿಗೋಚರಾ ಸ್ಥಿತ್ವಾ ಲಲಿತಂ ರೂಪಮಾಸ್ಥಿತಾ ॥ ೪೬ ॥
ಸಾ ಮುನಿಂ ಲೋಭಯಾಮಾಸ ಮನೋಹರವಿಚೇಷ್ಟಿತೈಃ ।
ಪಿಕೋಽಪಿ ತಸ್ಮಿನ್ಸಮಯೇ ಚುಕೂಜಾನಂದಯನ್ಮನಃ ॥ ೪೭ ॥
ಶ್ರುತ್ವಾ ಪಿಕಸ್ವರಂ ರಂಭಾಂ ದೃಷ್ಟ್ವಾ ಚ ಮುನಿಪುಂಗವಃ ।
ಸಂಶಯಾವಿಷ್ಟಹೃದಯೋ ವಿದಿತ್ವಾ ಶಕ್ರಕರ್ಮ ತತ್ ।
ಶಶಾಪ ರಂಭಾಂ ಕ್ರೋಧೇನ ವಿಶ್ವಾಮಿತ್ರಸ್ತಪೋಧನಃ ॥ ೪೮ ॥

ವಿಶ್ವಾಮಿತ್ರ ಉವಾಚ:—

ಯಸ್ಮಾತ್ಕೋಪಯಸೇ ರಂಭೇ ಮಾಂ ತ್ವಂ ಕೋಪಜಯೈಷಿಣಂ ॥ ೪೯ ॥
ಶಿಲಾ ಭವಾಽತ್ರ ತಸ್ಮಾತ್ತ್ವಂ ರಂಭೇ ವರ್ಷಶತಾಽಯುತಂ ।
ತದಂತರೇ ಬ್ರಾಹ್ಮಣೇನ ರಕ್ಷಿತಾ ಮೋಕ್ಷಮಾಪ್ಸ್ಯಸಿ ॥ ೫೦ ॥
ವಿಶ್ವಾಮಿತ್ರಸ್ಯ ಶಾಪೇನ ತದಂತೇ ಸಾ ಶಿಲಾಽಭವತ್ ।
ಬಹುಕಾಲಂ ಶಿಲಾಭೂತಾ ತಸ್ಥೌ ತಸ್ಯಾಶ್ರಮೇ ದ್ವಿಜಾಃ ॥ ೫೧ ॥

---

೪೫. ಕೋಗಿಲೆಯ ಇಂಪಾದ ಧ್ವನಿಯಿಂದ ಕೂಡಿದ ವಸಂತನೂ ಬರುವನು. ಅತ್ಯಂತ ಸುಂದರಿಯಾದ ನೀನು ವಿಶ್ವಾಮಿತ್ರನನ್ನು ಆಕರ್ಷಿಸು.''

೪೬—೪೭. ಇಂದ್ರನು ಹೀಗೆನ್ನಲು ರಂಭೆಯು ಸುಂದರಾಕೃತಿಯಾಗಿ ವಿಶ್ವಾಮಿತ್ರನ ಆಶ್ರಮವನ್ನು ಸೇರಿ ಅವನ ಮುಂದೆ ನಿಂತು ಅವನನ್ನು ಆಶೆಗೊಳಿಸಿದಳು. ಆ ಸಮಯದಲ್ಲಿ ಕೋಗಿಲೆಯೂ ಮನಸ್ಸನ್ನು ಹರ್ಷಗೊಳಿಸುತ್ತ ಕೂಗಿತು.

೪೮. ಮುನಿವರ್ಯನಾದ ವಿಶ್ವಾಮಿತ್ರನು ಕೋಗಿಲೆಯ ದನಿಯನ್ನಾಲಿಸಿ ರಂಭೆಯನ್ನು ನೋಡಿ ಸಂಶಯಗೊಂಡ ಮನಸ್ಸುಳ್ಳವನಾಗಿ ಅದು ದೇವೇಂದ್ರನ ಕಾರ್ಯವೆಂದರಿತು ಅವಳನ್ನು ಕೋಪದಿಂದ ಶಪಿಸಿದನು.

೪೯—೫೦. ವಿಶ್ವಾಮಿತ್ರನು ಹೇಳುತ್ತಾನೆ:—ರಂಭೆ! ನೀನು ಕೋಪವನ್ನು ಜಯಿಸಲಿಚ್ಛಿಸುವ ನನ್ನನ್ನು ಕೋಪಗೊಳಿಸಿದ ಕಾರಣ ಇಲ್ಲಿಯೇ ಹತ್ತುಸಾವಿರ ನೂರುವರ್ಷಕಾಲ ಕಲ್ಲಾಗಿರು. ಆದರ ಅಂತ್ಯದಲ್ಲಿ ಒಬ್ಬ ಬ್ರಾಹ್ಮಣನು ನಿನ್ನನ್ನು ರಕ್ಷಿಸುವನು.

೫೧. ರಂಭೆಯು ವಿಶ್ವಾಮಿತ್ರನ ಶಾಪದಿಂದ ಅವನ ಆಶ್ರಮದಲ್ಲಿ ಬಹಳ ಕಾಲ ಕಲ್ಲಾಗಿ ಬಿದ್ದಿದ್ದಳು.

ವಿಶ್ವಾಮಿತ್ರೋಽಪಿ ಧರ್ಮಾತ್ಮಾ ಪುನಸ್ತಪ್ತ್ವಾ ಮಹತ್ತಪಃ ।
ಲೇಭೇ ವಸಿಷ್ಠವಾಕ್ಯೇನ ಬ್ರಾಹ್ಮಣ್ಯಂ ದುರ್ಲಭಂ ನೃಪೈಃ ॥ ೫೨ ॥
ಬಹುಕಾಲಂ ಶಿಲಾಭೂತಾ ರಂಭಾಽಸ್ಯಾಸೀತ್ತದಾಶ್ರಮೇ ।
ತಸ್ಮಿನ್ನೇವಾಶ್ರಮೇ ಪುಣ್ಯೇ ಶಿಷ್ಯೋಽಗಸ್ತ್ಯಸ್ಯ ಸಂಮತಃ ॥ ೫೩ ॥
ಶ್ವೇತೋನಾಮ ಮುನಿಶ್ಚಕ್ರೇ ಮುಮುಕ್ಷುಃ ಪರಮಂ ತಪಃ ।
ಚಿರಕಾಲಂ ತಪಸ್ತಸ್ಮಿನ್ಪ್ರಕುರ್ವತಿ ಮಹಾಮುನೌ ॥ ೫೪ ॥
ಅಂಗಾರಕೇತಿ ವಿಖ್ಯಾತಾ ರಾಕ್ಷಸೀ ಕಾಚಿದಾಗತಾ ।
ತಸ್ಯಾಶ್ರಮಮತಿಕ್ರೂರಾ ಮೇಘಸ್ವನಮಹಾಸ್ವನಾ ॥ ೫೫ ॥
ಮೂತ್ರರಕ್ತಪುರೀಷಾದ್ಯೈರ್ದೂಷಯಾಮಾಸ ಭೀಷಣಾ ।
ಉಪದ್ರವೈಸ್ತಥಾಽನ್ಯೈರ್ಬಾಧಯಾಮಾಸ ತಂ ಮುನಿಂ ॥ ೫೬ ॥
ಅಥ ಕ್ರುದ್ಧೋ ಮುನಿಃ ಶ್ವೇತೋ ವಾಯವ್ಯಾಸ್ತ್ರೇಣ ಯೋಜಯನ್ ।
ಶಪ್ತಾಂ ಕುಶಿಕಪುತ್ರೇಣ ರಾಕ್ಷಸ್ಯೈ ಪ್ರಾಕ್ಷಿಪಚ್ಛಿಲಾಂ ॥ ೫೭ ॥
ರಾಕ್ಷಸೀ ಸಾ ಪ್ರದುದ್ರಾವ ವಾಯವ್ಯಾಸ್ತ್ರೇಣ ಯೋಜಿತಾ ।
ವಾಯವ್ಯಾಽಸ್ತ್ರಪ್ರಯುಕ್ತೇನ ದೃಷದಾನುದ್ರುತಾ ಚ ಸಾ ॥ ೫೮ ॥
ದಕ್ಷಿಣಾಂಽಬುನಿಧೇಸ್ತೀರಂ ಧಾವತಿ ಸ್ಮ ಭಯಾರ್ದಿತಾ ।
ಧಾವಂತೀಮನುಧಾವಂತೀ ಸಾ ಶಿಲಾಽಸ್ತ್ರಪ್ರಯೋಜಿತಾ ॥ ೫೯ ॥
ಪಪಾತೋಪರಿ ರಾಕ್ಷಸ್ಯಾ ಮಜ್ಜಂತ್ಯಾಃ ಕಪಿತೀರ್ಥಕೇ ।
ಮೃತಾ ಸಾ ರಾಕ್ಷಸೀ ತತ್ರ ಶಿಲಾಪಾತಾತ್ಸ್ವಮೂರ್ಧನಿ ॥ ೬೦ ॥

---

೫೨. ಧರ್ಮಾತ್ಮನಾದ ವಿಶ್ವಾಮಿತ್ರನೂ ತಿರುಗಿ ಮಹಾ ತಪಸ್ಸನ್ನಾಚರಿಸಿ ವಸಿಷ್ಠನ ಮಾತಿನಿಂದ ರಾಜರಿಗಾರಿಗೂ ದೊರಕದ ಬ್ರಾಹ್ಮಣ್ಯವನ್ನು ಪಡೆದನು.

೫೩–೫೬. ರಂಭೆಯು ಹೀಗೆ ವಿಶ್ವಾಮಿತ್ರನ ಆಶ್ರಮದಲ್ಲಿ ಶಿಲೆಯಾಗಿರಲು ಅಲ್ಲಿಯೇ ಅಗಸ್ತ್ಯಮುನಿಯ ಪ್ರಿಯಶಿಷ್ಯನಾದ ಶ್ವೇತನೆಂಬ ಮುನಿಯು ಮೋಕ್ಷಾರ್ಥಿಯಾಗಿ ತಪಸ್ಸನ್ನು ಮಾಡುತ್ತಿದ್ದನು. ಆ ಮಹರ್ಷಿಯು ಬಹು ಕಾಲ ತಪಸ್ಸನ್ನಾಚರಿಸುತ್ತಿರಲು ಅಲ್ಲಿಗೆ ಗುಡುಗಿನಂತೆ ಘೋರಧ್ವನಿಯುಳ್ಳ ಅಂಗಾರಕಳೆಂಬ ರಾಕ್ಷಸಿಯು ಬಂದು ಮೂತ್ರ, ರಕ್ತ, ಅಮೇಧ್ಯ ಮೊದಲಾದ ವುಗಳಿಂದಲೂ, ಇತರ ತೊಂದರೆಗಳಿಂದಲೂ ಆ ಮುನಿಯನ್ನು ಪೀಡಿಸಿದಳು.

೫೭. ಕುಪಿತನಾದ ಶ್ವೇತನು ವಿಶ್ವಾಮಿತ್ರನ ಶಾಪದಿಂದ ಶಿಲೆಯಾದ ರಂಭೆಯನ್ನು ವಾಯುವ್ಯಾಸ್ತ್ರದಿಂದ ಅಭಿಮಂತ್ರಿಸಿ ಆ ರಾಕ್ಷಸಿಗೆ ಎಸೆದನು.

೫೮–೬೦. ವಾಯುವ್ಯಾಸ್ತ್ರದಿಂದ ಅಭಿಮಂತ್ರಿಸಿ ಎಸೆದ ರಂಭಾಶಿಲೆಯು ಆ ರಾಕ್ಷಸಿಯನ್ನು ಅಟ್ಟಸಿಕೊಂಡುಬರಲು ಅವಳು ಭಯದಿಂದ ದಕ್ಷಿಣ

ವಿಶ್ವಾಮಿತ್ರೇಣ ಶಪ್ತಾ ಸಾ ಕಪಿತೀರ್ಥೇ ನಿಮಜ್ಜನಾತ್ ।
ಶಿಲಾರೂಪಂ ಪರಿತ್ಯಜ್ಯ ರಂಭಾರೂಪಮುಪೇಯುಷೀ ॥ ೬೧ ॥
ದೇವೈಃ ಕುಸುಮಧಾರಾಭಿರಭಿವೃಷ್ಟಾ ಮನೋರಮಾ ।
ದಿವ್ಯಂ ವಿಮಾನಮಾರೂಢಾ ದಿವ್ಯಾಂಬರವಿರಾಜಿತಾ ॥ ೬೨ ॥
ಹಾರಕೇಯೂರಕಟಕನಾಸಾಭರಣಭೂಷಿತಾ ।
ಉರ್ವಶ್ಯಾದ್ಯಪ್ಸರೋಭಿಶ್ಚ ಸಖಿಭಿಃ ಪರಿವಾರಿತಾ ॥ ೬೩ ॥
ಕಪಿತೀರ್ಥಸ್ಯ ಮಾಹಾತ್ಮ್ಯಂ ಪ್ರಶಂಸಂತೀ ಪುನಃ ಪುನಃ ।
ನಿಷೇವ್ಯ ರಾಮನಾಥಂ ಚ ಶಂಕರಂ ಶಶಿಭೂಷಣಂ ॥ ೬೪ ॥
ಆಖಂಡಲಪುರೀಂ ರಮ್ಯಾಂ ಪ್ರಯಯಾವಮರಾವತೀಂ ।
ರಾಕ್ಷಸೀ ಸಾಽಪಿ ಶಾಪೇನ ಕುಂಭಜಸ್ಯ ಮಹೌಜಸಃ ॥ ೬೫ ॥
ಘೃತಾಚೀ ದೇವವೇಶ್ಯಾ ಹಿ ರಾಕ್ಷಸೀರೂಪಮಾಗತಾ ।
ಸಾಽಪ್ಯತ್ರ ಕಪಿತೀರ್ಥಾಽಪ್ಸು ಸ್ನಾನಾತ್ಸ್ವಂ ರೂಪಮಾಯಯೌ ॥ ೬೬ ॥
ಏವಂ ರಂಭಾಘೃತಾಚ್ಯೌ ತೇ ಕಪಿತೀರ್ಥೇ ನಿಮಜ್ಜನಾತ್ ।
ಅಗಸ್ತ್ಯಶಿಷ್ಯಶ್ವೇತಸ್ಯ ಪ್ರಸಾದಾದ್ದ್ವಿಜಸತ್ತಮಾಃ ॥ ೬೭ ॥
ರಾಕ್ಷಸೀತ್ವಂ ಶಿಲಾತ್ವಂ ಚ ಹಿತ್ವಾ ಸ್ವಂ ರೂಪಮಾಗತೇ ।
ತಸ್ಮಾತ್ಸರ್ವಪ್ರಯತ್ನೇನ ಸ್ನಾತವ್ಯಂ ಕಪಿತೀರ್ಥಕೇ ॥ ೬೮ ॥

---

ಸಮುದ್ರದ ದಡಕ್ಕೆ ಓಡಿದಳು. ಅಲ್ಲಿ ಕಪಿತೀರ್ಥದಲ್ಲಿ ಮುಳುಗುತ್ತಿರುವ ಅವಳ ತಲೆಯಮೇಲೆ ಆ ಶಿಲೆಯು ಬೀಳಲು ಅದರಿಂದವಳು ಮಡಿದಳು.

೬೧. ವಿಶ್ವಾಮಿತ್ರನಿಂದ ಶಪಿಸಲ್ಪಟ್ಟ ಆ ರಂಭೆಯು ಕಪಿತೀರ್ಥದಲ್ಲಿ ಮುಳುಗಿದುದರಿಂದ ಶಿಲಾರೂಪವನ್ನು ತ್ಯಜಿಸಿ ತನ್ನ ಸ್ವರೂಪವನ್ನು ಹೊಂದಿದಳು.

೬೨–೬೬. ಆಗ ದೇವತೆಗಳು ಹೂಮಳೆಯನ್ನು ಸುರಿಸಿದರು. ಸುಂದರಿಯಾದ ರಂಭೆಯು ದಿವ್ಯವಿಮಾನವನ್ನೇರಿ, ದಿವ್ಯವಸ್ತ್ರದಿಂದ ಪ್ರಕಾಶಿಸುತ್ತ, ಹಾರ, ಕೇಯೂರ, ಬಳೆ, ಮೂಗುತಿಯೆ ಮೊದಲಾದ ಒಡವೆಗಳಿಂದ ಅಲಂಕೃತಳಾಗಿ, ಉರ್ವಶಿಯೆ ಮೊದಲಾದ ಸಖಿಯರಿಂದ ಸುತ್ತುವರಿಯಲ್ಪಟ್ಟವಳೂ ಆಗಿ ಕಪಿತೀರ್ಥದ ಮಾಹಾತ್ಮ್ಯೆಯನ್ನು ಬಾರಿಬಾರಿಗೂ ಹೊಗಳುತ್ತ, ಚಂದ್ರಮೌಳಿಯಾದ ರಾಮೇಶ್ವರನನ್ನು ವಂದಿಸಿ, ಅಮರಾವತಿಗೆ ತೆರಳಿದಳು. ಅತ್ಯಂತ ಬಲಿಷ್ಠನಾದ ಅಗಸ್ತ್ಯನ ಶಾಪದಿಂದ ರಾಕ್ಷಸಿಯಾದ ಘೃತಾಚಿಯೆಂಬ ಅಪ್ಸರೆಯು ಕಪಿತೀರ್ಥದಲ್ಲಿ ಸ್ನಾನಮಾಡಿದುದರಿಂದ ತನ್ನ ಮೊದಲಿನ ರೂಪವನ್ನು ಪಡೆದಳು.

೬೭–೬೮. ದ್ವಿಜೋತ್ತಮರೆ! ಹೀಗೆ ರಂಭಾಘೃತಾಚಿಯರು ಅಗಸ್ತ್ಯ ಶಿಷ್ಯನಾದ ಶ್ವೇತನ ಅನುಗ್ರಹದಿಂದ ಕಪಿತೀರ್ಥದಲ್ಲಿ ಮುಳುಗಿದುದರಿಂದ

ಯಃ ಶೃಣೋತೀಮಮಧ್ಯಾಯಂ ಪಠತೇ ವಾಽಪಿ ಮಾನವಃ ।
ಪ್ರಾಪ್ನೋತಿ ಕಪಿತೀರ್ಥಸ್ಯ ಸ್ನಾನಜಂ ಫಲಮುತ್ತಮಂ ॥ ೬೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಕಪಿತೀರ್ಥಪ್ರಶಂಸನಂ–ರಂಭಾಘೃತಾಚೀಶಾಪವಿಮೋಕ್ಷಣವರ್ಣನಂ" ನಾಮ್ಮೈಕೋನಚತ್ವಾರಿಂಶೋಽಧ್ಯಾಯಃ

---

ರಾಕ್ಷಸೀ ಮತ್ತು ಶಿಲಾರೂಪಗಳನ್ನು ಬಿಟ್ಟು ತಮ್ಮ ರೂಪವನ್ನು ಪಡೆದರು. ಆದುದರಿಂದ ಸಕಲ ಪ್ರಯತ್ನದಿಂದ ಕಪಿತೀರ್ಥದಲ್ಲಿ ಸ್ನಾನಮಾಡಬೇಕು.

೬೯. ಈ ಅಧ್ಯಾಯವನ್ನು ಕೇಳಿದವನೂ, ಓದಿದವನೂ ಕಪಿತೀರ್ಥದಲ್ಲಿ ಮಿಂದ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಕಪಿತೀರ್ಥಪ್ರಶಂಸನ–ರಂಭಾಘೃತಾಚೀಶಾಪವಿಮೋಕ್ಷಣವರ್ಣನ"ವೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತ್ವಾರಿಂಶೋಽಧ್ಯಾಯಃ

### ಗಂಧಮಾದನೇ ಗಾಯತ್ರೀ ಸರಸ್ವತೀ ಸನ್ನಿಧಾನಕಥನಂ

ಶ್ರೀ ಸೂತ ಉವಾಚ :—

ಅಥಾಽತಃ ಸಂಪ್ರವಕ್ಷ್ಯಾಮಿ ಮುನಯೋ ಲೋಕಪಾವನಂ ।
ಗಾಯತ್ರ್ಯಾ ಚ ಸರಸ್ವತ್ಯಾ ಮಾಹಾತ್ಮ್ಯಂ ಮುಕ್ತಿದಂ ನೃಣಾಂ ॥ ೧ ॥
ಶೃಣ್ವತಾಂ ಪಠತಾಂ ಚೈವ ಮಹಾಪಾತಕನಾಶನಂ ।
ಮಹಾಪುಣ್ಯಪ್ರದಂ ಪುಂಸಾಂ ನರಕಕ್ಲೇಶನಾಶನಂ ॥ ೨ ॥
ಗಾಯತ್ರ್ಯಾಂ ಚ ಸರಸ್ವತ್ಯಾಂ ಯೇ ಸ್ನಾಂತಿ ಮನುಜಾ ಮುದಾ ।
ನ ತೇಷಾಂ ಗರ್ಭವಾಸಃ ಸ್ಯಾತ್ಕಿಂ ತು ಮುಕ್ತಿರ್ಭವೇದ್ಧ್ರುವಂ ॥ ೩ ॥
ಸರಸ್ವತ್ಯಾಶ್ಚ ಗಾಯತ್ರ್ಯ ಗಂಧಮಾದನಪರ್ವತೇ ।
ಬ್ರಹ್ಮಪತ್ನ್ಯೋಃ ಸನ್ನಿಧಾನಾತ್ತನ್ನಾಮ್ನಾ ಕಥಿತೇ ಇಮೇ ॥ ೪ ॥

ಋಷಯ ಊಚುಃ :—

ಗಾಯತ್ರ್ಯಾಶ್ಚ ಸರಸ್ವತ್ಯಾ ಗಂಧಮಾದನಪರ್ವತೇ ।
ಕಿಮರ್ಥಂ ಸನ್ನಿಧಾನಂ ವೈ ಸೂತಾಽಭೂತ್ತದ್ವದಸ್ವ ನಃ ॥ ೫ ॥

---

## ಕನ್ನಡದ ಅನುವಾದ

### ಗಂಧಮಾದನದಲ್ಲಿ ಗಾಯತ್ರೀ ಸರಸ್ವತಿಯರ ಸನ್ನಿಧಾನಕಥನ

೧-೨. ಸೂತನು ಹೇಳುತ್ತಾನೆ:—"ಮುನಿಗಳೆ! ಬಳಿಕ ಪ್ರಪಂಚವನ್ನು ಪವಿತ್ರಗೊಳಿಸುವುದೂ, ಮೋಕ್ಷಪ್ರದವಾದುದೂ, ಕೇಳುವವರ ಮತ್ತು ಓದುವವರ ಪಾಪವನ್ನು ನೀಗಿಸುವುದೂ, ಅತ್ಯಂತ ಪುಣ್ಯವನ್ನೀಯುವುದೂ, ನರಕ ದುಃಖವನ್ನು ಪರಿಹರಿಸುವುದೂ ಆಗಿರುವ ಗಾಯತ್ರೀ ಸರಸ್ವತೀ ತೀರ್ಥಗಳ ಮಾಹಾತ್ಮ್ಯಯನ್ನು ಹೇಳುವೆನು.

೩. ಈ ಗಾಯತ್ರೀ ಸರಸ್ವತೀ ತೀರ್ಥಗಳಲ್ಲಿ ಮಿಂದ ಮಾನವರು ನಿಶ್ಚಯವಾಗಿಯೂ ಮರಳಿ ಗರ್ಭದಲ್ಲಿ ವಾಸಿಸದೆ ಮೋಕ್ಷವನ್ನೈದುವರು.

೪. ಗಂಧಮಾದನಶೈಲದಲ್ಲಿ ಬ್ರಹ್ಮನ ರಾಣಿಯರಾದ ಗಾಯತ್ರೀ ಸರಸ್ವತಿಯರ ಸನ್ನಿಧಾನದಿಂದ ಈ ತೀರ್ಥಗಳಿಗೆ ಗಾಯತ್ರೀ ಸರಸ್ವತಿಯೆಂದು ಹೆಸರಾಗಿರುವುದು."

೫. ಋಷಿಗಳು ಕೇಳುತ್ತಾರೆ:—"ಎಲೈ ಸೂತನೆ! ಗಂಧಮಾದನಪರ್ವತದಲ್ಲಿ ಗಾಯತ್ರೀ ಸರಸ್ವತಿಯರ ಸನ್ನಿಧಾನವು ಏತಕ್ಕಾಯಿತು? ಅದನ್ನು ನಮಗೆ ಹೇಳು."

ಶ್ರೀ ಸೂತ ಉವಾಚ :—

ಪ್ರಜಾಪತಿಃ ಪುರಾ ವಿಪ್ರಾಃ ಸ್ವಾಂ ವೈ ದುಹಿತರಂ ಮುದಾ ।
ವಾಚ್ಞಾನಿಮ್ನಾಂ ಕಾಮುಕೋ ಭೂತ್ವಾ ಸ್ಪೃಹಯಾಮಾಸ ಮೋಹನಃ ॥
ಅಥ ಪ್ರಜಾಪತೇಃ ಪುತ್ರೀ ಸ್ವಸ್ಮಿನ್ವೈ ತಸ್ಯ ಕಾಮಿತಾಂ ।
ವಿಲೋಕ್ಯ ಲಜ್ಜಿತಾ ಭೂತ್ವಾ ರೋಹಿದ್ರೂಪಂ ದಧಾರ ಸಾ ॥ ೭ ॥
ಬ್ರಹ್ಮಾಽಪಿ ಹರಿಣೋ ಭೂತ್ವಾ ತಯಾ ರಂತುಮನಾಸ್ತದಾ ।
ಗಚ್ಛಂತೀಮನುಯಾತಿಸ್ಮ ಹರಿಣೀರೂಪಧಾರಿಣೀಂ ॥ ೮ ॥
ತಂ ದೃಷ್ಟ್ವಾ ದೇವತಾಃ ಸರ್ವಾಃ ಪುತ್ರೀಗಮನಸಾದರಂ ।
ಕರೋತ್ಯಕಾರ್ಯಂ ಬ್ರಹ್ಮಾಽಯಂ ಪುತ್ರೀಗಮನಲಕ್ಷಣಂ ॥ ೯ ॥
ಇತಿ ನಿಂದಂತಿ ತಂ ವಿಪ್ರಾಃ ಸ್ರಷ್ಟಾರಂ ಜಗತಾಂ ಪತಿಂ ।
ನಿಷಿದ್ಧಕೃತ್ಯನಿರತಂ ತಂ ದೃಷ್ಟ್ವಾ ಪರಮೇಷ್ಠಿನಂ ॥ ೧೦ ॥
ಹರಃ ಪಿನಾಕಮಾದಾಯ ವ್ಯಾಧರೂಪಧರಃ ಪ್ರಭುಃ ।
ಆಕರ್ಣಪೂರ್ಣಕೃಷ್ಟೇನ ಪಿನಾಕಧನುಷಾ ಶರಂ ॥ ೧೧ ॥
ಸಂಯೋಜ್ಯ ವೇಧಸಂ ತೇನ ವಿವ್ಯಾಧ ನಿಶಿತೇನ ಸಃ ।
ತ್ರಿಪುರಾಂತಕಬಾಣೇನ ವಿದ್ಧೋಽಸೌ ನ್ಯಪತದ್ಭುವಿ ॥ ೧೨ ॥
ತಸ್ಯ ದೇಹಾದಥೋತ್ಥಾಯ ಮಹಜ್ಜ್ಯೋತಿರ್ಮಹಾಪ್ರಭಂ ।
ಆಕಾಶೇ ಮೃಗಶೀರ್ಷಾಖ್ಯಂ ನಕ್ಷತ್ರಮಭವತ್ತದಾ ॥ ೧೩ ॥

---

೬. ಸೂತನು ಹೇಳುತ್ತಾನೆ :—“ ಅಯ್ಯಾ ಬ್ರಾಹ್ಮಣರೆ! ಹಿಂದೆ ಬ್ರಹ್ಮನು ಮೋಹಗೊಂಡು ಕಾಮುಕನಾಗಿ ತನ್ನ ಮಗಳಾದ ಸರಸ್ವತಿಯ ಸಂಗವನ್ನು ಬಯಸಿದನು.

೭. ಅನಂತರ ಮಗಳಾದ ಸರಸ್ವತಿಯು ತನ್ನಲ್ಲಿ ತಂದೆಯು ಕಾಮುಕನಾದುದನ್ನು ನೋಡಿ ನಾಚಿಕೆಗೊಂಡು ಮೃಗರೂಪವನ್ನು ಧರಿಸಿದಳು.

೮. ಬ್ರಹ್ಮನೂ ಜಿಂಕೆಯ ರೂಪವನ್ನು ತಾಳಿ ಅವಳೊಡನೆ ರಮಿಸಬಯಸಿ ಮೃಗರೂಪಧಾರಿಣಿಯಾದ ಮಗಳನ್ನು ಅನುಸರಿಸಿದನು.

೯—೧೩. ಮಗಳ ಸಂಗದಲ್ಲಿ ಪ್ರೀತಿಯುಳ್ಳ ಆ ಬ್ರಹ್ಮನನ್ನು ಕಂಡು ದೇವತೆಗಳೆಲ್ಲ ಬ್ರಹ್ಮನು ದುಷ್ಕಾರ್ಯವನ್ನೆಸಗುವನೆಂದು ಅವನನ್ನು ನಿಂದಿಸುತ್ತಿದ್ದರು. ನಿಷಿದ್ಧಕಾರ್ಯದಲ್ಲಿ ಆಸಕ್ತಿಯುಳ್ಳ ಬ್ರಹ್ಮನನ್ನು ಕಂಡು ಹರನು ಬೇಡನಾಗಿ ಪಿನಾಕವೆಂಬ ಬಿಲ್ಲನ್ನು ತೆಗೆದುಕೊಂಡು ಬಾಣವನ್ನು ಜೋಡಿಸಿ ಅದನ್ನು ಕಿವಿಯವರೆಗೆ ಎಳೆದು ಬ್ರಹ್ಮನನ್ನು ಹೊಡೆದನು. ಬ್ರಹ್ಮನು ಶಿವನ ಬಾಣದಿಂದ ತಾಡಿತನಾಗಿ ನೆಲದಮೇಲೆ ಬಿದ್ದನು. ಆಗ ಅವನ ದೇಹದಿಂದ ಅತಿ ಪ್ರಭೆಯುಳ್ಳ ತೇಜಸ್ಸೊಂದು ಎದ್ದು ಆಕಾಶವನ್ನು ಸೇರಿ ಮೃಗಶೀರ್ಷವೆಂಬ ನಕ್ಷತ್ರವಾಯಿತು.

ಆರ್ದ್ರಾನಕ್ಷತ್ರರೂಪೀ ಸನ್ಸ್ಥಿರೋಽಪ್ಯನುಜಗಾಮ ತಂ ।
ಪೀಡಯನ್ಮೃಗಶೀರ್ಷಾಖ್ಯಂ ನಕ್ಷತ್ರಂ ಬ್ರಹ್ಮರೂಪಿಣಂ ॥ ೧೪ ॥
ಅಧುನಾಽಪಿ ಮೃಗವ್ಯಾಧರೂಪೇಣ ತ್ರಿಪುರಾಂತಕಃ ।
ಅಂಬರೇ ದೃಶ್ಯತೇ ಸ್ಪಷ್ಟಂ ಮೃಗಶೀರ್ಷಾಂತಿಕೇ ದ್ವಿಜಾಃ ॥ ೧೫ ॥
ಏವಂ ವಿನಿಹತೇ ತಸ್ಮಿನ್ಸ್ವಂಭುನಾ ಪರಮೇಷ್ಠಿನಿ ।
ಅನಂತರಂ ತು ಗಾಯತ್ರೀಸರಸ್ವತ್ಯೌ ಶುಚಾಽರ್ಪಿತೇ ॥ ೧೬ ॥
ಭರ್ತೃಹೀನೇ ಮುನಿಶ್ರೇಷ್ಠಾ ಭರ್ತೃಜೀವನಕಾಂಕ್ಷಯಾ ।
ಕಿಂ ಕರಿಷ್ಯಾವಹೇ ಹ್ಯಾವಾಮಿತ್ಯನ್ಯೋನ್ಯಂ ವಿಚಾರ್ಯ ತು ॥ ೧೭ ॥
ಸ್ವಪತಿಪ್ರಾಣಸಿದ್ಧ್ಯರ್ಥಂ ಗಾಯತ್ರೀ ಚ ಸರಸ್ವತೀ ।
ಸರ್ವೋತ್ಕೃಷ್ಟಂ ಶಿವಸ್ಥಾನಂ ಗಂಧಮಾದನಪರ್ವತಂ ॥ ೧೮ ॥
ಸರ್ವಾಽಭೀಷ್ಟಪ್ರದಂ ಪುಂಸಾಂ ಸ ತಪಃಕರ್ತುಂ ಸಮುದ್ಯತೇ ।
ಜಗ್ಮತುರ್ನಿಯಮೋಪೇತೇ ತಪಃಕರ್ತುಂ ಶಿವಂ ಪ್ರತಿ ॥ ೧೯ ॥
ಸ್ನಾನಾರ್ಥಮಾತ್ಮನೋ ವಿಪ್ರಾ ಗಾಯತ್ರೀ ಚ ಸರಸ್ವತೀ ।
ತೀರ್ಥದ್ವಯಂ ಸ್ವನಾಮ್ನಾ ವೈ ಚಕ್ರತುಃ ಪಾಪನಾಶನಂ ॥ ೨೦ ॥
ತತ್ರ ತ್ರಿಷವಣಸ್ನಾನಂ ಪ್ರತ್ಯಹಂ ಚಕ್ರತುರ್ಮುದಾ ।
ಬಹುಕಾಲಮನಾಹಾರೇ ಕಾಮಕ್ರೋಧಾದಿವರ್ಜಿತೇ ॥ ೨೧ ॥
ಅತ್ಯುಗ್ರನಿಯಮೋಪೇತೇ ಶಿವಧ್ಯಾನಪರಾಯಣೇ ।
ಪಂಚಾಕ್ಷರಮಹಾಮಂತ್ರಜಪೈಕನಿಯತೇ ಶುಭೇ ॥ ೨೨ ॥

---

೧೪. ಶಿವನೂ ಆರ್ದ್ರಾನಕ್ಷತ್ರನಾಗಿ ಮೃಗಶಿರಾನಕ್ಷತ್ರನಾದ ಬ್ರಹ್ಮನನ್ನು ಪೀಡಿಸುತ್ತ ಹಿಂಬಾಲಿಸಿದನು.

೧೫. ಬ್ರಾಹ್ಮಣರೆ! ಈಗಲೂ ಶಿವನು ಬೇಡನ ರೂಪದಿಂದ ಆಕಾಶದಲ್ಲಿ ಮೃಗಶಿರಾನಕ್ಷತ್ರದ ಹತ್ತಿರದಲ್ಲಿದ್ದು ಸ್ಪಷ್ಟವಾಗಿ ಕಾಣುತ್ತಾನೆ.

೧೬–೧೯. ಹೀಗೆ ಶಿವನು ಬ್ರಹ್ಮನನ್ನು ಕೊಲ್ಲಲು ಗಾಯತ್ರೀ ಸರಸ್ವತಿಯರು ಪತಿಯಿಲ್ಲದೆ ದುಃಖಗೊಂಡು ಬ್ರಹ್ಮನನ್ನು ಬದುಕಿಸಲಪೇಕ್ಷೆಯಿಂದ ಈಗ ಏನನ್ನು ಮಾಡೋಣವೆಂದು ಪರಸ್ಪರ ಆಲೋಚಿಸಿ ಪತಿಯನ್ನು ಬದುಕಿಸಲೋಸುಗ ಶಿವನನ್ನು ಕುರಿತು ತಪಸ್ಸನ್ನಾಚರಿಸಲು ಶಿವನ ಸರ್ವೋತ್ತಮಸ್ಥಾನವಾದ ಗಂಧಮಾದನಪರ್ವತಕ್ಕೆ ಹೋದರು.

೨೦. ಆ ಗಾಯತ್ರೀ ಸರಸ್ವತಿಯರು ತಮ್ಮ ಸ್ನಾನಕ್ಕಾಗಿ ತಮ್ಮ ಹೆಸರಿನಿಂದ ಪಾಪನಾಶಕವಾದ ಎರಡು ತೀರ್ಥಗಳನ್ನು ನಿರ್ಮಿಸಿದರು.

೨೧–೨೩. ಅಲ್ಲಿ ಅವರಿಬ್ಬರೂ ನಿತ್ಯವೂ ತ್ರಿಕಾಲಸ್ನಾನಗೈದು ಬಹುಕಾಲದವರೆಗೆ ಆಹಾರವಿಲ್ಲದವರೂ, ಕಾಮಕ್ರೋಧಾದಿಗಳನ್ನು ತ್ಯಜಿಸಿದವರೂ, ಅತಿ

ಸ್ವಪತೇರ್ಜೀವನಾರ್ಥಂ ವೈ ಗಾಯತ್ರೀ ಚ ಸರಸ್ವತೀ ।
ಮಹಾದೇವಂ ಸಮುದ್ದಿಶ್ಯ ತಪ ಏವಂ ಪ್ರಚಕ್ರತುಃ ॥ ೨೩ ॥
ತಯೋರಥ ತಪಸಸ್ತುಷ್ಟೋ ಮಹಾದೇವೋ ಮಹೇಶ್ವರಃ ।
ಸನ್ನಿಧತ್ತೇ ಮಹಾಮೂರ್ತಿಸ್ತಪಸಾಂ ಫಲದಿತ್ಸಯಾ ॥ ೨೪ ॥
ತತಃ ಸನ್ನಿಹಿತಂ ಶಂಭುಂ ಪಾರ್ವತೀರಮಣಂ ಶಿವಂ ।
ಗಣೇಶಕಾರ್ತಿಕೇಯಾಭ್ಯಾಂ ಪಾರ್ಶ್ವಯೋಃ ಪರಿಸೇವಿತಂ ॥ ೨೫ ॥
ದೃಷ್ಟ್ವಾ ಸಂತುಷ್ಟಚಿತ್ತೇ ತೇ ಗಾಯತ್ರೀ ಚ ಸರಸ್ವತೀ ।
ಸ್ತೋತ್ರೈಸ್ತುಷ್ಟುವತುಃ ಸ್ತುತ್ಯಂ ಮಹಾದೇವಂ ಘೃಣಾನಿಧಿಂ ॥ ೨೬ ॥

ಗಾಯತ್ರೀ ಸರಸ್ವತ್ಯಾವೂಚತುಃ:–

ನಮೋ ದುರ್ವಾರಸಂಸಾರಧ್ವಾಂತಧ್ವಂಸೈಕಹೇತವೇ ।
ಜ್ವಲಜ್ಜ್ವಾಲಾವಲೀಭೀಮಕಾಲಕೂಟವಿಷಾದಿನೇ ॥ ೨೭ ॥
ಜಗನ್ಮೋಹನಪಂಚಾಽಸ್ತ್ರದೇಹನಾಶೈಕಹೇತವೇ ।
ಜಗದಂತಕರ ಕ್ರೂರಯಮಾಽಂತಕ ನಮೋಽಸ್ತು ತೇ ॥ ೨೮ ॥
ಗಂಗಾತರಂಗಸಂಪೃಕ್ತಜಟಾಮಂಡಲಧಾರಿಣೇ ।
ನಮಸ್ತೇಽಸ್ತು ವಿರೂಪಾಕ್ಷ ಬಾಲಶೀತಾಂಶುಧಾರಿಣೇ ॥ ೨೯ ॥

---

ಕಠಿನ ವ್ರತವುಳ್ಳವರೂ, ಶಿವನ ಧ್ಯಾನದಲ್ಲಿ ನಿರತರೂ, ಪಂಚಾಕ್ಷರ ಮಹಾ ಮಂತ್ರವನ್ನು ಜಪಿಸುವವರೂ ಆಗಿ ಶಿವನನ್ನುದ್ದೇಶಿಸಿ ಪತಿಜೀವನಕ್ಕಾಗಿ ತಪಸ್ಸನ್ನು ಮಾಡಿದರು.

೨೪. ಅವರ ತಪಸ್ಸಿನಿಂದ ಸಂತುಷ್ಟನಾದ ಮಹೇಶ್ವರನು ತಪಸ್ಸಿಗೆ ಫಲವನ್ನು ಕೊಡಲು ಸಮೀಪಕ್ಕೆ ಬಂದನು.

೨೫–೨೬. ಬಳಿಕ ಗಾಯತ್ರೀ ಸರಸ್ವತಿಯರು ಹತ್ತಿರ ಬಂದಿರುವವನೂ, ಎರಡು ಪಾರ್ಶ್ವಗಳಲ್ಲಿಯೂ ಗಣೇಶ ಷಣ್ಮುಖರಿಂದ ಸೇವಿಸಲ್ಪಡುತ್ತಿರುವವನೂ, ಸ್ತುತಿಸಲು ಯೋಗ್ಯನೂ, ದಯಾಳುವೂ ಆದ ಶಿವನನ್ನು ಸ್ತುತಿಸಿದರು.

೨೭. ಗಾಯತ್ರೀ ಸರಸ್ವತಿಯರು ಹೇಳುತ್ತಾರೆ:— "ನಿವಾರಿಸಲಾಗದ ಸಂಸಾರವೆಂಬ ಕತ್ತಲೆಯನ್ನು ನಾಶಮಾಡುವವನೂ, ಉರಿಯುತ್ತಿರುವ ಜ್ವಾಲೆಗಳಿಂದ ಭಯಂಕರವಾದ ಕಾಲಕೂಟವಿಷವನ್ನು ಭಕ್ಷಿಸಿದವನೂ ಆದ ಓ ಮಹೇಶ್ವರ! ನಿನಗೆ ನಮಸ್ಕಾರವು.

೨೮. ಜಗತ್ತುಗಳನ್ನು ಮೋಹಗೊಳಿಸುವ ಮನ್ಮಥನನ್ನು ಕೊಂದವನೂ, ಜಗತ್ತನ್ನು ನಾಶಗೊಳಿಸುವ ಕ್ರೂರನಾದ ಯಮನನ್ನು ನಿಗ್ರಹಿಸಿದವನೂ ಆದ ಓ ಮಹೇಶ್ವರ! ನಿನಗೆ ನಮಸ್ಕಾರವು.

೨೯. ಗಂಗೆಯ ಅಲೆಗಳಿಂದ ಕೂಡಿದ ಜಟೆಗಳನ್ನು ಧರಿಸಿದವನೂ, ಬಾಲಚಂದ್ರಮೌಳಿಯೂ ಆದ ಓ ವಿರೂಪಾಕ್ಷ! ನಿನಗೆ ನಮಸ್ಕಾರವು.

ಪಿನಾಕಭೀಮಟಂಕಾರತ್ರಾಸಿತತ್ರಿಪುರೌಕಸೇ ।
ನಮಸ್ತೇ ವಿವಿಧಾಕಾರ ಜಗತ್ಸ್ರಷ್ಟೃಶಿರಚ್ಛಿದೇ ॥ ೩೦ ॥
ಶಾಂತಾಽಮಲಕೃಪಾದೃಷ್ಟಿಸಂರಕ್ಷಿತಮೃಕಂಡುಜ ।
ನಮಸ್ತೇ ಗಿರಿಜಾನಾಥ ರಕ್ಷಾವಾಂ ಶರಣಾಗತೇ ॥ ೩೧ ॥
ಮಹಾದೇವ ಜಗನ್ನಾಥ ತ್ರಿಪುರಾಂತಕ ಶಂಕರ ।
ವಾಮದೇವ ಮಹಾದೇವ ರಕ್ಷಾವಾಂ ಶರಣಾಗತೇ ॥ ೩೨ ॥
ಇತಿ ತಾಭ್ಯಾಂ ಸ್ತುತಃ ಶಂಭುರ್ದೇವದೇವೋ ಮಹೇಶ್ವರಃ ।
ಅಬ್ರವೀತ್ಪ್ರೀತಿಸಂಯುಕ್ತೋ ಗಾಯತ್ರೀಂ ಚ ಸರಸ್ವತೀಂ ॥ ೩೩ ॥

ಮಹಾದೇವ ಉವಾಚ :—

ಭೋಃ ಸರಸ್ವತಿ ಗಾಯತ್ರಿ ಪ್ರೀತೋಽಸ್ಮಿ ಯುವಯೋರಹಂ ।
ವರಂ ವರಯತಂ ಮತ್ತೋ ಯದ್ವಾಂ ಮನಸಿ ವರ್ತತೇ ॥ ೩೪ ॥
ಇತ್ಯುಕ್ತೇ ತೇ ತು ಗಾಯತ್ರೀಸರಸ್ವತ್ಯೌ ಹರೇಣ ವೈ ।
ಅಬ್ರೂತಾಂ ಪಾರ್ವತೀಕಾಂತಂ ಮಹಾದೇವಂ ಘೃಣಾನಿಧಿಂ ॥ ೩೫ ॥

ಗಾಯತ್ರೀಸರಸ್ವತ್ಯಾವೂಚತುಃ :—

ಭಗವನ್ನಾವಯೋರ್ದೇವ ಭರ್ತಾರಂ ಚತುರಾನನಂ ।
ಸಪ್ರಾಣಂ ಕುರು ಸರ್ವೇಶ ಕೃಪಯಾ ಕರುಣಾಕರ ॥ ೩೬ ॥

---

೩೦. ಪಿನಾಕ ಧನುಸ್ಸಿನ ಟಂಕಾರದಿಂದ ಹೆದರಿಸಿದ ತ್ರಿಪುರಾಸುರನುಳ್ಳವನೂ, ನಾನಾ ಬಗೆಯ ಜಗತ್ತುಗಳನ್ನು ಸೃಷ್ಟಿಸುವ ಬ್ರಹ್ಮನ ಮಸ್ತಕವನ್ನು ಕತ್ತರಿಸಿದವನೂ ಆದ ಎಲೈ ಮಹೇಶ್ವರನೇ! ನಿನಗೆ ನಮಸ್ಕಾರವು.

೩೧. ಶಾಂತವಾದ ಶುದ್ಧದಯಾದೃಷ್ಟಿಯಿಂದ ಮಾರ್ಕಂಡೇಯನನ್ನು ಕಾಪಾಡಿದವನೂ, ಗಿರಿಜೆಯ ರಮಣನೂ ಆದ ಓ ಶಂಕರ! ನಿನಗೆ ನಮಸ್ಕಾರವು. ಮರೆಹೊಕ್ಕ ನಮ್ಮನ್ನು ಕಾಪಾಡು.

೩೨. ಮಹೇಶ್ವರನೂ, ಜಗದೊಡೆಯನೂ, ತ್ರಿಪುರನಾಶಕನೂ, ಲೋಕವಿಲಕ್ಷಣದೇವನೂ ಆದ ಎಲೈ ಶಂಕರನೇ! ಮರೆಹೊಕ್ಕ ನಮ್ಮನ್ನು ಕಾಪಾಡು.''

೩೩. ಹೀಗೆ ಅವರಿಬ್ಬರು ಸ್ತುತಿಸಲು ಮಹೇಶ್ವರನು ಸಂತೋಷದಿಂದ ಗಾಯತ್ರೀ ಸರಸ್ವತಿಯರನ್ನು ಕುರಿತು ಹೀಗೆಂದನು.

೩೪–೩೫. ಮಹಾದೇವನು ಹೇಳುತ್ತಾನೆ:—''ಎಲೌ ಗಾಯತ್ರೀ ಸರಸ್ವತಿಯರೆ! ನಿಮ್ಮ ವಿಷಯದಲ್ಲಿ ನಾನು ಸಂತುಷ್ಟನಾಗಿರುವೆನು. ನೀವು ನಿಮಗೆ ಇಷ್ಟವಾದ ವರವನ್ನು ಕೇಳಿಕೊಳ್ಳಿರಿ.'' ಶಿವನು ಹೀಗೆ ನುಡಿಯಲು ಗಾಯತ್ರೀ ಸರಸ್ವತಿಯರು ದಯಾಳುವಾದ ಅವನನ್ನು ಕುರಿತು ಇಂತೆಂದರು.

೩೬. ಗಾಯತ್ರೀ ಸರಸ್ವತಿಯರು ಹೇಳುತ್ತಾರೆ:—'' ಓ ಸರ್ವೇಶ್ವರ! ನಮ್ಮ ಪತಿಯಾದ ಬ್ರಹ್ಮನನ್ನು ದಯೆಯಿಂದ ಬದುಕಿಸು.

ತ್ವಮಾವಯೋಃ ಪಿತಾ ದೇವ ತವಾಸ್ವ್ಯಾವಾಂ ಸುತೇ ಉಭೇ ।
ರಕ್ಷಾವಾಂ ಪತಿದಾನೇನ ತಸ್ಮಾತ್ತ್ವಂ ತ್ರಿಪುರಾಂತಕ ॥ ೩೭ ॥
ಸ ಏವಂ ಪ್ರಾರ್ಥಿತಃ ಶಂಭುಸ್ತಾಭ್ಯಾಂ ಬ್ರಾಹ್ಮಣಪುಂಗವಾಃ ।
ಏವಮಸ್ತ್ವಿತಿ ಸಂಪ್ರೋಚ್ಯ ಗಾಯತ್ರೀಂ ಚ ಸರಸ್ವತೀಂ ॥ ೩೮ ॥
ತದೇವ ವೇಧಸಃ ಕಾಯಂ ಶಿರಸಾ ಯೋಕ್ತುಮುತ್ಸುಕಃ ।
ತತ್ರೈವ ವೇಧಸಃ ಕಾಯಂ ಶಿರೋಭಿಃ ಸಹ ಸುವ್ರತಾಃ ॥ ೩೯ ॥
ಭೂತೈರಾನಾಯಯಾಮಾಸ ನಂದಿಭೃಂಗಿಮುಖೈಸ್ತದಾ ।
ಶಿರಾಂಸಿ ತಾನ್ಯನೇಕಾನಿ ಕಾಯೇನ ಸಹ ಶಂಕರಃ ॥ ೪೦ ॥
ಕ್ಷಣಾತ್ಸಂಧಾರಯಾಮಾಸ ವಾಣೀಗಾಯತ್ರಿಸನ್ನಿಧೌ ।
ಸಂಧಿತೋಽಥ ಹರೇಣಾಽಸೌ ಚತುರ್ವಕ್ತ್ರೋ ಜಗತ್ಪತಿಃ ॥ ೪೧ ॥
ಉತ್ತಸ್ಥೌ ತತ್ಕ್ಷಣಾದೇವ ಸುಪ್ತೋತ್ಥಿತ ಇವ ದ್ವಿಜಾಃ ।
ತತಃ ಪ್ರಜಾಪತಿರ್ದೃಷ್ಟ್ವಾ ಶಂಕರಂ ಶಶಿಭೂಷಣಂ ।
ತುಷ್ಟಾವ ವಾಗ್ಭಿರಗ್ರ್ಯಾಭಿರ್ಭಾರ್ಯಾಭ್ಯಾಂ ಚ ಸಮನ್ವಿತಃ ॥ ೪೨ ॥

ಬ್ರಹ್ಮೋವಾಚ :—

ನಮಸ್ತೇ ದೇವದೇವೇಶ ಕರುಣಾಕರ ಶಂಕರ ॥ ೪೩ ॥
ಪಾಹಿ ಮಾಂ ಕರುಣಾಸಿಂಧೋ ನಿಷಿದ್ಧಾಚರಣಾತ್ಪ್ರಭೋ ।
ಮಮ ತ್ವತ್ಕೃಪಯಾ ಶಂಭೋ ನಿಷಿದ್ಧಾಚರಣೇ ಕ್ವಚಿತ್ ॥ ೪೪ ॥
ಮಾ ಪ್ರವೃತ್ತಿರ್ಭವೇದ್ಭೂಯೋ ರಕ್ಷ ಮಾಂ ತ್ವಂ ತಥಾ ಸದಾ ।
ತಥೈವಾಽಸ್ತ್ವಿತಿ ಸಂಪ್ರಾಹ ಬ್ರಹ್ಮಾಣಂ ಗಿರಿಜಾಪತಿಃ ॥ ೪೫ ॥

---

೩೭—೪೨. ತ್ರಿಪುರವನ್ನು ನಾಶಗೊಳಿಸಿದ ಎಲೈ ಶಂಕರನೇ! ನೀನು ನಮಗೆ ತಂದೆಯು. ನಾವು ನಿನ್ನ ಮಕ್ಕಳು. ಆದುದರಿಂದ ನಮಗೆ ಪತಿಯನ್ನಿತ್ತು ಕಾಪಾಡು.'' ಎಲೈ ಬ್ರಾಹ್ಮಣೋತ್ತಮರೆ! ಆ ಗಾಯತ್ರೀ ಸರಸ್ವತಿಯರು ಹೀಗೆ ಶಿವನನ್ನು ಬೇಡಿಕೊಳ್ಳಲು ಅವನು ಹಾಗೆಯೇ ಆಗಲೆಂದು ಅವರನ್ನು ಕುರಿತು ಹೇಳಿ ಅದೇ ಬ್ರಹ್ಮನ ದೇಹವನ್ನು ತಲೆಯೊಡನೆ ಸೇರಿಸಲುತ್ಸುಕನಾಗಿ ನಂದಿ ಭೃಂಗಿ ಮೊದಲಾದ ಭೂತಗಳಿಂದ ಆ ಬ್ರಹ್ಮನ ದೇಹವನ್ನು ತಲೆಗಳೊಡನೆ ತರಿಸಿ ಆ ಗಾಯತ್ರೀ ಸರಸ್ವತಿಯರ ಸಮ್ಮುಖದಲ್ಲಿಯೆ ಸೇರಿಸಿದನು. ಶಿವನು ಹಾಗೆ ಶಿರಸ್ಸನ್ನು ಸೇರಿಸಲು ಚತುರ್ಮುಖನು ಕೂಡಲೆ ನಿದ್ರಿಸಿದವನು ಎದ್ದಂತೆ ಮೇಲಕ್ಕೆ ಎದ್ದನು. ಬಳಿಕ ಅವನು ಚಂದ್ರಮೌಳಿಯಾದ ಶಂಕರನನ್ನು ಪತ್ನಿಯರೊಡನೆ ಉತ್ತಮ ವಾಣಿಗಳಿಂದ ಸ್ತುತಿಸಿದನು.

೪೩—೪೫. ಬ್ರಹ್ಮನು ಸ್ತುತಿಸುತ್ತಾನೆ:—'' ದೇವತೆಗಳಿಗೆ ಅಧಿಪತಿಯಾದ ಇಂದ್ರನಿಗೆ ಒಡೆಯನೂ, ದಯಾಳುವೂ ಆದ ಶಂಕರನೆ! ನಿನಗೆ ನಮಸ್ಕಾರವು.

ಇತಃ ಪರಂ ಪ್ರಮಾದಂ ತ್ವಂ ಮಾ ಕುರುಷ್ವ ವಿಧೇ ಪುನಃ ।
ಉತ್ಪಥಂ ಪ್ರತಿಪನ್ನಾನಾಂ ಪುಂಸಾಂ ಶಾಸ್ತಾಽಸ್ಮಿ ಸರ್ವದಾ ॥ ೪೬ ॥
ಏವಮುಕ್ತ್ವಾ ಚತುರ್ವಕ್ತ್ರಂ ಮಹಾದೇವೋ ದ್ವಿಜೋತ್ತಮಾಃ ।
ಸರಸ್ವತೀಂ ಚ ಗಾಯತ್ರೀಂ ಪ್ರೋವಾಚ ಪ್ರೀಣಯನ್ಗಿರಾ ॥ ೪೭ ॥

ಮಹಾದೇವ ಉವಾಚ:—

ಯುವಯೋರ್ಮತ್ಪ್ರಸಾದೇನ ಹೇ ಗಾಯತ್ರಿ ಸರಸ್ವತಿ ।
ಅಯಂ ಭರ್ತಾ ಸಮಾಯಾತಃ ಸಪ್ರಾಣಶ್ಚತುರಾನನಃ ॥ ೪೮ ॥
ಸಹಾಽನೇನ ಬ್ರಹ್ಮಲೋಕಂ ಯಾತಂ ಮಾಽಭೂದ್ವಿಲಂಬತಾ ।
ಯುವಯೋಃ ಸನ್ನಿಧಾನೇನ ಸದಾ ಕುಂಡದ್ವಯೇಽತ್ರ ವೈ ॥ ೪೯ ॥
ಭವಿಷ್ಯತಿ ನೃಣಾಂ ಮುಕ್ತಿಃ ಸ್ನಾನಾತ್ಸಾಯುಜ್ಯರೂಪಿಣೀ ।
ಯುಷ್ಮನ್ನಾಮ್ನಾ ಚ ಗಾಯತ್ರೀಸರಸ್ವತ್ಯಾವಿತಿ ದ್ವಯಂ ॥ ೫೦ ॥
ಇದಂ ತೀರ್ಥಂ ಸರ್ವಲೋಕೇ ಖ್ಯಾತಿಂ ಯಾಸ್ಯತಿ ಶಾಶ್ವತೀಂ ।
ಸರ್ವೇಷಾಮಪಿ ತೀರ್ಥಾನಾಮಿದಂ ತೀರ್ಥದ್ವಯಂ ಸದಾ ॥ ೫೧ ॥
ಶುದ್ಧಿಪ್ರದಂ ತಥಾಭೂಯಾನ್ಮಹಾಪಾತಕನಾಶನಂ ।
ಮಹಾಶಾಂತಿಕರಂ ಪುಂಸಾಂ ಸರ್ವಾಽಭೀಷ್ಟಪ್ರದಾಯಕಂ ॥ ೫೨ ॥

---

ನಿಷಿದ್ಧಾಚಾರದಿಂದ ನನ್ನನ್ನು ಕಾಪಾಡು. ನಿನ್ನ ಕೃಪೆಯಿಂದ ನನ್ನ ಮನಸ್ಸು ನಿಷಿದ್ಧಾಚಾರದಲ್ಲಿ ಪ್ರವರ್ತಿಸದಂತೆ ರಕ್ಷಿಸು. ಎಂದೆನ್ನಲು ಪಾರ್ವತೀಪತಿಯಾದ ಶಂಕರನು ಬ್ರಹ್ಮನನ್ನು ಕುರಿತು ಹಾಗೆಯೇ ಆಗಲೆಂದನು.

೪೬. ಬ್ರಹ್ಮ! ನೀನು ಇನ್ನುಮುಂದೆ ಮರಳಿ ಪ್ರಮಾದಕ್ಕೀಡಾಗಬೇಡ. ನಾನು ಯಾವಾಗಲೂ ದುರ್ಮಾರ್ಗದಲ್ಲಿ ಪ್ರವೃತ್ತರಾದವರನ್ನು ಶಿಕ್ಷಿಸುವವನಾಗಿದ್ದೇನೆ.

೪೭. ದ್ವಿಜವರ್ಯರೆ! ಮಹಾದೇವನು ಚತುರ್ಮುಖನನ್ನು ಕುರಿತು ಹೀಗೆಂದು ಗಾಯತ್ರೀ ಸರಸ್ವತಿಯರನ್ನು ಸಂತೋಷಗೊಳಿಸುತ್ತ ಇಂತೆಂದನು.

೪೮. ಮಹಾದೇವನು ಹೇಳುತ್ತಾನೆ:—"ಗಾಯತ್ರಿ! ಸರಸ್ವತಿ! ನನ್ನ ಅನುಗ್ರಹದಿಂದ ನಿಮ್ಮ ಪತಿಯಾದ ಚತುರ್ಮುಖನು ಬದುಕಿಬಂದಿರುವನು.

೪೯—೫೨. ಇವನೊಡನೆ ನೀವು ಶೀಘ್ರವಾಗಿ ಬ್ರಹ್ಮಲೋಕಕ್ಕೆ ತೆರಳಿರಿ. ನಿಮ್ಮ ಸನ್ನಿಧಾನದಿಂದ ಈ ಕುಂಡದಲ್ಲಿ ಸ್ನಾನಮಾಡುವ ನರರಿಗೆ ಸಾಯುಜ್ಯರೂಪವಾದ ಮೋಕ್ಷವಾಗುವುದು. ನಿಮ್ಮ ಗಾಯತ್ರೀ ಸರಸ್ವತಿಯೆಂಬ ಹೆಸರಿನಿಂದಲೆ ಈ ತೀರ್ಥವು ಸಮಸ್ತಲೋಕಗಳಲ್ಲಿ ಸ್ಥಿರವಾದ ಪ್ರಸಿದ್ಧಿಯನ್ನು ಪಡೆಯುವುದು. ಈ ಎರಡು ತೀರ್ಥಗಳು ಸಕಲತೀರ್ಥಗಳಿಗೆ ಶುದ್ಧಿಯನ್ನು

ಮಮ ಪ್ರಸಾದಜನನಂ ವಿಷ್ಣುಪ್ರೀತಿಕರಂ ತಥಾ ।
ಏತತ್ತೀರ್ಥದ್ವಯಸಮಂ ನ ಭೂತಂ ನ ಭವಿಷ್ಯತಿ ॥ ೫೩ ॥
ಅತ್ರ ಸ್ನಾನಾದ್ಧಿ ಸರ್ವೇಷಾಂ ಸರ್ವಾಽಭೀಷ್ಟಂ ಭವಿಷ್ಯತಿ ।
ಇದಂ ಕುಂಡದ್ವಯಂ ಲೋಕೇ ಭವತೀಭ್ಯಾಂ ಕೃತಂ ಮಹತ್ ॥ ೫೪ ॥
ಯುಷ್ಮನ್ನಾಮ್ನಾ ಪ್ರಸಿದ್ಧಂ ಚ ಭವಿಷ್ಯತಿ ವಿಮುಕ್ತಿದಂ ।
ಗಾಯತ್ರ್ಯುಪಾಸ್ತಿರಹಿತಾ ವೇದಾಽಭ್ಯಾಸವಿವರ್ಜಿತಾಃ ॥ ೫೫ ॥
ಔಪಾಸನವಿಹೀನಾಶ್ಚ ಪಂಚಯಜ್ಞವಿವರ್ಜಿತಾಃ ।
ಯುಷ್ಮತ್ಕುಂಡದ್ವಯೇ ಸ್ನಾನಾತ್ತತ್ತತ್ಫಲಮವಾಪ್ನುಯುಃ ॥ ೫೬ ॥
ಅನ್ಯೇ ಚ ಯೇ ಪಾತಕಿನೋ ನಿತ್ಯಾಽನುಷ್ಠಾನವರ್ಜಿತಾಃ ।
ಸ್ನಾತ್ವಾ ಕುಂಡದ್ವಯೇ ತತ್ರ ಶುದ್ಧಾಃ ಸ್ಯುರ್ದ್ವಿಜಸತ್ತಮಾಃ ॥ ೫೭ ॥
ಸರಸ್ವತೀಂ ಚ ಗಾಯತ್ರೀಮೇವಮುಕ್ತ್ವಾ ಮಹೇಶ್ವರಃ ।
ಕ್ಷಣಾದಂತರಧಾತ್ತತ್ರ ಸರ್ವೇಷಾಮೇವ ಪಶ್ಯತಾಂ ॥ ೫೮ ॥
ಪತಿಂ ಲಬ್ಧ್ವಾಽಥ ಗಾಯತ್ರೀಸರಸ್ವತ್ಯೌ ಮುದಾನ್ವಿತೇ ।
ತೇನ ಸಾಕಂ ಬ್ರಹ್ಮಲೋಕಂ ಜಗ್ಮತುರ್ದ್ವಿಜಸತ್ತಮಾಃ ॥ ೫೯ ॥

---

ಕೊಡುವುವೂ, ಮಹಾಪಾತಕವನ್ನು ಪರಿಹರಿಸುವುವೂ, ಅತ್ಯಂತ ಶಾಂತಿಯನ್ನು ಉಂಟುಮಾಡುವುವೂ, ಸಕಲೇಷ್ಟಗಳನ್ನು ಕೊಡುವುವೂ, ನನ್ನ ಅನುಗ್ರಹವನ್ನು ಉಂಟುಮಾಡುವುವೂ, ವಿಷ್ಣುವಿಗೆ ಪ್ರೀತಿಯನ್ನುಂಟುಮಾಡುವುವೂ ಆಗುವುವು. ಇವುಗಳಿಗೆ ಸಮಾನವಾದ ತೀರ್ಥವು ಹಿಂದೆಯೂ ಇರಲಿಲ್ಲ; ಮುಂದೆಯೂ ಇರುವುದಿಲ್ಲ.

೫೪–೫೬. ಇಲ್ಲಿ ಸ್ನಾನಮಾಡುವುದರಿಂದ ಸಮಸ್ತ ಜನರ ಸಕಲೇಷ್ಟಾರ್ಥಗಳೂ ಲಭಿಸುವುವು. ಈ ಎರಡು ಕುಂಡಗಳನ್ನೂ ನೀವು ನಿರ್ಮಿಸಿರುವುದರಿಂದ ನಿಮ್ಮ ಹೆಸರಿನಿಂದಲೆ ಇವು ಲೋಕದಲ್ಲಿ ಪ್ರಸಿದ್ಧವಾಗುವುವು. ಗಾಯತ್ರ್ಯುಪಾಸನೆಯನ್ನೂ, ವೇದಾಧ್ಯಯನವನ್ನೂ, ಔಪಾಸನವನ್ನೂ, ಪಂಚಯಜ್ಞಗಳನ್ನೂ ಮಾಡದವರು ಈ ಕುಂಡಗಳಲ್ಲಿ ಸ್ನಾನಮಾಡುವುದರಿಂದ ಅವುಗಳ ಫಲವನ್ನು ಪಡೆಯುವರು.

೫೭. ನಿತ್ಯಕರ್ಮವನ್ನಾಚರಿಸದ ಇತರ ಪಾತಕಿಗಳು ಈ ಕುಂಡಗಳಲ್ಲಿ ಮಿಂದರೆ ಶುದ್ಧರಾಗುವರು.''

೫೮. ಮಹೇಶ್ವರನು ಸರಸ್ವತೀ ಗಾಯತ್ರಿಯರನ್ನು ಕುರಿತು ಹೀಗೆ ಹೇಳಿ ಅಲ್ಲಿ ಎಲ್ಲರೂ ನೋಡುತ್ತಿರುವಾಗಲೆ ಕ್ಷಣಕಾಲದಲ್ಲಿಯೆ ಮಾಯವಾದನು.

೫೯. ಎಲೈ ಬ್ರಾಹ್ಮಣೋತ್ತಮರೇ! ತರುವಾಯ ಗಾಯತ್ರೀ ಸರಸ್ವತಿಯರು ಪತಿಯನ್ನು ಪಡೆದು ಅವನೊಡನೆ ಸಂತೋಷದಿಂದ ಬ್ರಹ್ಮಲೋಕಕ್ಕೆ ತೆರಳಿದರು.

ಶ್ರೀ ಸೂತ ಉವಾಚ :—

ಏವಂ ವಃ ಕಥಿತಂ ವಿಪ್ರಾ ಗಂಧಮಾದನಪರ್ವತೇ ।
ಸನ್ನಿಧಾನಂ ಸರಸ್ವತ್ಯಾ ಗಾಯತ್ರ್ಯಾಶ್ಚ ಸಹೇತುಕಂ ॥ ೬೦ ॥
ಯಃ ಶೃಣೋತೀಮಮಧ್ಯಾಯಂ ಪಠತೇ ವಾ ಸಭಕ್ತಿಕಂ ।
ಏತತ್ತೀರ್ಥದ್ವಯಸ್ನಾನಫಲಮಾಪ್ನೋತ್ಯಸಂಶಯಂ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಗಂಧಮಾದನೇ
ಗಾಯತ್ರೀ ಸರಸ್ವತೀ ಸನ್ನಿಧಾನಕಥನಂ"
ನಾಮ ಚತ್ವಾರಿಂಶೋಽಧ್ಯಾಯಃ

---

೬೦. ಶ್ರೀಸೂತನು ಹೇಳುತ್ತಾನೆ:— ಹೀಗೆ ಗಂಧಮಾದನಪರ್ವತದಲ್ಲಿ ಗಾಯತ್ರೀ ಸರಸ್ವತಿಯರ ಸನ್ನಿಧಾನಕ್ಕೆ ಕಾರಣವನ್ನು ನಿಮಗೆ ಹೇಳಿರುವೆನು.

೬೧. ಈ ಅಧ್ಯಾಯವನ್ನು ಭಕ್ತಿಯಿಂದ ಕೇಳುವವನೂ, ಹೇಳುವವನೂ ಈ ಎರಡು ತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವನ್ನು ನಿಶ್ಚಯವಾಗಿಯೂ ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ
"ಗಾಯತ್ರೀ ಸರಸ್ವತೀ ಸನ್ನಿಧಾನಕಥನ"ವೆಂಬ
ನಲವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಚತ್ವಾರಿಂಶೋಽಧ್ಯಾಯಃ

### ಕಾಶ್ಯಪಪಾಪಶಾಂತಿವರ್ಣನಂ

ಶ್ರೀ ಸೂತ ಉವಾಚ :—

ಅಥಾಽತಃ ಸಂಪ್ರವಕ್ಷ್ಯಾಮಿ ಗಾಯತ್ರೀಂ ಚ ಸರಸ್ವತೀಂ ।
ಲಕ್ಷ್ಯೀಕೃತ್ಯ ಕಥಾಮೇಕಾಂ ಪವಿತ್ರಾಂ ದ್ವಿಜಸತ್ತಮಾಃ ॥ ೧ ॥
ಕಶ್ಯಪಾಖ್ಯೋ ದ್ವಿಜಃ ಪೂರ್ವಮಸ್ಮಿಂಸ್ತೀರ್ಥದ್ವಯೇ ಶುಭೇ ।
ಸ್ನಾತ್ವಾಽತಿಮಹತಃ ಪಾಪಾದ್ವಿಮುಕ್ತೋ ನರಕಪ್ರದಾತ್ ॥ ೨ ॥

ಋಷಯ ಊಚುಃ :—

ಮುನೇ ಕಶ್ಯಪನಾಮಾಸಾವಕರೋತ್ಕಿಂ ಹಿ ಪಾತಕಂ ।
ಸ್ನಾತ್ವಾ ತೀರ್ಥದ್ವಯೇಽಪ್ಯತ್ರ ಯಸ್ಮಾನ್ಮುಕ್ತೋಽಭವತ್ಕ್ಷಣಾತ್ ॥ ೩ ॥
ಏತನ್ನಃ ಶ್ರದ್ದಧಾನಾನಾಂ ಬ್ರೂಹಿ ಸೂತ ಕೃಪಾಬಲಾತ್ ।
ತ್ವದ್ವಚೋಽಮೃತತೃಪ್ತಾನಾಂ ನ ಪಿಪಾಸಾಽಪಿ ವಿದ್ಯತೇ ॥ ೪ ॥

ಶ್ರೀ ಸೂತ ಉವಾಚ :—

ಗಾಯತ್ರ್ಯಾಶ್ಚ ಸರಸ್ವತ್ಯಾ ಮಾಹಾತ್ಮ್ಯಪ್ರತಿಪಾದಕಂ ।
ಇತಿಹಾಸಂ ಪ್ರವಕ್ಷ್ಯಾಮಿ ಶೃಣ್ವತಾಂ ಪಾಪನಾಶನಂ ॥ ೫ ॥

---

### ಕನ್ನಡದ ಅನುವಾದ

### ಕಾಶ್ಯಪಪಾಪಶಾಂತಿವರ್ಣನ

೧. ಶ್ರೀಸೂತನು ಹೇಳುತ್ತಾನೆ:—ಎಲೈ ದ್ವಿಜವರ್ಯರೆ! ಬಳಿಕ ಗಾಯತ್ರೀ ಸರಸ್ವತಿಯರನ್ನು ಉದ್ದೇಶಿಸಿದ ಒಂದು ಕಥೆಯನ್ನು ನಿಮಗೆ ಹೇಳುವೆನು.

೨. ಹಿಂದೆ ಕಶ್ಯಪನೆಂಬ ಬ್ರಾಹ್ಮಣನು ಈ ಎರಡು ತೀರ್ಥಗಳಲ್ಲಿಯೂ ಮಿಂದು ಹೆಚ್ಚಾಗಿ ನರಕವನ್ನೀಯುವ ಅತ್ಯಂತ ಪಾಪದಿಂದ ಮುಕ್ತನಾಗಿರುವನು.

೩. ಋಷಿಗಳು ಕೇಳುತ್ತಾರೆ:—"ಮುನಿಯೆ! ಕಶ್ಯಪಬ್ರಾಹ್ಮಣನು ಏನು ಪಾಪವನ್ನೆಸಗಿದನು. ಈ ಎರಡು ತೀರ್ಥಗಳಲ್ಲಿ ಮಿಂದು ಕೂಡಲೆ ಯಾವ ಪಾಪದಿಂದ ಮುಕ್ತನಾದನು ?

೪. ಸೂತ! ಶ್ರದ್ಧೆಯಿಂದ ಕೇಳುವ ನಮಗೆ ದಯೆಯಿಂದ ಇದನ್ನು ಹೇಳು. ನಿನ್ನ ವಚನವೆಂಬ ಅಮೃತದಿಂದ ತೃಪ್ತಿಗೊಂಡವರಿಗೆ ಬಾಯಾರಿಕೆಯೂ ಇರುವುದಿಲ್ಲ."

೫. ಶ್ರೀಸೂತನು ಹೇಳುತ್ತಾನೆ:—ಗಾಯತ್ರೀ ಸರಸ್ವತಿಯರ ಮಾಹಾತ್ಮೆಯನ್ನು ಬೋಧಿಸುವುದೂ, ಕೇಳುವವರ ಪಾಪವನ್ನು ನೀಗಿಸುವುದೂ ಆಗಿರುವ ಈ ಕಥೆಯನ್ನು ಹೇಳುವೆನು.

ಅಭಿಮನ್ಯುಸುತೋ ರಾಜಾ ಪರೀಕ್ಷಿನ್ನಾಮ ನಾಮತಃ ।
ಅಧ್ಯಾಸ್ತೇ ಹಾಸ್ತಿನಪುರಂ ಪಾಲಯನ್ಧರ್ಮತೋ ಮಹೀಂ ॥ ೬ ॥
ಸ ರಾಜಾ ಜಾತು ವಿಪಿನೇ ಚಚಾರ ಮೃಗಯಾರತಃ ।
ಷಷ್ಟಿವರ್ಷವಯಾ ಭೂಪಃ ಕ್ಷುತ್ತೃಷ್ಣಾಪರಿಪೀಡಿತಃ ॥ ೭ ॥
ನಷ್ಟಮೇಕಂ ಸ ವಿಪಿನೇ ಮಾರ್ಗಯನ್ಮೃಗಮಾದರಾತ್ ।
ಧ್ಯಾನಾರೂಢಂ ಮುನಿಂ ದೃಷ್ಟ್ವಾ ಪ್ರಾಹ ತಂ ಚೀರವಾಸಸಂ ॥ ೮ ॥
ಮಯಾ ಬಾಣೇನ ವಿಪಿನೇ ಮೃಗೋ ವಿದ್ಧೋಽಧುನಾ ಮುನೇ ।
ದೃಷ್ಟಃ ಸ ಕಿಂ ತ್ವಯಾ ವಿದ್ವನ್ನಿದ್ರುತೋ ಭಯಕಾತರಃ ॥ ೯ ॥
ಸಮಾಧಿನಿಷ್ಠೋ ಮೌನಿತ್ವಾನ್ನ ಕಿಂಚಿದಪಿ ಸೋಽಬ್ರವೀತ್ ।
ತತೋ ಧನುರಟನ್ಯಾಽಸೌ ಸ್ಕಂಧೇ ತಸ್ಯ ಮಹಾಮುನೇಃ ॥ ೧೦ ॥
ನಿಧಾಯ ಮೃತಸರ್ಪಂ ತು ಕುಪಿತಃ ಸ್ವಪುರಂ ಯಯೌ ।
ಮುನೇಸ್ತಸ್ಯ ಸುತಃ ಕಶ್ಚಿಚ್ಛೃಂಗೀನಾಮ ಬಭೂವ ವೈ ॥ ೧೧ ॥
ಸಖಾ ತಸ್ಯ ಕೃಶಾಖ್ಯೋಽಭೂಚ್ಛೃಂಗಿಣೋ ದ್ವಿಜಸತ್ತಮಾಃ ।
ಸಖಾಯಂ ಶೃಂಗಿಣಂ ಪ್ರಾಹ ಕೃಶಾಖ್ಯಃ ಸ ಸಖಾ ತತಃ ॥ ೧೨ ॥

---

೬. ಅಭಿಮನ್ಯುವಿನ ಮಗನಾದ ಪರೀಕ್ಷಿತ್ತೆಂಬ ರಾಜನು ಧರ್ಮದಿಂದ ಧರೆಯನ್ನು ಕಾಪಾಡುತ್ತ ಹಸ್ತಿನಾಪುರದಲ್ಲಿದ್ದನು.

೭. ಒಂದಾನೊಂದು ದಿನ ಅರವತ್ತುವರ್ಷ ವಯಸ್ಸಿನ ಆ ರಾಜನು ಕಾಡಿನಲ್ಲಿ ಬೇಟೆಯಾಡುತ್ತ ಹಸಿವು ಬಾಯಾರಿಕೆಯಿಂದ ಪೀಡಿತನಾಗಿ ಸಂಚರಿಸಿದನು.

೮. ಅವನು ವನದಲ್ಲಿ ಕಳೆದುಹೋದ ಜಿಂಕೆಯನ್ನು ಕುತೂಹಲದಿಂದ ಹುಡುಕುತ್ತ ನಾರುಬಟ್ಟೆಯನ್ನುಟ್ಟು ಧ್ಯಾನಾಸಕ್ತನಾದ ಶಮೀಕ ಮುನಿಯನ್ನು ಕಂಡು ಇಂತೆಂದನು.

೯. "ಮುನಿಯೆ! ನಾನೀಗ ಕಾಡಿನಲ್ಲಿ ಬಾಣದಿಂದ ಒಂದು ಮೃಗವನ್ನು ಹೊಡೆದೆನು. ಭಯದಿಂದ ಓಡಿಹೋದ ಅದನ್ನು ನೀನು ನೋಡಿದೆಯಾ?"

೧೦–೧೧. ಧ್ಯಾನನಿರತನಾದ ಆ ಮುನಿಯು ಮೌನವ್ರತವನ್ನಾಚರಿಸಿದ್ದುದರಿಂದ ಏನನ್ನೂ ಹೇಳಲಿಲ್ಲ. ಅದರಿಂದ ಕುಪಿತನಾದ ಆ ರಾಜನು ಬಿಲ್ಲಿನ ತುದಿಯಿಂದ ಒಂದು ಸತ್ತ ಸರ್ಪವನ್ನು ಆ ಮಹರ್ಷಿಯ ಹೆಗಲಿನಲ್ಲಿರಿಸಿ ತನ್ನ ಪಟ್ಟಣಕ್ಕೆ ಹೋದನು. ಆ ಮುನಿಗೆ ಶೃಂಗಿಯೆಂಬ ಒಬ್ಬ ಮಗನಿದ್ದನು.

೧೨. ಎಲೈ ಬ್ರಾಹ್ಮಣವರ್ಯರೆ! ಆ ಶೃಂಗಿಗೆ ಕೃಶನೆಂಬ ಒಬ್ಬ ಮಿತ್ರನಿದ್ದನು. ಅವನು ಮಿತ್ರನಾದ ಶೃಂಗಿಯನ್ನು ಕುರಿತು ಇಂತೆಂದನು.

ಪಿತಾ ತವ ಮೃತಂ ಸರ್ಪಂ ಸ್ಕಂಧೇನ ವಹತೇಽಧುನಾ ।
ಮಾಽಭೂದ್ದರ್ಪಸ್ತವ ಸಖೇ ಮಾ ಕೃಥಾಸ್ತ್ವಂ ಮುದಂ ವೃಥಾ ॥ ೧೩ ॥
ಸೋಽವದತ್ಕುಪಿತಃ ಶೃಂಗೀ ದಿತ್ಸುಶ್ಶಾಪಂ ನೃಪಾಯ ವೈ ।
ಮತ್ತಾತೇ ಶವಸರ್ಪಂ ಯೋ ನ್ಯಸ್ತವಾನ್ಮೂಢಚೇತನಃ ॥ ೧೪ ॥
ಸ ಸಪ್ತರಾತ್ರಾನ್ಮ್ರಿಯತಾಂ ಸಂದಷ್ಟಸ್ತಕ್ಷಕಾಽಹಿನಾ ।
ಶಶಾಪೈವಂ ಮುನಿಸುತಃ ಸೌಭದ್ರೇಯಂ ಪರೀಕ್ಷಿತಂ ॥ ೧೫ ॥
ಶಮೀಕಾಖ್ಯಃ ಪಿತಾ ತಸ್ಯ ಶ್ರುತ್ವಾ ಶಪ್ತಂ ಸುತೇನ ತಂ ।
ನೃಪಂ ಪ್ರೋವಾಚ ತನಯಂ ಶೃಂಗಿಣಂ ಮುನಿಪುಂಗವಃ ॥ ೧೬ ॥
ರಕ್ಷಕಂ ಸರ್ವಲೋಕಾನಾಂ ನೃಪಂ ಕಿಂ ಶಪ್ತವಾನಸಿ ।
ಅರಾಜಕೇ ವಯಂ ಲೋಕೇ ಸ್ಥಾಸ್ಯಾಮಃ ಕಥಮಂಜಸಾ ॥ ೧೭ ॥
ಕ್ರೋಧೇನ ಪಾತಕಮಭೂನ್ನ ತ್ವಯಾ ಪ್ರಾಪ್ಯತೇ ಸುಖಂ ।
ಯಃ ಸಮುತ್ಪಾದಿತಂ ಕೋಪಂ ಕ್ಷಮಯೈವ ನಿರಸ್ಯತಿ ॥ ೧೮ ॥
ಇಹ ಲೋಕೇ ಪರತ್ರಾಸಾವತ್ಯಂತಂ ಸುಖಮೇಧತೇ ।
ಕ್ಷಮಾಯುಕ್ತಾ ಹಿ ಪುರುಷಾ ಲಭಂತೇ ಶ್ರೇಯ ಉತ್ತಮಂ ॥ ೧೯ ॥
ತತಃ ಶಮೀಕಃ ಸ್ವಂ ಶಿಷ್ಯಂ ಪ್ರಾಹ ಗೌರಮುಖಾಽಭಿಧಂ ।
ಭೋ ಗೌರಮುಖ ಗತ್ವಾ ತ್ವಂ ವದ ಭೂಪಂ ಪರೀಕ್ಷಿತಂ ॥ ೨೦ ॥

---

೧೩. "ನಿನ್ನ ತಂದೆಯು ಈಗ ಸತ್ತಹಾವನ್ನು ಹೆಗಲಿನಲ್ಲಿ ಹೊತ್ತಿದ್ದಾನೆ. ಮಿತ್ರ! ನೀನು ನಿಷ್ಫಲವಾಗಿ ಅಹಂಕಾರಪಡಬೇಡ. ನಿನ್ನ ಮದದಿಂದ ಪ್ರಯೋಜನವಿಲ್ಲ."

೧೪–೧೫. ಆ ಶೃಂಗಿಯು ಕೋಪಗೊಂಡು ರಾಜನಿಗೆ ಶಾಪವನ್ನು ಕೊಡ ಬಯಸಿ 'ನನ್ನ ತಂದೆಯ ಭುಜದಲ್ಲಿ ಸತ್ತ ಸರ್ಪವನ್ನಿಟ್ಟ ಮೂಢನು ತಕ್ಷಕನಿಂದ ಕಡಿಯಲ್ಪಟ್ಟು ಏಳು ರಾತ್ರಿಗಳಲ್ಲಿ ಸಾಯಲಿ' ಎಂದು ಅಭಿಮನ್ಯುವಿನ ಮಗನಾದ ಆ ಪರೀಕ್ಷಿದ್ರಾಜನಿಗೆ ಶಾಪಕೊಟ್ಟನು.

೧೬. ಅನಂತರ ಮಗನು ರಾಜನನ್ನು ಶಪಿಸಿದುದನ್ನು ಕೇಳಿ ಅವನ ತಂದೆಯಾದ ಶಮೀಕನು ಶೃಂಗಿಯನ್ನು ಕುರಿತು ಇಂತೆಂದನು.

೧೭. "ಸಮಸ್ತ ಲೋಕಗಳನ್ನೂ ಕಾಪಾಡುವ ರಾಜನನ್ನು ಏಕೆ ಶಪಿಸಿರುವೆ? ರಾಜನಿಲ್ಲದ ಲೋಕದಲ್ಲಿ ನಾವು ಸುಖವಾಗಿ ಬಾಳುವುದೆಂತು?

೧೮–೧೯. ಸಿಟ್ಟಿನಿಂದ ಈ ಪಾಪವುಂಟಾಯಿತು. ನಿನಗೆ ಸುಖವಿಲ್ಲ. ಬಂದ ಕೋಪವನ್ನು ಸಹನೆಯಿಂದ ತಡೆಯುವವನು ಇಹಪರಲೋಕಗಳಲ್ಲಿ ಸುಖಿಯಾಗುವನು. ಸಹನೆಯುಳ್ಳ ಮಾನವರು ಉತ್ತಮ ಶ್ರೇಯಸ್ಸನ್ನು ಪಡೆಯುವರು."

೨೦–೨೧. ಬಳಿಕ ಶಮೀಕನು ಗೌರಮುಖನೆಂಬ ತನ್ನ ಶಿಷ್ಯನನ್ನು ಕುರಿತು

ಇಮಂ ಶಾಪಂ ಮತ್ಸುತೋಕ್ತಂ ತಕ್ಷಕಾಽಹಿವಿದಂಶನಂ ।
ಪುನರಾಯಾಹಿ ಶೀಘ್ರಂ ತ್ವಂ ಮತ್ಸಮೀಪೇ ಮಹಾಮತೇ ॥ ೨೦ ॥
ಏವಮುಕ್ತಃ ಶಮೀಕೇನ ಯಯೌ ಗೌರಮುಖೋ ನೃಪಂ ।
ಸಮೇತ್ಯ ಚಾಽಬ್ರವೀದ್ಭೂಪಂ ಸೌಭದ್ರೇಯಂ ಪರೀಕ್ಷಿತಂ ॥ ೨೨ ॥
ದೃಷ್ಟ್ವಾ ಸರ್ಪಂ ಪಿತುಃ ಸ್ಕಂಧೇ ತ್ವಯಾ ವಿನಿಹಿತಂ ಮೃತಂ ।
ಶಮೀಕಸ್ಯ ಸುತಃ ಶೃಂಗೀ ಶಶಾಪ ತ್ವಾಂ ರುಷಾನ್ವಿತಃ ॥ ೨೩ ॥
ಏತದ್ದಿನಾತ್ಸಪ್ತಮೇಽಹ್ನಿ ತಕ್ಷಕೇಣ ಮಹಾಽಹಿನಾ ।
ದಷ್ಟೋ ವಿಷಾಽಗ್ನಿನಾ ದಗ್ಧೋ ಭೂಯಾದಾಶ್ವಭಿಮನ್ಯುಜಃ ॥ ೨೪ ॥
ಏವಂ ಶಶಾಪ ತ್ವಾಂ ರಾಜನ್ಶೃಂಗೀ ತಸ್ಯ ಮುನೇಃ ಸುತಃ ।
ಏತದ್ವಕ್ತುಂ ಪಿತಾ ತಸ್ಯ ಪ್ರಾಹಿಣೋನ್ಮಾಂ ತ್ವದಂತಿಕಂ ॥ ೨೫ ॥
ಇತೀರಯಿತ್ವಾ ತಂ ಭೂಪಮಾಶು ಗೌರಮುಖೋ ಯಯೌ ।
ಗತೇ ಗೌರಮುಖೇ ಪಶ್ಚಾದ್ರಾಜಾ ಶೋಕಪರಾಯಣಃ ॥ ೨೬ ॥
ಅಭ್ರಂಲಿಹಮಥೋತ್ತುಂಗಮೇಕಸ್ತಂಭಂ ಸುವಿಸ್ತೃತಂ ।
ಮಧ್ಯೇಗಂಗಂ ವ್ಯತನುತ ಮಂಡಪಂ ನೃಪಪುಂಗವಃ ॥ ೨೭ ॥

---

ಹೀಗೆಂದನು. "ಗೌರಮುಖ! ನೀನು ಪರೀಕ್ಷಿದ್ರಾಜನ ಬಳಿಗೆ ಹೋಗಿ ನನ್ನ ಮಗನು ಕೊಟ್ಟ ತಕ್ಷಕಸರ್ಪದ ಕಚ್ಚುವಿಕೆಯ ರೂಪವಾದ ಶಾಪವನ್ನು ಅವನಿಗೆ ಹೇಳು. ಮರಳಿ ನೀನು ಶೀಘ್ರವಾಗಿ ನನ್ನೆಡೆಗೆ ಬಾ."

೨೨. ಶಮೀಕನು ಹೀಗೆನ್ನಲು, ಗೌರಮುಖನು ಪರೀಕ್ಷಿದ್ರಾಜನ ಬಳಿಗೆ ಹೋಗಿ ಇಂತೆಂದನು.

೨೩. "ಅರಸ! ನೀನು ಶಮೀಕನ ಭುಜದಲ್ಲಿರಿಸಿದ ಸತ್ತ ಸರ್ಪವನ್ನು ಮಗನಾದ ಶೃಂಗಿಯು ಕಂಡು ಸಿಟ್ಟಾಗಿ ನಿನ್ನನ್ನು ಹೀಗೆ ಶಪಿಸಿರುವನು.

೨೪. 'ಅಭಿಮನ್ಯುವಿನ ಪುತ್ರನಾದ ಪರೀಕ್ಷಿತನು ಇಂದಿನಿಂದ ಏಳನೆ ದಿನದಲ್ಲಿ ತಕ್ಷಕ ಸರ್ಪದಿಂದ ಕಡಿಯಲ್ಪಟ್ಟು ಜಾಗ್ರತೆಯಾಗಿ ವಿಷಾಗ್ನಿಯಿಂದ ದಗ್ಧನಾಗಲಿ.'

೨೫. ದೊರೆಯೆ! ಆ ಮುನಿಯ ಮಗನಾದ ಶೃಂಗಿಯು ನಿನ್ನನ್ನು ಹೀಗೆ ಶಪಿಸಿದ್ದಾನೆ. ಇದನ್ನು ನಿನಗೆ ಹೇಳಲು ಅವನ ತಂದೆಯಾದ ಶಮೀಕನು ನಿನ್ನ ಬಳಿಗೆ ನನ್ನನ್ನು ಕಳುಹಿಸಿರುತ್ತಾನೆ."

೨೬-೨೭. ಗೌರಮುಖನು ರಾಜನನ್ನು ಕುರಿತು ಹೀಗೆ ಹೇಳಿ ಹೊರಟು ಹೋದನು. ಅನಂತರ ದೊರೆಯು ದುಃಖಿತನಾಗಿ ಗಂಗೆಯ ನಡುವೆ ಒಂದೇ ಕಂಬವುಳ್ಳುದೂ, ವಿಶಾಲವಾದುದೂ, ಎತ್ತರವಾದುದೂ ಆಗಿರುವ ಒಂದು ಮಂಟಪವನ್ನು ಕಟ್ಟಿಸಿದನು.

ಮಹಾಗಾರುಡಮಂತ್ರಜ್ಞೈರೌಷಧಜ್ಞೈಶ್ಚಿಕಿತ್ಸಕೈಃ ।
ತಕ್ಷಕಸ್ಯ ವಿಷಂ ಹಂತುಂ ಯತ್ನಂ ಕುರ್ವನ್ಸಮಾಹಿತಃ ॥ ೨೮ ॥
ಅನೇಕದೇವಬ್ರಹ್ಮರ್ಷಿರಾಜರ್ಷಿಪ್ರವರಾನ್ವಿತಃ ।
ಆಸ್ತೇ ತಸ್ಮಿನ್ನೃಪಸ್ತುಂಗೇ ಮಂಡಪೇ ವಿಷ್ಣುಭಕ್ತಿಮಾನ್ ॥ ೨೯ ॥
ತಸ್ಮಿನ್ನವಸರೇ ವಿಪ್ರಃ ಕಾಶ್ಯಪೋ ಮಾಂತ್ರಿಕೋತ್ತಮಃ ।
ರಾಜಾನಂ ರಕ್ಷಿತುಂ ಪ್ರಾಯಾತ್ತಕ್ಷಕಸ್ಯ ಮಹಾವಿಷಾತ್ ॥ ೩೦ ॥
ಸಪ್ತಮೇಽಹನಿ ವಿಪ್ರೇಂದ್ರೋ ದರಿದ್ರೋ ಧನಕಾಮುಕಃ ।
ಅತ್ರಾಂತರೇ ತಕ್ಷಕೋಽಪಿ ವಿಪ್ರರೂಪೀ ಸಮಾಯಯೌ ॥ ೩೧ ॥
ಮಧ್ಯೇಮಾರ್ಗಂ ವಿಲೋಕ್ಯಾಥ ಕಶ್ಯಪಂ ಪ್ರತ್ಯಭಾಷತ ।
ಬ್ರಾಹ್ಮಣ ತ್ವಂ ಕುತ್ರ ಯಾಸಿ ವದ ಮೇಽದ್ಯ ಮಹಾಮುನೇ ॥ ೩೨ ॥
ಇತಿ ಪೃಷ್ಟಸ್ತದಾಽವಾದೀತ್ಕಾಶ್ಯಪಸ್ತಕ್ಷಕಂ ದ್ವಿಜಾಃ ।
ಪರೀಕ್ಷಿತಂ ಮಹಾರಾಜಂ ತಕ್ಷಕೋಽದ್ಯ ವಿಷಾಗ್ನಿನಾ ॥ ೩೩ ॥
ದಕ್ಷ್ಯತೇ ತಂ ಶಮಯಿತುಂ ತತ್ಸಮೀಪಮುಪೈಮ್ಯಹಂ ।
ಇತ್ಯುಕ್ತವಂತಂ ತಂ ವಿಪ್ರಂ ತಕ್ಷಕಃ ಪುನರಬ್ರವೀತ್ ॥ ೩೪ ॥
ತಕ್ಷಕೋಽಹಂ ದ್ವಿಜಶ್ರೇಷ್ಠ ಮಯಾ ದಷ್ಟಶ್ಚಿಕಿತ್ಸಿತುಂ ।
ನ ಶಕ್ಯೋಽಬ್ದಶತೇನಾಽಪಿ ಮಹಾಮಂತ್ರಾಽಯುತೈರಪಿ ॥ ೩೫ ॥

---

೨೮–೨೯. ಅದರಲ್ಲಿ ಮಹಾ ಗರುಡಮಂತ್ರ, ಔಷಧ ಇವುಗಳನ್ನರಿತ ವೈದ್ಯರಿಂದ ತಕ್ಷಕನ ವಿಷವನ್ನು ನಿವಾರಿಸುವುದಕ್ಕೆ ಪ್ರಯತ್ನಿಸುತ್ತ ಬಹು ಮಂದಿ ದೇವರ್ಷಿಗಳು, ಬ್ರಹ್ಮರ್ಷಿಗಳು, ರಾಜರ್ಷಿಗಳು ಇವರಿಂದ ಸಹಿತನೂ, ವಿಷ್ಣುಭಕ್ತಿಯುಳ್ಳವನೂ ಆಗಿ ವಾಸಿಸುತ್ತಿದ್ದನು.

೩೦. ಆ ಸಮಯದಲ್ಲಿ ಕಾಶ್ಯಪನೆಂಬ ಒಬ್ಬ ಮಾಂತ್ರಿಕಶ್ರೇಷ್ಠನಾದ ಬ್ರಾಹ್ಮಣನು ತಕ್ಷಕನ ವಿಷದಿಂದ ರಾಜನನ್ನು ರಕ್ಷಿಸಲು ಅಲ್ಲಿಗೆ ಹೊರಟನು.

೩೧. ಹಣದ ಆಶೆಯುಳ್ಳವನೂ, ಬಡವನೂ ಆದ ಆ ಬ್ರಾಹ್ಮಣನು ಏಳನೆ ದಿನ ಅಲ್ಲಿಗೆ ಹೊರಡಲು ತಕ್ಷಕನೂ ಬ್ರಾಹ್ಮಣ ವೇಷದಿಂದ ಅಲ್ಲಿಗೆ ಬಂದನು.

೩೨. ಆ ತಕ್ಷಕನು ದಾರಿಯ ನಡುವೆ ಕಶ್ಯಪನನ್ನು ಕಂಡು "ಬ್ರಾಹ್ಮಣ! ನೀನು ಎಲ್ಲಿಗೆ ಹೋಗುವೆ? ಹೇಳು" ಎಂದು ಕೇಳಿದನು.

೩೩–೩೪. ಬ್ರಾಹ್ಮಣರೆ! ತಕ್ಷಕನು ಹೀಗೆ ಕೇಳಲು ಕಶ್ಯಪನು ಅವನನ್ನು ಕುರಿತು, "ಈಗ ಪರೀಕ್ಷಿದ್ರಾಜನನ್ನು ತಕ್ಷಕನು ವಿಷಾಗ್ನಿಯಿಂದ ಸುಡುವನು. ಆ ವಿಷವನ್ನು ಪರಿಹರಿಸಲು ನಾನು ಆ ರಾಜನ ಬಳಿಗೆ ಹೋಗುತ್ತಿದ್ದೇನೆ" ಎಂದನು. ತಕ್ಷಕನು ಅವನನ್ನು ಕುರಿತು ಮರಳಿ ಇಂತೆಂದನು.

೩೫. "ಬ್ರಾಹ್ಮಣೋತ್ತಮ! ನಾನೇ ತಕ್ಷಕನು. ನಾನು ಕಚ್ಚಿದುದನ್ನು

ಚಿಕಿತ್ಸಿತುಂ ಚೇನ್ಮದ್ದಷ್ಟಂ ಶಕ್ತಿರಸ್ತಿ ತವಾಽಧುನಾ ।
ಅನೇಕಯೋಜನೋಚ್ಛ್ರಾಯಮಿಮಂ ವಟತರುಂ ತ್ವಹಂ ॥ ೩೬ ॥
ದಶಾಮ್ಯುಜ್ಜೀವಯೈನಂ ತ್ವಂ ಸಮರ್ಥೋಽಸಿ ತತೋ ಭವಾನ್ ।
ಇತೀರಯಿತ್ವಾ ತಂ ವೃಕ್ಷಮದಶತ್ತಕ್ಷಕಸ್ತದಾ ॥ ೩೭ ॥
ಅಭವದ್ಭಸ್ಮಸಾತ್ಸೋಽಪಿ ವೃಕ್ಷೋಽತ್ಯಂತಂ ಸಮುಚ್ಛ್ರಿತಃ ।
ಪೂರ್ವಮೇವ ನರಃ ಕಶ್ಚಿತ್ತಂ ವೃಕ್ಷಮಧಿರೂಢವಾನ್ ॥ ೩೮ ॥
ತಕ್ಷಕಸ್ಯ ವಿಷೋಲ್ಕಾಭಿಃ ಸೋಽಪಿ ದಗ್ಧೋಽಭವತ್ತದಾ ।
ತಂ ನರಂ ನ ವಿಜಿಜ್ಞಾತೇ ತೌ ಚ ಕಾಶ್ಯಪತಕ್ಷಕೌ ॥ ೩೯ ॥
ಕಾಶ್ಯಪಃ ಪ್ರತಿಜಜ್ಞೇಽಥ ತಕ್ಷಕಸ್ಯಾಽಪಿ ಶೃಣ್ವತಃ ।
ಮನ್ಮಂತ್ರಶಕ್ತಿಂ ಪಶ್ಯಂತು ಸರ್ವೇ ವಿಪ್ರಾ ಹಿ ನೋಽಧುನಾ ॥ ೪೦ ॥
ಇತೀರಯಿತ್ವಾ ತಂ ವೃಕ್ಷಂ ಭಸ್ಮೀಭೂತಂ ವಿಷಾಽಗ್ನಿನಾ ।
ಅಜೀವಯನ್ಮಂತ್ರಶಕ್ತ್ಯಾ ಕಾಶ್ಯಪೋ ಮಾಂತ್ರಿಕೋತ್ತಮಃ ॥ ೪೧ ॥
ನರೋಽಪಿ ತೇನ ವೃಕ್ಷೇಣ ಸಾಕಮುಜ್ಜೀವಿತೋಽಭವತ್ ।
ಅಥಾಽಬ್ರವೀತ್ತಕ್ಷಕಸ್ತಂ ಕಾಶ್ಯಪಂ ಮಂತ್ರಕೋವಿದಂ ॥ ೪೨ ॥

---

ಚಿಕಿತ್ಸೆಮಾಡಲು ಹತ್ತುಸಾವಿರ ಮಹಾ ಮಂತ್ರಗಳಿಂದ ನೂರುವರ್ಷಕಾಲ ಪ್ರಯತ್ನಿಸಿದರೂ ಸಾಧ್ಯವಿಲ್ಲ.

೩೬–೩೭. ನಾನು ಕಚ್ಚಿದುದನ್ನು ವಾಸಿಮಾಡಲು ನಿನಗೆ ಶಕ್ತಿಯಿದ್ದರೆ ಈಗ ನಾನು ಅನೇಕ ಗಾವುದ ಎತ್ತರವಾದ ಈ ಆಲದಮರವನ್ನು ಕಚ್ಚುತ್ತೇನೆ. ಇದನ್ನು ಬದುಕಿಸು. ಆಗ ನೀನು ಶಕ್ತನೇ ಸರಿ" ಎಂದು ಹೇಳಿ ಆ ಮರವನ್ನು ಕಚ್ಚಿದನು.

೩೮–೩೯. ಆಗ ಬಹಳ ಎತ್ತರವಾದ ಆ ಮರವು ಸುಟ್ಟು ಬೂದಿಯಾಯಿತು. ಆ ಮರವನ್ನು ತಕ್ಷಕನು ಕಚ್ಚುವುದಕ್ಕಿಂತ ಮುಂಚೆಯೇ ಹತ್ತಿದ್ದ ಒಬ್ಬ ಮನುಷ್ಯನೂ ತಕ್ಷಕನ ವಿಷಜ್ವಾಲೆಯಿಂದ ಸುಟ್ಟುಹೋದನು. ಆದರೆ ಅವನನ್ನು ಆ ತಕ್ಷಕ ಕಾಶ್ಯಪರು ಅರಿತಿರಲಿಲ್ಲ.

೪೦. ಬಳಿಕ ಕಾಶ್ಯಪನು ತಕ್ಷಕನು ಕೇಳುತ್ತಿರುವಾಗಲೆ 'ಈಗ ನನ್ನ ಮಂತ್ರಶಕ್ತಿಯನ್ನು ನೋಡಿರಿ' ಎಂದು ಪ್ರತಿಜ್ಞೆಮಾಡಿದನು.

೪೧. ಮಾಂತ್ರಿಕಶ್ರೇಷ್ಠನಾದ ಅವನು ಹೀಗೆ ಪ್ರತಿಜ್ಞೆಮಾಡಿ ವಿಷಾಗ್ನಿಯಿಂದ ಬೂದಿಯಾದ ಆ ಆಲದಮರವನ್ನು ಮಂತ್ರಶಕ್ತಿಯಿಂದ ಬದುಕಿಸಿದನು.

೪೨. ಸುಟ್ಟುಹೋದ ಆ ಮನುಷ್ಯನೂ ಮರದೊಡನೆ ಬದುಕಿದನು. ಅನಂತರ ತಕ್ಷಕನು ಮಂತ್ರದಲ್ಲಿ ನಿಪುಣನಾದ ಆ ಕಾಶ್ಯಪನನ್ನು ಕುರಿತು ಇಂತೆಂದನು.

ಯಥಾ ನ ಮುನಿವಾಙ್ಮಿಥ್ಯಾ ಭವೇದೇವಂ ಕುರು ದ್ವಿಜ ।
ಯತ್ತೇ ರಾಜಾ ಧನಂ ದದ್ಯಾತ್ತತೋಽಪಿ ದ್ವಿಗುಣಂ ಧನಂ ॥ ೪೩ ॥
ದದಾಮ್ಯಹಂ ನಿವರ್ತಸ್ವ ಶೀಘ್ರಮೇವ ದ್ವಿಜೋತ್ತಮ ।
ಇತ್ಯುಕ್ತ್ವಾಽನರ್ಘ್ಯರತ್ನಾನಿ ತಸ್ಮೈ ದತ್ವಾ ಸ ತಕ್ಷಕಃ ॥ ೪೪ ॥
ನ್ಯವರ್ತಯತ್ಕಾಶ್ಯಪಂ ತಂ ಬ್ರಾಹ್ಮಣಂ ಮಂತ್ರಕೋವಿದಂ ।
ಅಲ್ಪಾಯುಷಂ ನೃಪಂ ಮತ್ವಾ ಜ್ಞಾನದೃಷ್ಟ್ಯಾ ಸ ಕಾಶ್ಯಪಃ ॥ ೪೫ ॥
ಸ್ವಾಶ್ರಮಂ ಪ್ರಯಯೌ ತೂಷ್ಣೀಂ ಲಬ್ಧರತ್ನಶ್ಚ ತಕ್ಷಕಾತ್ ।
ಸೋಽಬ್ರವೀತ್ತಕ್ಷಕಃ ಸರ್ವಾನ್ಸರ್ಪಾನಾಹೂಯ ತತ್ಕ್ಷಣೇ ॥ ೪೬ ॥
ಯೂಯಂ ತಂ ನೃಪತಿಂ ಪ್ರಾಪ್ಯ ಮುನೀನಾಂ ವೇಷಧಾರಿಣಃ ।
ಉಪಹಾರಫಲಾನ್ಯಾಶು ಪ್ರಯಚ್ಛತ ಪರೀಕ್ಷಿತೇ ॥ ೪೭ ॥
ತಥೇತ್ಯುಕ್ತ್ವಾ ಸರ್ವಸರ್ಪಾ ದದೂ ರಾಜ್ಞೇ ಫಲಾನ್ಯಮೀ ।
ತಕ್ಷಕೋಽಪಿ ತದಾ ತತ್ರ ಕಸ್ಮಿಂಶ್ಚಿದ್ಬದರೀಫಲೇ ॥ ೪೮ ॥
ಕೃಮಿವೇಷಧರೋ ಭೂತ್ವಾ ವ್ಯತಿಷ್ಠದ್ದಂಶಿತುಂ ನೃಪಂ ।
ಅಥ ರಾಜಾ ಪ್ರದತ್ತಾನಿ ಸರ್ಪೈರ್ಬ್ರಾಹ್ಮಣರೂಪಕೈಃ ॥ ೪೯ ॥
ಪರೀಕ್ಷಿನ್ಮಂತ್ರವೃದ್ಧೇಭ್ಯೋ ದತ್ವಾ ಸರ್ವಫಲಾನ್ಯಪಿ ।
ಕೌತೂಹಲೇನ ಜಗ್ರಾಹ ಸ್ಥೂಲಮೇಕಂ ಫಲಂ ಕರೇ ॥ ೫೦ ॥

---

೪೩–೪೭. "ಅಯ್ಯಾ ಬ್ರಾಹ್ಮಣನೆ! ನೀನು ಮುನಿಕುಮಾರನ ಮಾತು ಸುಳ್ಳಾಗದಂತೆ ಮಾಡು. ಪರೀಕ್ಷಿದ್ರಾಜನು ಕೊಡುವ ಹಣಕ್ಕಿಂತ ಇಮ್ಮಡಿಯಾದ ಹಣವನ್ನು ನಾನು ನಿನಗೆ ಕೊಡುವೆನು. ಕೂಡಲೆ ಹಿಂದಿರುಗು." ಹೀಗೆಂದು ತಕ್ಷಕನು ಆ ದ್ವಿಜನಿಗೆ ಅಮೂಲ್ಯ ರತ್ನಗಳನ್ನಿತ್ತು ಮಂತ್ರನಿಪುಣನಾದ ಅವನನ್ನು ಹಿಂದಿರುಗಿಸಿದನು. ಆ ಕಾಶ್ಯಪನು ಜ್ಞಾನದೃಷ್ಟಿಯಿಂದ ರಾಜನು ಅಲ್ಪಾಯುವೆಂದರಿತು ತಕ್ಷಕನಿತ್ತ ರತ್ನಗಳನ್ನು ತೆಗೆದುಕೊಂಡು ತನ್ನ ಆಶ್ರಮಕ್ಕೆ ಸುಮ್ಮನೆ ತೆರಳಿದನು. ಕೂಡಲೆ ತಕ್ಷಕನು ಸಮಸ್ತ ಸರ್ಪಗಳನ್ನು ಕರೆದು, "ನೀವೆಲ್ಲ ಮುನಿಗಳ ವೇಷಗಳನ್ನು ಧರಿಸಿ ಪರೀಕ್ಷಿದ್ರಾಜನಿಗೆ ಕಾಣಿಕೆಗಳಾಗಿ ಹಣ್ಣುಗಳನ್ನು ಕೊಡಿರಿ" ಎಂದನು.

೪೮–೫೦. ಸರ್ಪಗಳೆಲ್ಲ ಅವನ ಮಾತಿನಂತೆ ಅರಸನಿಗೆ ಫಲಗಳನ್ನರ್ಪಿಸಿದುವು. ತಕ್ಷಕನು ಆಗ ರಾಜನನ್ನು ಕಚ್ಚುವುದಕ್ಕಾಗಿ ಒಂದು ಎಲಚೀ ಹಣ್ಣಿನಲ್ಲಿ ಕ್ರಿಮಿಯಾಗಿದ್ದನು. ಅನಂತರ ದೊರೆಯು ಬ್ರಾಹ್ಮಣರೂಪರಾದ ಹಾವುಗಳಿಂದ ಕೊಟ್ಟ ಹಣ್ಣುಗಳನ್ನು ಮಂತ್ರವೃದ್ಧರಾದ ಬ್ರಾಹ್ಮಣರಿಗಿತ್ತು ತಾನು ಕುತೂಹಲದಿಂದ ಒಂದು ದೊಡ್ಡ ಹಣ್ಣನ್ನು ಕೈಯಲ್ಲಿ ತೆಗೆದುಕೊಂಡನು.

ಅಸ್ಮಿನ್ನವಸರೇ ಸೂರ್ಯೋಽಪ್ಯಸ್ತಾಚಲಮುಗಾಹತ ।
ಮಿಥ್ಯಾ ಋುಷಿವಚೋ ಮಾಽಭೂದಿತಿ ತತ್ರತ್ಯ ಮಾನವಾಃ ॥ ೫೧ ॥
ಅನ್ಯೋನ್ಯಮುವದನ್ಸರ್ವೇ ಬ್ರಾಹ್ಮಣಾಶ್ಚ ನೃಪಾಸ್ತಥಾ ।
ಏವಂ ವದತ್ಸು ಸರ್ವೇಷು ಫಲೇ ತಸ್ಮಿನ್ನದೃಶ್ಯತ ॥ ೫೨ ॥
ಫಲೇ ರಕ್ತಕೃಮಿಃ ಸರ್ವೈ ರಾಜ್ಞಾ ಚಾಽಪಿ ಪರೀಕ್ಷಿತಾ ।
ಅಯಂ ಕಿಂ ಮಾಂ ದಶೇದದ್ಯ ಕೃಮಿರಿತ್ಯುಕ್ತವಾನ್ನೃಪಃ ॥ ೫೩ ॥
ನಿದಧೇ ತತ್ಫಲಂ ಕರ್ಣೇ ಸಕೃಮಿ ದ್ವಿಜಸತ್ತಮಾಃ ।
ತಕ್ಷಕೋಽಸ್ಮಿನ್ಸ್ಥಿತಃ ಪೂರ್ವಂ ಕೃಮಿರೂಪೀ ಫಲೇ ತದಾ ॥ ೫೪ ॥
ನಿರ್ಗತ್ಯ ತತ್ಫಲಾದಾಶು ನೃಪದೇಹಮವೇಷ್ಟಯತ್ ।
ತಕ್ಷಕಾವೇಷ್ಟಿತೇ ಭೂಪೇ ಪಾರ್ಶ್ವಸ್ಥಾ ದುದ್ರುವುರ್ಭಯಾತ್ ॥ ೫೫ ॥
ಅನಂತರಂ ನೃಪೋ ವಿಪ್ರಾಸ್ತಕ್ಷಕಸ್ಯ ವಿಷಾಽಗ್ನಿನಾ ।
ದಗ್ಧೋಽಭೂದ್ಭಸ್ಮಸಾದಾಶು ಸಪ್ರಾಸಾದೋ ಬಲೀಯಸಾ ॥ ೫೬ ॥
ಕೃತ್ವೌರ್ಧ್ವದೈಹಿಕಂ ತಸ್ಯ ನೃಪಸ್ಯ ಸಪುರೋಹಿತಾಃ ।
ಮಂತ್ರಿಣಸ್ತತ್ಸುತಂ ರಾಜ್ಯೇ ಜನಮೇಜಯನಾಮಕಂ ॥ ೫೭ ॥
ರಾಜಾನಮಭ್ಯಷಿಂಚನ್ಸ್ತೈ ಜಗದ್ರಕ್ಷಣವಾಂಛಯಾ ।
ತಕ್ಷಕಾದ್ರಕ್ಷಿತುಂ ಭೂಪಮಾಯಾತಃ ಕಾಶ್ಯಪಾಽಭಿಧಃ ॥ ೫೮ ॥

---

೫೧—೫೫. ಇಷ್ಟರಲ್ಲಿ ಸೂರ್ಯನು ಮುಳುಗಿದನು. ಅಲ್ಲಿರುವ ಬ್ರಾಹ್ಮಣರೂ ರಾಜರೂ ಎಲ್ಲರೂ ಮುನಿಯ ವಚನವು ಸುಳ್ಳಾಗಕೂಡದೆಂದು ಪರಸ್ಪರವಾಗಿ ಮಾತಾಡಿಕೊಳ್ಳುತ್ತಿರಲು ಆ ಹಣ್ಣಿನಲ್ಲಿರುವ ಒಂದು ಕೆಂಪು ಹುಳುವನ್ನು ಎಲ್ಲ ರಾಜರೂ, ಪರೀಕ್ಷಿತನೂ ಕಂಡರು. ಆಗ ರಾಜನು, ಈ ಹುಳುವು ನನ್ನನ್ನು ಕಚ್ಚೀತೆ? ಎಂದು ಕೃಮಿಯಿಂದ ಕೂಡಿದ ಆ ಹಣ್ಣನ್ನು ಕಿವಿಯಲ್ಲಿಟ್ಟುಕೊಂಡನು. ಆಗ ಹಿಂದೆಯೇ ಆ ಹಣ್ಣಿನಲ್ಲಿ ಹುಳುವಾಗಿದ್ದ ತಕ್ಷಕನು ಆ ಹಣ್ಣಿನಿಂದ ಹೊರ ಹೊರಟು ಕೂಡಲೆ ರಾಜನ ದೇಹವನ್ನು ಸುತ್ತಿದನು. ಹೀಗೆ ರಾಜನನ್ನು ತಕ್ಷಕನು ಸುತ್ತಿಕೊಳ್ಳಲು ಪಕ್ಕದಲ್ಲಿರುವವರು ಹೆದರಿಕೆಯಿಂದ ಓಡಿದರು.

೫೬. ಎಲೈ ಬ್ರಾಹ್ಮಣರೆ! ಬಳಿಕ ಪರೀಕ್ಷಿತನು ತಕ್ಷಕನ ಬಲಿಷ್ಠವಾದ ವಿಷಾಗ್ನಿಯಿಂದ ಕೂಡಲೆ ಮಂಟಪದೊಡನೆ ಬೂದಿಯಾದನು.

೫೭—೫೮. ತರುವಾಯ ಮಂತ್ರಿಗಳು ಪುರೋಹಿತರೊಡನೆ ಆ ಪರೀಕ್ಷಿತನ ಉತ್ತರಕ್ರಿಯೆಗಳನ್ನು ನೆರವೇರಿಸಿ ಅವನ ತನಯನಾದ ಜನಮೇಜಯನನ್ನು ರಾಜ್ಯದಲ್ಲಿ ಅಭಿಷೇಕಮಾಡಿದರು. ಆಗ ಕಾಶ್ಯಪನು ರಾಜನನ್ನು ತಕ್ಷಕನಿಂದ ರಕ್ಷಿಸಲು ಅಲ್ಲಿಗೆ ಬಂದಿದ್ದನಷ್ಟೆ.

ಯೋ ಬ್ರಾಹ್ಮಣೋ ಮುನಿಶ್ರೇಷ್ಠಾಃ ಸ ಸರ್ವೈರ್ನಿಂದಿತೋ ಜನೈಃ ।
ಬಭ್ರಾಮ ಸಕಲಾನ್ದೇಶಾನ್ಶಿಷ್ಟೈಃ ಸರ್ವೈಶ್ಚ ದೂಷಿತಃ ॥ ೫೯ ॥
ಅವಸ್ಥಾನಂ ನ ಲೇಭೇಽಸೌ ಗ್ರಾಮೇ ವಾಽಪ್ಯಾಶ್ರಮೇಽಪಿ ವಾ ।
ಯಾನ್ಯಾನ್ದೇಶಾನಸೌ ಯಾತಸ್ತತ್ರ ತತ್ರ ಮಹಾಜನೈಃ ॥ ೬೦ ॥
ತತ್ತದ್ದೇಶಾನ್ನಿರಸ್ತಃ ಸ ಶಾಕಲ್ಯಂ ಶರಣಂ ಯಯೌ ।
ಪ್ರಣಮ್ಯ ಶಾಕಲ್ಯಮುನಿಂ ಕಾಶ್ಯಪೋ ನಿಂದಿತೋ ಜನೈಃ ।
ಇದಂ ವಿಜ್ಞಾಪಯಾಮಾಸ ಶಾಕಲ್ಯಾಯ ಮಹಾತ್ಮನೇ ॥ ೬೧ ॥

ಕಾಶ್ಯಪ ಉವಾಚ :—

ಭಗವನ್ಸರ್ವಧರ್ಮಜ್ಞ ಶಾಕಲ್ಯ ಹರಿವಲ್ಲಭ ॥ ೬೨ ॥
ಮುನಯೋ ಬ್ರಾಹ್ಮಣಾಶ್ಚಾಽನ್ಯೇ ಮಾಂ ನಿಂದಂತಿ ಸುಹೃಜ್ಜನಾಃ ।
ನಾಽಸ್ಯಾಽಹಂ ಕಾರಣಂ ಜಾನೇ ಕಿಂ ಮಾಂ ನಿಂದಂತಿ ಮಾನವಾಃ ॥ ೬೩ ॥
ಬ್ರಹ್ಮಹತ್ಯಾ ಸುರಾಪಾನಂ ಗುರುಸ್ತ್ರೀಗಮನಂ ತಥಾ ।
ಸ್ತೇಯಂ ಸಂಸರ್ಗದೋಷೋ ವಾ ಮಯಾ ನಾಚರಿತಃ ಕ್ವಚಿತ್ ॥ ೬೪ ॥
ಅನ್ಯಾನ್ಯಪಿ ಹಿ ಪಾಪಾನಿ ನ ಕೃತಾನಿ ಮಯಾ ಮುನೇ ।
ತಥಾಽಪಿ ನಿಂದಂತಿ ಜನಾ ವೃಥಾ ಮಾಂ ಬಾಂಧವಾದಯಃ ॥ ೬೫ ॥

---

೫೯. ಅವನನ್ನು ಸಮಸ್ತ ಜನರೂ ನಿಂದಿಸಿದರು. ಸಕಲಶಿಷ್ಟರಿಂದಲೂ ದೂಷಿತನಾದ ಆ ಕಾಶ್ಯಪನು ಭೂಮಂಡಲದಲ್ಲೆಲ್ಲ ಅಲೆದನು.

೬೦–೬೧. ಅವನಿಗೆ ಹಳ್ಳಿಯಲ್ಲಿಯೂ, ಆಶ್ರಮದಲ್ಲಿಯೂ ನೆಲೆಸಲವಕಾಶ ದೊರೆಯಲಿಲ್ಲ. ಅವನು ಹೋದ ದೇಶದಲ್ಲೆಲ್ಲ ಜನರು ಅವನನ್ನು ತಿರಸ್ಕರಿಸಲು, ಕೊನೆಯಲ್ಲಿ ಅವನು ಶಾಕಲ್ಯಮುನಿಯನ್ನು ಮರೆಹೊಕ್ಕು ಮಹಾತ್ಮನಾದ ಅವನಿಗೆ ವಂದಿಸಿ ಹೀಗೆ ವಿಜ್ಞಾಪಿಸಿಕೊಂಡನು.

೬೨–೬೩. ಕಾಶ್ಯಪನು ಹೇಳುತ್ತಾನೆ :—"ಪೂಜ್ಯನೂ, ಸಕಲಧರ್ಮವನ್ನರಿತವನೂ, ವಿಷ್ಣುಪ್ರಿಯನೂ ಆದ ಶಾಕಲ್ಯನೆ! ಮುನಿಗಳೂ, ಬ್ರಾಹ್ಮಣರೂ, ಇತರ ಮಿತ್ರರೂ ನನ್ನನ್ನು ನಿಂದಿಸುತ್ತಾರೆ. ನಾನು ಇವರು ಏತಕ್ಕೆ ನನ್ನನ್ನು ಬಯ್ಯುತ್ತಾರೆಂಬುದನ್ನು ಅರಿಯೆನು.

೬೪. ನಾನು ಬ್ರಹ್ಮಹತ್ಯೆ, ಸುರಾಪಾನ, ಗುರುಸ್ತ್ರೀಗಮನ, ಸ್ವರ್ಣಸ್ತೇಯ ಇವುಗಳನ್ನಾಗಲಿ, ಇಂತಹ ಪಾತಕಿಗಳ ಸಂಬಂಧವನ್ನಾಗಲಿ ಮಾಡಿದವನಲ್ಲ.

೬೫. ಇತರ ಯಾವ ಪಾಪಗಳನ್ನೂ ನಾನು ಮಾಡಲಿಲ್ಲ. ಆದರೂ ವ್ಯರ್ಥವಾಗಿ ಬಂಧುಗಳು ಮೊದಲಾದವರು ನನ್ನನ್ನು ನಿಂದಿಸುತ್ತಾರೆ.

ಜಾನಾಸಿ ಚೇತ್ತ್ವಂ ಶಾಕಲ್ಯ ಮಯಾ ದೋಷಂ ಕೃತಂ ವದ ।
ಉಕ್ತೋಽಥ ಕಾಶ್ಯಪೇನೈವಂ ಶಾಕಲ್ಯಾಖ್ಯೋ ಮಹಾಮುನಿಃ ।
ಕ್ಷಣಂ ಧ್ಯಾತ್ವಾ ಬಭಾಷೇ ತಂ ಕಾಶ್ಯಪಂ ದ್ವಿಜಸತ್ತಮಾಃ ॥ ೬೬ ॥
ಶಾಕಲ್ಯ ಉವಾಚ:—
ಪರೀಕ್ಷಿತಂ ಮಹಾರಾಜಂ ತಕ್ಷಕಾದ್ರಕ್ಷಿತುಂ ಭವಾನ್ ॥ ೬೭ ॥
ಆಯಾಸೀದರ್ಧಮಾರ್ಗೇ ತು ತಕ್ಷಕೇಣ ನಿವಾರಿತಃ ।
ಚಿಕಿತ್ಸಿತುಂ ಸಮರ್ಥೋಽಪಿ ವಿಷರೋಗಾದಿಪೀಡಿತಂ ॥ ೬೮ ॥
ಯೋ ನ ರಕ್ಷತಿ ಲೋಭೇನ ತಮಾಹುರ್ಬ್ರಹ್ಮಘಾತಕಂ ।
ಕ್ರೋಧಾತ್ಕಾಮಾದ್ಭಯಾಲ್ಲೋಭಾನ್ಮಾತ್ಸರ್ಯಾನ್ಮೋಹತೋಽಪಿ ವಾ ॥
ಯೋ ನ ರಕ್ಷತಿ ವಿಪ್ರೇಂದ್ರ ವಿಷರೋಗಾತುರಂ ನರಂ ।
ಬ್ರಹ್ಮಹಾ ಸ ಸುರಾಪೀ ಚ ಸ್ತೇಯೀ ಚ ಗುರುತಲ್ಪಗಃ ॥ ೭೦ ॥
ಸಂಸರ್ಗದೋಷದುಷ್ಟಶ್ಚ ನಾಽಪಿ ತಸ್ಯ ಹಿ ನಿಷ್ಕೃತಿಃ ।
ಕನ್ಯಾವಿಕ್ರಯಿಣಶ್ಚಾಽಪಿ ಹಯವಿಕ್ರಯಿಣಸ್ತಥಾ ॥ ೭೧ ॥
ಕೃತಘ್ನಸ್ಯಾಽಪಿ ಶಾಸ್ತ್ರೇಷು ಪ್ರಾಯಶ್ಚಿತ್ತಂ ಹಿ ವಿದ್ಯತೇ ।
ವಿಷರೋಗಾತುರಂ ಯಸ್ತು ಸಮರ್ಥೋಽಪಿ ನ ರಕ್ಷತಿ ॥ ೭೨ ॥
ನ ತಸ್ಯ ನಿಷ್ಕೃತಿಃ ಪ್ರೋಕ್ತಾ ಪ್ರಾಯಶ್ಚಿತ್ತಾಽಯುತೈರಪಿ ।
ನ ತೇನ ಸಹಸಂಕ್ತಾ ಚ ಭುಂಜೀತ ಸುಕೃತೀ ಜನಃ ॥ ೭೩ ॥

---

೬೬. ಶಾಕಲ್ಯ! ನಾನು ಮಾಡಿದ ದೋಷವು ನಿನಗೆ ತಿಳಿದಿದ್ದರೆ ಹೇಳು." ಎಂದು ಕಾಶ್ಯಪನು ಹೇಳಲು, ಶಾಕಲ್ಯನು ಸ್ವಲ್ಪಹೊತ್ತು ಚಿಂತಿಸಿ ಅವನನ್ನು ಕುರಿತು ಇಂತೆಂದನು.

೬೭–೭೩. ಶಾಕಲ್ಯನು ಹೇಳುತ್ತಾನೆ:—"ನೀನು ಪರೀಕ್ಷಿದ್ರಾಜನನ್ನು ತಕ್ಷಕನಿಂದ ರಕ್ಷಿಸಲೋಸುಗ ಹೋಗುತ್ತಿರಲು ತಕ್ಷಕನು ಅರ್ಧದಾರಿಯಲ್ಲಿ ನಿನ್ನನ್ನು ತಡೆದನು. ವಿಷರೋಗಾದಿಗಳಿಂದ ಪೀಡಿಸಲ್ಪಟ್ಟವನನ್ನು ಚಿಕಿತ್ಸೆ ಮಾಡಲು ಸಮರ್ಥನಾದವನು ಅತ್ಯಾಶೆಯಿಂದ ಚಿಕಿತ್ಸೆಗೈಯ್ಯದಿದ್ದರೆ ಅವನನ್ನು ಬ್ರಹ್ಮಘ್ನನೆನ್ನುವರು. ಬ್ರಾಹ್ಮಣವರ್ಯ! ಕೋಪ, ಕಾಮ, ಭಯ, ಅತ್ಯಾಶೆ, ಅಸೂಯೆ, ಮೋಹ ಇವುಗಳಲ್ಲಿ ಯಾವುದರಿಂದಾಗಲಿ ವಿಷರೋಗಗಳಿಂದ ಬಾಧಿಸಲ್ಪಟ್ಟವನನ್ನು ಕಾಪಾಡದವನು ಬ್ರಹ್ಮಘ್ನನೂ, ಸುರಾಪಾನಮಾಡಿದವನೂ, ಕಳ್ಳನೂ, ಗುರುತಲ್ಪಗಾಮಿಯೂ ಸಂಸರ್ಗದುಷ್ಟನೂ ಆಗುವನು. ಅವನಿಗೆ ಪ್ರಾಯಶ್ಚಿತ್ತವಿಲ್ಲ. ಕನ್ಯೆ ಮತ್ತು ಕುದುರೆಗಳನ್ನು ಮಾರಿದವನು, ಕೃತಘ್ನನು ಇವರಿಗೆ ಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತವು ವಿಹಿತವಾಗಿರುವುದು. ಶಕ್ತನಾಗಿ ವಿಷರೋಗಗಳಿಂದ ಪೀಡಿತನಾದವನನ್ನು ರಕ್ಷಿಸದ ಮಾನವನ ಪಾಪಕ್ಕೆ ಹತ್ತು

ನ ತೇನ ಸಹ ಭಾಷೇತ ನ ಪಶ್ಯೇತ್ತಂ ನರಂ ಕ್ವಚಿತ್ ।
ತತ್ಸಂಭಾಷಣಮಾತ್ರೇಣ ಮಹಾಪಾತಕಭಾಗ್ಭವೇತ್ ॥ ೭೪ ॥
ಪರೀಕ್ಷಿತ್ಸ ಮಹಾರಾಜಃ ಪುಣ್ಯಶ್ಲೋಕಶ್ಚ ಧಾರ್ಮಿಕಃ ।
ವಿಷ್ಣುಭಕ್ತೋ ಮಹಾಯೋಗೀ ಚಾತುರ್ವರ್ಣ್ಯಸ್ಯ ರಕ್ಷಿತಾ ॥ ೭೫ ॥
ವ್ಯಾಸಪುತ್ರಾದ್ಧರಿಕಥಾಂ ಶ್ರುತವಾನ್ಭಕ್ತಿಪೂರ್ವಕಂ ।
ಅರಕ್ಷಿತ್ವಾ ನೃಪಂ ತಂ ತ್ವಂ ವಚಸಾ ತಕ್ಷಕಸ್ಯ ಯತ್ ॥ ೭೬ ॥
ನಿವೃತ್ತಸ್ತೇನ ವಿಪ್ರೇಂದ್ರೈರ್ಬಾಂಧವೈರಪಿ ದೂಷ್ಯಸೇ ।
ಸ ಪರೀಕ್ಷಿನ್ಮಹಾರಾಜೋ ಯದ್ಯಪಿ ಕ್ಷಣಜೀವಿತಃ ॥ ೭೭ ॥
ತಥಾಽಪಿ ಯಾವನ್ಮರಣಂ ಬುಧೈಃ ಕಾರ್ಯಂ ಚಿಕಿತ್ಸನಂ ।
ಯಾವತ್ಕಂಠಗತಾಃ ಪ್ರಾಣಾ ಮುಮೂರ್ಷೋರ್ಮಾನವಸ್ಯ ಹಿ ॥ ೭೮ ॥
ತಾವಚ್ಚಿಕಿತ್ಸಾ ಕರ್ತವ್ಯಾ ಕಾಲಸ್ಯ ಕುಟಿಲಾ ಗತಿಃ ।
ಇತಿ ಪ್ರಾಹುಃ ಪುರಾ ಶ್ಲೋಕಂ ಭಿಷಗ್ವೈದ್ಯಾಬ್ಧಿಪಾರಗಾಃ ॥ ೭೯ ॥
ಅತಶ್ಚಿಕಿತ್ಸಾಶಕ್ತೋಽಪಿ ಯಸ್ಮಾದಕೃತಭೇಷಜಃ ।
ಅರ್ಥಮಾರ್ಗೇ ನಿವೃತ್ತಸ್ತ್ವಂ ತೇನ ತಂ ಹತವಾನಸಿ ।
ಶಾಕಲ್ಯೇನೈವಮುದಿತಃ ಕಾಶ್ಯಪಃ ಪ್ರತ್ಯಭಾಷತ ॥ ೮೦ ॥

---

ಸಾವಿರ ಪ್ರಾಯಶ್ಚಿತ್ತಗಳಿಂದಲೂ ಪರಿಹಾರವಿಲ್ಲ. ಪುಣ್ಯವಂತನು ಅವನೊಡನೆ ಒಂದೇ ಪಂಕ್ತಿಯಲ್ಲಿ ಭುಜಿಸಬಾರದು.

೭೪. ಅವನೊಡನೆ ಮಾತಾಡಬಾರದು. ಅವನನ್ನು ನೋಡಕೂಡದು. ಅವನೊಡನೆ ಮಾತಾಡಿದ್ದರಿಂದಲೆ ನರನು ಮಹಾ ಪಾತಕಿಯಾಗುವನು.

೭೫–೭೯. ಪರೀಕ್ಷಿದ್ರಾಜನು ಪವಿತ್ರಕೀರ್ತಿಯುಳ್ಳವನೂ, ಧರ್ಮಿಷ್ಠನೂ, ವಿಷ್ಣುಭಕ್ತನೂ, ಮಹಾಯೋಗಿಯೂ, ಚಾತುರ್ವರ್ಣ್ಯವನ್ನು ರಕ್ಷಿಸುವವನೂ, ವ್ಯಾಸನ ಮಗನಾದ ಶುಕಾಚಾರ್ಯನಿಂದ ಭಕ್ತಿಯಿಂದ ಹರಿಕಥೆಯನ್ನು ಕೇಳಿದವನೂ ಆಗಿದ್ದನು. ನೀನು ತಕ್ಷಕನ ಮಾತಿನಿಂದ ಅವನನ್ನು ಸಲಹದೆ ಹಿಂದಿರುಗಿರುವೆ. ಆದ್ದರಿಂದಲೆ ನಿನ್ನನ್ನು ಬ್ರಾಹ್ಮಣೋತ್ತಮರೂ, ಬಾಂಧವರೂ ನಿಂದಿಸುವರು. ಆ ಪರೀಕ್ಷಿತನು ಅಲ್ಪಾಯುವಾದರೂ ಪ್ರಾಜ್ಞನು. ಸಾಯುವವರೆಗೆ ರೋಗಿಗೆ ಚಿಕಿತ್ಸೆಮಾಡಬೇಕು. ಸಾಯುವ ನರನ ಪ್ರಾಣವು ಕಂಠಗತವಾಗುವವರೆಗೆ ಅವಶ್ಯವಾಗಿ ಚಿಕಿತ್ಸೆಮಾಡಬೇಕು. ಕಾಲಗತಿಯು ವಕ್ರವಾದುದು. ಹೀಗೆಂದು ಹಿಂದಿನ ವೈದ್ಯಶ್ರೇಷ್ಠರು ಹೇಳಿರುತ್ತಾರೆ.

೮೦. ಚಿಕಿತ್ಸೆಯಲ್ಲಿ ಸಮರ್ಥನಾದರೂ ನೀನು ದೊರೆಗೆ ಔಷಧವನ್ನು ಮಾಡದೆ ಅರ್ಧದಾರಿಯಲ್ಲಿ ಹಿಂದಿರುಗಿ ಅವನನ್ನು ಕೊಂದಿರುವೆ" ಎಂದು ಶಾಕಲ್ಯನು ಹೇಳಲು ಕಾಶ್ಯಪನು ಇಂತೆಂದನು.

ಕಾಶ್ಯಪ ಉವಾಚ :—

ಮನ್ಮೈತದ್ದೋಷಶಾಂತ್ಯರ್ಥಂ ಉಪಾಯಂ ವದ ಸುವ್ರತ ॥ ೮೧ ॥
ಯೇನ ಮಾಂ ಪ್ರತಿಗೃಹ್ಣೀಯುರ್ಬಾಂಧವಾಃ ಸಸುಹೃಜ್ಜನಾಃ ॥ ೮೨ ॥
ಕೃಪಾಂ ಮಯಿ ಕುರುಷ್ವ ತ್ವಂ ಶಾಕಲ್ಯ ಹರಿವಲ್ಲಭ ।
ಕಾಶ್ಯಪೇನೈವಮುಕ್ತಸ್ತು ಶಾಕಲ್ಯೋಽಪಿ ಮುನೀಶ್ವರಃ ।
ಕ್ಷಣಂ ಧ್ಯಾತ್ವಾ ಜಗಾದೈವಂ ಕಾಶ್ಯಪಂ ಕೃಪಯಾ ತದಾ ॥ ೮೩ ॥

ಶಾಕಲ್ಯ ಉವಾಚ :—

ಅಸ್ಯ ಪಾಪಸ್ಯ ಶಾಂತ್ಯರ್ಥಮುಪಾಯಂ ಪ್ರವದಾಮಿ ತೇ ॥ ೮೪ ॥
ತತ್ಕರ್ತವ್ಯಂ ತ್ವಯಾ ಶೀಘ್ರಂ ವಿಲಂಬಂ ಮಾಕೃಥಾ ದ್ವಿಜ ।
ದಕ್ಷಿಣಾಂಬುನಿಧೌ ಸೇತೌ ಗಂಧಮಾದನಪರ್ವತೇ ॥ ೮೫ ॥
ಅಸ್ತಿ ತೀರ್ಥದ್ವಯಂ ವಿಪ್ರ ಗಾಯತ್ರೀ ಚ ಸರಸ್ವತೀ ।
ತತ್ರ ತ್ವಂ ಸ್ನಾನಮಾತ್ರೇಣ ಶುದ್ಧೋ ಭೂಯಾಶ್ಚ ತತ್ಕ್ಷಣೇ ॥ ೮೬ ॥
ಗಾಯತ್ರ್ಯಾ ಚ ಸರಸ್ವತ್ಯಾ ಜಲವಾತಸ್ಪೃಶೋ ನರಾಃ ।
ವಿಧೂಯ ಸರ್ವಪಾಪಾನಿ ಸ್ವರ್ಗಂ ಯಾಸ್ಯಂತಿ ನಿರ್ಮಲಾಃ ॥ ೮೭ ॥
ತದ್ಯಾಹಿ ಶೀಘ್ರಂ ವಿಪ್ರ ತ್ವಂ ಗಾಯತ್ರೀಂ ಚ ಸರಸ್ವತೀಂ ।
ಇತ್ಯುಕ್ತಃ ಕಾಶ್ಯಪಸ್ತೇನ ಶಾಕಲ್ಯೇನ ದ್ವಿಜೋತ್ತಮಾಃ ॥ ೮೮ ॥
ನತ್ವಾ ಮುನಿಂ ಚ ಶಾಕಲ್ಯಂ ತಮಾಪೃಚ್ಛ್ಯ ಮುನೀಶ್ವರಂ ।
ತೇನ ಚೈವಾಭ್ಯನುಜ್ಞಾತಃ ಪ್ರಯಯೌ ಗಂಧಮಾದನಂ ॥ ೮೯ ॥

---

೮೧–೮೩. ಕಾಶ್ಯಪನು ಹೇಳುತ್ತಾನೆ :—“ನನ್ನ ಈ ದೋಷದ ಶಾಂತಿಗೆ ಉಪಾಯವನ್ನು ಹೇಳಿ ನನ್ನನ್ನು ಬಂಧುಗಳೂ, ಮಿತ್ರರೂ ಪರಿಗ್ರಹಿಸುವಂತೆ ಮಾಡು. ಹರಿಪ್ರಿಯನಾದ ಶಾಕಲ್ಯನೆ! ನೀನು ನನ್ನಲ್ಲಿ ಕೃಪೆಮಾಡು.” ಕಾಶ್ಯಪನು ಹೀಗೆನ್ನಲು, ಶಾಕಲ್ಯನು ಕ್ಷಣಕಾಲ ಚಿಂತಿಸಿ ಅವನನ್ನು ಕುರಿತು ದಯೆಯಿಂದ ಇಂತೆಂದನು.

೮೪–೮೬. ಶಾಕಲ್ಯನು ಹೇಳುತ್ತಾನೆ :—“ಕಾಶ್ಯಪ! ಈ ಪಾಪದ ಶಾಂತಿಗೆ ಉಪಾಯವನ್ನು ಹೇಳುವೆನು. ನೀನು ಕೂಡಲೆ ಅದನ್ನು ಮಾಡು. ದಕ್ಷಿಣ ಸಮುದ್ರದ ರಾಮಸೇತುವಿನಲ್ಲಿರುವ ಗಂಧಮಾದನಪರ್ವತದಲ್ಲಿ ಗಾಯತ್ರೀ ಸರಸ್ವತಿ ಎಂಬ ಎರಡು ತೀರ್ಥಗಳಿವೆ. ಅಲ್ಲಿ ನೀನು ಸ್ನಾನಮಾಡುವುದರಿಂದ ಕೂಡಲೆ ಶುದ್ಧನಾಗುವೆ.

೮೭. ಗಾಯತ್ರೀ ಸರಸ್ವತೀತೀರ್ಥಗಳ ನೀರಿನಮೇಲಿನ ಗಾಳಿಯನ್ನು ಸ್ಪರ್ಶಮಾಡಿದ ಮಾನವರು ಸಕಲಪಾಪಮುಕ್ತರಾಗಿ ಶುದ್ಧಿಗೊಂಡು ಸ್ವರ್ಗವನ್ನು ಸೇರುವರು.

೮೮–೮೯. ಆದುದರಿಂದ ನೀನು ಶೀಘ್ರವಾಗಿ ಆ ತೀರ್ಥಗಳಿಗೆ ತೆರಳು.

ತತ್ರ ಗತ್ವಾ ಚ ಗಾಯತ್ರೀಸರಸ್ವತ್ಯೌ ಚ ಕಾಶ್ಯಪಃ ।
ನತ್ವಾ ತೀರ್ಥದ್ವಯಂ ಭಕ್ತ್ಯಾ ದಂಡಪಾಣಿಂ ಚ ಭೈರವಂ ॥ ೯೦ ॥
ಸಂಕಲ್ಪಪೂರ್ವಂ ತತ್ತೀರ್ಥೇ ಸಸ್ನೌ ನಿಯಮಸಂಯುತಃ ।
ತೀರ್ಥದ್ವಯೇ ಸ್ನಾನಮಾತ್ರಾನ್ಮುಕ್ತಪಾಪೋಽಥ ಕಾಶ್ಯಪಃ ॥ ೯೧ ॥
ತೀರ್ಥದ್ವಯಸ್ಯ ತೀರೇಽಸೌ ಕಿಂಚಿತ್ಕಾಲಂ ತು ತಸ್ಥಿವಾನ್ ।
ತಸ್ಮಿನ್ಕಾಲೇ ಚ ಗಾಯತ್ರೀಸರಸ್ವತ್ಯೌ ಮುನೀಶ್ವರಾಃ ॥ ೯೨ ॥
ಪ್ರಾದುರ್ಬಭೂವತುರ್ಮೂರ್ತೇ ಸರ್ವಾಭರಣಭೂಷಿತೇ ।
ದೇವ್ಯೌ ತೇ ಸ ನಮಸ್ಕೃತ್ಯ ಕಾಶ್ಯಪೋ ಭಕ್ತಿಪೂರ್ವಕಂ ॥ ೯೩ ॥
ಕೇ ಯುವಾಂ ರೂಪಸಂಪನ್ನೇ ಸರ್ವಾಽಲಂಕಾರಸಂಯುತೇ ।
ಇತಿ ಪಪ್ರಚ್ಛ ದೃಷ್ಟ್ವಾ ತೇ ಕಾಶ್ಯಪೋ ಹೃಷ್ಟಮಾನಸಃ ।
ತೇನ ಪೃಷ್ಟೇ ಚ ಗಾಯತ್ರೀಸರಸ್ವತ್ಯೌ ತಮೂಚತುಃ ॥ ೯೪ ॥

ಗಾಯತ್ರೀಸರಸ್ವತ್ಯಾ ವೂಚತುಃ:—

ಕಾಶ್ಯಪಾವಾಂ ಹಿ ಗಾಯತ್ರೀಸರಸ್ವತ್ಯೌ ವಿಧಿಪ್ರಿಯೇ ॥ ೯೫ ॥
ಏತತ್ತೀರ್ಥಸ್ವರೂಪೇಣ ನಿತ್ಯಂ ವರ್ತಾವಹೇ ತ್ವತಃ ।
ಅತ್ರ ತೀರ್ಥದ್ವಯೇ ಸ್ನಾನಾದಾವಾಂ ತುಷ್ಟೇ ತವಾಽಧುನಾ ॥ ೯೬ ॥

---

ಹೀಗೆಂದು ಶಾಕಲ್ಯನು ಹೇಳಲು ಕಾಶ್ಯಪನು ಅವನನ್ನು ನಮಸ್ಕರಿಸಿ ಅನುಮತಿಯನ್ನು ಪಡೆದು ಗಂಧಮಾದನಪರ್ವತಕ್ಕೆ ಹೋದನು.

೯೦–೯೧. ಕಾಶ್ಯಪನು ಅಲ್ಲಿ ಗಾಯತ್ರೀ ಸರಸ್ವತೀತೀರ್ಥಗಳನ್ನು ಸೇರಿ ಅವುಗಳಿಗೂ, ದಂಡಧಾರಿಯಾದ ಭೈರವನಿಗೂ ಭಕ್ತಿಯಿಂದ ವಂದಿಸಿ ಆ ತೀರ್ಥಗಳಲ್ಲಿ ಸಂಕಲ್ಪಪೂರ್ವಕವಾಗಿ ನಿಯಮದಿಂದ ಮಿಂದು ಪಾಪಮುಕ್ತನಾದನು.

೯೨–೯೪. ಅವನು ಆ ತೀರ್ಥಗಳ ದಡದಲ್ಲಿ ಸ್ವಲ್ಪಹೊತ್ತು ನಿಂತನು. ಆ ಸಮಯದಲ್ಲಿ ಸಮಸ್ತಾಭರಣಗಳಿಂದ ಅಲಂಕೃತರಾದ ಗಾಯತ್ರೀ ಸರಸ್ವತಿಯರು ದೇಹಧಾರಿಗಳಾಗಿ ಪ್ರತ್ಯಕ್ಷರಾಗಲು ಅವನು ಅವರನ್ನು ಭಕ್ತಿಯಿಂದ ನಮಸ್ಕರಿಸಿ ರೂಪಾಲಂಕಾರಗಳಿಂದ ಸಹಿತರಾದ ನೀವು ಯಾರೆಂದು ಸಂತೋಷದಿಂದ ಕೇಳಿದನು. ಅವರು ಹೀಗೆಂದರು.

೯೫–೯೬. ಗಾಯತ್ರೀ ಸರಸ್ವತಿಯರು ಹೇಳುತ್ತಾರೆ:—"ಕಾಶ್ಯಪ! ನಾವು ಬ್ರಹ್ಮನ ರಾಣಿಯರಾದ ಗಾಯತ್ರೀ ಸರಸ್ವತಿಯರು. ನಾವು ಇಲ್ಲಿ ಈ ತೀರ್ಥಗಳ ಸ್ವರೂಪದಿಂದ ಯಾವಾಗಲೂ ಇರುವೆವು. ನೀನು ಈಗ ಇಲ್ಲಿ ಮಿಂದುದರಿಂದ ನಾವು ನಿನಗೆ ಪ್ರಸನ್ನರಾಗಿದ್ದೇವೆ.

ವರಂ ಮತ್ತೋ ವೃಣೀಷ್ವ ತ್ವಂ ಯದಿಷ್ಟಂ ಕಾಶ್ಯಪ ದ್ವಿಜ ।
ಸ್ನಾಂತಿ ತೀರ್ಥದ್ವಯೇ ಯೇಽತ್ರ ದಾಸ್ಯಾವಸ್ತದಭೀಪ್ಸಿತಂ ॥ ೯೭ ॥
ಶ್ರುತ್ವಾ ವಚಸ್ತದ್ಗಾಯತ್ರೀಸರಸ್ವತ್ಯೋಃ ಸ ಕಾಶ್ಯಪಃ ।
ತುಷ್ಟಾವ ವಾಗ್ಭಿರಗ್ರ್ಯಾಭಿಸ್ತೇ ದೇವ್ಯೌ ವೇಧಸಃ ಪ್ರಿಯೇ ॥ ೯೮ ॥

ಕಾಶ್ಯಪ ಉವಾಚ :—

ಚತುರಾಸನಗೇಹಿನ್ಯೌ ಜಗದ್ಧಾತ್ರ್ಯೌ ನಮಾಮ್ಯಹಂ ।
ವಿದ್ಯಾಸ್ವರೂಪೇ ಗಾಯತ್ರೀಸರಸ್ವತ್ಯೌ ಶುಭೇ ಉಭೇ ॥ ೯೯ ॥
ಸೃಷ್ಟಿಸ್ಥಿತ್ಯಂತಕಾರಿಣ್ಯೌ ಜಗತೋ ವೇದಮಾತರೌ ।
ಹವ್ಯಕವ್ಯಸ್ವರೂಪೇ ಚ ಚಂದ್ರಾದಿತ್ಯವಿಲೋಚನೇ ॥ ೧೦೦ ॥
ಸರ್ವದೇವಾಽಧಿಪೇ ವಾಣೀಗಾಯತ್ರ್ಯೌ ಸತತಂ ಭಜೇ ।
ಗಿರಿಜಾ ಕಮಲಾ ಚಾಽಪಿ ಯುವಾಮೇವ ಜಗದ್ಧಿತೇ ॥ ೧೦೧ ॥
ಯುಷ್ಮದ್ದರ್ಶನಮಾತ್ರೇಣ ಜಗತ್ಸೃಷ್ಟ್ಯಾದಿಕಲ್ಪನಂ ।
ಯುಷ್ಮನ್ನಿಮೇಷಾತ್ಸತತಂ ಜಗತಾಂ ಪ್ರಲಯೋ ಭವೇತ್ ॥ ೧೦೨ ॥
ಉನ್ಮೇಷಾತ್ಸೃಷ್ಟಿರಭವದ್ಭೋ ಗಾಯತ್ರಿ ಸರಸ್ವತಿ ।
ಯುವಯೋರ್ದರ್ಶನಾದದ್ಯ ಕೃತಾರ್ಥೋಽಭವಮಾಶು ವೈ ॥ ೧೦೩ ॥

---

೯೭. ಕಾಶ್ಯಪ! ನಮ್ಮಿಂದ ನೀನು ನಿನಗಿಷ್ಟವಾದ ವರವನ್ನು ತೆಗೆದುಕೊ. ನಾವು ಈ ತೀರ್ಥಗಳಲ್ಲಿ ಮಿಂದವರಿಗೆ ಅವರ ಅಭೀಷ್ಟವನ್ನು ಕೊಡುವೆವು.''

೯೮. ಆ ಕಾಶ್ಯಪನು ಗಾಯತ್ರೀ ಸರಸ್ವತಿಯರ ಆ ಮಾತನ್ನು ಕೇಳಿ ಬ್ರಹ್ಮನ ಸತಿಯರಾದ ಅವರನ್ನು ಉತ್ತಮಮಾತುಗಳಿಂದ ಸ್ತುತಿಸಿದನು.

೯೯. ಕಾಶ್ಯಪನು ಸ್ತುತಿಸುತ್ತಾನೆ:—ಬ್ರಹ್ಮನ ರಾಣಿಯರೂ, ಜಗತ್ತುಗಳನ್ನು ಪಾಲಿಸುವವರೂ, ವಿದ್ಯಾರೂಪರೂ, ಮಂಗಳಕರರೂ ಆಗಿರುವ ಓ ಗಾಯತ್ರೀ ಸರಸ್ವತಿಯರೆ! ನಾನು ನಿಮ್ಮನ್ನು ನಮಸ್ಕರಿಸುತ್ತೇನೆ.

೧೦೦–೧೦೨. ಪ್ರಪಂಚದ ಉತ್ಪತ್ತಿ, ಪಾಲನೆ, ನಾಶಗಳನ್ನು ಮಾಡುವವರೂ, ವೇದಮಾತೆಯರೂ, ಹವ್ಯಕವ್ಯರೂಪರೂ, ಸೂರ್ಯಚಂದ್ರರೇ ಕಣ್ಣಾಗುಳ್ಳವರೂ, ಸಮಸ್ತದೇವತೆಗಳಿಗೆ ಒಡೆಯರೂ ಆದ ಗಾಯತ್ರೀ ಸರಸ್ವತಿಯರನ್ನು ಯಾವಾಗಲೂ ಸೇವಿಸುತ್ತೇನೆ. ಜಗತ್ತಿಗೆ ಹಿತವನ್ನುಂಟುಮಾಡುವ ಪಾರ್ವತೀ ಲಕ್ಷ್ಮಿಯರು ನೀವೇ. ನಿಮ್ಮ ದೃಷ್ಟಿಮಾತ್ರದಿಂದಲೇ ಜಗತ್ಸೃಷ್ಟ್ಯಾದಿಗಳಾಗುವುವು. ನೀವು ಕಣ್ಣುಮುಚ್ಚುವುದರಿಂದ ಯಾವಾಗಲೂ ಜಗತ್ತುಗಳು ಪ್ರಳಯವಾಗುವುವು.

೧೦೩. ನೀವು ಕಣ್ಣುತೆರೆಯುವುದರಿಂದ ಜಗತ್ತಿನ ಸೃಷ್ಟಿಯಾಗುವುದು. ಎಲೌ ಗಾಯತ್ರೀ ಸರಸ್ವತಿಯರೆ! ಈಗ ನಿಮ್ಮ ದರ್ಶನದಿಂದ ನಾನು ಧನ್ಯನಾದೆನು.

ಮಾಮದ್ಯ ಪಾತಕಾನ್ಮುಕ್ತಂ ಸ್ನಾನಾತ್ತೀರ್ಥದ್ವಯೇಽತ್ರ ತು ।
ಸ್ವೀಕುರ್ವಂತು ಮುನಿಶ್ರೇಷ್ಠಾ ಬ್ರಾಹ್ಮಣಾ ಬಾಂಧವಾಸ್ತಥಾ ॥ ೧೦೪ ॥
ಇತಃ ಪರಂ ಪಾಪಕೃತ್ಯೇ ಮಾ ಮೇ ಬುದ್ಧಿಃ ಪ್ರವರ್ತತಾಂ ।
ಧರ್ಮೇ ಪ್ರವರ್ತತಾಂ ನಿತ್ಯಮಯಮೇವ ವರೋ ಮಮ ॥ ೧೦೫ ॥
ದೀಯತಾಂ ಭೋ ಮಹಾದೇವ್ಯೌ ನಾಽನ್ಯಮಿಚ್ಛಾಮ್ಯಹಂ ವರಂ ।
ಇತಿ ತೇ ಪ್ರಾರ್ಥಿತೇ ತೇನ ಕಾಶ್ಯಪೇನ ದ್ವಿಜೋತ್ತಮಾಃ ॥ ೧೦೬ ॥
ಸರಸ್ವತೀ ಚ ಗಾಯತ್ರೀ ದ್ವೇ ದೇವ್ಯೌ ಬ್ರಹ್ಮಣಃ ಪ್ರಿಯೇ ।
ಕಾಶ್ಯಪಂ ಪ್ರೋಚತುಃ ಪ್ರೀತೇ ಜನನ್ಯೌ ಜಗತಾಂ ಸದಾ ॥ ೧೦೭ ॥
ಕಾಶ್ಯಪೈತದ್ವರಂ ಸರ್ವಂ ಪ್ರಾರ್ಥಿತಂ ಯತ್ತ್ವಯಾಽಧುನಾ ।
ಅನುಗ್ರಹಾದಾವಯೋಸ್ತದಚಿರೇಣ ತವಾಽಸ್ತು ಹಿ ॥ ೧೦೮ ॥
ಇತ್ಯುಕ್ತ್ವಾ ತಂ ತು ಗಾಯತ್ರೀಸರಸ್ವತ್ಯೌ ಕ್ಷಣೇನ ವೈ ।
ತಿರೋಧಾನಂಗತೇ ವಿಪ್ರಾಸ್ತಸ್ಮಿಂಸ್ತೀರ್ಥದ್ವಯೇ ತದಾ ॥ ೧೦೯ ॥
ಕಾಶ್ಯಪೋಽಪಿ ಕೃತಾರ್ಥಃ ಸನ್ಸ್ವದೇಶಂ ಪ್ರತಿ ನಿರ್ಯಯೌ ।
ಬಾಂಧವಾ ಬ್ರಾಹ್ಮಣಾಃ ಸರ್ವೇ ಕಾಶ್ಯಪಂ ಗತಕಿಲ್ಬಿಷಂ ॥ ೧೧೦ ॥

---

೧೦೪. ಈಗ ಈ ಎರಡು ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಪಾಪಮುಕ್ತನಾದ ನನ್ನನ್ನು ಮುನಿವರ್ಯರೂ, ಬ್ರಾಹ್ಮಣರೂ, ಬಂಧುಗಳೂ ಪರಿಗ್ರಹಿಸಲಿ.

೧೦೫. ಇನ್ನುಮುಂದೆ ನನ್ನ ಬುದ್ಧಿಯು ಪಾಪದಲ್ಲಿ ಪ್ರವರ್ತಿಸದಿರಲಿ. ಯಾವಾಗಲೂ ಧರ್ಮದಲ್ಲಿ ಪ್ರವರ್ತಿಸಲಿ. ಇದೇ ನನ್ನ ವರವು.

೧೦೬–೧೦೭. ಇದನ್ನೇ ನನಗೆ ಕೊಡಿರಿ. ಬೇರೆ ವರವನ್ನು ನಾನು ಬಯಸುವುದಿಲ್ಲ.'' ಎಲೈ ಬ್ರಾಹ್ಮಣರೆ! ಕಾಶ್ಯಪನು ಹೀಗೆ ಬೇಡಲು ಜಗನ್ಮಾತೆಯರೂ, ಬ್ರಹ್ಮನರಸಿಯರೂ ಆದ ಆ ಗಾಯತ್ರೀ ಸರಸ್ವತಿಯರು ಕಾಶ್ಯಪನನ್ನು ಕುರಿತು ಇಂತೆಂದರು.

೧೦೮. "ಕಾಶ್ಯಪ! ಈಗ ನೀನು ಬೇಡಿದ ವರವೆಲ್ಲ ನಮ್ಮ ಅನುಗ್ರಹದಿಂದ ಜಾಗ್ರತೆಯಾಗಿ ನಿನಗೆ ಸಿದ್ಧಿಸಲಿ.''

೧೦೯. ಗಾಯತ್ರೀ ಸರಸ್ವತಿಯರು ಆ ಕಾಶ್ಯಪನನ್ನು ಕುರಿತು ಹೀಗೆಂದು ಕೂಡಲೆ ಆ ತೀರ್ಥಗಳಲ್ಲಿ ಮಾಯವಾದರು.

೧೧೦–೧೧೩. ಕಾಶ್ಯಪನೂ ಧನ್ಯನಾಗಿ ತನ್ನ ದೇಶಕ್ಕೆ ತೆರಳಿದನು. ಬಳಿಕ ಬಾಂಧವರೂ, ಬ್ರಾಹ್ಮಣರೂ ಗಾಯತ್ರೀ ಸರಸ್ವತೀ ತೀರ್ಥಗಳಲ್ಲಿ ಮಿಂದುದರಿಂದ ಪಾಪರಹಿತನಾದ ಕಾಶ್ಯಪನನ್ನು ಪರಿಗ್ರಹಿಸಿದರು. ಹೀಗೆ ಕಾಶ್ಯಪನಿಗೆ ಗಾಯತ್ರೀ ಸರಸ್ವತೀ ತೀರ್ಥಗಳಲ್ಲಿ ಸ್ನಾನಮಾಡಿದ್ದರಿಂದ ಪಾಪ

ಪ್ರತ್ಯಗೃಹ್ಣಂಶ್ಚ ಗಾಯತ್ರೀಸರಸ್ವತ್ಯೋರ್ನಿಮಜ್ಜನಾತ್ ।
ಏವಂ ವಃ ಕಥಿತಂ ವಿಪ್ರಾ ಕಾಶ್ಯಪಸ್ಯ ವಿಮೋಕ್ಷಣಂ ॥ ೧೧೧ ॥
ಪಾತಕೇಭ್ಯೋ ಹಿ ಗಾಯತ್ರೀಸರಸ್ವತ್ಯೋರ್ನಿಮಜ್ಜನಾತ್ ।
ಪಠತೇ ತ್ವಿಮಮಧ್ಯಾಯಂ ಶೃಣುತೇ ವಾ ಸಮಾಹಿತಃ ॥ ೧೧೨ ॥
ಯೋ ಗಾಯತ್ರ್ಯಾಂ ಸರಸ್ವತ್ಯಾಂ ಸ ಸ್ನಾನಫಲಮಶ್ನುತೇ ॥ ೧೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಕಾಶ್ಯಪಪಾಪಶಾಂತಿವರ್ಣನಂ" ನಾಮ್ನ್ಯೇಕಚತ್ವಾರಿಂಶೋಽಧ್ಯಾಯಃ

---

ಮೋಕ್ಷದೊರೆತ ಕ್ರಮವನ್ನು ನಿಮಗೆ ಹೇಳಿರುವೆನು. ಈ ಅಧ್ಯಾಯವನ್ನು ಸಮಾಧಾನದ ಮನಸ್ಸಿನಿಂದ ಓದಿದವನಾಗಲಿ, ಹೇಳಿದವನಾಗಲಿ ಗಾಯತ್ರೀ ಸರಸ್ವತೀ ತೀರ್ಥಗಳಲ್ಲಿ ಮಿಂದ ಫಲವನ್ನು ಪಡೆಯುತ್ತಾನೆ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಕಾಶ್ಯಪಪಾಪಶಾಂತಿವರ್ಣನ"ವೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಚತ್ವಾರಿಂಶೋಽಧ್ಯಾಯಃ

### ಋಣಮೋಚನಾದಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಸೂತ ಉವಾಚ :—

ಅಥಾತಃ ಸರ್ವತೀರ್ಥಾನಾಂ ವೈಭವಂ ಪ್ರವದಾಮ್ಯಹಂ ।
ಸೇತುಮಧ್ಯನಿವಿಷ್ಟಾನಾಮನುಕ್ತಾನಾಂ ಮುನೀಶ್ವರಾಃ ॥ ೧ ॥
ಅಸ್ತಿ ತೀರ್ಥಂ ಮಹಾಪುಣ್ಯಂ ನಾಮ್ನಾ ತು ಋಣಮೋಚನಂ ।
ಋಣಾನಿ ತ್ರೀಣಿ ನಶ್ಯಂತಿ ನರಾಣಾಮತ್ರ ಮಜ್ಜನಾತ್ ॥ ೨ ॥
ದ್ವಿಜಸ್ಯ ಜಾಯಮಾನಸ್ಯ ಋಣಾನಿ ತ್ರೀಣಿ ಸಂತಿ ಹಿ ।
ಋಷೀಣಾಂ ದೇವತಾನಾಂ ಚ ಪಿತ್ರೂಣಾಂ ಚ ದ್ವಿಜೋತ್ತಮಾಃ ॥ ೩ ॥
ಬ್ರಹ್ಮಚರ್ಯಾಽನನುಷ್ಠಾನಾದೃಷೀಣಾಮೃಣವಾನ್ಭವೇತ್ ।
ಯಜ್ಞಾದೀನಾಮಕರಣಾದ್ದೇವಾನಾಂ ಚ ಋಣೀ ಭವೇತ್ ॥ ೪ ॥
ಪುತ್ರಾಽನುತ್ಪಾದನಾಚ್ಚೈವ ಪಿತ್ರೂಣಾಮೃಣವಾನ್ಭವೇತ್ ।
ವಿನಾಽಪಿ ಬ್ರಹ್ಮಚರ್ಯೇಣ ವಿನಾ ಯಾಗಂ ವಿನಾ ಸುತಂ ॥ ೫ ॥
ಋಣಮೋಕ್ಷಾಽಭಿಧೇ ತೀರ್ಥೇ ಸ್ನಾನಮಾತ್ರೇಣ ಮಾನವಾಃ ।
ಋಷಿದೇವಪಿತ್ರೂಣಾಂ ತು ಋಣೇಭ್ಯೋ ಮುಕ್ತಿಮಾಪ್ನುಯುಃ ॥ ೬ ॥

---

## ಕನ್ನಡದ ಅನುವಾದ

### ಋಣಮೋಚನಾದಿತೀರ್ಥಮಾಹಾತ್ಮ್ಯವರ್ಣನ

೧. ಶ್ರೀಸೂತನು ಹೇಳುತ್ತಾನೆ:— ಮುನಿವರ್ಯರೆ! ಬಳಿಕ ಹಿಂದೆ ಹೇಳದಿರುವ ಸೇತುಮಧ್ಯದಲ್ಲಿರುವ ಇತರ ತೀರ್ಥಗಳ ಮಾಹಾತ್ಮ್ಯೆಯನ್ನು ನಾನು ಹೇಳುವೆನು.

೨. ಇಲ್ಲಿ ಅತಿ ಪವಿತ್ರವಾದ ಋಣಮೋಚನವೆಂಬ ತೀರ್ಥವಿದೆ. ಇಲ್ಲಿ ಸ್ನಾನಮಾಡುವುದರಿಂದ ಮಾನವರ ತ್ರಿವಿಧ ಋಣಗಳು ಪರಿಹಾರವಾಗುವುವು.

೩. ದ್ವಿಜವರ್ಯರೆ! ಜಗತ್ತಿನಲ್ಲಿ ಜನಿಸಿದ ಮಾನವನಿಗೆ ಋಷಿ, ದೇವ, ಪಿತೃಸಂಬಂಧವಾದ ಮೂರು ಋಣಗಳಿರುವುವು.

೪. ಬ್ರಹ್ಮಚರ್ಯೆಯನ್ನು ಅನುಷ್ಠಾನಮಾಡದಿರುವುದರಿಂದ ಋಷಿಋಣವುಳ್ಳವನೂ, ಯಜ್ಞಾದಿಗಳನ್ನು ಮಾಡದಿರುವುದರಿಂದ ದೇವಋಣವುಳ್ಳವನೂ ಆಗುವನು.

೫–೬. ಸಂತತಿಯಿಲ್ಲದಿರುವುದರಿಂದ ಪಿತೃಋಣವುಳ್ಳವನಾಗುವನು. ಬ್ರಹ್ಮಚರ್ಯೆ, ಯಾಗ, ಸುತರಿಲ್ಲದಿರುವುದರಿಂದುಂಟಾದ ತ್ರಿವಿಧಋಣಗಳೂ

ಬ್ರಹ್ಮಚರ್ಯೇಣ ಯಜ್ಞೇನ ತಥಾ ಪುತ್ರೋದ್ಭವೇನ ಚ ।
ನೈವ ತುಷ್ಯಂತಿ ಋಷಯೋ ದೇವಾಃ ಪಿತೃಗಣಾಸ್ತಥಾ ॥ ೭ ॥
ಋಣಮೋಕ್ಷೇ ಯಥಾ ಸ್ನಾನಾದತುಲಾಂ ತುಷ್ಟಿಮಾಪ್ನುಯುಃ ।
ಕಿಂಚಾಽತ್ರ ಮಜ್ಜನಾತ್ತೀರ್ಥೇ ದರಿದ್ರಾ ಅಧಮರ್ಣಿನಃ ॥ ೮ ॥
ಮುಕ್ತಾ ಋಣೇಭ್ಯಃ ಸರ್ವೇಭ್ಯೋ ಧನಿನಃ ಸ್ಯುರ್ನಸಂಶಯಃ ।
ಯದತ್ರ ಮಜ್ಜನಾತ್ಪುಂಸಾಮೃಣಮುಕ್ತಿಃ ಪ್ರಜಾಯತೇ ॥ ೯ ॥
ತಸ್ಮಾದುಕ್ತಮಿದಂ ತೀರ್ಥಮೃಣಮೋಚನಸಂಜ್ಞಯಾ ।
ಅತೋಽತ್ರ ಋಣಿಭಿಃ ಸರ್ವೈಃ ಸ್ನಾತವ್ಯಂ ತದ್ವಿಮುಕ್ತಯೇ ॥ ೧೦ ॥
ಏತತ್ತೀರ್ಥಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಪಾಂಡವೈಃ ಕೃತಮಪ್ಯತ್ರ ತೀರ್ಥಮಸ್ತ್ಯಪರಂ ಮಹತ್ ॥ ೧೧ ॥
ಯತ್ರೇಷ್ಟಂ ಧರ್ಮಪುತ್ರಾದ್ಯೈಃ ಪಾಂಡವೈಃ ಪಂಚಭಿಃ ಪುರಾ ।
ತದೇತತ್ತೀರ್ಥಮುದ್ದಿಶ್ಯ ಭುಕ್ತಿಮುಕ್ತಿಫಲಪ್ರದಂ ॥ ೧೨ ॥
ದಶಕೋಟಿಸಹಸ್ರಾಣಿ ತೀರ್ಥಾನ್ಯನುತ್ತಮಾನಿ ಹಿ ।
ಪಂಚಪಾಂಡವತೀರ್ಥೇಽಸ್ಮಿನ್ಸಾನ್ನಿಧ್ಯಂ ಕುರ್ವತೇ ಸದಾ ॥ ೧೩ ॥

---

ಋಣಮೋಕ್ಷವೆಂಬ ತೀರ್ಥದಲ್ಲಿ ಸ್ನಾನಮಾಡುವುದರಿಂದ ಪರಿಹಾರವಾಗುವುವು.

೭–೧೦. ಈ ಋಣಮೋಕ್ಷತೀರ್ಥದಲ್ಲಿ ಸ್ನಾನಮಾಡಿದ್ದರಿಂದ ಸಂತೋಷಗೊಳ್ಳುವಂತೆ ಬ್ರಹ್ಮಚರ್ಯ, ಯಜ್ಞ, ಸುತರಿಂದ ಋಷಿ, ದೇವ, ಪಿತೃಗಳು ಸಂತೋಷಗೊಳ್ಳುವುದಿಲ್ಲ. ಮತ್ತು ಇಲ್ಲಿ ಸ್ನಾನಮಾಡುವುದರಿಂದ ದರಿದ್ರರಾದ ಸಾಲಗಾರರು ಎಲ್ಲ ಸಾಲಗಳಿಂದಲೂ ಬಿಡುಗಡೆಯನ್ನು ಹೊಂದಿ ಹಣಗಾರರಾಗುವರು. ಮಾನವರು ಇಲ್ಲಿ ಸ್ನಾನಮಾಡುವುದರಿಂದ ಋಣಮುಕ್ತರಾಗುವ ಕಾರಣ ಈ ತೀರ್ಥವು ಋಣಮೋಚನವೆಂಬ ಹೆಸರನ್ನು ಪಡೆದಿರುವುದು. ಆದುದರಿಂದ ಋಣವುಳ್ಳವರೆಲ್ಲರೂ ಅದರ ಪರಿಹಾರಕ್ಕಾಗಿ ಇಲ್ಲಿ ಸ್ನಾನಮಾಡಬೇಕು.

೧೧. ಈ ತೀರ್ಥಕ್ಕೆ ಸಮವಾದ ತೀರ್ಥವು ಹಿಂದೆಯೂ ಇರಲಿಲ್ಲ; ಮುಂದೆಯೂ ಇರುವುದಿಲ್ಲ. ಇಲ್ಲಿ ಪಾಂಡವರು ನಿರ್ಮಿಸಿದ ಮತ್ತೊಂದು ದೊಡ್ಡ ತೀರ್ಥವಿರುವುದು.

೧೨. ಯುಧಿಷ್ಠಿರಾದಿ ಪಂಚಪಾಂಡವರು ಸುಖಭೋಗವನ್ನೂ, ಮೋಕ್ಷವನ್ನೂ ಕೊಡುವ ಈ ತೀರ್ಥವನ್ನುದ್ದೇಶಿಸಿ ಹಿಂದೆ ಯಾಗಮಾಡಿರುವರು.

೧೩. ಈ ಪಂಚಪಾಂಡವತೀರ್ಥದಲ್ಲಿ ಹತ್ತುಕೋಟಿಸಾವಿರ ಉತ್ತಮ ತೀರ್ಥಗಳು ಯಾವಾಗಲೂ ಸನ್ನಿಹಿತವಾಗಿರುವುವು.

ಆದಿತ್ಯಾ ವಸವೋ ರುದ್ರಾಃ ಸಾಧ್ಯಾಶ್ಚ ಸಮರುದ್ಗಣಾಃ ।
ಪಾಂಡವಾನಾಂ ಮಹಾತೀರ್ಥೇ ನಿತ್ಯಂ ಸನ್ನಿಹಿತಾಸ್ತಥಾ ॥ ೧೪ ॥
ಅತ್ರಾಽಭಿಷೇಕಂ ಯಃ ಕುರ್ಯಾತ್ಪಿತೃದೇವಾಂಶ್ಚ ತರ್ಪಯೇತ್ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಸ ಪೂಜ್ಯತೇ ॥ ೧೫ ॥
ಅಪ್ಯೇಕಂ ಭೋಜಯೇದ್ವಿಪ್ರಮೇತತ್ತೀರ್ಥತಟೇಽಮಲೇ ।
ತೇನಾಽಸೌ ಕರ್ಮಣಾ ತ್ವತ್ರ ಪರತ್ರಾಽಪಿ ಚ ಮೋದತೇ ॥ ೧೬ ॥
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾಽಪ್ಯನ್ಯ ಏವ ವಾ ।
ಅಸ್ಮಿಂಸ್ತೀರ್ಥವರೇ ಸ್ನಾತ್ವಾ ವಿಯೋನಿಂ ನ ಪ್ರಯಾತಿ ವೈ ॥ ೧೭ ॥
ಪಾಂಡವಾನಾಂ ಮಹಾತೀರ್ಥೇ ಪುಣ್ಯಯೋಗೇಷು ಯೋ ನರಃ ।
ಸ್ನಾಯಾತ್ಸ ಮನುಜಶ್ರೇಷ್ಠೋ ನರಕಂ ನೈವ ಪಶ್ಯತಿ ॥ ೧೮ ॥
ಪಾಂಡವಾನಾಂ ಮಹಾತೀರ್ಥಂ ಸಾಯಂ ಪ್ರಾತಶ್ಚ ಯಃ ಸ್ಮರೇತ್ ।
ಸ ಸ್ನಾತಃ ಸರ್ವತೀರ್ಥೇಷು ಗಂಗಾದಿಷು ನ ಸಂಶಯಃ ॥ ೧೯ ॥
ಇಂದ್ರಾದಿ ದೇವತಾಭಿಶ್ಚ ಯತ್ರೇಷ್ಟಂ ದೈತ್ಯಶಾಂತಯೇ ।
ತದನ್ಯದ್ದೇವತೀರ್ಥಾಖ್ಯಂ ವಿದ್ಯತೇ ಗಂಧಮಾದನೇ ॥ ೨೦ ॥

---

೧೪. ಹಾಗೆಯೇ ಆದಿತ್ಯರು, ವಸುಗಳು, ರುದ್ರರು, ಸಾಧ್ಯರು, ಮರುತ್ತುಗಳು ಇವರು ಈ ಪಾಂಡವತೀರ್ಥದಲ್ಲಿ ಸನ್ನಿಹಿತರಾಗಿರುವರು.

೧೫. ಇಲ್ಲಿ ಮಿಂದವನೂ, ಪಿತೃಗಳು, ದೇವತೆಗಳು ಇವರಿಗೆ ತರ್ಪಣ ಮಾಡಿದವನೂ ಸಕಲಪಾಪಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

೧೬. ಪರಿಶುದ್ಧವಾದ ಈ ತೀರ್ಥದ ದಡದಲ್ಲಿ ಒಬ್ಬ ಬ್ರಾಹ್ಮಣನನ್ನು ಭೋಜನಮಾಡಿಸಿದವನೂ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸಂತೋಷಗೊಳ್ಳುವನು.

೧೭. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಥವಾ ಬೇರೆ ಯಾರೇ ಆಗಲಿ ಈ ಉತ್ತಮತೀರ್ಥದಲ್ಲಿ ಮಿಂದು ಬಳಿಕ ಕೀಳುಜನ್ಮವನ್ನು ಪಡೆಯುವುದಿಲ್ಲ.

೧೮. ಪುಣ್ಯಕಾಲದಲ್ಲಿ ಪಾಂಡವಮಹಾತೀರ್ಥದಲ್ಲಿ ಮಿಂದ ಮಾನವೋತ್ತಮನು ನರಕವನ್ನು ಕಾಣುವುದಿಲ್ಲ.

೧೯. ಪಾಂಡವಮಹಾತೀರ್ಥವನ್ನು ಸಾಯಂಪ್ರಾತಃಕಾಲಗಳಲ್ಲಿ ಸ್ಮರಿಸಿದ ಮಾನವನು ಗಂಗಾದಿ ಸಮಸ್ತ ತೀರ್ಥಗಳಲ್ಲಿ ಮಿಂದವನಂತಾಗುವನು.

೨೦. ಗಂಧಮಾದನಶೈಲದಲ್ಲಿ ಇಂದ್ರಾದಿ ದೇವತೆಗಳು ದೈತ್ಯರ ನಾಶಕ್ಕಾಗಿ ಯಾಗಮಾಡಿದ ದೇವತೀರ್ಥವೆಂಬ ಮತ್ತೊಂದು ತೀರ್ಥವಿದೆ.

ದೇವತೀರ್ಥೇ ನರಃ ಸ್ನಾತ್ವಾ ಸರ್ವಪಾಪವಿವರ್ಜಿತಃ ।
ಪ್ರಾಪ್ನುಯಾದಕ್ಷಯಾಂ ಲ್ಲೋಕಾನ್ಸರ್ವಕಾಮಸಮನ್ವಿತಾನ್ ॥ ೨೧ ॥
ಜನ್ಮಪ್ರಭೃತಿ ಯತ್ಪಾಪಂ ಸ್ತ್ರಿಯಾ ವಾ ಪುರುಷೇಣ ವಾ ।
ಕೃತಂ ತದ್ದೇವಕುಂಡೇಽಸ್ಮಿನ್ಸ್ನಾನಾತ್ಸದ್ಯೋ ವಿನಶ್ಯತಿ ॥ ೨೨ ॥
ಯಥಾ ಸುರಾಣಾಂ ಸರ್ವೇಷಾಮಾದಿರ್ವೈ ಮಧುಸೂದನಃ ।
ತಥಾದಿಃ ಸರ್ವತೀರ್ಥಾನಾಂ ದೇವಕುಂಡಮನುತ್ತಮಂ ॥ ೨೩ ॥
ಯಸ್ತು ವರ್ಷಶತಂ ಪೂರ್ಣಮಗ್ನಿಹೋತ್ರಮುಪಾಸತೇ ।
ಯಸ್ತ್ವೇಕೋ ದೇವಕುಂಡೇಽಸ್ಮಿನ್ಕದಾಚಿತ್ಸ್ನಾನಮಾಚರೇತ್ ॥ ೨೪ ॥
ಸಮಮೇವ ತಯೋಃ ಪುಣ್ಯಂ ನಾತ್ರ ಸಂದೇಹಕಾರಣಂ ।
ದುರ್ಲಭಂ ದೇವತೀರ್ಥೇಽಸ್ಮಿನ್ದಾನಂ ವಾಸಶ್ಚ ದುರ್ಲಭಃ ॥ ೨೫ ॥
ದೇವತೀರ್ಥಾಭಿಗಮನಂ ಸ್ನಾನಂ ಚಾಽಪ್ಯತಿದುರ್ಲಭಂ ।
ದೇವತೀರ್ಥಂ ಸಮಾಸಾದ್ಯ ದೇವರ್ಷಿಪಿತೃಸೇವಿತಂ ॥ ೨೬ ॥
ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ।
ದ್ವಿದಿನಂ ತ್ರಿದಿನಂ ಚಾಽಪಿ ಪಂಚ ವಾಽಥ ಷಡೇವ ವಾ ॥ ೨೭ ॥
ಉಷಿತ್ವಾ ದೇವಕುಂಡಸ್ಥತೀರೇ ನರಕನಾಶನೇ ।
ನ ಮಾತೃಯೋನಿಮಾಪ್ನೋತಿ ಸಿದ್ಧಿಂ ಚಾಪ್ನೋತ್ಯನುತ್ತಮಂ ॥ ೨೮ ॥

---

೨೧. ಮನುಷ್ಯನು ದೇವತೀರ್ಥದಲ್ಲಿ ಮಿಂದು ಸಮಸ್ತ ಪಾಪಮುಕ್ತನಾಗಿ ಸಕಲೇಷ್ಟಾರ್ಥಗಳಿಂದ ಕೂಡಿದ ಶಾಶ್ವತಲೋಕಗಳನ್ನು ಸೇರುವನು.

೨೨. ಹುಟ್ಟಿದ ಮೊದಲ್ಗೊಂಡು ಸ್ತ್ರೀಯಾಗಲಿ, ಪುರುಷನಾಗಲಿ ಮಾಡಿದ ಪಾಪವು ಈ ದೇವತೀರ್ಥದಲ್ಲಿ ಸ್ನಾನಮಾಡುವುದರಿಂದ ಕೂಡಲೆ ಪರಿಹಾರವಾಗುವುದು.

೨೩. ಸಕಲದೇವತೆಗಳಿಗೂ ವಿಷ್ಣುವು ಹೇಗೆ ಆದಿಯೊ ಹಾಗೆಯೇ ಸಮಗ್ರ ತೀರ್ಥಗಳಿಗೆ ಶ್ರೇಷ್ಠವಾದ ದೇವಕುಂಡವು ಮೊದಲನೆಯದು.

೨೪–೨೫. ನೂರುವರ್ಷ ಅಗ್ನಿಹೋತ್ರ ಮಾಡಿದವನೂ, ಈ ದೇವಕುಂಡದಲ್ಲಿ ಒಮ್ಮೆ ಮಿಂದವನೂ ಇವರಿಬ್ಬರೂ ಸಮವಾದ ಪುಣ್ಯವುಳ್ಳವರು. ಸಂದೇಹವಿಲ್ಲ. ಈ ದೇವತೀರ್ಥದಲ್ಲಿ ದಾನವೂ, ವಾಸವೂ ದುರ್ಲಭವಾದುದು.

೨೬–೨೮. ದೇವತೀರ್ಥಗಮನವೂ, ಸ್ನಾನವೂ, ಅತಿ ದುರ್ಲಭವಾದುದು. ದೇವತೆಗಳು, ಋಷಿಗಳು, ಪಿತೃಗಳು ಇವರು ಸೇವಿಸಿದ ದೇವತೀರ್ಥವನ್ನು ಹೊಂದಿ ಮಾನವನು ಅಶ್ವಮೇಧಯಾಗದ ಫಲವನ್ನು ಪಡೆಯುವನು. ವಿಷ್ಣುಲೋಕವನ್ನೂ ಸೇರುವನು. ಎರಡು, ಮೂರು, ಐದು, ಅಥವಾ ಆರು ದಿನಗಳು ನರಕನಾಶಕವಾದ ದೇವಕುಂಡದ ದಡದಲ್ಲಿ ವಾಸಿಸಿದವನು ಮರಳಿ ಹುಟ್ಟದೆ ಉತ್ತಮ ಸಿದ್ಧಿಯನ್ನು ಹೊಂದುವನು.

ತ್ರಿರಾತ್ರಸ್ನಾನತೋ ಹ್ಯತ್ರ ವಾಜಪೇಯಫಲಂ ಭವೇತ್ ।
ದೇವತೀರ್ಥಸ್ಮೃತೇಃ ಸದ್ಯಃ ಪಾಪೇಭ್ಯೋ ಮುಚ್ಯತೇ ನರಃ ॥ ೨೯ ॥
ಅರ್ಚಯಿತ್ವಾ ಪಿತೄನ್ದೇವಾನೇತತ್ತೀರ್ಥತಟೇ ನರಃ ।
ಸರ್ವಕಾಮಸಮೃದ್ಧಿಃ ಸ್ಯಾತ್ಸರ್ವಯಜ್ಞಫಲಂ ಲಭೇತ್ ॥ ೩೦ ॥
ಏತತ್ತೀರ್ಥಸಮಂ ಪುಣ್ಯಂ ನ ಭೂತಂ ನ ಭವಿಷ್ಯತಿ ।
ತಸ್ಮಾದವಶ್ಯಂ ಸ್ನಾತವ್ಯಂ ದೇವತೀರ್ಥೇ ಮುಮುಕ್ಷುಭಿಃ ॥ ೩೧ ॥
ಐಹಿಕಾಮುಷ್ಮಿಕಫಲಪ್ರಾಪ್ತಿಕಾಮೈಶ್ಚ ಮಾನವೈಃ ।
ದೇವತೀರ್ಥಸ್ಯ ಮಾಹಾತ್ಮ್ಯಂ ಸಂಕ್ಷಿಪ್ಯ ಕಥಿತಂ ದ್ವಿಜಾಃ ॥ ೩೨ ॥
ವಿಸ್ತರೇಣಾಽಸ್ಯ ಮಾಹಾತ್ಮ್ಯಂ ಮಯಾ ವಕ್ತುಂ ನ ಪಾರ್ಯತೇ ।
ಸುಗ್ರೀವತೀರ್ಥಂ ವಕ್ಷ್ಯಾಮಿ ರಾಮಸೇತೌ ವಿಮುಕ್ತಿದೇ ॥ ೩೩ ॥
ಅತ್ರ ಸ್ನಾತ್ವಾ ನರೋ ಭಕ್ತ್ಯಾ ಸೂರ್ಯಲೋಕಂ ಸಮಶ್ನುತೇ ।
ಸುಗ್ರೀವತೀರ್ಥೇ ಸ್ನಾನೇನ ಹಯಮೇಧಫಲಂ ಭವೇತ್ ॥ ೩೪ ॥
ಬ್ರಹ್ಮಹತ್ಯಾದಿಪಾಪಾನಾಂ ನಿಷ್ಕೃತಿಶ್ಚಾಽಪಿ ಜಾಯತೇ ।
ಸುಗ್ರೀವತೀರ್ಥಗಮನಾದ್ಗೋಸಹಸ್ರಫಲಂ ಲಭೇತ್ ॥ ೩೫ ॥

---

೨೯. ನರನು ಈ ದೇವತೀರ್ಥದಲ್ಲಿ ಮೂರು ದಿನ ಸ್ನಾನಮಾಡುವುದರಿಂದ ವಾಜಪೇಯಯಾಗದ ಫಲವನ್ನು ಪಡೆಯುವನು. ಇದನ್ನು ಸ್ಮರಿಸಿದವನು ಕೂಡಲೆ ಪಾಪಮುಕ್ತನಾಗುವನು.

೩೦. ಮಾನವನು ಈ ತೀರ್ಥದ ದಡದಲ್ಲಿ ಪಿತೃಗಳನ್ನೂ, ದೇವತೆಗಳನ್ನೂ ಪೂಜಿಸಿ ಸಕಲೇಷ್ಟಾರ್ಥಸಮೃದ್ಧನಾಗಿ ಎಲ್ಲ ಯಜ್ಞಗಳ ಫಲವನ್ನೂ ಪಡೆಯುವನು.

೩೧–೩೩. ಈ ತೀರ್ಥಕ್ಕೆ ಸಮವಾದ ಪುಣ್ಯಸ್ಥಳವು ಹಿಂದೆಯೂ ಇರಲಿಲ್ಲ, ಮುಂದೆಯೂ ಇರುವುದಿಲ್ಲ. ಆದುದರಿಂದ ಮೋಕ್ಷಾರ್ಥಿಗಳೂ ಐಹಿಕಾಮುಷ್ಮಿಕ ಫಲಗಳನ್ನು ಬಯಸುವವರೂ ಅವಶ್ಯವಾಗಿ ದೇವತೀರ್ಥದಲ್ಲಿ ಸ್ನಾನಮಾಡಬೇಕು. ಎಲೈ ಬ್ರಾಹ್ಮಣರೆ! ದೇವತೀರ್ಥದ ಮಾಹಾತ್ಮ್ಯೆಯನ್ನುಸಂಕ್ಷೇಪವಾಗಿ ಹೇಳಿರುವೆನು. ಇದರ ಮಾಹಾತ್ಮ್ಯೆಯನ್ನು ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ. ಮೋಕ್ಷವನ್ನೀಯುವ ರಾಮಸೇತುವಿನಲ್ಲಿರುವ ಸುಗ್ರೀವತೀರ್ಥವನ್ನು ಈಗ ಹೇಳುವೆನು.

೩೪. ಈ ಸುಗ್ರೀವತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡಿದ ಮಾನವನು ಸೂರ್ಯಲೋಕವನ್ನು ಸೇರುವನು. ಅಶ್ವಮೇಧಯಾಗದ ಫಲವನ್ನೂ ಪಡೆಯುವನು.

೩೫. ಬ್ರಹ್ಮಹತ್ಯಾದಿ ಪಾಪಗಳು ಪರಿಹಾರವಾಗುವುವು. ಸುಗ್ರೀವ

ಸ್ಮರಣಾತ್ತಸ್ಯ ವೇದಾನಾಂ ಪಾರಾಯಣಫಲಂ ಲಭೇತ್ ।
ದಿನೋಪವಾಸಮಾತ್ರೇಣ ತಸ್ಯ ತೀರ್ಥಸ್ಯ ತೀರತಃ ॥ ೩೬ ॥
ಮಹಾಪಾತಕನಾಶಃ ಸ್ಯಾತ್ಪ್ರಾಯಶ್ಚಿತ್ತಂ ವಿನಾ ದ್ವಿಜಾಃ ।
ತತ್ರಾಽಭಿಷೇಕಂ ಕುರ್ವಾಣಃ ಪಿತೃದೇವಾಂಶ್ಚ ತರ್ಪಯೇತ್ ॥ ೩೭ ॥
ಆಪ್ತೋರ್ಯಾಮಸ್ಯ ಯಜ್ಞಸ್ಯ ಫಲಮಷ್ಟಗುಣಂ ಭವೇತ್ ।
ಸುಗ್ರೀವತೀರ್ಥಸ್ನಾನೇನ ನರಮೇಧಫಲಂ ಲಭೇತ್ ॥ ೩೮ ॥
ಸುಗ್ರೀವತೀರ್ಥಸ್ನಾನೇನ ನರೋ ಜಾತಿಸ್ಮರೋ ಭವೇತ್ ।
ಸುಗ್ರೀವತೀರ್ಥಂ ಭೋ ವಿಪ್ರಾಃ ಪ್ರಯಾತಾಽಭೀಷ್ಟಸಿದ್ಧಯೇ ॥ ೩೯ ॥
ಸುಗ್ರೀವತೀರ್ಥಮಾಹಾತ್ಮ್ಯಮೇವಂ ವಃ ಕಥಿತಂ ದ್ವಿಜಾಃ ।
ವೈಭವಂ ನಲತೀರ್ಥಸ್ಯ ತ್ವಿದಾನೀಂ ಪ್ರಬ್ರವೀಮಿ ವಃ ॥ ೪೦ ॥
ನಲತೀರ್ಥೇ ನರಃ ಸ್ನಾನಾತ್ಸ್ವರ್ಗಲೋಕಂ ಸಮಶ್ನುತೇ ।
ನಲತೀರ್ಥೇ ಸಕೃತ್ಸ್ನಾನಾತ್ಸರ್ವಪಾಪವಿಮೋಚಿತಃ ॥ ೪೧ ॥
ಅಗ್ನಿಷ್ಟೋಮಾಽತಿರಾತ್ರಾದಿಫಲಮಾಪ್ನೋತ್ಯನುತ್ತಮಂ ।
ತ್ರಿರಾತ್ರಮುಷಿತಸ್ತಸ್ಮಿಂಸ್ತರ್ಪಯನ್ಪಿತೃದೇವತಾಃ ॥ ೪೨ ॥

---

ತೀರ್ಥಕ್ಕೆ ಹೋಗುವುದರಿಂದ ನರನು ಸಾವಿರ ಗೋದಾನದ ಫಲವನ್ನು ಹೊಂದುವನು.

೩೬–೩೮. ಆ ತೀರ್ಥದ ಸ್ಮರಣೆಯಿಂದ ವೇದಪಾರಾಯಣ ಮಾಡಿದ ಫಲವನ್ನು ಪಡೆಯುವನು. ಆ ತೀರ್ಥದ ತೀರದಲ್ಲಿ ಒಂದು ದಿನ ಉಪವಾಸ ಮಾಡುವುದರಿಂದ ಪ್ರಾಯಶ್ಚಿತ್ತವಿಲ್ಲದೆ ಮಹಾಪಾತಕಗಳು ನಾಶವಾಗುವುವು. ಮಾನವನು ಅಲ್ಲಿ ಸ್ನಾನ, ಪಿತೃದೇವತೆಗಳ ತರ್ಪಣ ಇವುಗಳನ್ನು ಮಾಡುವುದರಿಂದ ಆಪ್ತೋರ್ಯಾಮಯಜ್ಞದ ಎಂಟರಷ್ಟು ಫಲವನ್ನು ಪಡೆಯುವನು. ಸ್ನಾನಮಾತ್ರದಿಂದ ನರಮೇಧ ಫಲವನ್ನು ಹೊಂದುವನು.

೩೯. ನರನು ಸುಗ್ರೀವತೀರ್ಥದಲ್ಲಿ ಸ್ನಾನಮಾಡುವುದರಿಂದ ಪೂರ್ವಜನ್ಮ ಸ್ಮರಣೆಯುಳ್ಳವನಾಗುವನು. ಎಲೈ ವಿಪ್ರರೆ! ಇಷ್ಟಾರ್ಥವು ಕೈಗೂಡುವುದಕ್ಕಾಗಿ ಸುಗ್ರೀವತೀರ್ಥಕ್ಕೆ ಹೋಗಿರಿ.

೪೦. ಬ್ರಾಹ್ಮಣರೆ! ಸುಗ್ರೀವತೀರ್ಥದ ಮಾಹಾತ್ಮ್ಯೆಯನ್ನು ನಿಮಗೆ ಹೇಳಿರುವೆನು. ಈಗ ನಳತೀರ್ಥದ ವೈಭವವನ್ನು ತಿಳಿಸುವೆನು.

೪೧. ನಳತೀರ್ಥದಲ್ಲಿ ಸ್ನಾನಮಾಡುವುದರಿಂದ ನರನು ಸ್ವರ್ಗಲೋಕವನ್ನು ಸೇರುವನು. ಇದರಲ್ಲೊಂದಾವೃತ್ತಿ ಸ್ನಾನಮಾಡುವುದರಿಂದ ಸಮಸ್ತ ಪಾಪಗಳಿಂದಲೂ ಮುಕ್ತನಾಗುವನು.

೪೨–೪೭. ಮತ್ತು ಅಗ್ನಿಷ್ಟೋಮ, ಅತಿರಾತ್ರ ಮೊದಲಾದ ಯಾಗಗಳ

ಸೂರ್ಯವದ್ಭಾಸತೇ ವಿಪ್ರಾ ವಾಜಿಮೇಧಫಲಂ ಲಭೇತ್ ।
ನೀಲತೀರ್ಥಂ ಪ್ರವಕ್ಷ್ಯಾಮಿ ಮಹಾಪಾತಕನಾಶನಂ ॥ ೪೩ ॥
ಅಗ್ನಿಪುತ್ರೇಣ ನೀಲೇನ ಕೃತಂ ಸೇತೌ ವಿಮುಕ್ತಿದಂ ।
ನೀಲತೀರ್ಥೇ ನರಃ ಸ್ನಾನಾತ್ಸರ್ವಪಾಪವಿಮೋಚಿತಃ ॥ ೪೪ ॥
ಬಹುವರ್ಣ್ಯಸ್ಯ ಯಾಗಸ್ಯ ಫಲಂ ಶತಗುಣಂ ಲಭೇತ್ ।
ನೀಲತೀರ್ಥೇ ನರಃ ಸ್ನಾತ್ವಾ ಸರ್ವಾಽಭೀಷ್ಟಪ್ರದಾಯಿನಿ ॥ ೪೫ ॥
ಅಗ್ನಿಲೋಕಮವಾಪ್ನೋತಿ ಸರ್ವಕಾಮಸಮೃದ್ಧಿಮಾನ್ ।
ಗವಾಕ್ಷೇಣ ಕೃತಂ ತೀರ್ಥಂ ಗಂಧಮಾದನಪರ್ವತೇ ॥ ೪೬ ॥
ವಿದ್ಯತೇ ಸ್ನಾನಮಾತ್ರೇಣ ನರಕಂ ನೈವ ಯಾತಿ ಸಃ ।
ಅಂಗದೇನ ಕೃತಂ ತೀರ್ಥಮಸ್ತಿ ಸೇತೌ ವಿಮುಕ್ತಿದೇ ॥ ೪೭ ॥
ಅತ್ರ ಸ್ನಾನೇನ ಮನುಜೋ ದೇವೇಂದ್ರತ್ವಂ ಸಮಶ್ನುತೇ ।
ಗಜೇನ ಗವಯೇನಾಽತ್ರ ಶರಭೇಣ ಮಹೌಜಸಾ ॥ ೪೮ ॥
ಕುಮುದೇನ ಹರೇಣಾಽಪಿ ಪನಸೇನ ಬಲೀಯಸಾ ।
ಕೃತಾನಿ ಯಾನಿ ತೀರ್ಥಾನಿ ತಥಾಽನ್ಯೈಃ ಸರ್ವವಾನರೈಃ ॥ ೪೯ ॥
ರಾಮಸೇತೌ ಮಹಾಪುಣ್ಯೇ ಗಂಧಮಾದನಪರ್ವತೇ ।
ತೇಷು ತೀರ್ಥೇಷು ಯಃ ಸ್ನಾತಿ ಸೋಽಮೃತತ್ವಂ ಸಮಶ್ನುತೇ ॥ ೫೦ ॥

---

ಉತ್ತಮ ಫಲವನ್ನು ಪಡೆಯುವನು. ಅಲ್ಲಿ ಮೂರು ರಾತ್ರಿ ವಾಸಮಾಡಿ ಪಿತೃದೇವತೆಗಳಿಗೆ ತರ್ಪಣಗೈದರೆ ಸೂರ್ಯನಂತೆ ಪ್ರಕಾಶಿಸುವನು. ಅಶ್ವಮೇಧ ಯಾಗದ ಫಲವನ್ನೂ ಹೊಂದುವನು. ಇನ್ನು ಮಹಾಪಾತಕವನ್ನು ನೀಗಿಸುವ ಅಗ್ನಿಯ ಮಗನಾದ ನೀಲನು ಸೇತುವೆಯಲ್ಲಿ ನಿರ್ಮಿಸಿದ ಮೋಕ್ಷವನ್ನೀಯುವ ನೀಲತೀರ್ಥವನ್ನು ಹೇಳುವೆನು. ನೀಲತೀರ್ಥದಲ್ಲಿ ಮಿಂದ ನರನು ಸರ್ವಪಾಪ ಮುಕ್ತನಾಗಿ ಬಹುವರ್ಣ್ಯಯಾಗದ ನೂರರಷ್ಟು ಫಲವನ್ನು ಪಡೆಯುವನು; ಸಕಲೇಷ್ಟಾರ್ಥಸಮೃದ್ಧನಾಗಿ ಅಗ್ನಿಲೋಕವನ್ನು ಹೊಂದುತ್ತಾನೆ. ಗಂಧ ಮಾದನಪರ್ವತದಲ್ಲಿ ಗವಾಕ್ಷನು ನಿರ್ಮಿಸಿದ ತೀರ್ಥವಿರುವುದು. ಇಲ್ಲಿ ಸ್ನಾನಮಾಡುವುದರಿಂಲೇ ನರನು ನರಕವನ್ನು ಹೊಂದುವುದಿಲ್ಲ. ಇಲ್ಲಿ ಅಂಗದನು ನಿರ್ಮಿಸಿದ ತೀರ್ಥವೂ ಇದೆ.

೪೮–೫೦. ಇಲ್ಲಿ ಸ್ನಾನಮಾಡುವುದರಿಂದ ಮಾನವನು ದೇವೇಂದ್ರಪದವಿಯನ್ನು ಅನುಭವಿಸುವನು. ಇಲ್ಲಿ ಗಜ, ಗವಯ, ಶರಭ, ಅತಿ ಬಲಿಷ್ಠನಾದ ಕುಮುದ, ಹರ, ಪನಸ, ಇವರಿಂದಲೂ, ಇನ್ನೂ ಇತರ ವಾನರರಿಂದಲೂ ನಿರ್ಮಿಸಲ್ಪಟ್ಟ ತೀರ್ಥಗಳು ಇವೆ. ಆ ತೀರ್ಥಗಳಲ್ಲಿ ಮಿಂದ ಮನುಷ್ಯನು ಮೋಕ್ಷವನ್ನೈದುವನು.

ವಿಭೀಷಣಕೃತಂ ತೀರ್ಥಮಸ್ತಿ ಪಾಪವಿಮೋಚನಂ ।
ಮಹಾದುಃಖಪ್ರಶಮನಂ ಮಹಾರೋಗನಿಬರ್ಹಣಂ ॥ ೫೧ ॥
ಮಹಾಪಾತಕಸಂಘಾನಾಮನಲೋಪಮಮುತ್ತಮಂ ।
ಕುಂಭೀಪಾಕಾದಿ ನರಕಕ್ಲೇಶನಾಶನಕಾರಣಂ ॥ ೫೨ ॥
ದುಸ್ವಪ್ನನಾಶನಂ ಧನ್ಯಂ ಮಹಾದಾರಿದ್ರ್ಯಬಾಧನಂ ।
ತತ್ರ ಯೋ ಮನುಜಃ ಸ್ನಾಯಾತ್ತಸ್ಯ ನಾಸ್ತೀಹ ಪಾತಕಂ ॥ ೫೩ ॥
ಸ ವೈಕುಂಠಮವಾಪ್ನೋತಿ ಪುನರಾವೃತ್ತಿವರ್ಜಿತಂ ।
ವಿಭೀಷಣಸ್ಯ ಸಚಿವೈಃ ಕೃತಂ ತೀರ್ಥಚತುಷ್ಟಯಂ ॥ ೫೪ ॥
ತತ್ರ ಸ್ನಾನೇನ ಮನುಜಃ ಸರ್ವಪಾಪೈಃ ಪ್ರಮುಚ್ಯತೇ ।
ಸರಯೂಶ್ಚ ನದೀ ವಿಪ್ರಾ ಗಂಧಮಾದನಪರ್ವತೇ ॥ ೫೫ ॥
ರಾಮನಾಥಂ ಮಹಾದೇವಂ ಸೇವಿತುಂ ವರ್ತತೇ ಸದಾ ।
ತತ್ರ ಸ್ನಾತ್ವಾ ನರಾಃ ಸರ್ವೇ ಸರ್ವಪಾತಕವರ್ಜಿತಾಃ ॥ ೫೬ ॥
ಸರ್ವಯಜ್ಞತಪಸ್ತೀರ್ಥಸೇವಾಫಲಮವಾಪ್ನುಯುಃ ।
ದಶಕೋಟಿಸಹಸ್ರಾಣಿ ತೀರ್ಥಾನಿ ದ್ವಿಜಸತ್ತಮಾಃ ॥ ೫೭ ॥
ವಸಂತ್ಯಸ್ಮಿನ್ಮಹಾಪುಣ್ಯೇ ಗಂಧಮಾದನಪರ್ವತೇ ।
ಗಂಗಾದ್ಯಾಃ ಸರಿತಃ ಸರ್ವಾಸ್ತಥಾ ವೈ ಸಪ್ತಸಾಗರಾಃ ॥ ೫೮ ॥

---

೫೧–೫೩. ವಿಭೀಷಣನು ನಿರ್ಮಿಸಿದ ಪಾಪನಾಶಕವೂ, ಅತ್ಯಂತ ದುಃಖವನ್ನು ನೀಗಿಸುವುದೂ, ಮಹಾರೋಗವನ್ನು ಪರಿಹರಿಸುವುದೂ, ಮಹಾಪಾತಕಗಳಿಗೆ ಬೆಂಕಿಯಂತಿರುವುದೂ, ಕುಂಭೀಪಾಕ ಮೊದಲಾದ ನರಕದ ದುಃಖವನ್ನು ನಿವಾರಿಸುವುದೂ, ದುಸ್ಸ್ವಪ್ನವನ್ನು ನಾಶಗೊಳಿಸುವುದೂ, ಅತಿಶಯವಾದ ಬಡತನವನ್ನು ನೀಗಿಸುವುದೂ ಆದ ಉತ್ತಮ ತೀರ್ಥವೊಂದಿರುವುದು. ಇಲ್ಲಿ ಮಿಂದ ನರನಿಗೆ ಪಾತಕವು ಇರುವುದಿಲ್ಲ.

೫೪–೫೮. ಅವನು ಹಿಂದಿರುಗುವಿಕೆಯಿಲ್ಲದ ವೈಕುಂಠಲೋಕವನ್ನು ಹೊಂದುವನು. ಇನ್ನೂ ವಿಭೀಷಣನ ಮಂತ್ರಿಗಳು ನಿರ್ಮಿಸಿದ ನಾಲ್ಕು ತೀರ್ಥಗಳಿರುವುವು. ಅಲ್ಲಿ ಮಿಂದ ಮನುಷ್ಯನು ಸಮಸ್ತ ಪಾಪಮುಕ್ತನಾಗುವನು. ಬ್ರಾಹ್ಮಣರೆ! ಸರಯೂನದಿಯು ರಾಮೇಶ್ವರನನ್ನು ಸೇವಿಸಲು ಯಾವಾಗಲೂ ಗಂಧಮಾದನಪರ್ವತದಲ್ಲಿರುವುದು. ಸಮಸ್ತ ಮಾನವರೂ ಅಲ್ಲಿ ಮಿಂದು ನಿಖಿಲಪಾಪಮುಕ್ತರಾಗಿ ಸಮಸ್ತ ಯಜ್ಞ, ತಪಸ್ಸು, ತೀರ್ಥ ಇವುಗಳ ಸೇವೆಯ ಫಲವನ್ನು ಪಡೆಯುವರು. ಪವಿತ್ರವಾದ ಈ ಗಂಧಮಾದನಪರ್ವತದಲ್ಲಿ ಗಂಗೆ ಮೊದಲಾದ ನದಿಗಳೂ, ಏಳು ಸಮುದ್ರಗಳೂ ಇರುವುವು.

ಋಷ್ಯಾಶ್ರಮಾಣಿ ಪುಣ್ಯಾನಿ ತಥಾ ಪುಣ್ಯವನಾನಿ ಚ ।
ಅನುತ್ತಮಾನಿ ಕ್ಷೇತ್ರಾಣಿ ಹರಿಶಂಕರಯೋಸ್ತಥಾ ॥ ೫೯ ॥
ಸಾನ್ನಿಧ್ಯಂ ಕುರುತೇ ನಿತ್ಯಂ ಗಂಧಮಾದನಪರ್ವತೇ ।
ಉಪವೀತಾಂತರಂ ತೀರ್ಥಂ ಪ್ರೋಕ್ತವಾಂಶ್ಚತುರಾನನಃ ॥ ೬೦ ॥
ತ್ರಯಸ್ತ್ರಿಂಶತ್ಕೋಟಿಯೋಽತ್ರ ದೇವಾಃ ಪಿತೃಗಣೈಃ ಸಹ ।
ಸರ್ವೈಶ್ಚ ಮುನಿಭಿಃ ಸಾರ್ಧಂ ಯಕ್ಷೈಃ ಸಿದ್ಧೈಶ್ಚ ಕಿನ್ನರೈಃ ।
ವಸಂತಿ ಸೇತೌ ದೇವಸ್ಯ ರಾಮಚಂದ್ರಸ್ಯ ಚಾಜ್ಞಯಾ ॥ ೬೧ ॥

ಶ್ರೀಸೂತ ಉವಾಚ :—

ಏವಮುಕ್ತಂ ದ್ವಿಜಶ್ರೇಷ್ಠಾ ತೀರ್ಥಾನಾಂ ವೈಭವಂ ಮಯಾ ॥ ೬೨ ॥
ಇದಂ ಪಠನ್ವಾ ಶೃಣ್ವನ್ವಾ ದುಃಖಸಂಘಾದ್ವಿಮುಚ್ಯತೇ ।
ಕೈವಲ್ಯಂ ಚ ಸಮಾಪ್ನೋತಿ ಪುನರಾವೃತ್ತಿ ವರ್ಜಿತಂ ॥ ೬೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಋಣಮೋಚನಾದಿತೀರ್ಥಮಾಹಾತ್ಮ್ಯ ವರ್ಣನಂ"ನಾಮ ದ್ವಿಚತ್ವಾರಿಂಶೋಽಧ್ಯಾಯಃ

---

೫೯—೬೧. ಇಲ್ಲಿ ಪವಿತ್ರವಾದ ಋಷ್ಯಾಶ್ರಮಗಳೂ, ಪುಣ್ಯಾರಣ್ಯಗಳೂ, ಹರಿಹರರ ಉತ್ತಮ ಕ್ಷೇತ್ರಗಳೂ ಯಾವಾಗಲೂ ಸನ್ನಿಹಿತವಾಗಿರುವುವು. ಈ ಸೇತುವೆಯಲ್ಲಿ ಉಪವೀತಾಂತರ ತೀರ್ಥವಿರುವುದೆಂದು ಬ್ರಹ್ಮನು ಹೇಳಿರುವನು. ಇಲ್ಲಿ ಮೂವತ್ತುಮೂರುಕೋಟಿ ದೇವತೆಗಳು ಪಿತೃಗಳಿಂದಲೂ, ಸಕಲ ಮುನಿಗಳಿಂದಲೂ, ಯಕ್ಷರು, ಸಿದ್ಧರು, ಕಿನ್ನರರು ಇವರಿಂದಲೂ ಸಹಿತರಾಗಿ ಶ್ರೀ ರಾಮಚಂದ್ರನ ಅಪ್ಪಣೆಯಿಂದ ವಾಸಿಸುತ್ತಾರೆ.

೬೨—೬೩. ಶ್ರೀಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣೋತ್ತಮರೆ! ನಾನು ಹೀಗೆ ತೀರ್ಥಗಳ ಮಾಹಾತ್ಮ್ಯೆಯನ್ನು ಹೇಳಿರುವೆನು. ಇದನ್ನು ಓದುವವನು ಅಥವಾ ಕೇಳುವವನು ದುಃಖಮುಕ್ತನಾಗಿ ಹಿಂದಿರುಗುವಿಕೆಯಿಲ್ಲದ ಮೋಕ್ಷವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ ಋಣಮೋಚನಾದಿತೀರ್ಥಮಾಹಾತ್ಮ್ಯವರ್ಣನ"ವೆಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಚತ್ವಾರಿಂಶೋಽಧ್ಯಾಯಃ

### ಶ್ರೀ ರಾಮನಾಥಪ್ರಶಂಸಾವರ್ಣನಂ

ಶ್ರೀ ಸೂತ ಉವಾಚ :—

ಅಥೇದಾನೀಂ ಪ್ರವಕ್ಷ್ಯಾಮಿ ರಾಮನಾಥಸ್ಯ ವೈಭವಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವೋ ಭುವಿ ॥ ೧ ॥
ರಾಮಪ್ರತಿಷ್ಠಿತಂ ಲಿಂಗಂ ಯಃ ಪಶ್ಯತಿ ನರಃ ಸಕೃತ್ ।
ಸ ನರೋ ಮುಕ್ತಿಮಾಪ್ನೋತಿ ಶಿವಸಾಯುಜ್ಯರೂಪಿಣೀಂ ॥ ೨ ॥
ದಶವರ್ಷೈಸ್ತು ಯತ್ಪುಣ್ಯಂ ಕ್ರಿಯತೇ ತು ಕೃತೇ ಯುಗೇ ।
ತ್ರೇತಾಯಾಮೇಕವರ್ಷೇಣ ತತ್ಪುಣ್ಯಂ ಸಾಧ್ಯತೇ ನೃಭಿಃ ॥ ೩ ॥
ದ್ವಾಪರೇ ತಚ್ಚ ಮಾಸೇನ ತದ್ದಿನೇನ ಕಲೌ ಯುಗೇ ।
ತತ್ಫಲಂ ಕೋಟಿಗುಣಿತಂ ನಿಮಿಷೇ ನಿಮಿಷೇ ನೃಣಾಂ ॥ ೪ ॥
ನಿಃಸಂದೇಹಂ ಭವೇದೇವಂ ರಾಮನಾಥವಿಲೋಕಿನಾಂ ।
ರಾಮೇಶ್ವರಮಹಾಲಿಂಗೇ ತೀರ್ಥಾನಿ ಸಕಲಾನ್ಯಪಿ ॥ ೫ ॥
ವಿದ್ಯಂತೇ ಸರ್ವದೇವಾಶ್ಚ ಮುನಯಃ ಪಿತರಸ್ತಥಾ ।
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ಸರ್ವದೈವ ವಾ ॥ ೬ ॥

---

### ಕನ್ನಡದ ಅನುವಾದ

### ಶ್ರೀ ರಾಮನಾಥಪ್ರಶಂಸಾವರ್ಣನ

೧. ಶ್ರೀಸೂತನು ಹೇಳುತ್ತಾನೆ:— ಈಗ ರಾಮೇಶ್ವರನ ಮಾಹಾತ್ಮ್ಯೆಯನ್ನು ಹೇಳುವೆನು. ಇದನ್ನು ಕೇಳಿದ ಮನುಷ್ಯನು ಸಕಲಪಾಪಮುಕ್ತನಾಗುವನು.

೨. ಶ್ರೀ ರಾಮನು ಪ್ರತಿಷ್ಠೆಮಾಡಿದ ಲಿಂಗವನ್ನು ಒಂದಾವೃತ್ತಿ ನೋಡಿದ ಮಾನವನು ಶಿವಸಾಯುಜ್ಯರೂಪವಾದ ಮುಕ್ತಿಯನ್ನು ಹೊಂದುವನು.

೩. ಮನುಷ್ಯನು ಕೃತಯುಗದಲ್ಲಿ ಹತ್ತುವರ್ಷಗಳಲ್ಲಿ ಮಾಡುವ ಪುಣ್ಯವು ತ್ರೇತಾಯುಗದಲ್ಲಿ ಒಂದು ವರ್ಷದಲ್ಲಿಯೇ ಸಂಪಾದಿಸಲು ಸಾಧ್ಯವು.

೪–೧೩. ಅದನ್ನೇ ದ್ವಾಪರಯುಗದಲ್ಲಿ ಒಂದು ತಿಂಗಳಲ್ಲಿಯೂ ಕಲಿಯುಗದಲ್ಲಿ ಒಂದು ದಿನದಲ್ಲಿಯೂ ಸಾಧಿಸಬಹುದು. ಈ ಪುಣ್ಯಕಿಂತ ಕೋಟಿಸಂಖ್ಯೆಯಷ್ಟು ಪುಣ್ಯವು ರಾಮೇಶ್ವರನನ್ನು ದರ್ಶನಮಾಡುವ ಮನುಷ್ಯರಿಗೆ ಪ್ರತಿನಿಮಿಷದಲ್ಲಿಯೂ ಲಭಿಸುವುದು. ರಾಮೇಶ್ವರಲಿಂಗದಲ್ಲಿ ಸಕಲ ತೀರ್ಥಗಳೂ, ಸಮಸ್ತ ದೇವತೆಗಳೂ, ಮುನಿಗಳೂ, ಪಿತೃಗಳೂ ಇರುವರು. ಒಂದು

ಯೇ ಸ್ಮರಂತಿ ಮಹಾದೇವಂ ರಾಮನಾಥಂ ವಿಮುಕ್ತಿದಂ ।
ಕೀರ್ತಯಂತ್ಯಥವಾ ವಿಪ್ರಾಸ್ತೇ ವಿಮುಕ್ತಾಘಪಂಜರಾಃ ॥ ೭ ॥
ಸಚ್ಚಿದಾನಂದಮದ್ವೈತಂ ಸಾಂಬಂ ರುದ್ರಂ ಪ್ರಯಾಂತಿ ವೈ ।
ರಾಮೇಶ್ವರಾಖ್ಯಂ ಯಲ್ಲಿಂಗಂ ರಾಮಚಂದ್ರೇಣ ಪೂಜಿತಂ ॥ ೮ ॥
ಯಸ್ಯ ಸ್ಮರಣಮಾತ್ರೇಣ ಯಮಪೀಡಾಽಪಿ ನೋ ಭವೇತ್ ।
ರಾಮೇಶ್ವರಮಹಾಲಿಂಗಂ ಯೇಽರ್ಚಯಂತಿ ಸಕೃನ್ನರಾಃ ॥ ೯ ॥
ನ ಮಾನುಷಾಸ್ತೇ ವಿಜ್ಞೇಯಾಃ ಕಿಂತು ರುದ್ರಾ ನ ಸಂಶಯಃ ।
ರಾಮೇಶ್ವರಮಹಾಲಿಂಗಂ ನಾಽರ್ಚಿತಂ ಯೇನ ಭಕ್ತಿತಃ ॥ ೧೦ ॥
ಚಿರಕಾಲಂ ಸ ಸಂಸಾರೇ ಸಂಸರೇದ್ದುಃಖಸಂಕುಲೇ ।
ರಾಮೇಶ್ವರಮಹಾಲಿಂಗಂ ಯೇ ಪಶ್ಯಂತಿ ಸಕೃನ್ನರಾಃ ॥ ೧೧ ॥
ಕಿಂ ದಾನೈಃ ಕಿಂ ವ್ರತೈಸ್ತೇಷಾಂ ಕಿಂ ತಪೋಭಿಃ ಕಿಮಧ್ವರೈಃ ।
ರಾಮೇಶ್ವರಮಹಾಲಿಂಗಂ ಯೋ ನ ಚಿಂತಯತಿ ಕ್ಷಣಂ ॥ ೧೨ ॥
ಅಜ್ಞಾನೀ ಸ ಚ ಪಾಪೀ ಸ್ಯಾತ್ಸ ಮೂಕೋ ಬಧಿರಸ್ತಥಾ ।
ಸ ಜಡೋಽಂಧಶ್ಚ ವಿಜ್ಞೇಯಶ್ಛಿದ್ರಂ ತಸ್ಯ ಸದಾ ಭವೇತ್ ॥ ೧೩ ॥
ಧನಕ್ಷೇತ್ರಸುತಾದೀನಾಂ ತಸ್ಯ ಹಾನಿಸ್ತಥಾ ಭವೇತ್ ।
ರಾಮೇಶ್ವರಮಹಾಲಿಂಗೇ ಸಕೃದ್ದೃಷ್ಟೇ ಮುನೀಶ್ವರಾಃ ॥ ೧೪ ॥

---

ವೇಳೆಯಲ್ಲಿ, ಎರಡುವೇಳೆಯಲ್ಲಿ, ಮೂರುವೇಳೆಯಲ್ಲಿ ಅಥವಾ ಯಾವಾಗಲೂ ಮೋಕ್ಷವನ್ನೀಯುವ ಶ್ರೀರಾಮೇಶ್ವರನನ್ನು ಸ್ಮರಿಸುವ ಅಥವಾ ನಾಮೋಚ್ಚಾರಣೆ ಮಾಡುವ ಮಾನವರು ಪಾಪಪಂಜರದಿಂದ ಮುಕ್ತರಾಗಿ ಜ್ಞಾನಾನಂದಸ್ವರೂಪನೂ, ಜೀವಾಭಿನ್ನನೂ, ಪಾರ್ವತಿಯಿಂದ ಕೂಡಿದವನೂ ಆಗಿರುವ ಮಹೇಶ್ವರನನ್ನು ಸೇರುವರು. ರಾಮಚಂದ್ರನು ಪೂಜಿಸಿದ ರಾಮೇಶ್ವರಲಿಂಗವನ್ನು ಸ್ಮರಿಸಿದಮಾತ್ರದಲ್ಲಿಯೇ ಯಮಬಾಧೆಯು ಸಂಭವಿಸುವುದಿಲ್ಲ. ರಾಮೇಶ್ವರ ಮಹಾಲಿಂಗವನ್ನು ಒಂದುಸಾರಿ ಪೂಜಿಸಿದ ಮಾನವರು ಮನುಷ್ಯರಾಗಿರದೆ ರುದ್ರರೇ ಆಗುವರು. ಈ ರಾಮೇಶ್ವರ ಮಹಾಲಿಂಗವನ್ನು ಭಕ್ತಿಯಿಂದ ಪೂಜಿಸದ ಮಾನವನು ದುಃಖದಿಂದ ತುಂಬಿದ ಸಂಸಾರದಲ್ಲಿ ಬಹುಕಾಲ ತಿರುಗುತ್ತಿರುವನು. ಈ ಲಿಂಗವನ್ನು ಒಂದು ಸಲ ನೋಡಿದ ಮನುಷ್ಯರಿಗೆ ದಾನ, ನಿಯಮ, ತಪಸ್ಸು, ಯಾಗ ಇವುಗಳಿಂದೇನು ಪ್ರಯೋಜನ? ಈ ಲಿಂಗವನ್ನು ಕ್ಷಣಕಾಲ ಧ್ಯಾನಿಸದವನು ಅಜ್ಞಾನಿಯೂ, ಪಾಪಿಯೂ, ಮೂಕನೂ, ಕಿವುಡನೂ, ಮೂಢನೂ, ಕುರುಡನೂ ಆಗುವನು. ಅವನಿಗೆ ಯಾವಾಗಲೂ ಕ್ಲೇಶಗಳು ಸಂಭವಿಸುವುವು.

೧೪–೧೯. ಅವನ ದ್ರವ್ಯ, ಹೊಲಗದ್ದೆ, ಮಕ್ಕಳು ಮೊದಲಾದುವು

ಕಿಂ ಕಾಶ್ಯಾ ಗಯಯಾ ಕಿಂ ವಾ ಪ್ರಯಾಗೇಣಾಽಪಿ ಕಿಂ ಫಲಂ ।
ದುರ್ಲಭಂ ಪ್ರಾಪ್ಯ ಮಾನುಷ್ಯಂ ಮಾನವಾ ಯತ್ರ ಭೂತಲೇ ॥ ೧೫ ॥
ರಾಮನಾಥಮಹಾಲಿಂಗಂ ನಮಸ್ಯಂತ್ಯರ್ಚಯಂತಿ ಚ ।
ಜನ್ಮ ತೇಷಾಂ ಹಿ ಸಫಲಂ ತೇ ಕೃತಾರ್ಥಾಶ್ಚ ನೇತರೇ ॥ ೧೬ ॥
ರಾಮೇಶ್ವರಮಹಾಲಿಂಗೇ ಪೂಜಿತೇ ವಾ ಸ್ಮೃತೇಽಪಿ ವಾ ।
ವಿಷ್ಣುನಾ ಬ್ರಹ್ಮಣಾ ಕಿಂ ವಾ ಶಕ್ರೇಣಾಽಪ್ಯಖಿಲಾಽಮರೈಃ ॥ ೧೭ ॥
ರಾಮನಾಥಮಹಾಲಿಂಗಂ ಭಕ್ತಿಯುಕ್ತಾಶ್ಚ ಯೇ ನರಾಃ ।
ತೇಷಾಂ ಪ್ರಣಾಮಸ್ಮರಣಪೂಜಾಯುಕ್ತಾಸ್ತು ಯೇ ನರಾಃ ॥ ೧೮ ॥
ನ ತೇ ಪಶ್ಯಂತಿ ದುಃಖಾನಿ ನೈವ ಯಾಂತಿ ಯಮಾಲಯಂ ।
ಬ್ರಹ್ಮಹತ್ಯಾ ಸಹಸ್ರಾಣಿ ಸುರಾಪಾನಾಽಯುತಾನಿ ಚ ॥ ೧೯ ॥
ದೃಷ್ಟೇ ರಾಮೇಶ್ವರೇ ದೇವೇ ವಿಲಯಂ ಯಾಂತಿ ಕೃತ್ಸ್ನಶಃ ।
ಯೇ ವಾಂಛಂತಿ ಸದಾ ಭೋಗಂ ರಾಜ್ಯಂ ಚ ತ್ರಿದಶಾಲಯೇ ॥ ೨೦ ॥
ರಾಮೇಶ್ವರಮಹಾಲಿಂಗಂ ತೇ ನಮಸ್ತು ಸಕೃನ್ಮುದಾ ।
ಯಾನಿ ಕಾನಿ ಚ ಪಾಪಾನಿ ಜನ್ಮಕೋಟಿ ಕೃತಾನ್ಯಪಿ ॥ ೨೧ ॥
ತಾನಿ ರಾಮೇಶ್ವರೇ ದೃಷ್ಟೇ ವಿಲಯಂ ಯಾಂತಿ ಸರ್ವದಾ ।
ಸಂಪರ್ಕಾತ್ಕೌತುಕಾಲ್ಲೋಭಾದ್ಭಯಾದ್ವಾಽಪಿ ಚ ಸಂಸ್ಮರನ್ ॥ ೨೨ ॥

---

ಹಾಳಾಗುವುವು. ಮುನಿವರ್ಯರೆ! ರಾಮೇಶ್ವರ ಮಹಾಲಿಂಗವನ್ನು ಒಂದು ಸಾರಿ ನೋಡಿದರೆ ಕಾಶಿ, ಗಯೆ, ಪ್ರಯಾಗಗಳಿಂದೇನು ಫಲ? ಭೂಮಿಯಲ್ಲಿ ಪಡೆಯಲಸಾಧ್ಯವಾದ ಮನುಷ್ಯಜನ್ಮವನ್ನು ಹೊಂದಿ ರಾಮೇಶ್ವರ ಲಿಂಗವನ್ನು ನಮಸ್ಕಾರಮಾಡಿ ಅರ್ಚಿಸಿದ ಮಾನವರ ಜನ್ಮವು ಸಾರ್ಥಕವಾಗುವುದು. ಅವರು ಧನ್ಯರಾಗುವರು.

೧೭. ರಾಮೇಶ್ವರ ಮಹಾಲಿಂಗವನ್ನು ಪೂಜಿಸಿದರೆ ಅಥವಾ ಸ್ಮರಿಸಿದರೆ ವಿಷ್ಣು, ಬ್ರಹ್ಮ, ಇಂದ್ರರಿಂದಲೂ, ಸಮಸ್ತ ದೇವತೆಗಳಿಂದಲೂ ತಾನೆ ಏನು ಪ್ರಯೋಜನ?

೧೮–೨೫. ಈ ಮಹಾಲಿಂಗದಲ್ಲಿ ಭಕ್ತಿಯುಳ್ಳವರೂ, ಈ ಲಿಂಗದ ವಂದನ, ಸ್ಮರಣ, ಪೂಜೆಗಳಲ್ಲಿ ಆಸಕ್ತರೂ ಆದ ಮನುಷ್ಯರು ದುಃಖವನ್ನು ನೋಡುವುದಿಲ್ಲ. ಯಮಪುರಿಗೆ ಹೋಗುವುದಿಲ್ಲ. ಈ ಲಿಂಗವನ್ನು ದರ್ಶನಮಾಡಿದ ಮಾತ್ರದಿಂದಲೇ ಸಾವಿರ ಬ್ರಹ್ಮಹತ್ಯೆಗಳೂ, ಹತ್ತುಸಾವಿರ ಸುರಾಪಾನ ದೋಷಗಳೂ ಸಂಪೂರ್ಣವಾಗಿ ನಾಶವಾಗುವುವು. ದೇವಲೋಕದಲ್ಲಿ ಯಾವಾಗಲೂ ಸುಖಭೋಗವನ್ನೂ, ರಾಜ್ಯವನ್ನೂ ಬಯಸುವವರು ರಾಮೇಶ್ವರ ಮಹಾಲಿಂಗವನ್ನು ಒಂದುಸಾರಿ ಸಂತೋಷದಿಂದ ನಮಸ್ಕರಿಸಲಿ; ಅನೇಕ ಜನ್ಮಗಳಲ್ಲಿ ಸಗಿದ ಯಾವ ಬಗೆಯ ಪಾಪವಾದರೂ ಅದು ರಾಮೇಶ್ವರನ ದರ್ಶನದಿಂದ ಪರಿಹಾರ

ರಾಮೇಶ್ವರಮಹಾಲಿಂಗಂ ನೇಹಾಮುತ್ರ ಚ ದುಃಖಭಾಕ್ ।
ರಾಮೇಶ್ವರಮಹಾಲಿಂಗಂ ಕೀರ್ತಯನ್ನರ್ಚಯನ್ನಪಿ ॥ ೨೩ ॥
ಅವಶ್ಯಂ ರುದ್ರಸಾರೂಪ್ಯಂ ಲಭತೇ ನಾಽತ್ರ ಸಂಶಯಃ ।
ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇ ಕ್ಷಣಾತ್ ॥ ೨೪ ॥
ತಥಾ ಪಾಪಾನಿ ಸರ್ವಾಣಿ ರಾಮೇಶ್ವರವಿಲೋಕನಾತ್ ।
ರಾಮೇಶ್ವರಮಹಾಲಿಂಗಭಕ್ತಿರಷ್ಟವಿಧಾ ಸ್ಮೃತಾ ॥ ೨೫ ॥
ತದ್ಭಕ್ತಜನವಾತ್ಸಲ್ಯಂ ತತ್ಪೂಜಾಪರಿತೋಷಣಂ ।
ಸ್ವಯಂ ತತ್ಪೂಜನಂ ಭಕ್ತ್ಯಾ ತದರ್ಥೇಽ ದೇಹಚೇಷ್ಟಿತಂ ॥ ೨೬ ॥
ತನ್ಮಾಹಾತ್ಮ್ಯಕಥಾನಾಂ ಚ ಶ್ರವಣೇಷ್ವಾದರಸ್ತಥಾ ।
ಸ್ವರನೇತ್ರಶರೀರೇಷು ವಿಕಾರಸ್ಫುರಣಂ ತಥಾ ॥ ೨೭ ॥
ರಾಮೇಶ್ವರಮಹಾಲಿಂಗಸ್ಮರಣೇ ಸಂತತಂ ತಥಾ ।
ರಾಮೇಶ್ವರಮಹಾಲಿಂಗಮಾಶ್ರಿತ್ಯೈವೋಪಜೀವನಂ ॥ ೨೮ ॥
ಏವಮಷ್ಟವಿಧಾ ಭಕ್ತಿರ್ಯಸ್ಮಿನ್ಮ್ಲೇಚ್ಛೇಽಪಿ ವಿದ್ಯತೇ ।
ಸ ಏವ ಮುಕ್ತಿಕ್ಷೇತ್ರಾಣಾಂ ದಾಯಭಾಕ್ಪರಿಕೀರ್ತ್ಯತೇ ॥ ೨೯ ॥
ಭಕ್ತ್ಯಾ ತ್ವನನ್ಯಯಾ ಮುಕ್ತಿರ್ಬ್ರಹ್ಮಜ್ಞಾನೇನ ನಿಶ್ಚಿತಾ ।
ವೇದಾಂತಶಾಸ್ತ್ರಶ್ರವಣಾದ್ಯತೀನಾಮೂರ್ಧ್ವರೇತಸಾಂ ॥ ೩೦ ॥

---

ವಾಗುವುದು. ಸಂಸರ್ಗದಿಂದಲೋ, ಕುತೂಹಲದಿಂದಲೋ ಅಥವಾ ಆಶೆಯಿಂದಲೋ ರಾಮೇಶ್ವರ ಲಿಂಗವನ್ನು ಸ್ಮರಿಸುವವನು ಇಹಪರಗಳಲ್ಲಿ ದುಃಖವನ್ನನುಭವಿಸುವುದಿಲ್ಲ. ಈ ಲಿಂಗದ ನಾಮವನ್ನುಚ್ಚರಿಸುವವನೂ, ಇದನ್ನು ಪೂಜಿಸುವವನೂ ನಿಶ್ಚಯವಾಗಿ ಶಿವಸಾರೂಪ್ಯವನ್ನು ಪಡೆಯುವನು. ಉರಿಯುವ ಬೆಂಕಿಯು ಕಟ್ಟಿಗೆಗಳನ್ನು ಬೂದಿಮಾಡುವಂತೆ ರಾಮೇಶ್ವರನ ದರ್ಶನವು ಸಮಸ್ತ ಪಾಪಗಳನ್ನೂ ಕೂಡಲೆ ನೀಗಿಸುವುದು. ಈ ಲಿಂಗವಿಷಯಕವಾದ ಭಕ್ತಿಯು ಎಂಟು ಬಗೆಯಾಗಿರುವುದು.

೨೬-೨೮. ರಾಮೇಶ್ವರನ ಭಕ್ತರನ್ನು ಪ್ರೀತಿಸುವುದೂ, ಅವನ ಪೂಜೆಯಿಂದ ಸಂತೋಷಗೊಳ್ಳುವುದೂ, ತಾನು ಸ್ವಂತವಾಗಿ ಭಕ್ತಿಯಿಂದ ಪೂಜಿಸುವುದೂ, ಆವನಿಗಾಗಿ ದೇಹದಿಂದ ಕೆಲಸಮಾಡುವುದೂ, ಅವನ ಮಾಹಾತ್ಮ್ಯಕಥೆಗಳನ್ನು ಕೇಳುವುದರಲ್ಲಿ ಆದರವೂ, ಸ್ವರ, ಕಣ್ಣು, ದೇಹಗಳಲ್ಲಿ ವಿಕಾರಗೊಳ್ಳುವುದೂ, ಯಾವಾಗಲೂ ಅವನನ್ನು ಸ್ಮರಿಸುವುದೂ, ಆ ರಾಮೇಶ್ವರ ಲಿಂಗವನ್ನಾಶ್ರಯಿಸಿಯೇ ಜೀವಿಸುವುದೂ ಎಂಬುದೇ ಆ ಎಂಟು ಬಗೆಯು.

೨೯. ಮ್ಲೇಚ್ಛನೂ ಹೀಗೆ ಎಂಟು ವಿಧ ಭಕ್ತಿಯುಳ್ಳವನಾದರೆ ಅವನು ಮೋಕ್ಷಕ್ಷೇತ್ರಗಳ ಫಲವನ್ನು ಪಡೆಯುವನು.

೩೦-೪೧. ಮುನಿಗಳು ಸ್ಥಿರಭಕ್ತಿಯಿಂದಲೂ, ಬ್ರಹ್ಮಜ್ಞಾನದಿಂದಲೂ,

ಸಾ ಚ ಮುಕ್ತಿರ್ವಿನಾ ಜ್ಞಾನದರ್ಶನಶ್ರವಣೋದ್ಭವಂ ।
ಯತ್ರಾಶ್ರಮಂ ವಿನಾ ವಿಪ್ರಾ ವಿರಕ್ತಿಂ ಚ ವಿನಾ ತಥಾ ॥ ೩೧ ॥
ಸರ್ವೇಷಾಂ ಚೈವ ವರ್ಣಾನಾಮಖಿಲಾಶ್ರಮಿಣಾಮಪಿ ।
ರಾಮೇಶ್ವರಮಹಾಲಿಂಗದರ್ಶನಾದೇವ ಕೇವಲಾತ್ ॥ ೩೨ ॥
ಅಪುನರ್ಭವದಾ ಮುಕ್ತಿರ್ಭವಿಷ್ಯತ್ಯವಿಲಂಬಿತಾ ।
ಕೃಮಿಕೀಟಾಶ್ಚ ದೇವಾಶ್ಚ ಮುನಯಶ್ಚ ತಪೋಧನಾಃ ॥ ೩೩ ॥
ತುಲ್ಯಾ ರಾಮೇಶ್ವರಕ್ಷೇತ್ರೇ ರಾಮನಾಥಪ್ರಸಾದತಃ ।
ಪಾಪಂ ಕೃತಂ ಮಯಾಽನೇಕಮಿತಿ ಮಾ ಕ್ರಿಯತಾಂ ಭಯಂ ॥ ೩೪ ॥
ಮಾ ಗರ್ವಃ ಕ್ರಿಯತಾಂ ಪುಣ್ಯಂ ಮಯಾಽಕಾರೀತಿ ವಾ ಜನೈಃ ।
ರಾಮೇಶ್ವರಮಹಾಲಿಂಗೇ ಸಾಂಬರುದ್ರೇ ವಿಲೋಕಿತೇ ॥ ೩೫ ॥
ನ ನ್ಯೂನಾ ನಾಽಧಿಕಾಶ್ಚ ಸ್ಯುಃ ಕಿಂ ತು ಸರ್ವೇ ಜನಾಃ ಸಮಾಃ ।
ರಾಮೇಶ್ವರಮಹಾಲಿಂಗಂ ಯಃ ಪಶ್ಯತಿ ಸಭಕ್ತಿಕಂ ॥ ೩೬ ॥
ನ ತೇನ ತುಲ್ಯತಾಮೇತಿ ಚತುರ್ವೇದ್ಯಪಿ ಭೂತಲೇ ।
ರಾಮೇಶ್ವರಮಹಾಲಿಂಗೇ ಭಕ್ತೋ ಯಃ ಶ್ವಪಚೋಽಪಿ ಸನ್ ॥ ೩೭ ॥
ತಸ್ಮೈ ದಾನಾನಿ ದೇಯಾನಿ ನಾಽನ್ಯಸ್ಮೈ ಚ ತ್ರಯೀವಿದೇ ।
ಯಾ ಗತಿರ್ಯೋಗಯುಕ್ತಾನಾಂ ಮುನೀನಾಮೂರ್ಧ್ವರೇತಸಾಂ ॥ ೩೮ ॥
ಸಾ ಗತಿಃ ಸರ್ವಜಂತೂನಾಂ ರಾಮೇಶ್ವರವಿಲೋಕಿನಾಂ ।
ರಾಮನಾಥಶಿವಕ್ಷೇತ್ರೇ ಯೇ ವಸಂತಿ ನರಾ ದ್ವಿಜಾಃ ॥ ೩೯ ॥

---

ವೇದಾಂತಶಾಸ್ತ್ರಶ್ರವಣದಿಂದಲೂ ಪಡೆಯುವ ಮುಕ್ತಿಯು ಇಲ್ಲಿ ಜ್ಞಾನಶಾಸ್ತ್ರ ಶ್ರವಣ, ಸನ್ನ್ಯಾಸಾಶ್ರಮ, ವೈರಾಗ್ಯಗಳಿಲ್ಲದೆ ರಾಮೇಶ್ವರ ಮಹಾಲಿಂಗವನ್ನು ನೋಡುವುದರಿಂದಲೇ ಸಕಲ ಜಾತಿಯವರಿಗೂ, ಸಮಸ್ತಾಶ್ರಮದವರಿಗೂ ಶೀಘ್ರವಾಗಿ ಲಭಿಸುವುದು. ರಾಮೇಶ್ವರಕ್ಷೇತ್ರದಲ್ಲಿ ರಾಮನಾಥನ ಅನುಗ್ರಹ ದಿಂದ ಕೃಮಿಗಳು, ಕೀಟಗಳು, ದೇವತೆಗಳು, ತಪೋನಿಷ್ಠರಾದ ಮುನಿಗಳು ಇವರೆಲ್ಲರೂ ಸಮಾನರಾಗುವರು. ಇಲ್ಲಿ ಜನರು " ನಾನು ಬಹು ಪಾಪ ಮಾಡಿರು ವೆನು " ಎಂದು ಹೆದರಕೂಡದು. ಅಥವಾ " ಬಹು ಪುಣ್ಯವನ್ನು ಮಾಡಿರುವೆ" ನೆಂದು ಅಹಂಕಾರ ಪಡಲೂ ಬಾರದು. ಪಾರ್ವತಿಯಿಂದ ಸಹಿತವಾದ ರಾಮೇಶ್ವರ ಮಹಾಲಿಂಗವನ್ನು ದರ್ಶನ ಮಾಡಿದೊಡನೆ ಜನರು ಹೆಚ್ಚು ಕಡಮೆಯಿಲ್ಲದೆ ಎಲ್ಲರೂ ಸಮಾನರಾಗುವರು. ಪ್ರಪಂಚದಲ್ಲಿ ರಾಮೇಶ್ವರ ಮಹಾಲಿಂಗವನ್ನು ಭಕ್ತಿಯಿಂದ ನೋಡಿದವನಿಗೆ ನಾಲ್ಕುವೇದಗಳನ್ನು ಅಧ್ಯಯನಮಾಡಿದವನೂ ಸಮಾನನಲ್ಲವು. ರಾಮೇಶ್ವರನ ಭಕ್ತನು ಚಂಡಾಲನಾದರೂ ಅವನಿಗೆ ದಾನ ಕೊಡಬೇಕು. ವೇದಾಧ್ಯಯನವನ್ನು ಮಾತ್ರ ಮಾಡಿದ ಬೇರೆಯವನಿಗೆ ಕೊಡ

ತೇ ಸರ್ವೇ ಪಂಚವಕ್ತ್ರಾಃ ಸ್ಯುಶ್ಚಂದ್ರಾಽಲಂಕೃತಮಸ್ತಕಾಃ ।
ನಾಗಾಭರಣಸಂಯುಕ್ತಾಸ್ತಥೈವ ವೃಷಭಧ್ವಜಾಃ ॥ ೪೦ ॥
ತ್ರಿಣೇತ್ರಾ ಭಸ್ಮದಿಗ್ಧಾಂಗಾಃ ಕಪಾಲಾಕೃತಿಶೇಖರಾಃ ।
ಸಾಕ್ಷಾತ್ಸಾಂಬಾ ಮಹಾದೇವಾ ಭವೇಯುರ್ನಾಽತ್ರ ಸಂಶಯಃ ॥ ೪೧ ॥
ರಾಮನಾಥಶಿವಕ್ಷೇತ್ರಂ ಯೇ ವ್ರಜಂತಿ ನರಾ ಮುದಾ ।
ಪದೇ ಪದೇಽಶ್ವಮೇಧಾನಾಂ ಪ್ರಾಪ್ನುಯುಃ ಸುಕೃತಾನಿ ತೇ ॥ ೪೨ ॥
ರಾಮಸೇತುಂ ಸಮಾಶ್ರಿತ್ಯ ರಾಮನಾಥಸ್ಯ ತುಷ್ಟಯೇ ।
ದದಾತಿ ಗ್ರಾಮಮೇಕಂ ಯೋ ಬ್ರಾಹ್ಮಣಾಯ ಸಭಕ್ತಿಕಂ ॥ ೪೩ ॥
ತೇನ ಭೂಃ ಸಕಲಾ ದತ್ತಾ ಸಶೈಲವನಕಾನನಾ ।
ಪತ್ರಂ ಪುಷ್ಪಂ ಫಲಂ ತೋಯಂ ರಾಮನಾಥಾಯ ಯೋ ನರಃ ॥ ೪೪ ॥
ಭಕ್ತ್ಯಾ ದದಾತಿ ತಂ ರಕ್ಷೇದ್ರಾಮನಾಥೋ ಹ್ಯಹರ್ನಿಶಂ ।
ರಾಮನಾಥಮಹಾಲಿಂಗೇ ಸಾಂಬೇ ಕಾರುಣಿಕೇ ಶಿವೇ ॥ ೪೫ ॥
ಅತ್ಯಂತದುರ್ಲಭಾ ಭಕ್ತಿಸ್ತತ್ಪೂಜಾಽಪ್ಯತಿದುರ್ಲಭಾ ।
ಸ್ತೋತ್ರಂ ಚ ದುರ್ಲಭಂ ಪ್ರೋಕ್ತಂ ಸ್ಮರಣಂ ಚಾಽತಿದುರ್ಲಭಂ ॥ ೪೬ ॥
ರಾಮನಾಥೇಶ್ವರಂ ಲಿಂಗಂ ಮಹಾದೇವಂ ತ್ರಿಲೋಚನಂ ।
ಶರಣಂ ಯೇ ಪ್ರಪದ್ಯಂತೇ ಭಕ್ತಿಯುಕ್ತೇನ ಚೇತಸಾ ॥ ೪೭ ॥

---

ಬಾರದು. ಯೋಗಿಗಳೂ, ಮುನಿಗಳೂ ಪಡೆಯುವ ಗತಿಯನ್ನೇ ರಾಮೇಶ್ವರನನ್ನು ದರ್ಶನಮಾಡುವ ಸಕಲ ಜಂತುಗಳೂ ಹೊಂದುವುವು. ಈ ಶಿವಕ್ಷೇತ್ರದಲ್ಲಿ ವಾಸಮಾಡುವ ದ್ವಿಜರು ಐದು ಮುಖವುಳ್ಳವರೂ, ಚಂದ್ರಮೌಳಿಗಳೂ, ನಾಗಭೂಷಣರೂ, ನಂದಿಧ್ವಜರೂ, ಮುಕ್ಕಣ್ಣರೂ, ಭಸ್ಮವನ್ನು ಬಳಿದುಕೊಂಡ ಸಮಸ್ತಾವಯವವುಳ್ಳವರೂ, ಕಪಾಲಧಾರಿಗಳೂ, ಪಾರ್ವತೀಸಹಿತರೂ ಆದ ಪ್ರತ್ಯಕ್ಷ ಮಹೇಶ್ವರರೇ ಆಗುವರು.

೪೨–೪೬. ರಾಮೇಶ್ವರಕ್ಷೇತ್ರಕ್ಕೆ ಹೋಗುವ ಮಾನವರು ಪ್ರತಿ ಹೆಜ್ಜೆಗೂ ಅಶ್ವಮೇಧಯಾಗಗಳ ಫಲವನ್ನು ಪಡೆಯುವರು. ಶ್ರೀರಾಮಸೇತುವೆಯನ್ನು ಸೇರಿ ಶ್ರೀರಾಮನಾಥನ ಸಂತೋಷಕ್ಕಾಗಿ ಒಂದು ಗ್ರಾಮವನ್ನು ಭಕ್ತಿಯಿಂದ ಬ್ರಾಹ್ಮಣನಿಗೆ ದಾನಮಾಡುವ ಮನುಷ್ಯನು ಪರ್ವತ ಮತ್ತು ಕಾಡುಗಳಿಂದ ಸೇರಿದ ಎಲ್ಲ ಭೂಮಿಯನ್ನು ದಾನಮಾಡಿದ ಪುಣ್ಯಕ್ಕೆ ಭಾಗಿಯಾಗುವನು. ರಾಮನಾಥನಿಗೆ ಪತ್ರ, ಪುಷ್ಪ, ಫಲ, ನೀರು ಇವುಗಳನ್ನು ಭಕ್ತಿಯಿಂದ ಅರ್ಪಿಸುವ ಮಾನವನನ್ನು ರಾಮೇಶ್ವರನು ಯಾವಾಗಲೂ ಸಲಹುವನು. ಭವಾನೀಪತಿಯೂ, ದಯಾಳುವೂ ಆದ ರಾಮೇಶ್ವರನ ಭಕ್ತಿ, ಪೂಜೆ, ಸ್ತೋತ್ರ, ಸ್ಮರಣೆ ಇವುಗಳು ಅತ್ಯಂತ ದುರ್ಲಭವಾದುವು.

೪೭–೫೧. ತ್ರಿಣೇತ್ರನಾದ ರಾಮೇಶ್ವರನ ಲಿಂಗವನ್ನು ಭಕ್ತಿಯಿಂದ

ಲಾಭಸ್ತೇಷಾಂ ಜಯಸ್ತೇಷಾಮಿಹಲೋಕೇ ಪರತ್ರ ಚ ।
ರಾಮನಾಥಮಹಾಲಿಂಗ ವಿಷಯಾ ಯಸ್ಯ ಶೇಮುಷೀ ॥ ೪೮ ॥
ದಿವಾರಾತ್ರಂ ಚ ಭವತಿ ಸ ವೈ ಧನ್ಯತರೋ ಭುವಿ ।
ರಾಮನಾಥೇಶ್ವರಂ ಲಿಂಗಂ ಯೋ ನ ಪೂಜಯತೇ ಶಿವಂ ॥ ೪೯ ॥
ನಾಽಯಂ ಭುಕ್ತೇಶ್ಚ ಮುಕ್ತೇಶ್ಚ ರಾಜ್ಯಾನಾಮಪಿ ಭಾಜನಂ ।
ರಾಮೇಶ್ವರಮಹಾಲಿಂಗಂ ಯಃ ಪೂಜಯತಿ ಭಕ್ತಿತಃ ॥ ೫೦ ॥
ಭುಕ್ತಿಮುಕ್ತ್ಯೋಶ್ಚ ರಾಜ್ಯಾನಾಮಸೌ ಪರಮಭಾಜನಂ ।
ರಾಮನಾಥಾರ್ಚನಸಮಂ ನಾಽಧಿಕಂ ಪುಣ್ಯಮಸ್ತಿ ವೈ ॥ ೫೧ ॥
ರಾಮನಾಥೇಶ್ವರಂ ಲಿಂಗಂ ದ್ವೇಷ್ಟಿ ಯೋ ಮೋಹಮಾಸ್ಥಿತಃ ।
ಬ್ರಹ್ಮಹತ್ಯಾಽಯುತಂ ತೇನ ಕೃತಂ ನರಕಕಾರಣಂ ॥ ೫೨ ॥
ತತ್ಸಂಭಾಷಣಮಾತ್ರೇಣ ಮಾನವೋ ನರಕಂ ವ್ರಜೇತ್ ।
ರಾಮನಾಥಪರಾ ದೇವಾ ರಾಮನಾಥಪರಾ ಮಖಾಃ ॥ ೫೩ ॥
ರಾಮನಾಥಪರಾಃ ಸರ್ವೇ ತಸ್ಮಾದನ್ಯನ್ನ ವಿದ್ಯತೇ ।
ಅತಃ ಸರ್ವಂ ಪರಿತ್ಯಜ್ಯ ರಾಮನಾಥಂ ಸಮಾಶ್ರಯೇತ್ ॥ ೫೪ ॥
ರಾಮನಾಥಮಹಾಲಿಂಗಂ ಶರಣಂ ಯಾತಿ ಚೇನ್ನರಃ ।
ದೌರ್ಗತ್ಯಂ ತಸ್ಯ ನಾಽಸ್ತ್ಯೇವ ಶಿವಲೋಕಂ ಚ ಯಾಸ್ಯತಿ ॥ ೫೫ ॥

---

ಕೂಡಿದ ಮನಸ್ಸಿನಿಂದ ಮರೆಹೊಕ್ಕವರಿಗೆ ಇಹಪರಲೋಕಗಳಲ್ಲಿ ಲಾಭವೂ, ಜಯವೂ ಆಗುವುದು. ಈ ಲಿಂಗವನ್ನು ಯಾವಾಗಲೂ ನೆನೆಸುವ ಮಾನವನೇ ಪುಣ್ಯವಂತನು. ಇದನ್ನು ಪೂಜಿಸದವನು ರಾಜ್ಯಕ್ಕೂ, ಸುಖಭೋಗಕ್ಕೂ, ಮೋಕ್ಷಕ್ಕೂ ಅರ್ಹನಲ್ಲ. ಹಾಗೆ ಪೂಜಿಸಿದವನು ರಾಜ್ಯವನ್ನೂ, ಸುಖವನ್ನೂ, ಮೋಕ್ಷವನ್ನೂ ಪಡೆಯುವನು. ರಾಮನಾಥನ ಪೂಜೆಗೆ ಸಮಾನವಾದ ಪುಣ್ಯ ಕಾರ್ಯವಿರುವುದಿಲ್ಲ.

೫೨. ಅಜ್ಞಾನದಿಂದ ರಾಮೇಶ್ವರಲಿಂಗವನ್ನು ದ್ವೇಷಿಸುವ ಮಾನವನು ನರಕಕ್ಕೆ ಕಾರಣವಾದ ಹತ್ತುಸಾವಿರ ಬ್ರಹ್ಮಹತ್ಯೆಗಳನ್ನು ಮಾಡಿದಂತಾಗುವುದು.

೫೩–೫೪. ಅವನೊಡನೆ ಮಾತಾಡುವವನು ನರಕಕ್ಕೆ ಹೋಗುವನು. ದೇವತೆಗಳೂ, ಯಜ್ಞಗಳೂ, ಇತರ ಪ್ರಪಂಚವೂ ರಾಮನಾಥನಲ್ಲೇ ಅಡಗಿರುವುವು. ಅವನಿಗಿಂತ ಬೇರೆಯಾದುದು ಯಾವುದೂ ಇಲ್ಲ. ಆದ್ದರಿಂದ ಎಲ್ಲವನ್ನೂ ಬಿಟ್ಟು ರಾಮನಾಥನನ್ನು ಆಶ್ರಯಿಸಬೇಕು.

೫೫. ರಾಮನಾಥ ಲಿಂಗವನ್ನು ಮರೆಹೊಕ್ಕ ಮಾನವನು ದುರ್ಗತಿಯಿಲ್ಲದೆ ಶಿವಲೋಕವನ್ನು ಸೇರುವನು.

ಸರ್ವಯಜ್ಞತಪೋದಾನತೀರ್ಥಸ್ನಾನೇಷು ಯತ್ಫಲಂ ।
ತತ್ಫಲಂ ಕೋಟಿಗುಣಿತಂ ರಾಮನಾಥಸ್ಯ ಸೇವಯಾ ॥ ೫೬ ॥
ರಾಮನಾಥೇಶ್ವರಂ ಲಿಂಗಂ ಚಿಂತಯನ್ ಘಟಿಕಾದ್ವಯಂ ।
ಕುಲೈಕವಂಶಮುದ್ಧೃತ್ಯ ಶಿವಲೋಕೇ ಮಹೀಯತೇ ॥ ೫೭ ॥
ದಿನಮೇಕಂ ತು ಯಃ ಪಶ್ಯೇದ್ರಾಮನಾಥಂ ಮಹೇಶ್ವರಂ ।
ಇಹೈವ ಧನವಾನ್ಭೂತ್ವಾ ಸೋಽಂತೇ ರುದ್ರಶ್ಚ ಜಾಯತೇ ॥ ೫೮ ॥
ಯಃ ಸ್ಮರೇತ್ಪ್ರಾತರುತ್ಥಾಯ ರಾಮನಾಥಂ ಮಹೇಶ್ವರಂ ।
ಅನೇನೈವ ಶರೀರೇಣ ಸ ಶಿವೋ ವರ್ತತೇ ಭುವಿ ॥ ೫೯ ॥
ರಾಮನಾಥಮಹಾಲಿಂಗದ್ರಷ್ಟುರ್ದರ್ಶನಮಾತ್ರತಃ ।
ಅನ್ಯೇಷಾಂ ಪ್ರಾಣಿನಾಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೬೦ ॥
ರಾಮನಾಥೇಶ್ವರಂ ಲಿಂಗಂ ಮಧ್ಯಾಹ್ನೇ ಯಸ್ತು ಪಶ್ಯತಿ ।
ಸುರಾಪಾನಸಹಸ್ರಾಣಿ ತಸ್ಯ ನಶ್ಯಂತಿ ತತ್ಕ್ಷಣಾತ್ ॥ ೬೧ ॥
ಸಾಯಂಕಾಲೇ ಪಶ್ಯತಿ ಯೋ ರಾಮನಾಥಂ ಸಭಕ್ತಿಕಂ ।
ಗುರುಸ್ತ್ರೀಗಮನೋತ್ಪನ್ನಪಾತಕಂ ತಸ್ಯ ನಶ್ಯತಿ ॥ ೬೨ ॥
ಸಾಯಂಕಾಲೇ ಮಹಾಸ್ತೋತ್ರೈಃ ಸ್ತೌತಿ ರಾಮೇಶ್ವರಂ ತು ಯಃ ।
ಸ್ವರ್ಣಸ್ತೇಯಸಹಸ್ರಾಣಿ ತಸ್ಯ ನಶ್ಯಂತಿ ತತ್ಕ್ಷಣಾತ್ ॥ ೬೩ ॥

---

೫೬. ಈ ಲಿಂಗದ ಸೇವೆಯಿಂದ ಎಲ್ಲ ಯಜ್ಞಗಳು, ತಪಸ್ಸು, ದಾನ, ತೀರ್ಥಸ್ನಾನ ಇವುಗಳ ಫಲಕ್ಕಿಂತಲೂ ಕೋಟಿಯಷ್ಟು ಹೆಚ್ಚು ಫಲವುಂಟಾಗುವುದು.

೫೭. ರಾಮೇಶ್ವರ ಲಿಂಗವನ್ನು ಎರಡು ಗಳಿಗೆಯಾದರೂ ಧ್ಯಾನಿಸುವವನು ಇಪ್ಪತ್ತೊಂದುಕುಲಗಳನ್ನುಉದ್ಧಾರಮಾಡಿ ಶಿವಲೋಕದಲ್ಲಿ ಪೂಜ್ಯನಾಗುತ್ತಾನೆ.

೫೮. ಶ್ರೀರಾಮನಾಥನನ್ನು ಒಂದು ದಿನ ನೋಡಿದವನು ಈ ಲೋಕದಲ್ಲಿ ಧನಿಕನಾಗಿ ಕೊನೆಯಲ್ಲಿ ರುದ್ರನೇ ಆಗುವನು.

೫೯. ಬೆಳಿಗ್ಗೆ ಎದ್ದು ಈ ಸ್ವಾಮಿಯನ್ನು ಸ್ಮರಿಸುವ ಮನುಷ್ಯನು ಭೂಮಿಯಲ್ಲಿ ಈ ದೇಹದಿಂದಲೇ ಶಿವನಾಗಿರುತ್ತಾನೆ.

೬೦. ರಾಮೇಶ್ವರನನ್ನು ದರ್ಶನಮಾಡಿದವನನ್ನು ನೋಡುವ ಇತರ ಪ್ರಾಣಿಗಳ ಪಾಪವು ಕೂಡಲೆ ನಾಶವಾಗುವುದು.

೬೧. ಮಧ್ಯಾಹ್ನದಲ್ಲಿ ದರ್ಶನಮಾಡಿದವನ ಸಹಸ್ರ ಸುರಾಪಾನದೋಷಗಳು ಕೂಡಲೆ ಮಾಯವಾಗುವುವು.

೬೨. ಸಾಯಂಕಾಲದಲ್ಲಿ ಭಕ್ತಿಯಿಂದ ರಾಮೇಶ್ವರನನ್ನು ದರ್ಶನಗೈದವನ ಗುರುತಲ್ಪಗಮನಪಾಪವು ಪರಿಹಾರವಾಗುವುದು.

೬೩. ಸಾಯಂಕಾಲದಲ್ಲಿ ರಾಮೇಶ್ವರನನ್ನು ಸ್ತೋತ್ರಗಳಿಂದ ಸ್ತುತಿಸುವ ನರನ ಸಾವಿರ ಸ್ವರ್ಣಸ್ತೇಯದೋಷಗಳು ಕೂಡಲೆ ನಾಶವಾಗುವುವು.

ಸ್ನಾನಂ ಚ ಧನುಷಃ ಕೋಟೌ ರಾಮನಾಥಸ್ಯ ದರ್ಶನಂ ।
ಇತಿ ಲಭ್ಯೇತ ವೈ ಪುಂಸಾಂ ಕಿಂ ಗಂಗಾಜಲಸೇವಯಾ ॥ ೬೪ ॥
ರಾಮನಾಥಮಹಾಲಿಂಗಸೇವಯಾ ಯನ್ನ ಲಭ್ಯತೇ ।
ತದನ್ಯದ್ಧರ್ಮಜಾಲೇನ ನೈವ ಲಭ್ಯೇತ ಕರ್ಹಿಚಿತ್ ॥ ೬೫ ॥
ರಾಮನಾಥಂ ಮಹಾಲಿಂಗಂ ಯಃ ಕದಾಽಪಿ ನ ಪಶ್ಯತಿ ।
ಸಂಕರಃ ಸ ತು ವಿಜ್ಞೇಯೋ ನ ಪಿತುರ್ಬೀಜಸಂಭವಃ ॥ ೬೬ ॥
ರಾಮನಾಥೇತಿ ಶಬ್ದಂ ಯಸ್ತ್ರಿಃ ಪಠೇತ್ಪ್ರಾತರುತ್ಥಿತಃ ।
ತಸ್ಯ ಪೂರ್ವದಿನೋತ್ಪನ್ನಪಾತಕಂ ನಶ್ಯತಿ ಕ್ಷಣಾತ್ ॥ ೬೭ ॥
ರಾಮನಾಥೇ ಮಹಾಲಿಂಗೇ ಭಕ್ತರಕ್ಷಣದೀಕ್ಷಿತೇ ।
ಭೋಜನೇ ವಿದ್ಯಮಾನೇಽಪಿ ಯಾಚಕಾಃ ಕಿಂ ಪ್ರಯಾಸ್ಯಥ ॥ ೬೮ ॥
ರಾಮನಾಥಮಹಾಲಿಂಗೇ ಪ್ರಸನ್ನೇ ಕರುಣಾನಿಧೌ ।
ನಶ್ಯಂತಿ ಸಕಲಾಃ ಕ್ಲೇಶಾ ಯಥಾ ಸೂರ್ಯೋದಯೇ ಹಿಮಂ ॥ ೬೯ ॥
ಪ್ರಾಣೋತ್ಕ್ರಮಣವೇಲಾಯಾಂ ರಾಮನಾಥಂ ಸ್ಮರೇದ್ಯದಿ ।
ಜನ್ಮನೇಽಸೌ ನ ಕಲ್ಪೇತ ಭೂಯಃ ಶಂಕರತಾಮಿಯಾತ್ ॥ ೭೦ ॥
ರಾಮನಾಥ ಮಹಾದೇವ ಮಾಂ ರಕ್ಷ ಕರುಣಾನಿಧೇ ।
ಇತಿ ಯಃ ಸತತಂ ಬ್ರೂಯಾತ್ಕಲಿನಾಽಸೌ ನ ಬಾಧ್ಯತೇ ॥ ೭೧ ॥

---

೬೪. ಧನುಷ್ಕೋಟಿಯಲ್ಲಿ ಸ್ನಾನವನ್ನೂ, ರಾಮೇಶ್ವರನ ದರ್ಶನವನ್ನೂ ಮಾಡಿದ ನರರಿಗೆ ಗಂಗೆಯ ಸ್ನಾನದಿಂದೇನುಪ್ರಯೋಜನ?

೬೫. ರಾಮೇಶ್ವರಲಿಂಗಸೇವೆಯಿಂದ ಲಭಿಸದ ಪುಣ್ಯವು ಬೇರೆ ಯಾವ ಧರ್ಮದಿಂದಲೂ ದೊರೆಯಲಾರದು.

೬೬–೬೭. ಯಾವಾಗಲಾದರೂ ಒಮ್ಮೆ ರಾಮೇಶ್ವರಲಿಂಗವನ್ನು ದರ್ಶನ ಮಾಡದ ಮನುಷ್ಯನು ಸಂಕರಜಾತಿಯವನೇ ಹೊರತು ತಂದೆಯಿಂದ ಜನಿಸಿದವನಲ್ಲವೆಂದರಿಯಬೇಕು. ಬೆಳಗ್ಗೆ ಎದ್ದು 'ರಾಮನಾಥ' ಎಂಬ ನಾಮವನ್ನು ಮೂರಾವೃತ್ತಿ ಪಠಿಸಿದವನ ಹಿಂದಿನ ದಿನದ ಪಾಪವು ಕೂಡಲೆ ನಾಶವಾಗುವುದು.

೬೮. ಭಕ್ತರನ್ನು ಕಾಪಾಡಲು ದೀಕ್ಷೆಗೊಂಡಿರುವ ರಾಮನಾಥಮಹಾಲಿಂಗವೆಂಬ ಭೋಜನವಿರಲು ಭಿಕ್ಷೆಬೇಡಲು ಏಕೆಹೋಗುವಿರಿ?

೬೯. ದಯಾಳುವಾದ ರಾಮೇಶ್ವರನು ಪ್ರಸನ್ನನಾಗಲು ಸಮಸ್ತ ಕಷ್ಟಗಳೂ ಸೂರ್ಯನು ಉದಯಿಸಲು ಹಿಮವು ನಶಿಸುವಂತೆ ಪರಿಹಾರವಾಗುವುವು.

೭೦. ಮನುಷ್ಯನು ಮರಣಕಾಲದಲ್ಲಿ ರಾಮನಾಥನನ್ನು ಸ್ಮರಿಸಿದರೆ ತಿರುಗಿ ಹುಟ್ಟದೆ ರುದ್ರನೇ ಆಗುವನು.

೭೧. 'ದಯಾಳುವಾದ ರಾಮೇಶ್ವರ! ನನ್ನನ್ನು ಕಾಪಾಡೆ'ಂದು ಯಾವಾಗಲೂ ಹೇಳುವವನನ್ನು ಕಲಿಯು ಪೀಡಿಸುವುದಿಲ್ಲ.

ರಾಮನಾಥ ಜಗನ್ನಾಥ ಧೂರ್ಜಟೇ ನೀಲಲೋಹಿತ ।
ಇತಿ ಯಃ ಸತತಂ ಬ್ರೂಯಾದ್ಬಾಧ್ಯತೇಽಸೌ ನ ಮಾಯಯಾ ॥ ೭೨ ॥
ನೀಲಕಂಠ ಮಹಾದೇವ ರಾಮೇಶ್ವರ ಸದಾಶಿವ ।
ಇತಿ ಬ್ರುವನ್ಸದಾ ಜಂತುರ್ನೈವ ಕಾಮೇನ ಬಾಧ್ಯತೇ ॥ ೭೩ ॥
ರಾಮೇಶ್ವರ ಯಮಾರಾತೇ ಕಾಲಕೂಟವಿಷಾದನ ।
ಇತೀರಯಂಜನೋ ನಿತ್ಯಂ ನ ಕ್ರೋಧೇನ ಪ್ರಪೀಡ್ಯತೇ ॥ ೭೪ ॥
ರಾಮನಾಥಾಲಯಂ ಯಸ್ತು ದಾರುಭಿಃ ಕುರುತೇ ನರಃ ।
ಸ ಪುಮಾನ್ಸ್ವರ್ಗಮಾಪ್ನೋತಿ ತ್ರಿಕೋಟಿಕುಲಸಂಯುತಃ ॥ ೭೫ ॥
ಇಷ್ಟಕಾಭಿಸ್ತು ಯಃ ಕುರ್ಯಾತ್ಸ ವೈಕುಂಠಮವಾಪ್ನುಯಾತ್ ।
ಶಿಲಾಭಿಃ ಕುರುತೇ ಯಸ್ತು ಸ ಗಚ್ಛೇದ್ಬ್ರಹ್ಮಣಃ ಪದಂ ॥ ೭೬ ॥
ಸ್ಫಟಿಕಾದಿಶಿಲಾಭೇದೈಃ ಕುರ್ವನ್ನಸ್ಯಾಲಯಂ ಜನಃ ।
ಶಿವಲೋಕಮವಾಪ್ನೋತಿ ವಿಮಾನವರಮಾಸ್ಥಿತಃ ॥ ೭೭ ॥
ರಾಮನಾಥಾಲಯಂ ತಾಮ್ರೈಃ ಕುರ್ವನ್ಭಕ್ತಿಪುರಸ್ಸರಂ ।
ಶಿವಸಾಮೀಪ್ಯಮಾಪ್ನೋತಿ ಶಿವಸ್ಯಾಽರ್ಧಾಸನಸ್ಥಿತಃ ॥ ೭೮ ॥
ರಾಮೇಶ್ವರಾಲಯಂ ರೂಪ್ಯೈಃ ಕುರ್ವನ್ಸ್ವೈ ಮಾನವೋ ಮುದಾ ।
ಶಿವಸಾರೂಪ್ಯಮಾಪ್ನೋತಿ ಶಿವವನ್ಮೋದತೇ ಸದಾ ॥ ೭೯ ॥

---

೭೨. 'ರಾಮನಾಥ! ಜಗನ್ನಾಥ! ಧೂರ್ಜಟೇ! ನೀಲಲೋಹಿತ!' ಎಂದು ಯಾವಾಗಲೂ ಹೇಳುವವನನ್ನು ಮಾಯೆಯು ಬಾಧಿಸುವುದಿಲ್ಲ.

೭೩. 'ನೀಲಕಂಠ! ಮಹಾದೇವ! ರಾಮೇಶ್ವರ! ಸದಾಶಿವ!' ಎಂದು ಯಾವಾಗಲೂ ಹೇಳುವವನನ್ನು ಕಾಮವು ಪೀಡಿಸುವುದಿಲ್ಲ.

೭೪. 'ರಾಮೇಶ್ವರ! ಯಮಾರಾತೇ! ಕಾಲಕೂಟವಿಷಾದನ!' ಎಂದು ನಿತ್ಯವೂ ಪಠಿಸುವ ನರನನ್ನು ಕ್ರೋಧವು ಪೀಡಿಸುವುದಿಲ್ಲ.

೭೫. ರಾಮನಾಥನ ಭವನವನ್ನು ಮರದಿಂದ ಕಟ್ಟಿಸುವ ನರನು ಮೂರು ಕೋಟಿ ವಂಶಗಳೊಡನೆ ಸ್ವರ್ಗವನ್ನು ಸೇರುವನು.

೭೬. ರಾಮೇಶ್ವರ ದೇವಾಲಯವನ್ನು ಇಟ್ಟಿಗೆಗಳಿಂದ ಕಟ್ಟಿಸುವವನು ವೈಕುಂಠಕ್ಕೂ, ಕಲ್ಲಿನಿಂದ ಕಟ್ಟಿಸುವವನು ಬ್ರಹ್ಮಲೋಕಕ್ಕೂ ಹೋಗುವನು.

೭೭. ರಾಮೇಶ್ವರನ ಆಲಯವನ್ನು ಸ್ಫಟಿಕ ಮೊದಲಾದ ಬಗೆ ಬಗೆಯ ಕಲ್ಲುಗಳಿಂದ ಕಟ್ಟಿಸುವವನು ಉತ್ತಮ ವಿಮಾನವನ್ನೇರಿ ಶಿವಲೋಕಕ್ಕೆ ತೆರಳುವನು.

೭೮. ಭಕ್ತಿಯಿಂದ ಆ ಶಿವಮಂದಿರವನ್ನು ತಾಮ್ರದಿಂದ ನಿರ್ಮಿಸುವವನು ಶಿವನ ಸಾಮೀಪ್ಯವನ್ನು ಪಡೆದು ಅವನ ಅರ್ಧಪೀಠದಲ್ಲಿ ಕೂತುಕೊಳ್ಳುವನು.

೭೯. ರಾಮೇಶ್ವರನ ಭವನವನ್ನು ಬೆಳ್ಳಿಯಿಂದ ನಿರ್ಮಿಸುವವನು ಶಿವನ ಸಾರೂಪ್ಯವನ್ನು ಹೊಂದಿ ಅವನಂತೆಯೆ ಯಾವಾಗಲೂ ಆನಂದಿಸುವನು.

ರಾಮನಾಥಾಲಯಂ ಹೇಮ್ನಾ ಯಃ ಕರೋತಿ ಸಭಕ್ತಿಕಂ ।
ಸ ನರೋ ಮುಕ್ತಿಮಾಪ್ನೋತಿ ಶಿವಸಾಯುಜ್ಯರೂಪಿಣೀಂ ॥ ೮೦ ॥
ರಾಮನಾಥಾಲಯಂ ಹೇಮ್ನಾ ಧನಾಢ್ಯಃ ಕುರುತೇ ನರಃ ।
ಮೃದಾ ದರಿದ್ರಃ ಕುರುತೇ ತಯೋಃ ಪುಣ್ಯಂ ಸಮಂ ಸ್ಮೃತಂ ॥ ೮೧ ॥
ರಾಮನಾಥಮಹಾಲಿಂಗಸ್ನಾನಕಾಲೇ ದ್ವಿಜೋತ್ತಮಾಃ ।
ತ್ರಿಸಂಧ್ಯಂ ಗೇಯನೃತ್ತೇ ಚ ಮುಖವಾದ್ಯೈಶ್ಚ ಕಾಹಲಂ ॥ ೮೨ ॥
ವಾದ್ಯಾನ್ಯನ್ಯಾನಿ ಕುರುತೇ ಯಃ ಪುಮಾನ್ಭಕ್ತಿಪೂರ್ವಕಂ ।
ಸ ಮಹಾಪಾತಕೈರ್ಮುಕ್ತೋ ರುದ್ರಲೋಕೇ ಮಹೀಯತೇ ॥ ೮೩ ॥
ಯೋಽಭಿಷೇಕಸ್ಯ ಸಮಯೇ ರಾಮನಾಥಸ್ಯ ಶೂಲಿನಃ ।
ರುದ್ರಾಽಧ್ಯಾಯಂ ಚ ಚಮಕಂ ತಥಾ ಪುರುಷಸೂಕ್ತಕಂ ॥ ೮೪ ॥
ತ್ರಿಸುಪರ್ಣಂ ಪಂಚಶಾಂತಿಂ ಪಾವಮಾನ್ಯಾದಿಕಂ ತಥಾ ।
ಜಪೇತ್ಪ್ರೀತಿಯುತೋ ವಿಪ್ರಾ ನರಕಂ ನ ಸಮಶ್ನುತೇ ॥ ೮೫ ॥
ಗವಾಂ ಕ್ಷೀರೇಣ ದಧ್ನಾ ಚ ಪಂಚಗವ್ಯೈರ್ಘೃತೈಸ್ತಥಾ ।
ರಾಮನಾಥಮಹಾಲಿಂಗಸ್ನಾನಂ ನರಕನಾಶನಂ ॥ ೮೬ ॥
ರಾಮನಾಥಮಹಾಲಿಂಗಂ ಘೃತೇನ ಸ್ನಾಪಯೇಚ್ಚ ಯಃ ।
ಕಲ್ಪಜನ್ಮಾರ್ಜಿತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೮೭ ॥

---

೮೦. ಶ್ರೀರಾಮನಾಥನ ಆಲಯವನ್ನು ಚಿನ್ನದಿಂದ ಭಕ್ತಿಸಹಿತವಾಗಿ ಕಟ್ಟಿಸುವವನು ಶಿವಸಾಯುಜ್ಯರೂಪವಾದ ಮೋಕ್ಷವನ್ನು ಪಡೆಯುವನು.

೮೧. ರಾಮನಾಥನ ಆಲಯವನ್ನು ಚಿನ್ನದಿಂದ ಕಟ್ಟಿಸಿದ ಹಣಗಾರನ ಪುಣ್ಯವೂ, ಮಣ್ಣಿನಿಂದ ಕಟ್ಟಿಸಿದ ಬಡವನ ಪುಣ್ಯವೂ ಸಮಾನವಾಗಿರುವುದು.

೮೨–೮೩. ಎಲೈ ಬ್ರಾಹ್ಮಣವರ್ಯರೆ! ರಾಮನಾಥಮಹಾಲಿಂಗದ ಸ್ನಾನ ಸಮಯದಲ್ಲಿ ಮೂರು ಸಂಧ್ಯಾಕಾಲಗಳಲ್ಲಿಯೂ ಮುಖವಾದ್ಯಗಳೊಡನೆ ಹಾಡುವುದು, ನರ್ತನಮಾಡುವುದು, ಕೊಂಬು, ಕಹಳೆ ಮೊದಲಾದ ವಾದ್ಯಗಳನ್ನು ಭಕ್ತಿಯಿಂದ ಊದುವುದು ಇವುಗಳಿಂದ ಮನುಷ್ಯನು ಮಹಾಪಾತಕಮುಕ್ತನಾಗಿ ರುದ್ರಲೋಕದಲ್ಲಿ ಪೂಜ್ಯನಾಗುತ್ತಾನೆ.

೮೪–೮೫. ರಾಮನಾಥನ ಅಭಿಷೇಕಕಾಲದಲ್ಲಿ ರುದ್ರ, ಪುರುಷಸೂಕ್ತ, ತ್ರಿಸುಪರ್ಣ, ಪಂಚಶಾಂತಿ, ಪವಮಾನ ಸೂಕ್ತಗಳನ್ನು ಭಕ್ತಿಯಿಂದ ಜಪಿಸುವ ನರನು ನರಕವನ್ನನುಭವಿಸುವುದಿಲ್ಲ.

೮೬. ರಾಮನಾಥಲಿಂಗವನ್ನು ಹಾಲು, ಮೊಸರು, ತುಪ್ಪ ಮೊದಲಾದ ಪಂಚಗವ್ಯಗಳಿಂದ ಅಭಿಷೇಕ ಮಾಡಿದರೆ ನರಕದ ಭಯವಿರುವುದಿಲ್ಲ.

೮೭. ರಾಮನಾಥಲಿಂಗಕ್ಕೆ ಘೃತಾಭಿಷೇಕ ಮಾಡಿದ ಮನುಷ್ಯನು ಅನೇಕ ಕಲ್ಪಗಳಲ್ಲೆಸಗಿದ ಪಾಪಗಳು ಕೂಡಲೆ ನಾಶವಾಗುವುವು.

ರಾಮನಾಥಮಹಾಲಿಂಗಂ ಗೋಕ್ಷೀರೈಃ ಸ್ನಾಪಯನ್ನರಃ ।
ಕುಲೈಕವಿಂಶಮುತ್ತಾರ್ಯ ಶಿವಲೋಕೇ ಮಹೀಯತೇ ॥ ೮೮ ॥
ರಾಮನಾಥಮಹಾಲಿಂಗಂ ದಧ್ನಾ ಸಂಸ್ನಾಪಯನ್ನರಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥ ೮೯ ॥
ಅಭ್ಯಂಗಂ ತಿಲತೈಲೇನ ರಾಮೇಶ್ವರಶಿವಸ್ಯ ಯಃ ।
ಕರೋತಿ ಹಿ ಸಕೃದ್ಭಕ್ತ್ಯಾ ಸ ಕುಬೇರಗೃಹೇ ವಸೇತ್ ॥ ೯೦ ॥
ರಾಮನಾಥಮಹಾಲಿಂಗೇ ಸ್ನಾನಮಿಕ್ಷುರಸೇನ ಯಃ ।
ಸಕೃದಪ್ಯಾಚರೇದ್ಭಕ್ತ್ಯಾ ಚಂದ್ರಲೋಕಂ ಸಮಶ್ನುತೇ ॥ ೯೧ ॥
ಲಿಕುಚಾಮ್ರರಸೋತ್ಪನ್ನಸಾರೇಣ ಸ್ನಾಪಯನ್ನರಃ ।
ರಾಮನಾಥಮಹಾಲಿಂಗಂ ಪಿತೃಲೋಕಂ ಸಮಶ್ನುತೇ ॥ ೯೨ ॥
ನಾಲಿಕೇರಜಲೈಃ ಸ್ನಾನಂ ರಾಮನಾಥಮಹೇಶ್ವರೇ ।
ಬ್ರಹ್ಮಹತ್ಯಾದಿ ಪಾಪಾನಾಂ ನಾಶನಂ ಪರಿಕೀರ್ತಿತಂ ॥ ೯೩ ॥
ರಾಮನಾಥಮಹಾಲಿಂಗಂ ರಂಭಾಪಕ್ವೈರ್ವಿಮರ್ದಯನ್ ।
ವಿನಾಶ್ಯ ಸಕಲಂ ಪಾಪಂ ವಾಯುಲೋಕೇ ಮಹೀಯತೇ ॥ ೯೪ ॥
ವಸ್ತ್ರಪೂತೇನ ತೋಯೇನ ರಾಮನಾಥಂ ಮಹೇಶ್ವರಂ ।
ಸ್ನಾಪಯನ್ವಾರುಣಂ ಲೋಕಮಾಪ್ನೋತಿ ದ್ವಿಜಸತ್ತಮಾಃ ॥ ೯೫ ॥

---

೮೮. ಈ ಲಿಂಗವನ್ನು ಹಸುವಿನ ಹಾಲಿನಿಂದ ಅಭಿಷೇಕಮಾಡಿದ ನರನು ಇಪ್ಪತ್ತೊಂದು ಕುಲಗಳನ್ನು ಉದ್ಧರಿಸಿ ಶಿವಲೋಕದಲ್ಲಿ ಪೂಜ್ಯನಾಗುವನು.

೮೯. ರಾಮನಾಥಲಿಂಗವನ್ನು ಮೊಸರಿನಿಂದ ಸ್ನಾನಮಾಡಿಸುವವನು ಸಮಸ್ತ ಪಾಪಮುಕ್ತನಾಗಿ ವಿಷ್ಣುಲೋಕದಲ್ಲಿ ಪೂಜ್ಯನಾಗುವನು.

೯೦. ರಾಮೇಶ್ವರನಿಗೆ ಎಳ್ಳೆಣ್ಣೆಯಿಂದ ಒಂದು ಸಾರಿ ಭಕ್ತಿಯಿಂದ ಅಭ್ಯಂಗಮಾಡಿಸುವವನು ಕುಬೇರನ ಅರಮನೆಯಲ್ಲಿ ವಾಸಿಸುವನು.

೯೧. ಈ ಲಿಂಗವನ್ನು ಕಬ್ಬಿನ ರಸದಿಂದ ಅಭಿಷೇಕ ಮಾಡುವವನು ಚಂದ್ರ ಲೋಕವನ್ನೈದುವನು.

೯೨. ನಿಂಬೆಹಣ್ಣು, ಮಾವಿನಹಣ್ಣು ಇವುಗಳ ಸಾರದಿಂದ ರಾಮೇಶ್ವರ ಲಿಂಗವನ್ನು ಸ್ನಾನಮಾಡಿಸುವವನು ಪಿತೃಲೋಕವನ್ನು ಹೊಂದುವನು.

೯೩. ರಾಮನಾಥಲಿಂಗಕ್ಕೆ ಎಳನೀರಿನಿಂದ ಅಭಿಷೇಕ ಮಾಡಿಸಿದವನ ಬ್ರಹ್ಮಹತ್ಯಾದಿ ಪಾಪಗಳು ಪರಿಹಾರವಾಗುವುವು.

೯೪. ಈ ಲಿಂಗವನ್ನು ಬಾಳೆಯಹಣ್ಣಿನಿಂದ ಉಜ್ಜಿ ಸ್ನಾನಮಾಡಿಸುವ ಮನುಷ್ಯನು ಸಕಲ ಪಾಪಮುಕ್ತನಾಗಿ ವಾಯುಲೋಕದಲ್ಲಿ ಪೂಜ್ಯನಾಗುವನು.

೯೫. ಎಲೈ ಬ್ರಾಹ್ಮಣೋತ್ತಮರೆ! ರಾಮನಾಥಲಿಂಗವನ್ನು ವಸ್ತ್ರದಿಂದ

ಚಂದನೋದಕಧಾರಾಭೀ ರಾಮನಾಥಂ ಮಹೇಶ್ವರಂ ।
ಸ್ನಾಪಯೇತ್ಪುರುಷೋ ವಿಪ್ರಾ ಗಾಂಧರ್ವಂ ಲೋಕಮಾಪ್ನುಯಾತ್ ॥
ಪುಷ್ಪವಾಸಿತತೋಯೇನ ಹೇಮಸಂಪೃಕ್ತವಾರಿಣಾ ।
ಪದ್ಮವಾಸಿತತೋಯೇನ ಸ್ನಾನಾದ್ರಾಮೇಶ್ವರಸ್ಯ ತು ।
ಮಹೇಂದ್ರಾಸನಮಾರುಹ್ಯ ತೇನೈವ ಸಹ ಮೋದತೇ ॥ ೯೭ ॥
ಪಾಟಲೋತ್ಪಲಕಲ್ಹಾರಪುನ್ನಾಗಕರವೀರಕೈಃ ।
ವಾಸಿತೈರ್ವಾರಿಭಿರ್ವಿಪ್ರಾ ರಾಮೇಶ್ವರಮಹೇಶ್ವರಂ ॥ ೯೮ ॥
ಅಭಿಷಿಚ್ಯ ಮಹದ್ಭಿಶ್ಚ ಪಾತಕೈಃ ಸ ವಿಮುಚ್ಯತೇ ॥ ೯೯ ॥
ಯಾನಿ ಚಾಽನ್ಯಾನಿ ಪುಷ್ಪಾಣಿ ಸುರಭೀಣಿ ಮಹಾಂತಿ ಚ ।
ತದ್ಗಂಧವಾಸಿತೈಸ್ತೋಯೈರಭಿಷಿಚ್ಯ ದಯಾನಿಧಿಂ ॥ ೧೦೦ ॥
ರಾಮೇಶ್ವರಮಹಾಲಿಂಗಂ ಶಿವಲೋಕೇ ಮಹೀಯತೇ ।
ಏಲಾ ಕರ್ಪೂರಲಾವಂಚವಾಸಿತೈಃ ಶುದ್ಧವಾರಿಭಿಃ ॥ ೧೦೧ ॥
ರಾಮೇಶ್ವರಮಹಾಲಿಂಗಮಭಿಷಿಚ್ಯ ವಿಶುದ್ಧಧೀಃ ।
ಆಗ್ನೇಯಂ ಲೋಕಮಾಸಾದ್ಯ ಸರ್ವಾನ್ಕಾಮಾನ್ಸಮಶ್ನುತೇ ॥ ೧೦೨ ॥

---

ಶೋಧಿಸಿದ ನೀರಿನಿಂದ ಸ್ನಾನಮಾಡಿಸುವ ಮಾನವನು ವರುಣಲೋಕವನ್ನು ಪಡೆಯುವನು.

೯೬. ರಾಮನಾಥಲಿಂಗವನ್ನು ಗಂಧೋದಕದಿಂದ ಸ್ನಾನಮಾಡಿಸುವವನು ಗಂಧರ್ವಲೋಕವನ್ನು ಹೊಂದುವನು.

೯೭. ರಾಮನಾಥಲಿಂಗವನ್ನು ಸುವರ್ಣಮಿಶ್ರವೂ, ತಾವರೆ ಹೂವಿನಿಂದ ಪರಿಮಳಗೊಂಡುದೂ ಆದ ನೀರಿನಿಂದ ಸ್ನಾನಮಾಡಿಸಿದವನು ದೇವೇಂದ್ರನ ಸಿಂಹಾಸನವನ್ನೇರಿ ಅವನೊಡನೆ ಸಂತೋಷಗೊಳ್ಳುವನು.

೯೮-೯೯. ರಾಮನಾಥಲಿಂಗವನ್ನು ಪಾಟಲ, ಕನ್ನೈದಿಲೆ, ಕಲ್ಹಾರ, ಸುರಗಿ, ಕಣಿಗಲೆ ಹೂವುಗಳಿಂದ ಸುವಾಸನೆಗೊಂಡ ನೀರಿನಿಂದ ಸ್ನಾನ ಮಾಡಿಸಿದವನು ಮಹಾಪಾತಕಗಳಿಂದ ಮುಕ್ತನಾಗುವನು.

೧೦೦-೧೦೨. ಇನ್ನೂ ಇತರ ಸುವಾಸನೆಯುಳ್ಳ ಹೂವುಗಳಿಂದ ಪರಿಮಳ ಗೊಂಡ ನೀರಿನಿಂದ ದಯಾಳುವಾದ ರಾಮೇಶ್ವರಮಹಾಲಿಂಗವನ್ನು ಅಭಿಷೇಕ ಮಾಡಿದವನು ಶಿವಲೋಕದಲ್ಲಿ ಪೂಜ್ಯನಾಗುವನು. ಏಲಕ್ಕಿ, ಕರ್ಪೂರ, ಲಾವಂಚಗಳಿಂದ ಸುವಾಸನೆಯಾದ ಶುದ್ಧಜಲದಿಂದ ರಾಮೇಶ್ವರಮಹಾಲಿಂಗ ವನ್ನು ಅಭಿಷೇಕ ಮಾಡಿದವನು ಅಗ್ನಿಲೋಕವನ್ನು ಸೇರಿ ಸಮಸ್ತ ಇಷ್ಟಾರ್ಥ ಗಳನ್ನೂ ಪಡೆಯುವನು.

ರಾಮನಾಥಾಽಭಿಷೇಕಾರ್ಥಂ ಮೃದ್ಘಟಾನ್ಯಃ ಪ್ರಯಚ್ಛತಿ ।
ಇಹ ಲೋಕೇ ಶತಾಯುಃ ಸ್ಯಾತ್ಸರ್ವಕಾಮಸಮೃದ್ಧಿಮಾನ್ ॥ ೧೦೩ ॥
ತಾಮ್ರಕುಂಭಪ್ರದಾನೇನ ದೇವೇಂದ್ರತ್ವಮವಾಪ್ನುಯಾತ್ ।
ರೌಪ್ಯಕುಂಭಪ್ರದಾನೇನ ಬ್ರಹ್ಮಲೋಕಂ ಸಮಶ್ನುತೇ ॥ ೧೦೪ ॥
ಹೇಮಕುಂಭಪ್ರದಾನೇನ ಶಿವಲೋಕೇ ಮಹೀಯತೇ ।
ರತ್ನಕುಂಭಪ್ರದಾನೇನ ಶಿವಸಾಮೀಪ್ಯಮಶ್ನುತೇ ॥ ೧೦೫ ॥
ರಾಮನಾಥಾಽಭಿಷೇಕಾರ್ಥಂ ನೈವೇದ್ಯಾರ್ಥಮಪಿ ದ್ವಿಜಾಃ ।
ಯೋ ಗಾಂ ಪಯಸ್ವಿನೀಂ ದದ್ಯಾತ್ಸೋಽಶ್ವಮೇಧಫಲಂ ಲಭೇತ್ ।
ಪ್ರಾಪ್ನೋತಿ ಶಿವವೇಷಂ ಚ ದೇಹಾಂತೇ ಶಿವಲೋಕಭಾಕ್ ॥ ೧೦೬ ॥
ರಾಮಸೇತೌ ಧನುಷ್ಕೋಟೌ ರಾಮನಾಥೇತ್ಯುದೀರ್ಯ ಯಃ ॥ ೧೦೭ ॥
ಯತ್ರ ಕ್ವಾಪ್ಯಾಚರೇತ್ಸ್ನಾನಂ ಸೇತುಸ್ನಾನಫಲಂ ಲಭೇತ್ ।
ಸುಧಾಪ್ರಲಿಪ್ತಂ ಯಃ ಕುರ್ಯಾದ್ರಾಮನಾಥಶಿವಾಲಯಂ ॥ ೧೦೮ ॥
ತತ್ಪುಣ್ಯಂ ಗದಿತುಂ ನಾಽಹಂ ಶಕ್ತೋ ವರ್ಷಶತಾದಪಿ ।
ನವೀಕರೋತಿ ಯೋ ಮರ್ತ್ಯೋ ರಾಮನಾಥಶಿವಾಲಯಂ ॥ ೧೦೯ ॥

---

೧೦೩. ರಾಮನಾಥನ ಅಭಿಷೇಕಕ್ಕಾಗಿ ಮಣ್ಣಿನ ಗಡಿಗೆಯನ್ನು ದಾನ ಮಾಡುವವನು ಈ ಲೋಕದಲ್ಲಿ ಸಮಸ್ತ ಇಷ್ಟಾರ್ಥಗಳನ್ನೂ ಹೊಂದಿ ನೂರು ವರ್ಷ ಜೀವಿಸುವನು.

೧೦೪. ತಾಮ್ರದ ಕಲಶವನ್ನೀಯುವವನು ದೇವೇಂದ್ರನಾಗುವನು. ಬೆಳ್ಳಿಯ ಕಲಶವನ್ನು ದಾನಮಾಡುವವನು ಬ್ರಹ್ಮಲೋಕವನ್ನು ಹೊಂದುವನು.

೧೦೫. ಚಿನ್ನದ ಕಲಶವನ್ನು ಕೊಡುವವನು ಶಿವಲೋಕದಲ್ಲಿ ಪೂಜ್ಯನಾಗುವನು. ರತ್ನದ ಕಲಶವನ್ನು ದಾನಮಾಡುವವನು ಶಿವನ ಸಾಮೀಪ್ಯವನ್ನು ಪಡೆಯುವನು.

೧೦೬. ರಾಮನಾಥನ ಅಭಿಷೇಕಕ್ಕಾಗಿಯೂ, ನೈವೇದ್ಯಕ್ಕಾಗಿಯೂ ಹಾಲನ್ನು ಕರೆಯುತ್ತಿರುವ ಆಕಳನ್ನು ದಾನಮಾಡುವವನು ಅಶ್ವಮೇಧಯಾಗದ ಫಲವನ್ನು ಹೊಂದುವನು; ದೇಹಾವಸಾನದಲ್ಲಿ ಶಿವನ ವೇಷವನ್ನು ಧರಿಸಿ ಶಿವಲೋಕವನ್ನು ಸೇರುವನು.

೧೦೭–೧೧೪. ರಾಮಸೇತುವೆಯಲ್ಲಿರುವ ಧನುಷ್ಕೋಟಿಯಲ್ಲಿ "ರಾಮನಾಥ" ಎಂದು ಹೇಳುತ್ತ ಮನುಷ್ಯನು ಯಾವ ಕಡೆಯಲ್ಲಿ ಸ್ನಾನ ಮಾಡಿದರೂ ಸೇತುಸ್ನಾನದ ಫಲವನ್ನು ಪಡೆಯುವನು. ರಾಮೇಶ್ವರನ ಆಲಯಕ್ಕೆ ಸುಣ್ಣಬಳಿಸಿದವನ ಪುಣ್ಯವನ್ನು ನೂರು ವರ್ಷಗಳಾದರೂ ಹೇಳಿ ಮುಗಿಸಲು ನಾನು ಶಕ್ತನಲ್ಲ. ರಾಮನಾಥನ ಆಲಯವನ್ನು ಹೊಸದುಮಾಡಿ

ಕರ್ತುಃ ಶತಗುಣಂ ಜ್ಞೇಯಂ ತಸ್ಯ ಪುಣ್ಯಫಲಂ ದ್ವಿಜಾಃ ।
ಭಿನ್ನಂ ಭಿನ್ನಂ ಚ ಯಃ ಸಮ್ಯಗ್ರಾಮನಾಥಶಿವಾಲಯಂ ॥ ೧೧೦ ॥
ಕರೋತಿ ಭಕ್ತ್ಯಾ ಪುರುಷೋ ಬ್ರಹ್ಮಹತ್ಯಾಽಯುತಂ ದಹೇತ್ ।
ರಾಮನಾಥಸ್ಯ ಪುರತೋ ದೀಪಾನಾರೋಪಯನ್ಮುದಾ ॥ ೧೧೧ ॥
ಅವಿದ್ಯಾಪಟಲಂ ಭಿತ್ವಾ ಯಾತಿ ಬ್ರಹ್ಮ ಸನಾತನಂ ।
ಘೃತಂ ತೈಲಂ ತಥಾ ಮುದ್ಗಾನ್ಶರ್ಕರಾಂಸ್ತಂಡುಲಾನ್ಗುಡಾನ್ ॥ ೧೧೨ ॥
ಪ್ರಯಚ್ಛನ್ರಾಮನಾಥಾಯ ದೇವೇಂದ್ರಪದಮಶ್ನುತೇ ।
ರಾಮನಾಥಮಹಾಲಿಂಗದರ್ಶನಾದರ್ಚನಾತ್ಸ್ಮೃತೇಃ ॥ ೧೧೩ ॥
ಸ್ಪರ್ಶನಾದಪಿ ಪಾಪಾನಿ ವಿಲಯಂ ಯಾಂತಿ ತತ್ಕ್ಷಣಾತ್ ॥ ೧೧೪ ॥
ರಾಮನಾಥಾಯ ಯೋ ದದ್ಯಾನ್ಮಹಾಘಂಟಾಂ ಚ ದರ್ಪಣಂ ।
ವಿಮಾನಶತಸಂಭೋಗೈಶ್ಚಿರಂ ಶಿವಪುರೇ ವಸೇತ್ ।
ಭೇರೀಮೃದಂಗಪಟಹನಿಃಸಾಣಮುರಜಾದಿಕಂ ॥ ೧೧೫ ॥
ವಂಶಕಾಂಸ್ಯಾದಿವಾದಿತ್ರಂ ತಥಾ ವಾದ್ಯಾಂತರಾಣಿ ಚ ।
ಪ್ರಯಚ್ಛನ್ರಾಮನಾಥಾಯ ಮಹಾದೇವಾಯ ಸಾದರಂ ॥ ೧೧೬ ॥
ಸ ವಿಮಾನೈರ್ಮಹಾಭೋಗೈರ್ವಾದ್ಯಘೋಷಸಮನ್ವಿತೈಃ ।
ಅನೇಕಯುಗಪರ್ಯಂತಂ ಶಿವಲೋಕೇ ಮಹೀಯತೇ ॥ ೧೧೭ ॥

---

ಸುವವನು ಕಟ್ಟಿಸಿದವನಿಗಿಂತಲೂ ನೂರರಷ್ಟು ಪುಣ್ಯಫಲವನ್ನು ಪಡೆಯುವನು. ಭಿನ್ನವಾಗಿರುವ ಈ ರಾಮೇಶ್ವರನ ಆಲಯವನ್ನು ಭಕ್ತಿಯಿಂದ ಜೀರ್ಣೋದ್ಧಾರ ಮಾಡುವವನ ಹತ್ತುಸಾವಿರ ಬ್ರಹ್ಮಹತ್ಯೆಗಳು ಭಸ್ಮವಾಗುವುವು. ರಾಮನಾಥನ ಮುಂದೆ ದೀಪಗಳನ್ನು ಹೊತ್ತಿಸುವವನು ಅವಿದ್ಯೆಯನ್ನು ಭೇದಿಸಿ ಅನಾದಿಯಾದ ಪರಬ್ರಹ್ಮನನ್ನು ಸೇರುವನು. ರಾಮನಾಥನಿಗೆ ತುಪ್ಪ, ಎಣ್ಣೆ, ಹೆಸರು, ಸಕ್ಕರೆ, ಅಕ್ಕಿ, ಬೆಲ್ಲಗಳನ್ನು ಕೊಡುವವನು ದೇವೇಂದ್ರನ ಪದವಿಯನ್ನು ಪಡೆಯುವನು. ಈ ಲಿಂಗದ ದರ್ಶನ, ಪೂಜೆ, ಸ್ಮರಣೆ, ಸ್ಪರ್ಶ ಇವುಗಳಿಂದ ಪಾಪಗಳೆಲ್ಲ ಕೂಡಲೆ ನಾಶವಾಗುವುವು.

೧೧೫–೧೧೭. ರಾಮನಾಥನಿಗೆ ದೊಡ್ಡ ಗಂಟೆಯನ್ನೂ, ಕನ್ನಡಿಯನ್ನೂ ಕೊಡುವವನು ಅನೇಕ ವಿಮಾನಗಳನ್ನು ಪಡೆದು ಸುಖವನ್ನನುಭವಿಸುತ್ತ ಶಿವನ ಪಟ್ಟಣದಲ್ಲಿಯೆ ವಾಸಿಸುವನು. ನಗಾರಿ, ಮದ್ದಲೆ, ತಮಟೆ, ಕೊಂಬು, ಮುರಜ, ಕೊಳಲು ತಾಳಗಳನ್ನೂ, ಇತರ ವಾದ್ಯಗಳನ್ನೂ ರಾಮನಾಥನಿಗೆ ಭಕ್ತಿಯಿಂದ ಕೊಡುವವನು ವಾದ್ಯಘೋಷಗಳಿಂದ ಕೂಡಿದ ವಿಮಾನಗಳಲ್ಲಿ ಸುಖಿಸುತ್ತ ಅನೇಕ ಯುಗಗಳವರೆಗೆ ಶಿವಲೋಕದಲ್ಲಿ ಪೂಜ್ಯನಾಗುವನು.

ರಾಮನಾಥಂ ಸಮುದ್ದಿಶ್ಯ ಯದ್ದತ್ತಂ ಸ್ವಲ್ಪಮಾದರಾತ್ ।
ತದನಂತಫಲಂ ದಾತುಃ ಪರತ್ರ ಭವತಿ ಧ್ರುವಂ ॥ ೧೧೮ ॥
ರಾಮೇಶ್ವರೇ ಮಹಾಕ್ಷೇತ್ರೇ ರಾಮನಾಥಸ್ಯ ಸನ್ನಿಧೌ ।
ವಸನ್ಮುಕ್ತಿಮವಾಪ್ನೋತಿ ಪುನರಾವೃತ್ತಿವರ್ಜಿತಾಂ ॥ ೧೧೯ ॥
ಆಯುಃ ಪ್ರಯಾತಿ ತ್ವರಿತಂ ತ್ವರಿತಂ ಯಾತಿ ಯೌವನಂ ।
ತ್ವರಿತಂ ಸಂಪದೋ ಯಾಂತಿ ದಾರಪುತ್ರಾದಯಸ್ತಥಾ ॥ ೧೨೦ ॥
ರಾಜಾದಿಭಿರ್ಧನಂ ಬಾಧ್ಯಂ ಗೃಹಕ್ಷೇತ್ರಾದಿಕಂ ತಥಾ ।
ಸರ್ವಂ ಚ ಕ್ಷಣಿಕಂ ವಿಪ್ರಾ ಗೃಹೋಪಕರಣಾದಿಕಂ ॥ ೧೨೧ ॥
ತಸ್ಮಾತ್ಸರ್ವಂ ಪರಿತ್ಯಜ್ಯ ಸಂಸಾರಸ್ಯೋಪಲಾಲನಂ ।
ರಾಮೇಶ್ವರಮಹಾಲಿಂಗಮಾಪನ್ನಾರ್ತಿಹರಂ ನೃಣಾಂ ॥ ೧೨೨ ॥
ಶ್ರೋತವ್ಯಂ ಕೀರ್ತಿತವ್ಯಂ ಚ ಸ್ಮರ್ತವ್ಯಂ ಚ ಮನೀಷಿಭಿಃ ।
ರಾಮೇಶ್ವರಾಯ ದೇವಾಯ ಯೋ ವೈ ಗ್ರಾಮಾನ್ಪ್ರಯಚ್ಛತಿ ॥ ೧೨೩ ॥
ಸ ಹಿ ಪ್ರಾರಬ್ಧದೇಹಾಂತೇ ಶಿವ ಏವ ಪ್ರಜಾಯತೇ ।
ಪಾತ್ರಾಣಾಮುತ್ತಮಂ ಪಾತ್ರಂ ರಾಮನಾಥೋ ಮಹೇಶ್ವರಃ ॥ ೧೨೪ ॥
ತಸ್ಮೈ ದತ್ವಾ ದ್ವಿಜಾಃ ಸತ್ಯಮನಂತಂ ಸುಖಮಶ್ನುತೇ ।
ರಾಮನಾಥಮಹಾಲಿಂಗದರ್ಶನಾಽವಧಿ ಪಾತಕಂ ॥ ೧೨೫ ॥

---

೧೧೮. ಶ್ರೀರಾಮನಾಥನನ್ನು ಉದ್ದೇಶಿಸಿ ಆದರದಿಂದ ಸ್ವಲ್ಪವನ್ನು ದಾನ ಮಾಡಿದರೂ ಅದು ಕೊಟ್ಟವನಿಗೆ ಪರಲೋಕದಲ್ಲಿ ಅತಿಶಯಫಲವನ್ನೀಯುವುದು.

೧೧೯. ರಾಮೇಶ್ವರ ಮಹಾಕ್ಷೇತ್ರದಲ್ಲಿ ಶ್ರೀರಾಮನಾಥನ ಬಳಿಯಲ್ಲಿ ವಾಸಿಸುವವನು ಹಿಂದಿರುಗುವಿಕೆಯಿಲ್ಲದ ಮೋಕ್ಷವನ್ನು ಪಡೆಯುವನು.

೧೨೦. ಎಲೈ ಬ್ರಾಹ್ಮಣರೆ! ಆಯುಸ್ಸು, ಯೌವನ, ಸಂಪತ್ತು, ಹೆಂಡತಿ ಮಕ್ಕಳು ಎಲ್ಲರೂ ಜಾಗ್ರತೆಯಾಗಿ ನಾಶವಾಗಿಹೋಗುವರು.

೧೨೧. ಧನ, ಮನೆ, ಹೊಲ ಮೊದಲಾದುವುಗಳಿಗೆ ರಾಜನೇ ಮೊದಲಾದವರ ತೊಂದರೆಯಿರುವುದು. ಮನೆಯ ಸಾಮಗ್ರಿಗಳೆಲ್ಲ ನಶ್ವರವಾದುವು.

೧೨೨–೧೨೫. ಆದುದರಿಂದ ಜ್ಞಾನಿಗಳು ಈ ಸಂಸಾರವನ್ನೆಲ್ಲ ತ್ಯಜಿಸಿ ಮನುಷ್ಯರ ಆಪತ್ತನ್ನು ಪರಿಹರಿಸುವ ರಾಮೇಶ್ವರಲಿಂಗದ ಶ್ರವಣ, ಕೀರ್ತನ, ಸ್ಮರಣೆಗಳನ್ನು ಮಾಡಬೇಕು. ರಾಮೇಶ್ವರನಿಗೆ ಗ್ರಾಮಗಳನ್ನು ದಾನ ಮಾಡುವವನು ದೇಹಾವಸಾನದಲ್ಲಿ ಶಿವನೇ ಆಗುವನು. ರಾಮೇಶ್ವರನು ದಾನ ಪಾತ್ರರಲ್ಲೆಲ್ಲ ಉತ್ತಮ ಪಾತ್ರನು. ಅವನಿಗೆ ದಾನಮಾಡಿದವನು ನಾಶವಿಲ್ಲದ ಸೌಖ್ಯವನ್ನು ಪಡೆಯುವನು. ಅವನ ದರ್ಶನ ಮಾಡುವವರೆಗೆ ಮಾತ್ರ ಪಾಪವಿರುತ್ತದೆ.

ದತ್ವಾ ತಸ್ಮೈ ಜನಃ ಕಿಂಚಿತ್ಸಾರ್ವಭೌಮೋ ಭವೇದ್ಧ್ರುವಂ ।
ತಾಲವೃಂತಂ ಧ್ವಜಂ ಛತ್ರಂ ಚಂದನಂ ಗುಗ್ಗುಲಂ ತಥಾ ॥ ೧೩೬ ॥
ತಾಮ್ರ ಕಾಂಸ್ಯಾದಿ ರಜತ ಹೇಮರತ್ನಮಯಾನ್ಘಟಾನ್ ।
ಪ್ರಯಚ್ಛಂತ್ಯಭಿಷೇಕಾರ್ಥಂ ರಾಮನಾಥಸ್ಯ ಯೇ ನರಾಃ ॥ ೧೩೭ ॥
ಭೂಮಂಡಲಾಧಿಪತಯೋ ಜಾಯಂತೇ ತೇ ಭವಾಂತರೇ ।
ರಾಮನಾಥಸ್ಯ ಪೂಜಾರ್ಥಂ ಪುಷ್ಪಾಣ್ಯುತ್ಪಾದಯಂತಿ ಯೇ ॥ ೧೩೮ ॥
ಅಶ್ವಮೇಧಾದಿ ಯಾಗಾನಾಂ ಫಲಾನ್ಯದ್ಧಾ ಪ್ನುವಂತಿ ತೇ ।
ರಾಮೇಶ್ವರೇ ಮಹಾಲಿಂಗೇ ಪೂಜಿತೇ ನಮಿತೇ ಸ್ಮೃತೇ ॥ ೧೩೯ ॥
ಶ್ರುತೇ ದೃಷ್ಟೇ ಚ ವಿಪ್ರೇಂದ್ರಾ ದುರ್ಲಭಂ ನಾಽಸ್ತಿ ಕಿಂಚನ ।
ರಾಮನಾಥಮಹಾಲಿಂಗಂ ಸೇವಿತುಂ ಯಃ ಪುಮಾನ್ವ್ರಜೇತ್ ॥ ೧೪೦ ॥
ತಂ ದೃಷ್ಟ್ವಾ ಭಯಮಾಪ್ನೋತಿ ತಸ್ಯ ಪಾಪೌಘ ಆಶು ವೈ ।
ರಾಮನಾಥೋ ಮಹಾದೇವೋ ದೃಷ್ಟೋ ಯದಿ ಭವೇನ್ನೃಭಿಃ ॥ ೧೪೧ ॥
ಕಿಂ ವೇದೈಃ ಕಿಮು ವಾ ಶಾಸ್ತ್ರೈಃ ಕಿಂವಾ ತೀರ್ಥನಿಷೇವಣೈಃ ॥ ೧೪೨ ॥
ಚಂದನಂ ಕುಂಕುಮಂ ಕೋಷ್ಠಂ ಕಸ್ತೂರೀಗುಗ್ಗುಲಂ ತಥಾ ।
ಮೃಗನಾಭಿಂ ಚ ಸರಲಂ ದದ್ಯಾದ್ರಾಮೇಶ್ವರಾಯ ಯಃ ।
ಸ ಭೂಮಾವಿಹ ಜಾಯೇತ ಧನಾಢ್ಯೋ ವೇದಪಾರಗಃ ॥ ೧೪೩ ॥

---

೧೩೬. ರಾಮೇಶ್ವರನಿಗೆ ಬೀಸಣಿಗೆ, ಧ್ವಜ, ಕೊಡೆ, ಗಂಧ, ಗುಗ್ಗುಳ, ಇವುಗಳಲ್ಲಿ ಯಾವುದಾದರೊಂದನ್ನು ಕೊಡುವವನು ಚಕ್ರವರ್ತಿಯಾಗುವನು.

೧೩೭–೧೪೨. ತಾಮ್ರ, ಕಂಚು, ಬೆಳ್ಳಿ, ಚಿನ್ನ, ರತ್ನ ಇವುಗಳಿಂದ ಮಾಡಿದ ಕೊಡಗಳನ್ನು ರಾಮನಾಥನ ಅಭಿಷೇಕಕ್ಕಾಗಿ ಕೊಡುವ ನರರು ಮುಂದಿನ ಜನ್ಮದಲ್ಲಿ ದೊರೆಗಳಾಗುವರು. ರಾಮನಾಥನ ಪೂಜೆಗೆ ಹೂವುಗಳನ್ನು ಬೆಳೆಯಿಸುವವರು ಅಶ್ವಮೇಧಯಾಗದ ಫಲವನ್ನು ಹೊಂದುವರು. ರಾಮೇಶ್ವರ ಲಿಂಗದ ಪೂಜೆ, ನಮಸ್ಕಾರ, ಸ್ಮರಣೆ, ಶ್ರವಣ, ದರ್ಶನ ಇವುಗಳನ್ನು ಮಾಡಿದವರಿಗೆ ಸಿಕ್ಕದಿರುವುದು ಯಾವುದೂ ಇಲ್ಲ. ಈ ಲಿಂಗವನ್ನು ಸೇವಿಸುವುದಕ್ಕೆ ಹೋಗುವ ನರನನ್ನು ನೋಡಿ ಅವನ ಪಾಪಸಮೂಹವು ಕೂಡಲೆ ಹೆದರುವುದು. ರಾಮನಾಥನನ್ನು ನೋಡಿದ ನರರಿಗೆ ವೇದ, ಶಾಸ್ತ್ರ, ತೀರ್ಥಸೇವೆ ಇವುಗಳಿಂದ ಪ್ರಯೋಜನವಿಲ್ಲ.

೧೪೩. ರಾಮನಾಥನಿಗೆ ಗಂಧ, ಕುಂಕುಮ, ಕೋಷ್ಠ, ಕಸ್ತೂರಿ, ಗುಗ್ಗುಳ, ದೇವದಾರು ಇವುಗಳನ್ನು ಕೊಡುವವನು ಭೂಮಿಯಲ್ಲಿ ಧನವಂತನೂ, ವೇದಪಾರಂಗತನೂ ಆಗುವನು.

ಮುಕ್ತಾಭರಣವಸ್ತ್ರಾಣಿ ಮಹಾರ್ಹಾಣಿ ದದಾತಿ ಯಃ ।
ರಾಮನಾಥಾಯ ದೇವಾಯ ನಾಽಸೌ ದೌರ್ಗತ್ಯಮಾಪ್ನುಯಾತ್ ॥೧೩೪॥
ರಾಮನಾಥಮಹಾಲಿಂಗಂ ಗಂಗಾತೋಯೈಃ ಸಮಾಹೃತೈಃ ।
ಯೋಽಭಿಷಿಂಚತ್ಯಸೌ ಪೂಜ್ಯಃ ಶಿವಸ್ಯಾಽಪಿ ನ ಸಂಶಯಃ ॥ ೧೩೫ ॥
ಯಾವನ್ನ ಯಾತಿ ಮರಣಂ ಯಾವನ್ನಾಕ್ರಮತೇ ಜರಾ ।
ಯಾವನ್ನೇಂದ್ರಿಯ ವೈಕಲ್ಯಂ ತಾವದೇವ ದ್ವಿಜೋತ್ತಮಾಃ ॥ ೧೩೬ ॥
ತಾವದೇವ ಮಹಾದೇವೋ ರಾಮನಾಥೋ ಮುಮುಕ್ಷುಭಿಃ ।
ವಂದ್ಯಃ ಪೂಜ್ಯಶ್ಚ ಮಂತವ್ಯಃ ಸ್ತುತ್ಯಶ್ಚ ಸತತಂ ಶಿವಃ ॥ ೧೩೭ ॥
ರಾಮೇಶ್ವರಮಹಾಲಿಂಗಪೂಜಾತುಲ್ಯೋ ನ ವಿದ್ಯತೇ ।
ಧರ್ಮಃ ಸರ್ವಪುರಾಣೇಷು ಸರ್ವಶಾಸ್ತ್ರೇಷು ವೈ ತಥಾ ॥ ೧೩೮ ॥
ರಾಮನಾಥೇಶ್ವರಂ ದೇವಂ ಮಹಾಕಾರುಣಿಕಂ ಪ್ರಭುಂ ।
ಭಕ್ತ್ಯಾ ಭಜಂತಿ ಯೇ ನಿತ್ಯಂ ತೇ ಭೂಲೋಕೇ ಸುಖಾನ್ವಿತಾಃ ॥ ೧೩೯ ॥
ಭುಕ್ತ್ವಾ ಭೋಗಾನ್ಬಹುಸುಖಾನ್ಪುತ್ರದಾರಯುತಾ ಭೃಶಂ ।
ಏತಚ್ಛರೀರಪಾತಾಂತೇ ಮುಕ್ತಿಂ ಯಾಸ್ಯಂತಿ ಶಾಶ್ವತೀಂ ॥ ೧೪೦ ॥

ಶ್ರೀ ಸೂತ ಉವಾಚ:—

ಏವಂ ವಃ ಕಥಿತಂ ವಿಪ್ರಾ ರಾಮನಾಥಸ್ಯ ವೈಭವಂ ।
ಯಸ್ತ್ವೇತಚ್ಛೃಣುಯಾನ್ನಿತ್ಯಂ ಪಠತೇ ಚ ಸಭಕ್ತಿಕಂ ॥ ೧೪೧ ॥

---

೧೩೪. ರಾಮನಾಥನಿಗೆ ಬೆಲೆ ಬಾಳುವ ಮುತ್ತಿನ ಒಡವೆ, ವಸ್ತ್ರಗಳನ್ನು ಕೊಡುವವನು ಬಡವನಾಗುವುದಿಲ್ಲ.

೧೩೫. ಈ ಮಹಾಲಿಂಗವನ್ನು ಗಂಗೆಯ ನೀರಿನಿಂದ ಅಭಿಷೇಕ ಮಾಡುವವನು ಶಿವನಿಗೂ ಪೂಜ್ಯನಾಗುವನು.

೧೩೬–೧೩೭. ಮೋಕ್ಷವನ್ನಪೇಕ್ಷಿಸುವ ಮಾನವರು ಸಾವು, ಮುಪ್ಪು, ಇಂದ್ರಿಯವೈಕಲ್ಯಗಳನ್ನು ಹೊಂದುವುದರೊಳಗಾಗಿ ರಾಮೇಶ್ವರನ ನಮಸ್ಕಾರ, ಪೂಜೆ, ಧ್ಯಾನ, ಸ್ತುತಿಗಳನ್ನು ಮಾಡಬೇಕು.

೧೩೮. ರಾಮೇಶ್ವರಲಿಂಗದ ಪೂಜೆಗೆ ಸಮಾನವಾದ ಧರ್ಮವು ಸಮಸ್ತ ಪುರಾಣಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ ಹೇಳಿರುವುದಿಲ್ಲ.

೧೩೯. ದಯಾಳುವಾದ ರಾಮನಾಥೇಶ್ವರನನ್ನು ಭಕ್ತಿಯಿಂದ ಸೇವಿಸುವ ಮಾನವರು ಭೂಲೋಕದಲ್ಲಿ ಸುಖಿಗಳಾಗಿರುವರು.

೧೪೦. ಹೆಂಡತಿ ಮಕ್ಕಳೊಡನೆ ಅವರು ಬಹು ಸುಖಗಳನ್ನನುಭವಿಸಿ ಮರಣಾನಂತರದಲ್ಲಿ ಶಾಶ್ವತವಾದ ಮೋಕ್ಷವನ್ನು ಪಡೆಯುವರು.

೧೪೧–೧೪೩. ಎಲೈ ಬ್ರಾಹ್ಮಣರೆ! ನಿಮಗೆ ರಾಮನಾಥನ ಮಾಹಾತ್ಮ್ಯ

ಸ ರಾಮನಾಥಸೇವಾಯಾಃ ಫಲಮಾಪ್ನೋತ್ಯನುತ್ತಮಂ ।
ಧನುಷ್ಕೋಟಿಮಹಾತೀರ್ಥಸ್ನಾನಪುಣ್ಯಂ ಚ ಯಾಸ್ಯತಿ ॥ ೧೪೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ರಾಮನಾಥಪ್ರಶಂಸಾವರ್ಣನಂ" ನಾಮ ತ್ರಿಚತ್ವಾರಿಂಶೋಽಧ್ಯಾಯಃ

---

ಯನ್ನು ಹೇಳಿರುವೆನು. ಇದನ್ನು ಭಕ್ತಿಯಿಂದ ನಿತ್ಯವೂ ಕೇಳುವವರೂ, ಪಠಿಸುವವರೂ ರಾಮನಾಥನ ಸೇವೆಯ ಉತ್ತಮ ಫಲವನ್ನೂ, ಧನುಷ್ಕೋಟಿಯಲ್ಲಿ ಮಿಂದ ಪುಣ್ಯವನ್ನೂ ಹೊಂದುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ರಾಮನಾಥಪ್ರಶಂಸಾವರ್ಣನ"ವೆಂಬ ನಲವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಶ್ಚತ್ವಾರಿಂಶೋಽಧ್ಯಾಯಃ

### ರಾಮನಾಥಲಿಂಗಪ್ರತಿಷ್ಠಾವಿಧಿವರ್ಣನಂ

ಋಷಯ ಊಚುಃ—

ಸರ್ವವೇದಾರ್ಥತತ್ವಜ್ಞ ಪುರಾಣಾರ್ಣವಪಾರಗ ।
ವ್ಯಾಸಪಾದಾಂಬುಜದ್ವಂದ್ವನಮಸ್ಕಾರಹೃತಾಶುಭ ॥ ೧ ॥
ಪುರಾಣಾರ್ಥೋಪದೇಶೇನ ಸರ್ವಪ್ರಾಣ್ಯುಪಕಾರಕ ।
ತ್ವಯಾ ಹ್ಯನುಗೃಹೀತಾಃಸ್ಮ ಪುರಾಣಕಥನಾದ್ವಯಂ ॥ ೨ ॥
ಅಧುನಾ ಸೇತುಮಾಹಾತ್ಮ್ಯಕಥನಾತ್ಸುತರಾಂ ಮುನೇ ।
ವಯಂ ಕೃತಾರ್ಥಾಃ ಸಂಜಾತಾ ವ್ಯಾಸಶಿಷ್ಯ ಮಹಾಮತೇ ॥ ೩ ॥
ಯಥಾ ಪ್ರಾತಿಷ್ಠಿಪಲ್ಲಿಂಗಂ ರಾಮೋ ದಶರಥಾತ್ಮಜಃ ।
ತಚ್ಛ್ರೋತುಂ ವಯಮಿಚ್ಛಾಮಸ್ತ್ವಮಿದಾನೀಂ ವದಸ್ವ ನಃ ॥ ೪ ॥

ಶ್ರೀ ಸೂತ ಉವಾಚ :—

ಯದರ್ಥಂ ಸ್ಥಾಪಿತಂ ಲಿಂಗಂ ಗಂಧಮಾದನಪರ್ವತೇ ।
ರಾಮಚಂದ್ರೇಣ ವಿಪ್ರೇಂದ್ರ ತದಿದಾನೀಂ ಬ್ರವೀಮಿ ವಃ ॥ ೫ ॥

---

## ಕನ್ನಡದ ಅನುವಾದ

### ರಾಮನಾಥಲಿಂಗಪ್ರತಿಷ್ಠಾವಿಧಿವರ್ಣನ

೧–೩. ಋಷಿಗಳು ಕೇಳುತ್ತಾರೆ:—"ಸಮಸ್ತ ವೇದಗಳ ತತ್ವಗಳನ್ನರಿತವನೂ, ಪುರಾಣವೆಂಬ ಸಾಗರವನ್ನು ದಾಟಿದವನೂ, ವ್ಯಾಸರ ಪಾದಕಮಲದ ನಮಸ್ಕಾರದಿಂದ ಪರಿಹರಿಸಲ್ಪಟ್ಟ ಅಮಂಗಳವುಳ್ಳವನೂ, ಪುರಾಣಾರ್ಥಗಳನ್ನು ಉಪದೇಶಿಸುವುದರಿಂದ ಸಕಲಪ್ರಾಣಿಗಳಿಗೂ ಉಪಕಾರಮಾಡುವವನೂ ಆದ ಎಲೈ ಸೂತನೆ! ನೀನು ಈ ರಾಮೇಶ್ವರಕ್ಷೇತ್ರಪುರಾಣವನ್ನು ಹೇಳಿ ನಮ್ಮನ್ನು ಅನುಗ್ರಹಿಸಿರುವೆ. ನೀನು ಸೇತುಮಾಹಾತ್ಮ್ಯೆಯನ್ನು ಹೇಳಿದ್ದರಿಂದ ನಾವು ಧನ್ಯರಾದೆವು.

೪. ಈಗ ದಶರಥನ ಮಗನಾದ ರಾಮನು ಈ ಲಿಂಗವನ್ನು ಹೇಗೆ ಪ್ರತಿಷ್ಠಿಸಿದನು? ಅದನ್ನು ಹೇಳು."

೫. ಶ್ರೀಸೂತನು ಹೇಳುತ್ತಾನೆ:— ಎಲೈ ಬ್ರಾಹ್ಮಣರೆ! ಶ್ರೀರಾಮಚಂದ್ರನು ಗಂಧಮಾದನಪರ್ವತದಲ್ಲಿ ಏತಕ್ಕೆ ಈ ಲಿಂಗವನ್ನು ಸ್ಥಾಪಿಸಿದನೆಂಬುದನ್ನು ಇದೀಗ ನಿಮಗೆ ಹೇಳುತ್ತೇನೆ; ಕೇಳಿರಿ.

ಹೃತಭಾರ್ಯೋ ವನಾದ್ರಾಮೋ ರಾವಣೇನ ಬಲೀಯಸಾ ।
ಕಪಿಸೇನಾಯುತೋ ಧೀರಃ ಸಸೌಮಿತ್ರಿರ್ಮಹಾಬಲಃ ॥ ೬ ॥
ಮಹೇಂದ್ರಂ ಗಿರಿಮಾಸಾದ್ಯ ವ್ಯಲೋಕಯತ ವಾರಿಧಿಂ ।
ತಸ್ಮಿನ್ನಪಾರೇ ಜಲಧೌ ಕೃತ್ವಾ ಸೇತುಂ ರಘೂದ್ವಹಃ ॥ ೭ ॥
ತೇನ ಗತ್ವಾ ಪುರೀಂ ಲಂಕಾಂ ರಾವಣೇನಾಽಭಿರಕ್ಷಿತಾಂ ।
ಅಸ್ತಂಗತೇ ಸಹಸ್ರಾಂಶೌ ಪೌರ್ಣಮಾಸ್ಯಾಂ ನಿಶಾಮುಖೇ ॥ ೮ ॥
ರಾಮಃ ಸಸೈನಿಕೋ ವಿಪ್ರಾಃ ಸುವೇಲಗಿರಿಮಾರುಹತ್ ।
ತತಃ ಸೌಧಸ್ಥಿತಂ ರಾತ್ರೌ ದೃಷ್ಟ್ವಾ ಲಂಕೇಶ್ವರಂ ಬಲೀ ॥ ೯ ॥
ಸೂರ್ಯಪುತ್ರೋಽಸ್ಯ ಮುಕುಟಂ ಪಾತಯಾಮಾಸ ಭೂತಲೇ ।
ರಾಕ್ಷಸೋ ಭಗ್ನಮುಕುಟಃ ಪ್ರವಿವೇಶ ಗೃಹೋದರಂ ॥ ೧೦ ॥
ಗೃಹಂ ಪ್ರವಿಷ್ಟೇ ಲಂಕೇಶೇ ರಾಮಃ ಸುಗ್ರೀವ ಸಂಯುತಃ ।
ಸಾಽನುಜಃ ಸೇನಯಾ ಸಾರ್ಧಮವರುಹ್ಯ ಗಿರೇಸ್ತಟಾತ್ ॥ ೧೧ ॥
ಸೇನಾಂ ನ್ಯವೇಶಯದ್ವೀರೋ ರಾಮೋ ಲಂಕಾಸಮೀಪತಃ ।
ತತೋ ನಿವೇಶಮಾನಾಂಸ್ತಾನ್ವಾನರಾನ್ರಾವಣಾಽನುಗಾಃ ॥ ೧೨ ॥
ಅಭಿಜಗ್ಮುರ್ಮಹಾಕಾಯಾಃ ಸಾಯುಧಾಃ ಸಹಸೈನಿಕಾಃ ।
ಪರ್ವಣಃ ಪೂತನೋ ಜೃಂಭಃ ಖರಃ ಕ್ರೋಧವಶೋ ಹರಿಃ ॥ ೧೩ ॥

---

೬–೧೧. ಬಲಿಷ್ಠನಾದ ರಾವಣನು ಕಾಡಿನಲ್ಲಿದ್ದ ಸೀತೆಯನ್ನು ಅಪಹರಿಸಲು ರಾಮನು ಕಪಿಸೇನೆಯಿಂದಲೂ, ಲಕ್ಷ್ಮಣನಿಂದಲೂ ಸಹಿತನಾಗಿ ಮಹೇಂದ್ರ ಪರ್ವತವನ್ನೇರಿ ಸಮುದ್ರವನ್ನು ನೋಡಿದನು. ವಿಶಾಲವಾದ ಆ ಸಮುದ್ರದಲ್ಲಿ ಅವನು ಸೇತುವೆಯನ್ನು ಕಟ್ಟಿ ರಾವಣನಿಂದ ರಕ್ಷಿಸಲ್ಪಟ್ಟ ಲಂಕೆಗೆ ಹೋದನು. ಅಷ್ಟರಲ್ಲಿ ಸೂರ್ಯನು ಮುಳುಗಲು ಆ ಹುಣ್ಣಿಮೆಯ ರಾತ್ರಿಯ ಆರಂಭದಲ್ಲಿ ಸೈನ್ಯದೊಡನೆ ಸುವೇಲಪರ್ವತವನ್ನು ಹತ್ತಿದನು. ಬಳಿಕ ರಾತ್ರಿಯಲ್ಲಿ ಸೂರ್ಯ ತನಯನಾದ ಸುಗ್ರೀವನು ಉಪ್ಪರಿಗೆಯ ಮೇಲಿರುವ ರಾವಣನನ್ನು ಕಂಡು ಅವನ ಕಿರೀಟವನ್ನು ನೆಲಕ್ಕುರುಳಿಸಿದನು. ಆಗ ಕಿರೀಟವಿಲ್ಲದ ರಾವಣನು ನಾಚಿ ಮನೆಯೊಳಕ್ಕೆ ಹೊರಟುಹೋದನು.

೧೧–೧೬. ಅತ್ತ ರಾವಣನು ತನ್ನ ಮನೆಯನ್ನು ಸೇರಲು ಇತ್ತ ಶ್ರೀರಾಮನು ಸುಗ್ರೀವ ಲಕ್ಷ್ಮಣರಿಂದ ಸಹಿತನಾಗಿ ಸೇನೆಯೊಡನೆ ಸುವೇಲಗಿರಿಯ ತಪ್ಪಲಿನಿಂದಿಳಿದು ಲಂಕೆಯ ಬಳಿ ಸೈನ್ಯವನ್ನು ನಿಲ್ಲಿಸಿದನು. ಬಳಿಕ ಪಟ್ಟಣವನ್ನು ಪ್ರವೇಶಿಸುತ್ತಿರುವ ಕಪಿಗಳನ್ನು ರಾವಣನ ಅನುಯಾಯಿಗಳೂ, ದೊಡ್ಡದೇಹವುಳ್ಳವರೂ ಆದ ಪರ್ವಣ, ಪೂತನ, ಜೃಂಭ, ಖರ, ಪ್ರಾರುಜ, ಅರುಜ, ಪ್ರಹಸ್ತ ಮೊದಲಾದವರು ಆಯುಧಗಳನ್ನು ಹಿಡಿದುಕೊಂಡು ಸೈನ್ಯದೊಡನೆ

ಪ್ರಾರುಜಶ್ಚಾರುಜಶ್ಚೈವ ಪ್ರಹಸ್ತಶ್ಚೇತರೇ ತಥಾ ।
ತತೋಽಭಿಪತತಾಂ ತೇಷಾಮದೃಶ್ಯಾನಾಂ ದುರಾತ್ಮನಾಂ ॥ ೧೪ ॥
ಅಂತರ್ಧಾನವಧಂ ತತ್ರ ಚಕಾರಸ್ಮ ವಿಭೀಷಣಃ ।
ತೇ ದೃಶ್ಯಮಾನಾ ಬಲಿಭಿರ್ಹರಿಭಿರ್ದೂರಪಾತಿಭಿಃ ॥ ೧೫ ॥
ನಿಹತಾಃ ಸರ್ವತಶ್ಚೈತೇ ನ್ಯಪತನ್ಸ್ವೈ ಗತಾಸವಃ ।
ಅಮೃಷ್ಯಮಾಣಃ ಸಬಲೋ ರಾವಣೋ ನಿರ್ಯಯಾವಥ ॥ ೧೬ ॥
ವ್ಯೂಹ್ಯ ತಾನ್ವಾನರಾನ್ಸರ್ವಾನ್ನ್ಯವಾರಯತ ಸಾಯಕೈಃ ।
ರಾಘವಸ್ತ್ವಥ ನಿರ್ಯಾಯ ವ್ಯೂಢಾನೀಕೋ ದಶಾನನಂ ॥ ೧೭ ॥
ಪ್ರತ್ಯಯುಧ್ಯತ ವೇಗೇನ ದ್ವಂದ್ವಯುದ್ಧಮಭೂತ್ತದಾ ।
ಯುಯುಧೇ ಲಕ್ಷ್ಮಣೇನಾಽಥ ಇಂದ್ರಜಿದ್ರಾವಣಾತ್ಮಜಃ ॥ ೧೮ ॥
ವಿರೂಪಾಕ್ಷೇಣ ಸುಗ್ರೀವಸ್ತಾರೇಯೇಣಾಽಪಿ ಖರ್ವಟಃ ।
ಪೌಂಡ್ರೇಣ ಚ ನಲಸ್ತತ್ರ ಪುಟೇಶಃ ಪನಸೇನ ಚ ॥ ೧೯ ॥
ಅನ್ಯೇಽಪಿ ಕಪಯೋ ವೀರಾ ರಾಕ್ಷಸೈರ್ದ್ವಂದ್ವಮೇತ್ಯ ತು ।
ಚಕ್ರುರ್ಯುದ್ಧಂ ಸುತುಮುಲಂ ಭೀರೂಣಾಂ ಭಯವರ್ಧನಂ ॥ ೨೦ ॥
ಅಥ ರಕ್ಷಾಂಸಿ ಭಿನ್ನಾನಿ ವಾನರೈರ್ಭೀಮವಿಕ್ರಮೈಃ ।
ಪ್ರದುದ್ರುವೂ ರಣಾದೇತೇ ಲಂಕಾಂ ರಾವಣಪಾಲಿತಾಂ ॥ ೨೧ ॥

---

ಎದುರುಗೊಂಡರು. ಅದೃಶ್ಯರಾಗಿ ಮುನ್ನುಗ್ಗುತ್ತಿರುವ ದುಷ್ಟರಾದ ಅವರನ್ನು ವಿಭೀಷಣನು ಅದೃಶ್ಯನಾಗಿಯೇ ನಿಂತು ಕೊಂದನು. ದೂರ ಓಡುತ್ತಿರುವ ಬಲಿಷ್ಠರಾದ ಕಪಿಗಳು ನೋಡುತ್ತಿರುವಾಗಲೆ ಆ ರಾಕ್ಷಸರು ಎಲ್ಲ ಕಡೆಯಲ್ಲಿಯೂ ಸತ್ತುಬಿದ್ದರು. ಬಳಿಕ ಇದನ್ನು ಸಹಿಸದ ರಾವಣನು ಸೈನ್ಯದೊಡನೆ ಹೊರಟನು.

೧೭–೧೮. ಅವನು ಬಾಣಗಳಿಂದ ವಾನರರ ಗುಂಪನ್ನು ತಡೆದನು. ಅನಂತರ ರಾಮನು ಸೈನ್ಯದೊಡನೆ ಹೊರಟು ರಾವಣನೊಡನೆ ದ್ವಂದ್ವಯುದ್ಧವನ್ನು ಮಾಡಿದನು. ರಾವಣನ ಮಗನಾದ ಇಂದ್ರಜಿತ್ತುವು ಲಕ್ಷ್ಮಣನೊಡನೆ ಕಾಳಗ ಮಾಡಿದನು.

೧೯. ಹೀಗೆಯೇ ಸುಗ್ರೀವನು ವಿರೂಪಾಕ್ಷನೊಡನೆಯೂ, ಖರ್ವಟನು ಅಂಗದನೊಡನೆಯೂ, ನಲನು ಪೌಂಡ್ರನೊಡನೆಯೂ, ಪುಟೇಶನು ಪನಸನೊಡನೆಯೂ ಯುದ್ಧಮಾಡಿದರು.

೨೦. ವೀರರಾದ ಇತರ ಕಪಿಗಳೂ ರಾಕ್ಷಸರೊಡನೆ ಭಯಶಾಲಿಗಳನ್ನು ಹೆದರಿಸುವ ಘೋರ ಯುದ್ಧಮಾಡಿದರು.

೨೧. ತರುವಾಯ ಅತಿ ಪರಾಕ್ರಮಶಾಲಿಗಳಾದ ಕಪಿಗಳಿಂದ ಹೊಡೆಯಲ್ಪಟ್ಟ ರಾಕ್ಷಸರು ಯುದ್ಧಾಂಗಣದಿಂದ ಕೂಡಲೆ ಲಂಕೆಗೆ ಓಡಿದರು.

ಭಗ್ನೇಷು ಸರ್ವಸೈನ್ಯೇಷು ರಾವಣಪ್ರೇರಿತೇನ ವೈ ।
ಪುತ್ರೇಣೇಂದ್ರಜಿತಾ ಯುದ್ಧೇ ನಾಗಾಸ್ತ್ರೈರತಿದಾರುಣೈಃ ॥ ೨೨ ॥
ವಿದ್ಧೌ ದಾಶರಥೀ ವಿಪ್ರಾ ಉಭೌ ತೌ ರಾಮಲಕ್ಷ್ಮಣೌ ।
ಮೋಚಿತೌ ವೈನತೇಯೇನ ಗರುಡೇನ ಮಹಾತ್ಮನಾ ॥ ೨೩ ॥
ತತ್ರ ಪ್ರಹಸ್ತಸ್ತರಸಾ ಸಮುಭ್ಯೇತ್ಯ ವಿಭೀಷಣಂ ।
ಗದಯಾ ತಾಡಯಾಮಾಸ ವಿನದ್ಯ ರಣಕರ್ಕಶಃ ॥ ೨೪ ॥
ಸ ತಯಾಽಭಿಹತೋ ಧೀಮಾನ್ಗದಯಾ ಭೀಮವೇಗಯಾ ।
ನಾಽಕಂಪತ ಮಹಾಬಾಹುರ್ಹಿಮವಾನಿವ ಸುಸ್ಥಿತಃ ॥ ೨೫ ॥
ತತಃ ಪ್ರಗೃಹ್ಯ ವಿಪುಲಾಮಷ್ಟಘಂಟಾಂ ವಿಭೀಷಣಃ ।
ಅಭಿಮಂತ್ರ್ಯ ಮಹಾಶಕ್ತಿಂ ಚಿಕ್ಷೇಪಾಽಸ್ಯ ಶಿರಃ ಪ್ರತಿ ॥ ೨೬ ॥
ಪತಂತ್ಯಾ ಸ ತಯಾ ವೇಗಾದ್ರಾಕ್ಷಸೋಽಶನಿನಾ ಯಥಾ ।
ಹೃತೋತ್ತಮಾಂಗೋ ದದೃಶೇ ವಾತರುಗ್ಣ ಇವ ದ್ರುಮಃ ॥ ೨೭ ॥
ತಂ ದೃಷ್ಟ್ವಾ ನಿಹತಂ ಸಂಖ್ಯೇ ಪ್ರಹಸ್ತಂ ಕ್ಷಣದಾಚರಂ ।
ಅಭಿದುದ್ರಾವ ಧೂಮ್ರಾಕ್ಷೋ ವೇಗೇನ ಮಹತಾ ಕಪೀನ್ ॥ ೨೮ ॥

---

೨೨–೨೩. ರಾವಣನಿಂದ ಕಳುಹಿಸಲ್ಪಟ್ಟ ಇಂದ್ರಜಿತ್ತುವು ಯುದ್ಧದಲ್ಲಿ ರಾಮನ ಸಕಲ ಸೈನ್ಯಗಳನ್ನೂ ನಾಶಗೊಳಿಸಿ ರಾಮಲಕ್ಷ್ಮಣರನ್ನು ಅತಿ ಭಯಂಕರವಾದ ನಾಗಾಸ್ತ್ರಗಳಿಂದ ಬಂಧಿಸಲು ಮಹಾತ್ಮನಾದ ಗರುಡನು ಅವರನ್ನು ಬಿಡಿಸಿದನು.

೨೪. ಆಗಣ ಯುದ್ಧದಲ್ಲಿ ಕ್ರೂರನಾದ ಪ್ರಹಸ್ತನು ಸಿಂಹನಾದ ಮಾಡಿ ವೇಗದಿಂದ ಬಂದು ಗದೆಯಿಂದ ವಿಭೀಷಣನನ್ನು ಹೊಡೆದನು.

೨೫. ಬುದ್ಧಿವಂತನಾದ ವಿಭೀಷಣನು ಆ ಪ್ರಹಸ್ತನ ಭಯಂಕರ ಗದೆಯಿಂದ ಹೊಡೆಯಲ್ಪಟ್ಟರೂ ಸ್ಥಿರವಾಗಿ ನಿಂತಿರುವ ಹಿಮಾಲಯಪರ್ವತದಂತೆ ಅತ್ತಿತ್ತ ಚಲಿಸಲಿಲ್ಲ.

೨೬. ಬಳಿಕ ಆತನು ಅಷ್ಟಘಂಟೆಯೆಂಬ ಮಹಾಶಕ್ತಿಯನ್ನು ಅಭಿಮಂತ್ರಿಸಿ ಈ ಪ್ರಹಸ್ತನ ತಲೆಗೆ ಎಸೆದನು.

೨೭. ಅವನು ವೇಗವಾಗಿ ವಜ್ರಾಯುಧದಂತೆ ಬೀಳುತ್ತಿರುವ ಆ ಶಕ್ತ್ಯಾಯುಧದಿಂದ ಕತ್ತರಿಸಲ್ಪಟ್ಟ ತಲೆಯುಳ್ಳವನಾಗಿ ಬಿರುಗಾಳಿಯಿಂದ ಮುರಿದ ಮರದಂತೆ ನೆಲಕ್ಕುರುಳಿದನು.

೨೮. ಯುದ್ಧದಲ್ಲಿ ಮುರಿದುಬಿದ್ದ ಆ ಪ್ರಹಸ್ತನನ್ನು ನೋಡಿ ಧೂಮ್ರಾಕ್ಷನು ಬಹು ವೇಗವಾಗಿ ಕಪಿಗಳನ್ನು ಅಟ್ಟಿಸಿಕೊಂಡುಬಂದನು.

ಕಪಿಸೈನ್ಯಂ ಸಮಾಲೋಕ್ಯ ವಿದ್ರುತಂ ಪವನಾತ್ಮಜಃ ।
ಧೂಮ್ರಾಕ್ಷಮಾಜಘಾನಾಶು ಶರೇಣ ರಣಮೂರ್ಧನಿ ॥ ೨೯ ॥
ಧೂಮ್ರಾಕ್ಷಂ ನಿಹತಂ ದೃಷ್ಟ್ವಾ ಹತಶೇಷಾ ನಿಶಾಚರಾಃ ।
ಸರ್ವಂ ರಾಜ್ಞೇ ಯಥಾವೃತ್ತಂ ರಾವಣಾಯ ನ್ಯವೇದಯನ್ ॥ ೩೦ ॥
ತತಃ ಶಯಾನಂ ಲಂಕೇಶಃ ಕುಂಭಕರ್ಣಮಬೋಧಯತ್ ।
ಪ್ರಬುದ್ಧಂ ಪ್ರೇಷಯಾಮಾಸ ಯುದ್ಧಾಯ ಸ ಚ ರಾವಣಃ ॥ ೩೧ ॥
ಆಗತಂ ಕುಂಭಕರ್ಣಂ ತಂ ಬ್ರಹ್ಮಾಸ್ತ್ರೇಣ ತು ಲಕ್ಷ್ಮಣಃ ।
ಜಘಾನ ಸಮರೇ ಕ್ರುದ್ಧೋ ಗತಾಸುರ್ನ್ಯಪತಚ್ಚ ಸಃ ॥ ೩೨ ॥
ದೂಷಣಸ್ಯಾನುಜೌ ತತ್ರ ವಜ್ರವೇಗಪ್ರಮಾಥಿನೌ ।
ಹನುಮನ್ನೀಲನಿಹತೌ ರಾವಣಪ್ರತಿಮೌ ರಣೇ ॥ ೩೩ ॥
ವಜ್ರದಂಷ್ಟ್ರಂ ಸಮವಧೀದ್ವಿಶ್ವಕರ್ಮಸುತೋ ನಲಃ ।
ಅಕಂಪನಂ ಚ ನ್ಯಹನತ್ಕುಮುದೋ ವಾನರರ್ಷಭಃ ॥ ೩೪ ॥
ಷಷ್ಠ್ಯಾಂ ಪರಾಜಿತೋ ರಾಜಾ ಪ್ರಾವಿಶಚ್ಚ ಪುರೀಂ ತತಃ ।
ಅತಿಕಾಯೋ ಲಕ್ಷ್ಮಣೇನ ಹತಶ್ಚ ತ್ರಿಶಿರಾಸ್ತಥಾ ॥ ೩೫ ॥
ಸುಗ್ರೀವೇಣ ಹತೌ ಯುದ್ಧೇ ದೇವಾಂತಕನರಾಂತಕೌ ।
ಹನೂಮತಾ ಹತೌ ಯುದ್ಧೇ ಕುಂಭಕರ್ಣಸುತಾವುಭೌ ॥ ೩೬ ॥

---

೨೯. ಹನುಮಂತನು ರಣರಂಗದಲ್ಲಿ ಓಡಿದ ಕಪಿಸೈನ್ಯವನ್ನು ಕಂಡು ಕೂಡಲೆ ಬಾಣದಿಂದ ಧೂಮ್ರಾಕ್ಷನನ್ನು ಕೊಂದನು.

೩೦. ಧೂಮ್ರಾಕ್ಷನು ಮಡಿದುದನ್ನು ನೋಡಿ ಮೃತರಾಗಿ ಉಳಿದ ರಾಕ್ಷಸರು ನಡೆದ ಸಮಾಚಾರವನ್ನೆಲ್ಲ ದೊರೆಯಾದ ರಾವಣನಿಗೆ ತಿಳಿಸಿದರು.

೩೧. ಅನಂತರ ರಾವಣನು ನಿದ್ರಿಸುತ್ತಿರುವ ಕುಂಭಕರ್ಣನನ್ನು ಎಬ್ಬಿಸಿ ಅವನನ್ನು ಯುದ್ಧಕ್ಕೆ ಕಳುಹಿಸಿದನು.

೩೨–೩೩. ಲಕ್ಷ್ಮಣನು ಯುದ್ಧಾಂಗಣಕ್ಕೆ ಬಂದ ಕುಂಭಕರ್ಣನ ಮೇಲೆ ಕೋಪದಿಂದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಲು ಅವನು ಅಸುವನ್ನು ನೀಗಿ ಕೆಳಗುರುಳಿದನು. ಹನುಮಂತ ನೀಲರು ರಾವಣನಂತೆಯೇ ಕಡುಗಲಿಗಳಾದ ದೂಷಣನ ತಮ್ಮಂದಿರನ್ನು ಕೊಂದರು.

೩೪. ವಿಶ್ವಕರ್ಮನ ಮಗನಾದ ನಳನು ವಜ್ರದಂಷ್ಟ್ರನನ್ನೂ, ವಾನರೋತ್ತಮನಾದ ಕುಮುದನು ಅಕಂಪನನ್ನೂ ಕೊಂದರು.

೩೫–೩೬. ಬಳಿಕ ಷಷ್ಠಿಯ ದಿನದ ಕಾಳಗದಲ್ಲಿ ರಾವಣನು ಸೋತು ಪಟ್ಟಣವನ್ನು ಸೇರಿದನು. ಅಂದೇ ಲಕ್ಷ್ಮಣನು ಅತಿಕಾಯ ಮತ್ತು ತ್ರಿಶಿರಸರನ್ನು

ವಿಭೀಷಣೇನ ನಿಹತೋ ಮಕರಾಕ್ಷಃ ಖರಾತ್ಮಜಃ ।
ತತ ಇಂದ್ರಜಿತಂ ಪುತ್ರಂ ಚೋದಯಾಮಾಸ ರಾವಣಃ ॥ ೩೭ ॥
ಇಂದ್ರಜಿನ್ಮೋಹಯಿತ್ವಾ ತೌ ಭ್ರಾತರೌ ರಾಮಲಕ್ಷ್ಮಣೌ ।
ಘೋರೈಃಶರೈರಂಗದೇನ ಹತವಾಹೋ ದಿವಿ ಸ್ಥಿತಃ ॥ ೩೮ ॥
ಕುಮುದಾಂಗದ ಸುಗ್ರೀವನಲಜಾಂಬವದಾದಿಭಿಃ ।
ಸಹಿತಾ ವಾನರಾಃ ಸರ್ವೇ ಸ್ವಪತಂಸ್ತೇನ ಘಾತಿತಾಃ ॥ ೩೯ ॥
ಏವಂ ನಿಹತ್ಯ ಸಮರೇ ಸಸೈನ್ಯೌ ರಾಮಲಕ್ಷ್ಮಣೌ ।
ಅಂತರ್ದಧೇ ತದಾ ವ್ಯೋಮ್ನಿ ಮೇಘನಾದೋ ಮಹಾಬಲಃ ॥ ೪೦ ॥
ತತೋ ವಿಭೀಷಣೋ ರಾಮಮಿಕ್ಷ್ವಾಕುಕುಲಭೂಷಣಂ ।
ಉವಾಚ ಪ್ರಾಂಜಲಿರ್ವಾಕ್ಯಂ ಪ್ರಣಮ್ಯ ಚ ಪುನಃ ಪುನಃ ॥ ೪೧ ॥
ಅಯಮಂಭೋ ಗೃಹೀತ್ವಾ ತು ರಾಜರಾಜಸ್ಯ ಶಾಸನಾತ್ ।
ಗುಹ್ಯಕೋಽಭ್ಯಾಗತೋ ರಾಮ ತ್ವತ್ಸಕಾಶಮರಿಂದಮ ॥ ೪೨ ॥
ಇದಮಂಭಃ ಕುಬೇರಸ್ತೇ ಮಹಾರಾಜ ಪ್ರಯಚ್ಛತಿ ।
ಅಂತರ್ಹಿತಾನಾಂ ಭೂತಾನಾಂ ದರ್ಶನಾರ್ಥಂ ಪರಂತಪ ॥ ೪೩ ॥

---

ವಧಿಸಿದನು. ಸುಗ್ರೀವನು ದೇವಾಂತಕ ನರಾಂತಕರನ್ನೂ, ಹನುಮಂತನು ಕುಂಭಕರ್ಣನ ಸುತರಿಬ್ಬರನ್ನೂ ಕೊಂದರು.

೩೭. ವಿಭೀಷಣನು ಖರನ ಮಗನಾದ ಮಕರಾಕ್ಷನನ್ನು ಕೊಲ್ಲಲು, ರಾವಣನು ಇಂದ್ರಜಿತ್ತುವನ್ನು ಯುದ್ಧಕ್ಕೆ ಕಳುಹಿಸಿದನು.

೩೮. ಇಂದ್ರಜಿತ್ತುವು ರಾಮಲಕ್ಷ್ಮಣರನ್ನು ಮೂರ್ಛೆಗೊಳಿಸಲು ಅಂಗದನು ಭಯಂಕರವಾದ ಬಾಣಗಳಿಂದ ಅವನ ವಾಹನವನ್ನು ಮುರಿದನು. ಆಗ ಇಂದ್ರಜಿತ್ತುವು ಆಕಾಶದಲ್ಲಿ ನಿಂತನು.

೩೯. ಬಳಿಕ ಅವನು ಕುಮುದ, ಅಂಗದ, ಸುಗ್ರೀವ, ನಲ, ಜಾಂಬವಂತ ಮೊದಲಾದವರಿಂದ ಸಹಿತರಾದ ಕಪಿಗಳನ್ನೆಲ್ಲ ಹೊಡೆದು ಕೆಡವಿದನು.

೪೦. ಮಹಾಬಲಿಷ್ಠನಾದ ಅವನು ಹೀಗೆ ಯುದ್ಧದಲ್ಲಿ ರಾಮಲಕ್ಷ್ಮಣರನ್ನು ಸೈನ್ಯದೊಡನೆ ಹೊಡೆದು ಆಕಾಶದಲ್ಲಿ ಮಾಯವಾದನು.

೪೧. ತರುವಾಯ ವಿಭೀಷಣನು ಇಕ್ಷ್ವಾಕುವಂಶಕ್ಕೆ ಅಲಂಕಾರನಾದ ರಾಮನನ್ನು ಅನೇಕಬಾರಿ ನಮಸ್ಕರಿಸಿ ಕೈಮುಗಿದುಕೊಂಡು ಇಂತೆಂದನು :

೪೨. "ಶತ್ರುನಾಶಕನಾದ ಓ ರಾಮ! ಈ ಗುಹ್ಯಕನು ಕುಬೇರನ ಅಪ್ಪಣೆಯಿಂದ ನೀರನ್ನು ತೆಗೆದುಕೊಂಡು ನಿನ್ನೆಡೆಗೆ ಬಂದಿರುವನು.

೪೩. ಕುಬೇರನು ನಿನಗೆ ಮಾಯೆಗೊಂಡ ಪ್ರಾಣಿಗಳನ್ನು ಕಾಣುವುದಕ್ಕಾಗಿ ಈ ನೀರನ್ನು ಕೊಡುತ್ತಾನೆ.

ಅನೇನ ಸ್ಪೃಷ್ಟನಯನೋ ಭೂತಾನ್ಯಂತರ್ಹಿತಾನ್ಯಪಿ ।
ಭವಾನ್ದ್ರಕ್ಷ್ಯತಿ ಯಸ್ಮೈ ವಾ ಭವಾನೇತತ್ಪ್ರದಾಸ್ಯತಿ ॥ ೪೪ ॥
ಸೋಽಪಿ ದ್ರಕ್ಷ್ಯತಿ ಭೂತಾನಿ ವಿಯತ್ಯಂತರ್ಹಿತಾನಿ ವೈ ।
ತಥೇತಿ ರಾಮಸ್ತದ್ವಾರಿ ಪ್ರತಿಗೃಹ್ಯಾಥ ಸತ್ಕೃತಂ ॥ ೪೫ ॥
ಚಕಾರ ನೇತ್ರಯೋಃ ಶೌಚಂ ಲಕ್ಷ್ಮಣಶ್ಚ ಮಹಾಬಲಃ।
ಸುಗ್ರೀವಜಾಂಬವಂತೌ ಚ ಹನುಮಾನಂಗದಸ್ತಥಾ ॥ ೪೬ ॥
ಮೈಂದದ್ವಿವಿದನೀಲಾಶ್ಚ ಯೇ ಚಾಽನ್ಯೇ ವಾನರಾಸ್ತಥಾ ।
ತೇ ಸರ್ವೇ ರಾಮದತ್ತೇನ ವಾರಿಣಾ ಶುದ್ಧಚಕ್ಷುಷಃ ॥ ೪೭ ॥
ಆಕಾಶೇಽಂತರ್ಹಿತಂ ವೀರಮಪಶ್ಯನ್ರಾವಣಾತ್ಮಜಂ ।
ತತಸ್ತಮಭಿದುದ್ರಾವ ಸೌಮಿತ್ರಿರ್ದೃಷ್ಟಿಗೋಚರಂ ॥ ೪೮ ॥
ತತೋ ಜಘಾನ ಸಂಕ್ರುದ್ಧೋ ಲಕ್ಷ್ಮಣಃ ಕೃತಲಕ್ಷಣಃ ।
ಕುಬೇರಪ್ರೇಷಿತಜಲೈಃ ಪವಿತ್ರೀಕೃತಲೋಚನಃ ॥ ೪೯ ॥
ತತಃ ಸಮಭವದ್ಯುದ್ಧಂ ಲಕ್ಷ್ಮಣೇಂದ್ರಜಿತೋರ್ಮಹತ್ ।
ಅತೀವ ಚಿತ್ರಮಾಶ್ಚರ್ಯಂ ಶಕ್ರಪ್ರಹ್ಲಾದಯೋರಿವ ॥ ೫೦ ॥
ತತಸ್ತೃತೀಯದಿವಸೇ ಯತ್ನೇನ ಮಹತಾ ದ್ವಿಜಾಃ ।
ಇಂದ್ರಜಿನ್ನಿಹತೋ ಯುದ್ಧೇ ಲಕ್ಷ್ಮಣೇನ ಬಲೀಯಸಾ ॥ ೫೧ ॥

---

೪೪–೪೮. ಈ ನೀರಿನಿಂದ ನೀನು ಕಣ್ಣನ್ನು ತೊಳೆದುಕೊಂಡರೆ ಅಡಗಿರುವ ಪ್ರಾಣಿಗಳನ್ನು ಕಾಣುವೆ. ನೀನು ಯಾವನಿಗೆ ಇದನ್ನು ಕೊಡುವೆಯೋ ಅವನೂ ಆಕಾಶದಲ್ಲಡಗಿರುವ ಜಂತುಗಳನ್ನು ನೋಡುವನು.'' ರಾಮನು ಹಾಗೆಯೇ ಆಗಲೆಂದು ಗೌರವದಿಂದ ಆ ನೀರನ್ನು ತೆಗೆದುಕೊಂಡು ಕಣ್ಣುಗಳನ್ನು ತೊಳೆದು ಕೊಂಡನು. ಅಂತೆಯೇ ಅವನು ಕೊಟ್ಟ ಆ ನೀರಿನಿಂದ ಲಕ್ಷ್ಮಣನೂ, ಸುಗ್ರೀವ, ಜಾಂಬವಂತ, ಆಂಜನೇಯ, ಅಂಗದ, ಮೈಂದ, ದ್ವಿವಿದ, ನೀಲ ಮೊದಲಾದ ಸಕಲ ಕಪಿಗಳೂ ಕಣ್ಣುಗಳನ್ನು ತೊಳೆದುಕೊಂಡು ಆಕಾಶದಲ್ಲಿ ಅಡಗಿದ್ದ ರಾವಣ ತನಯನಾದ ಇಂದ್ರಜಿತ್ತುವನ್ನು ಕಂಡರು. ಅನಂತರ ಲಕ್ಷ್ಮಣನು ಅವನನ್ನು ಅಟ್ಟಸಿಕೊಂಡುಹೋದನು.

೪೯. ಕುಬೇರನು ಕಳುಹಿಸಿದ ಜಲದಿಂದ ಶುದ್ಧವಾದ ಕಣ್ಣುಳ್ಳ ಲಕ್ಷ್ಮಣನು ಕುಪಿತನಾಗಿ ಆ ಇಂದ್ರಜಿತ್ತುವನ್ನು ಹೊಡೆದನು.

೫೦. ಅನಂತರ ಲಕ್ಷ್ಮಣ ಮತ್ತು ಇಂದ್ರಜಿತ್ತುಗಳಿಗೆ ದೇವೇಂದ್ರ ಪ್ರಹ್ಲಾದರಿಗಾದಂತೆ ಆಶ್ಚರ್ಯಕರವಾದ ಯುದ್ಧವು ನಡೆಯಿತು.

೫೧. ಹೀಗೆ ಮೂರು ದಿನಗಳು ಯುದ್ಧ ನಡೆದಮೇಲೆ ಬಲಶಾಲಿಯಾದ ಲಕ್ಷ್ಮಣನು ಬಹು ಪ್ರಯತ್ನದಿಂದ ಇಂದ್ರಜಿತ್ತುವನ್ನು ಕೊಂದನು.

ತತೋ ಮೂಲಬಲಂ ಸರ್ವಂ ಹತಂ ರಾಮೇಣ ಧೀಮತಾ ।
ಅಥ ಕ್ರುದ್ಧೋ ದಶಗ್ರೀವಃ ಪ್ರಿಯಪುತ್ರೇ ನಿಪಾತಿತೇ ॥ ೫೨ ॥
ನಿರ್ಯಯೌ ರಥಮಾಸ್ಥಾಯ ನಗರಾದ್ಬಹುಸೈನಿಕಃ ।
ರಾವಣೋ ಜಾನಕೀಂ ಹಂತುಮುದ್ಯುಕ್ತೋ ವಿಂಧ್ಯವಾರಿತಃ ॥ ೫೩ ॥
ತತೋ ಹರ್ಯಶ್ವಯುಕ್ತೇನ ರಥೇನಾದಿತ್ಯವರ್ಚಸಾ ।
ಉಪತಸ್ಥೇ ರಣೇ ರಾಮಂ ಮಾತಲಿಃ ಶುಕ್ರಸಾರಥಿಃ ॥ ೫೪ ॥
ಐಂದ್ರಂ ರಥಂ ಸಮಾರುಹ್ಯ ರಾಮೋ ಧರ್ಮಭೃತಾಂ ವರಃ ।
ಶಿರಾಂಸಿ ರಾಕ್ಷಸೇಂದ್ರಸ್ಯ ಬ್ರಾಹ್ಮಾಸ್ತ್ರೇಣಾಽವಧೀದ್ರಣೇ ॥ ೫೫ ॥
ತತೋ ಹತದಶಗ್ರೀವಂ ರಾಮಂ ದಶರಥಾತ್ಮಜಂ ।
ಆಶೀರ್ಭಿರ್ಜಯಯುಕ್ತಾಭಿರ್ದೇವಾಃ ಸರ್ಷಿಪುರೋಗಮಾಃ ॥ ೫೬ ॥
ತುಷ್ಟುವುಃ ಪರಿಸಂತುಷ್ಟಾಃ ಸಿದ್ಧವಿದ್ಯಾಧರಾಸ್ತಥಾ ।
ರಾಮಂ ಕಮಲಪತ್ರಾಕ್ಷಂ ಪುಷ್ಪವರ್ಷೈರವಾಕಿರನ್ ॥ ೫೭ ॥
ರಾಮಸ್ತೈಃ ಸುರಸಂಘಾತೈಃ ಸಹಿತಃ ಸೈನಿಕೈರ್ವೃತಃ ।
ಸೀತಾಸೌಮಿತ್ರಿಸಹಿತಃ ಸಮಾರುಹ್ಯ ಚ ಪುಷ್ಪಕಂ ॥ ೫೮ ॥
ತಥಾಽಭಿಷಿಚ್ಯ ರಾಜಾನಂ ಲಂಕಾಯಾಂ ಚ ವಿಭೀಷಣಂ ।
ಕಪಿಸೇನಾವೃತೋ ರಾಮೋ ಗಂಧಮಾದನಮನ್ವಗಾತ್ ॥ ೫೯ ॥

---

೫೨–೫೩. ಬಳಿಕ ರಾಮನು ರಾವಣನ ಮೂಲಬಲವನ್ನೆಲ್ಲ ಕೊಂದನು. ಪ್ರಿಯಪುತ್ರನಾದ ಇಂದ್ರಜಿತ್ತುವಿನ ಮರಣದಿಂದ ಕ್ರುದ್ಧನಾದ ರಾವಣನು ರಥವನ್ನೇರಿ ಬಹು ಸೈನ್ಯಗಳೊಡನೆ ನಗರದಿಂದ ಹೊರಟು ಸೀತೆಯನ್ನು ವಧಿಸಲು ಉದ್ಯುಕ್ತನಾಗಲು ವಿಂಧ್ಯನು ಅವನನ್ನು ತಡೆದನು.

೫೪. ಅನಂತರ ಇಂದ್ರನ ಸಾರಥಿಯಾದ ಮಾತಲಿಯು ಸೂರ್ಯನಂತೆ ಬೆಳಗುತ್ತಿರುವ ರಥದೊಡನೆ ರಣಾಂಗಣದಲ್ಲಿ ರಾಮನ ಬಳಿ ಸಾರಿದನು.

೫೫. ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ರಾಮನು ಆ ಇಂದ್ರರಥವನ್ನೇರಿ ಯುದ್ಧದಲ್ಲಿ ಬ್ರಹ್ಮಾಸ್ತ್ರದಿಂದ ರಾವಣನ ತಲೆಗಳನ್ನು ಹಾರಿಸಿದನು.

೫೬–೫೭. ತರುವಾಯ ರಾವಣನನ್ನು ವಧಿಸಿದ ಶ್ರೀರಾಮನನ್ನು ಋಷಿಗಳೇ ಮೊದಲಾದವರಿಂದ ಸಹಿತರಾದ ದೇವತೆಗಳು ಜಯಾಶೀರ್ವಾದ ಮಾಡಿ ಹೊಗಳಿದರು. ಸಂತುಷ್ಟರಾದ ವಿದ್ಯಾಧರರು ಹೂಮಳೆಗರೆದರು.

೫೮–೫೯. ರಾಮನು ಲಂಕಾರಾಜ್ಯದಲ್ಲಿ ವಿಭೀಷಣನನ್ನು ಅಭಿಷೇಕಮಾಡಿ ದೇವತೆಗಳು, ಸೈನಿಕರು, ಸೀತೆ, ಲಕ್ಷ್ಮಣ ಇವರೊಡನೆ ಪುಷ್ಪಕವಿಮಾನವನ್ನು ಹತ್ತಿ ಗಂಧಮಾದನಪರ್ವತಕ್ಕೆ ಬಂದನು.

ಪರಿಶೋಧ್ಯ ಚ ವೈದೇಹೀಂ ಗಂಧಮಾದನಪರ್ವತೇ ।
ರಾಮಂ ಕಮಲಪತ್ರಾಕ್ಷಂ ಸ್ಥಿತವಾನರಸಂವೃತಂ ॥ ೬೦ ॥
ಹತಲಂಕೇಶ್ವರಂ ವೀರಂ ಸಾನುಜಂ ಸ ವಿಭೀಷಣಂ ।
ಸಭಾರ್ಯಂ ದೇವವೃಂದೈಶ್ಚ ಸೇವಿತಂ ಮುನಿಪುಂಗವೈಃ ॥ ೬೧ ॥
ಮುನಯೋಽಭ್ಯಾಗತಾ ದ್ರಷ್ಟುಂ ದಂಡಕಾರಣ್ಯವಾಸಿನಃ ।
ಅಗಸ್ತ್ಯಂ ತೇ ಪುರಸ್ಕೃತ್ಯ ತುಷ್ಟುವುರ್ಮೈಥಿಲೀಪತಿಂ ॥ ೬೨ ॥

ಮುನಯ ಊಚುಃ:—

ನಮಸ್ತೇ ರಾಮಚಂದ್ರಾಯ ಲೋಕಾನುಗ್ರಹಕಾರಿಣೇ ।
ಅರಾವಣಂ ಜಗತ್ಕರ್ತುಮವತೀರ್ಣಾಯ ಭೂತಲೇ ॥ ೬೩ ॥
ತಾಟಕಾದೇಹಸಂಹರ್ತ್ರೇ ಗಾಧಿಜಾಽಧ್ವರರಕ್ಷಿಣೇ ।
ನಮಸ್ತೇ ಜಿತಮಾರೀಚ ಸುಬಾಹುಪ್ರಾಣಹಾರಿಣೇ ॥ ೬೪ ॥
ಅಹಲ್ಯಾಮುಕ್ತಿಸಂದಾಯಿ ಪಾದಪಂಕಜರೇಣವೇ ।
ನಮಸ್ತೇ ಹರಕೋದಂಡಲೀಲಾಭಂಜನಕಾರಿಣೇ ॥ ೬೫ ॥
ನಮಸ್ತೇ ಮೈಥಿಲೀಪಾಣಿಗ್ರಹಣೋತ್ಸವಶಾಲಿನೇ ।
ನಮಸ್ತೇ ರೇಣುಕಾಪುತ್ರಪರಾಜಯವಿಧಾಯಿನೇ ॥ ೬೬ ॥

---

೬೦–೬೨. ದಂಡಕಾರಣ್ಯದಲ್ಲಿ ವಾಸಮಾಡುತ್ತಿರುವ ಮುನಿಗಳು ಅಗಸ್ತ್ಯನನ್ನು ಮುಂದಿರಿಸಿಕೊಂಡು ಸೀತೆಯನ್ನು ಅಗ್ನಿಯಲ್ಲಿ ಪವಿತ್ರಗೊಳಿಸಿ ಗಂಧಮಾದನ ಪರ್ವತದಲ್ಲಿ ಕಪಿಗಳು, ಲಕ್ಷ್ಮಣ, ವಿಭೀಷಣ ಇವರಿಂದ ಸಹಿತನಾಗಿರುವ ರಾವಣಾಂತಕನೂ, ಪತ್ನೀಸಹಿತನೂ, ದೇವತೆಗಳು, ಮುನಿಗಳು ಇವರಿಂದ ಸೇವಿಸಲ್ಪಡುತ್ತಿರುವವನೂ ಆದ ರಾಮನನ್ನು ಹೊಗಳಿದರು.

೬೩. ಮುನಿಗಳು ಹೊಗಳುತ್ತಾರೆ:—"ಪ್ರಪಂಚಕ್ಕೆ ಅನುಗ್ರಹವನ್ನು ಮಾಡುವವನೂ, ರಾವಣನನ್ನು ಸಂಹರಿಸುವುದಕ್ಕಾಗಿ ಭೂಮಿಯಲ್ಲಿ ಅವತರಿಸಿದವನೂ ಆದ ಓ ರಾಮಚಂದ್ರ! ನಿನಗೆ ನಮಸ್ಕಾರವು.

೬೪. ತಾಟಕೆಯನ್ನು ವಧಿಸಿದವನೂ, ವಿಶ್ವಾಮಿತ್ರನ ಯಾಗವನ್ನು ರಕ್ಷಿಸಿದವನೂ, ಮಾರೀಚ ಸುಬಾಹುಗಳನ್ನು ಕೊಂದವನೂ ಆದ ಎಲೈ ರಾಮಚಂದ್ರನೆ! ನಿನಗೆ ವಂದನೆಯು.

೬೫–೬೬. ಅಹಲ್ಯೆಗೆ ಮೋಕ್ಷವನ್ನಿತ್ತ ಪಾದಕಮಲದ ಧೂಳುಳ್ಳವನೂ, ಶಿವಧನುಸ್ಸನ್ನು ಅನಾಯಾಸವಾಗಿ ಮುರಿದವನೂ ಆದ ಓ ರಾಮಚಂದ್ರ! ನಿನಗೆ ನಮಸ್ಕಾರವು. ಜಾನಕಿಯನ್ನು ಪಾಣಿಗ್ರಹಣಮಾಡಿಕೊಂಡು ಕಂಗೊಳಿಸುತ್ತಿರುವವನೂ, ಪರಶುರಾಮನನ್ನು ಸೋಲಿಸಿದವನೂ ಆದ ಎಲೈ ರಾಮಚಂದ್ರನೆ! ನಿನಗೆ ನಮಸ್ಕಾರವು.

ಸಹಲಕ್ಷ್ಮಣಸೀತಾಭ್ಯಾಂ ಕೈಕೇಯ್ಯಾಸ್ತು ವರದ್ವಯಾತ್ ।
ಸತ್ಯಂ ಪಿತೃವಚಃ ಕರ್ತುಂ ನಮೋ ವನಮುಪೇಯುಷೇ ॥ ೬೭ ॥
ಭರತಪ್ರಾರ್ಥನಾದತ್ತ ಪಾದುಕಾಯುಗಲಾಯ ತೇ ।
ನಮಸ್ತೇ ಶರಭಂಗಸ್ಯ ಸ್ವರ್ಗಪ್ರಾಪ್ತ್ಯೈಕಹೇತವೇ ॥ ೬೮ ॥
ನಮೋ ವಿರಾಧಸಂಹರ್ತ್ರೇ ಗೃಧ್ರರಾಜಸಖಾಯ ತೇ ।
ಮಾಯಾಮೃಗಮಹಾಕ್ರೂರಮಾರೀಚಾಂಗವಿದಾರಿಣೇ ॥ ೬೯ ॥
ಸೀತಾಽಪಹಾರ ಕೋಪೇನ ಯುದ್ಧತ್ಯಕ್ತಕಲೇಬರಂ ।
ಜಟಾಯುಷಂ ತು ಸಂದಹ್ಯ ತತ್ಕೈವಲ್ಯಪ್ರದಾಯಿನೇ ॥ ೭೦ ॥
ನಮಃ ಕಬಂಧಸಂಹರ್ತ್ರೇ ಶಬರೀಪೂಜಿತಾಂಘ್ರಯೇ ।
ಪ್ರಾಪ್ತಸುಗ್ರೀವಸಖ್ಯಾಯ ಕೃತವಾಲಿವಧಾಯ ತೇ । ॥ ೭೧ ॥
ನಮಃ ಕೃತವತೇ ಸೇತುಂ ಸಮುದ್ರೇ ವರುಣಾಲಯೇ ।
ಸರ್ವರಾಕ್ಷಸಸಂಹರ್ತ್ರೇ ನಮೋ ರಾವಣಹಾರಿಣೇ ॥ ೭೨ ॥
ಸಂಸಾರಾಂಬುಧಿಸಂತಾರಪೋತಪಾದಾಂಬುಜಾಯ ತೇ ।
ನಮೋ ಭಕ್ತಾರ್ತಿಸಂಹರ್ತ್ರೇ ಸಚ್ಚಿದಾನಂದರೂಪಿಣೇ ॥ ೭೩ ॥

---

೬೭. ಕೈಕೇಯಿಯ ವರದ ವಿಷಯದಲ್ಲಿ ತಂದೆಯ ಮಾತನ್ನು ಸತ್ಯಗೊಳಿಸುವುದಕ್ಕಾಗಿ ಕಾಡಿನಲ್ಲಿ ವಾಸಿಸಿದ ಓ ರಾಮ! ನಿನಗೆ ನಮಸ್ಕಾರವು.

೬೮. ಭರತನ ಪ್ರಾರ್ಥನೆಯಂತೆ ಅವನಿಗೆ ಪಾದುಕೆಗಳನ್ನಿತ್ತವನೂ, ಶರಭಂಗನು ಸ್ವರ್ಗವನ್ನು ಸೇರಲು ಕಾರಣನೂ ಆದ ಎಲೈ ರಾಮಚಂದ್ರನೇ! ನಿನಗೆ ನಮಸ್ಕಾರವು.

೬೯. ವಿರಾಧನನ್ನು ಕೊಂದವನೂ, ಜಟಾಯುಮಿತ್ರನೂ, ಮಾಯಾಮೃಗವಾದ ಕ್ರೂರ ಮಾರೀಚನ ಅವಯವಗಳನ್ನು ಸೀಳಿದವನೂ ಆದ ಓ ರಾಮಚಂದ್ರ! ನಿನಗೆ ವಂದನೆಯು.

೭೦. ಸೀತೆಯನ್ನು ಅಪಹರಿಸಿಕೊಂಡುಹೋಗುತ್ತಿದ್ದ ರಾವಣನೊಡನೆ ಕಾಳಗಮಾಡಿ ಶರೀರವನ್ನು ತ್ಯಜಿಸಿದ ಜಟಾಯುವನ್ನು ದಹನಗೊಳಿಸಿ ಅವನಿಗೆ ಮೋಕ್ಷವನ್ನಿತ್ತ ರಾಮ! ನಿನಗೆ ನಮಸ್ಕಾರವು.

೭೧. ಕಬಂಧನನ್ನು ಸಂಹರಿಸಿದವನೂ, ಶಬರಿಯು ಪೂಜಿಸಿದ ಪಾದವುಳ್ಳವನೂ, ಸುಗ್ರೀವನ ಮೈತ್ರಿಯನ್ನು ಪಡೆದವನೂ, ವಾಲಿಯನ್ನು ಕೊಂದವನೂ ಆದ ಓ ರಾಮ! ನಿನಗೆ ನಮಸ್ಕಾರವು.

೭೨. ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿದವನೂ, ಸಕಲ ರಾಕ್ಷಸರನ್ನೂ ರಾವಣನನ್ನೂ ಕೊಂದವನೂ ಆದ ಎಲೈ ರಘುರಾಮನೆ! ನಿನಗೆ ನಮಸ್ಕಾರವು.

೭೩. ಸಂಸಾರಸಾಗರವನ್ನು ದಾಟಿಸುವ ದೋಣಿಯಾದ ಪಾದಕಮಲ

ನಮಸ್ತೇ ರಾಮಭದ್ರಾಯ ಜಗತಾಮ್ವೃದ್ಧಿಹೇತವೇ ।
ರಾಮಾದಿ ಪುಣ್ಯನಾಮಾನಿ ಜಪತಾಂ ಪಾಪಹಾರಿಣೇ ॥ ೭೪ ॥
ನಮಸ್ತೇ ಸರ್ವಲೋಕಾನಾಂ ಸೃಷ್ಟಿಸ್ಥಿತ್ಯಂತಕಾರಿಣೇ ।
ನಮಸ್ತೇ ಕರುಣಾಮೂರ್ತೇ ಭಕ್ತರಕ್ಷಣದೀಕ್ಷಿತ ॥ ೭೫ ॥
ಸಸೀತಾಯ ನಮಸ್ತುಭ್ಯಂ ವಿಭೀಷಣಸುಖಪ್ರದ ।
ಲಂಕೇಶ್ವರವಧಾದ್ರಾಮ ಪಾಲಿತಂ ಹಿ ಜಗತ್ತ್ವಯಾ ॥ ೭೬ ॥
ರಕ್ಷ ರಕ್ಷ ಜಗನ್ನಾಥ ಪಾಹ್ಯಸ್ಮಾನ್ಜಾನಕೀಪತೇ ।
ಸ್ತುತ್ವೈವಂ ಮುನಯಃ ಸರ್ವೇ ತೂಷ್ಣೀಂ ತಸ್ಥುರ್ದ್ವಿಜೋತ್ತಮಾಃ ॥ ೭೭ ॥

ಶ್ರೀ ಸೂತ ಉವಾಚ :—

ಯ ಇದಂ ರಾಮಚಂದ್ರಸ್ಯ ಸ್ತೋತ್ರಂ ಮುನಿಭಿರೀರಿತಂ ।
ತ್ರಿಸಂಧ್ಯಂ ಪಠತೇ ಭಕ್ತ್ಯಾ ಭುಕ್ತಿಂ ಮುಕ್ತಿಂ ಚ ವಿಂದತಿ ॥ ೭೮ ॥
ಪ್ರಯಾಣಕಾಲೇ ಪಠತೋ ನ ಭೀತಿರುಪಜಾಯತೇ ।
ಏತತ್ಸ್ತೋತ್ರಸ್ಯ ಪಠನಾದ್ಭೂತವೇತಾಲಕಾದಯಃ ॥ ೭೯ ॥

---

ವುಳ್ಳವನೂ, ಭಕ್ತರ ದುಃಖವನ್ನು ನೀಗಿಸುವವನೂ, ಜ್ಞಾನಾನಂದಸ್ವರೂಪನೂ ಆದ ಓ ರಾಮ! ನಿನಗೆ ನಮಸ್ಕಾರವು.

೭೪. ಜಗತ್ತಿನ ಅಭ್ಯುದಯಕ್ಕೆ ಕಾರಣನೂ, ರಾಮಾದಿ ನಿನ್ನ ಪವಿತ್ರನಾಮಗಳನ್ನು ಜಪಿಸುವವರ ಪಾಪವನ್ನು ಪರಿಹರಿಸುವವನೂ ಆದ ಓ ರಾಮಚಂದ್ರ! ನಿನಗೆ ನಮಸ್ಕಾರವು.

೭೫. ಸಮಸ್ತ ಲೋಕಗಳ ಸೃಷ್ಟಿ, ಪಾಲನ, ನಾಶನಗಳನ್ನೆಸಗುವವನೂ, ಕರುಣಾಸ್ವರೂಪನೂ, ಭಕ್ತರನ್ನು ಪೊರೆಯುವವನೂ ಆದ ಓ ರಾಮಚಂದ್ರನೇ! ನಿನಗೆ ನಮಸ್ಕಾರವು.

೭೬. ಸೀತಾಸಹಿತನೂ, ವಿಭೀಷಣನಿಗೆ ಸೌಖ್ಯವನ್ನಿತ್ತವನೂ ಆದ ರಾಮ! ನಿನಗೆ ನಮಸ್ಕಾರವು. ನೀನು ರಾವಣನನ್ನು ಕೊಂದು ಜಗತ್ತನ್ನು ಕಾಪಾಡಿರುವೆ.

೭೭. ಜಗದೊಡೆಯನೂ, ಜಾನಕೀಪತಿಯೂ ಆದ ಎಲೈ ರಾಮನೇ! ನಮ್ಮನ್ನು ಕಾಪಾಡು." ಎಲೈ ಬ್ರಾಹ್ಮಣರೆ! ಹೀಗೆ ಮುನಿಗಳು ಆತನನ್ನು ಸ್ತುತಿಸಿ ಸುಮ್ಮನಾದರು.

೭೮. ಶ್ರೀಸೂತನು ಹೇಳುತ್ತಾನೆ:— ಮುನಿಗಳು ಹೇಳಿದ ಶ್ರೀರಾಮಚಂದ್ರನ ಈ ಸೋತ್ರವನ್ನು ಮೂರು ಸಂಧ್ಯಾಕಾಲಗಳಲ್ಲಿಯೂ ಭಕ್ತಿಯಿಂದ ಪಠಿಸುವವನು ಸುಖವನ್ನೂ, ಮೋಕ್ಷವನ್ನೂ ಪಡೆಯುವನು.

೭೯—೮೧. ಪ್ರಯಾಣಕಾಲದಲ್ಲಿ ಇದನ್ನು ಪಠಿಸುವವನಿಗೆ ಭಯವುಂಟಾಗುವುದಿಲ್ಲ. ಇದನ್ನು ಪಠಿಸಿದರೆ ಭೂತಭೇತಾಳಗಳೂ, ರೋಗಗಳೂ, ಪಾಪಗಳೂ

ನಶ್ಯಂತಿ ರೋಗಾ ನಶ್ಯಂತಿ ನಶ್ಯತೇ ಪಾಪಸಂಚಯಃ ।
ಪುತ್ರಕಾಮೋ ಲಭೇತ್ಪುತ್ರಂ ಕನ್ಯಾವಿಂದತಿ ಸತ್ಪತಿಂ ॥ ೪೦ ॥
ಮೋಕ್ಷಕಾಮೋ ಲಭೇನ್ಮೋಕ್ಷಂ ಧನಕಾಮೋ ಧನಂ ಲಭೇತ್ ।
ಸರ್ವಾನ್ಕಾಮಾನವಾಪ್ನೋತಿ ಪಠನ್ಭಕ್ತ್ಯಾತ್ವಿಮಂ ಸ್ತವಂ ॥ ೪೧ ॥
ತತೋ ರಾಮೋ ಮುನೀನ್ಪ್ರಾಹ ಪ್ರಣಮ್ಯ ಚ ಕೃತಾಂಜಲಿಃ ।
ಅಹಂ ವಿಶುದ್ಧಯೇ ಪ್ರಾಪ್ಯಃ ಸಕಲೈರಪಿ ಮಾನವೈಃ ॥ ೪೨ ॥
ಮದ್ದೃಷ್ಟಿಗೋಚರೋ ಜಂತುರ್ನಿತ್ಯಂ ಮೋಕ್ಷಸ್ಯ ಭಾಜನಂ ।
ತಥಾಽಪಿ ಮುನಯೋ ನಿತ್ಯಂ ಭಕ್ತಿಯುಕ್ತೇನ ಚೇತಸಾ ॥ ೪೩ ॥
ಸ್ವಾತ್ಮಲಾಭೇನ ಸಂತುಷ್ಟಾನ್ಸಾಧೂನ್ಭೂತಸುಹೃತ್ತಮಾನ್ ।
ನಿರಹಂಕಾರಿಣಃ ಶಾನ್ತಾನ್ನಮಸ್ಯಾಮ್ಯೂರ್ಧ್ವರೇತಸಃ ॥ ೪೪ ॥
ಯಸ್ಮಾದ್ಬ್ರಹ್ಮಣ್ಯದೇವೋಽಹಮತೋ ವಿಪ್ರಾನ್ಭಜೇ ಸದಾ ।
ಯುಷ್ಮಾನ್ಪೃಚ್ಛಾಮ್ಯಹಂ ಕಿಂಚಿತ್ತದ್ವದಧ್ವಂ ವಿಚಾರ್ಯ ತು ॥ ೪೫ ॥
ರಾವಣಸ್ಯ ವಧಾದ್ವಿಪ್ರಾ ಯತ್ಪಾಪಂ ಮಮ ವರ್ತತೇ ।
ತಸ್ಯ ಮೇ ನಿಷ್ಕೃತಿಂ ಬ್ರೂತ ಪೌಲಸ್ತ್ಯವಧಜಸ್ಯ ಹಿ ।
ಯತ್ಕೃತ್ವಾ ತೇನ ಪಾಪೇನ ಮುಚ್ಯೇಽಹಂ ಮುನಿಪುಂಗವಾಃ ॥ ೪೬ ॥

---

ನಾಶವಾಗುವುವು. ಪುತ್ರರನ್ನು ಬಯಸುವವನು ಪುತ್ರನನ್ನೂ, ಕನ್ಯೆಯು ಒಳ್ಳೆ ಪತಿಯನ್ನೂ ಪಡೆಯುವಳು. ಮೋಕ್ಷಾರ್ಥಿಯು ಮೋಕ್ಷವನ್ನೂ, ಧನವನ್ನು ಇಚ್ಛಿಸುವವನು ಧನವನ್ನೂ ಪಡೆಯುವರು. ಭಕ್ತಿಯಿಂದ ಇದನ್ನು ಪಠಿಸುವವನು ಎಲ್ಲ ಇಷ್ಟಾರ್ಥಗಳನ್ನೂ ಹೊಂದುವನು.

೪೨–೪೪. ಎಲೈ ವಿಪ್ರರೇ! ಬಳಿಕ ರಾಮನು ಆ ಮುನಿಗಳನ್ನು ವಂದಿಸಿ ಕೈಮುಗಿದುಕೊಂಡು ಇಂತೆಂದನು: "ಎಲ್ಲ ಮಾನವರೂ ಪಾಪಶುದ್ಧಿಗಾಗಿ ನನ್ನನ್ನು ಹೊಂದಬೇಕು. ನನ್ನ ದರ್ಶನಕ್ಕೆ ವಿಷಯವಾದ ಪ್ರಾಣಿಯು ಮೋಕ್ಷವನ್ನು ಪಡೆಯುವುದು. ಹಾಗಾದರೂ ಎಲೈ ಮುನಿಗಳೆ! ಯಾವಾಗಲೂ ನಾನು ಭಕ್ತಿಸಹಿತವಾದ ಮನಸ್ಸಿನಿಂದ ಪರಮಾತ್ಮನ ಲಾಭದಿಂದ ಸಂತುಷ್ಟರೂ, ಸಜ್ಜನರೂ, ಪ್ರಾಣಿಗಳಿಗೆ ಮಿತ್ರರೂ, ಅಹಂಕಾರವಿಲ್ಲದವರೂ, ಶಾಂತರೂ ಆದ ತಪಸ್ವಿಗಳನ್ನು ನಮಸ್ಕರಿಸುತ್ತೇನೆ.

೪೫. ನನಗೆ ಬ್ರಾಹ್ಮಣರು ದೇವತೆಗಳಾದ್ದರಿಂದ ನಾನು ಯಾವಾಗಲೂ ಅವರನ್ನು ಸೇವಿಸುತ್ತೇನೆ. ಆದಕಾರಣ ಒಂದು ವಿಷಯವನ್ನು ಮಾತ್ರ ನಿಮ್ಮನ್ನು ಕೇಳುತ್ತೇನೆ. ನೀವು ಅದನ್ನು ಆಲೋಚಿಸಿ ಹೇಳಿರಿ.

೪೬. ಮುನಿವರ್ಯರೆ! ರಾವಣನನ್ನು ಕೊಂದುದರಿಂದುಂಟಾದ ನನ್ನ ಪಾಪದ ಪರಿಹಾರಕ್ಕೆ ಉಪಾಯವನ್ನು ಹೇಳಿರಿ.

ಮುನಯ ಊಚುಃ:—

ಸತ್ಯವ್ರತ ಜಗನ್ನಾಥ ಜಗದ್ರಕ್ಷಾಧುರಂಧರ ॥ ೮೭ ॥

ಸರ್ವಲೋಕೋಪಕಾರಾರ್ಥಂ ಕುರು ರಾಮ ಶಿವಾರ್ಚನಂ ।

ಗಂಧಮಾದನಶೃಂಗೇಽಸ್ಮಿನ್ಮಹಾಪುಣ್ಯೇ ವಿಮುಕ್ತಿದೇ ॥ ೮೮ ॥

ಶಿವಲಿಂಗಪ್ರತಿಷ್ಠಾಂ ತ್ವಂ ಲೋಕಸಂಗ್ರಹಕಾಮ್ಯಯಾ ।

ಕುರು ರಾಮ ದಶಗ್ರೀವವಧದೋಷಾಽಪನುತ್ತಯೇ ॥ ೮೯ ॥

ಲಿಂಗಸ್ಥಾಪನಜಂ ಪುಣ್ಯಂ ಚತುರ್ವಕ್ತ್ರೋಽಪಿ ಭಾಷಿತುಂ ।

ನ ಶಕ್ನೋತಿ ತತೋ ವಕ್ತುಂ ಕಿಂ ಪುನರ್ಮನುಜೇಶ್ವರ ॥ ೯೦ ॥

ಯತ್ತ್ವಯಾ ಸ್ಥಾಪ್ಯತೇ ಲಿಂಗಂ ಗಂಧಮಾದನಪರ್ವತೇ ।

ಅಸ್ಯ ಸಂದರ್ಶನಂ ಪುಂಸಾಂ ಕಾಶೀಲಿಂಗಾಽವಲೋಕನಾತ್ ॥ ೯೧ ॥

ಅಧಿಕಂ ಕೋಟಿಗುಣಿತಂ ಫಲವತ್ಸ್ಯಾನ್ನ ಸಂಶಯಃ ।

ತವ ನಾಮ್ನಾತ್ವಿದಂ ಲಿಂಗಂ ಲೋಕೇ ಖ್ಯಾತಿಂ ಸಮಶ್ನುತಾಂ ॥ ೯೨ ॥

ನಾಶಕಂ ಪುಣ್ಯಪಾಪಾಖ್ಯಕಾಷ್ಠಾನಾಂ ದಹನೋಪಮಂ ।

ಇದಂ ರಾಮೇಶ್ವರಂ ಲಿಂಗಂ ಖ್ಯಾತಂ ಲೋಕೇ ಭವಿಷ್ಯತಿ ॥ ೯೩ ॥

ಮಾ ವಿಲಂಬಂ ಕುರುಷ್ವಾತೋ ಲಿಂಗಸ್ಥಾಪನಕರ್ಮಣಿ ।

ರಾಮಚಂದ್ರ ಮಹಾಭಾಗ ಕರುಣಾಪೂರ್ಣವಿಗ್ರಹ ॥ ೯೪ ॥

---

೮೭–೯೦. ಮುನಿಗಳು ಹೇಳುತ್ತಾರೆ:—ಸತ್ಯವಾದ ನಿಯಮವುಳ್ಳವನೂ, ಜಗದೊಡೆಯನೂ, ಜಗತ್ತಿನ ರಕ್ಷಣೆಯ ಭಾರವನ್ನು ವಹಿಸಿದವನೂ ಆದ ಓ ರಾಮಚಂದ್ರ! ಲೋಕೋಪಕಾರಕ್ಕಾಗಿ ನೀನು ಶಿವನನ್ನು ಪೂಜಿಸು. ಅತಿ ಪವಿತ್ರವಾಗಿ ಮೋಕ್ಷವನ್ನು ದೊರಕಿಸುವ ಈ ಗಂಧಮಾದನಪರ್ವತದ ಶಿಖರದಲ್ಲಿ ರಾವಣನನ್ನು ವಧಿಸಿದ ಪಾಪದ ಪರಿಹಾರಕ್ಕಾಗಿಯೂ, ಲೋಕದ ಕ್ಷೇಮಕ್ಕಾಗಿಯೂ ಶಿವಲಿಂಗವನ್ನು ಪ್ರತಿಷ್ಠೆಮಾಡು. ಬ್ರಹ್ಮನೂ ಶಿವಲಿಂಗವನ್ನು ಪ್ರತಿಷ್ಠೆಮಾಡಿದ ಪುಣ್ಯವನ್ನು ಹೇಳಲು ಸಮರ್ಥನಲ್ಲ. ಸಾಮಾನ್ಯಜನರ ವಿಷಯವನ್ನು ಏನುಹೇಳಲಿ.

೯೧–೯೨. ಈ ಗಂಧಮಾದನಪರ್ವತದಲ್ಲಿ ನೀನು ಪ್ರತಿಷ್ಠೆಮಾಡಿದ ಲಿಂಗವನ್ನು ದರ್ಶನಮಾಡಿದ ನರರಿಗೆ ಕಾಶೀವಿಶ್ವನಾಥನ ದರ್ಶನದಿಂದುಂಟಾದ ಪುಣ್ಯಕ್ಕಿಂತಲೂ ಹೆಚ್ಚು ಪುಣ್ಯವು ಲಭಿಸುವುದು; ಇದರಲ್ಲಿ ಸಂದೇಹವಿಲ್ಲ. ಈ ಲಿಂಗವು ನಿನ್ನ ಹೆಸರಿನಿಂದಲೆ ಲೋಕದಲ್ಲಿ ಪ್ರಸಿದ್ಧಿಗೊಳ್ಳಲಿ.

೯೩. ಪುಣ್ಯಪಾಪಗಳೆಂಬ ಕಟ್ಟಿಗೆಗಳನ್ನು ಬೆಂಕಿಯಂತೆ ಸುಡುವ ಈ ರಾಮೇಶ್ವರಲಿಂಗವು ಲೋಕದಲ್ಲಿ ಪ್ರಸಿದ್ಧವಾಗುವುದು.

೯೪. ದಯಾನಿಧಿಯಾದ ಎಲೈ ರಾಮಚಂದ್ರನೇ! ಆದ್ದರಿಂದ ನೀನು ಶಿವಲಿಂಗವನ್ನು ಪ್ರತಿಷ್ಠೆಮಾಡಲು ವಿಳಂಬಮಾಡಬೇಡ.

ಶ್ರೀ ಸೂತ ಉವಾಚ :—

ಇತಿ ಶ್ರುತ್ವಾ ವಚೋ ರಾಮೋ ಮುನೀನಾಂ ತಂ ಮುನೀಶ್ವರಾಃ ।
ಪುಣ್ಯಕಾಲಂ ವಿಚಾರ್ಯಾಽಥ ದ್ವಿಮುಹೂರ್ತಂ ಜಗತ್ಪತಿಃ ॥ ೯೫ ॥
ಕೈಲಾಸಂ ಪ್ರೇಷಯಾಮಾಸ ಹನುಮಂತಂ ಶಿವಾಲಯಂ ।
ಶಿವಲಿಂಗಂ ಸಮಾನೇತುಂ ಸ್ಥಾಪನಾರ್ಥಂ ರಘೂದ್ವಹಃ ॥ ೯೬ ॥

ರಾಮ ಉವಾಚ :—

ಹನೂಮನ್ನಂಜನಾಸೂನೋ ವಾಯುಪುತ್ರ ಮಹಾಬಲ ।
ಕೈಲಾಸಂ ತ್ವರಿತೋ ಗತ್ವಾ ಲಿಂಗಮಾನಯ ಮಾ ಚಿರಂ ॥ ೯೭ ॥
ಇತ್ಯಾಜ್ಞಪ್ತಸ್ಯ ರಾಮೇಣ ಭುಜಾವಾಸ್ಫಾಲ್ಯ ವೀರ್ಯವಾನ್ ।
ಮುಹೂರ್ತದ್ವಿತಯಂ ಜ್ಞಾತ್ವಾ ಪುಣ್ಯಕಾಲಂ ಕಪೀಶ್ವರಃ ॥ ೯೮ ॥
ಪಶ್ಯತಾಂ ಸರ್ವದೇವಾನಾಮೃಷೀಣಾಂ ಚ ಮಹಾತ್ಮನಾಂ ।
ಉತ್ಪಪಾತ ಮಹಾವೇಗಶ್ಚಾಲಯನ್ಗಂಧಮಾದನಂ ॥ ೯೯ ॥
ಲಂಘಯನ್ನವಿಯನ್ಮಾರ್ಗಂ ಕೈಲಾಸಂ ಪರ್ವತಂ ಯಯೌ ।
ನ ದದರ್ಶ ಮಹಾದೇವಂ ಲಿಂಗರೂಪಧರಂ ಕಪಿಃ ॥ ೧೦೦ ॥
ಕೈಲಾಸೇ ಪರ್ವತೇ ತಸ್ಮಿನ್ಸ್ಪಷ್ಟ್ಯೇ ಶಂಕರಪಾಲಿತೇ ।
ಆಂಜನೇಯಸ್ತಪಸ್ತೇಪೇ ಲಿಂಗಪ್ರಾಪ್ತ್ಯರ್ಥಮಾದರಾತ್ ॥ ೧೦೧ ॥

---

೯೫–೯೬. ಶ್ರೀಸೂತನು ಹೇಳುತ್ತಾನೆ:— ಎಲೈ ಮುನಿವರ್ಯರೆ! ಶ್ರೀರಾಮನು ತಪಸ್ವಿಗಳ ಆ ಮಾತನ್ನು ಕೇಳಿ ಪವಿತ್ರವಾದ ಎರಡು ಮುಹೂರ್ತಗಳನ್ನು ಆಲೋಚಿಸಿ ನಿಶ್ಚಯಿಸಿ ಶಿವಲಿಂಗವನ್ನು ತಂದು ಪ್ರತಿಷ್ಠಿಸುವುದಕ್ಕಾಗಿ ಹನುಮಂತನನ್ನು ಕೈಲಾಸಪರ್ವತಕ್ಕೆ ಕಳುಹಿಸಿದನು.

೯೭. ಶ್ರೀರಾಮನು ಹೇಳುತ್ತಾನೆ:— "ಅಂಜನಾತನಯನಾದ ಎಲೈ ಹನೂಮಂತನೆ! ಕೈಲಾಸಪರ್ವತಕ್ಕೆ ಶೀಘ್ರವಾಗಿ ತೆರಳಿ ಕೂಡಲೆ ಶಿವಲಿಂಗವನ್ನು ತೆಗೆದುಕೊಂಡು ಬಾ."

೯೮–೯೯. ಶ್ರೀರಾಮಮೂರ್ತಿಯು ಹೀಗೆ ಆಜ್ಞಾಪಿಸಲು, ವೀರಾಂಜನೇಯನು ತೋಳುಗಳನ್ನು ತಟ್ಟಿಕೊಂಡು, ಪುಣ್ಯಕಾಲವನ್ನರಿತು ಸಮಸ್ತ ದೇವತೆಗಳೂ, ಋಷಿಗಳೂ ನೋಡುತ್ತಿರುವಾಗಲೆ ಗಂಧಮಾದನಪರ್ವತವನ್ನು ನಡುಗಿಸುತ್ತ ಮೇಲಕ್ಕೆ ಹಾರಿದನು.

೧೦೦. ಅವನು ಆಕಾಶಮಾರ್ಗವನ್ನು ದಾಟಿ, ಕೈಲಾಸವನ್ನು ಸೇರಿದನಾದರೂ ಅಲ್ಲಿ ಲಿಂಗರೂಪಿಯಾದ ಪರಮೇಶ್ವರನನ್ನು ನೋಡಲಿಲ್ಲ.

೧೦೧–೧೦೨. ಆಗ ಆಂಜನೇಯನು ಶಂಕರನಿಂದ ಪಾಲಿತವಾದ ಆ ಕೈಲಾಸಪರ್ವತದಲ್ಲಿ ಶಿವಲಿಂಗವನ್ನು ಪಡೆಯಲೋಸುಗ, ಪೂರ್ವದಿಕ್ಕಿಗೆ

ಪ್ರಾಗಗ್ರೇಷು ಸಮಾಸೀನಃ ಕುಶೇಷು ಮುನಿಪುಂಗವಾಃ ।
ಊರ್ಧ್ವಬಾಹುರ್ನಿರಾಲಂಬೋ ನಿರುಚ್ಛ್ವಾಸೋ ಜಿತೇಂದ್ರಿಯಃ ॥೧೦೨॥
ಪ್ರಸಾದಯನ್ಮಹಾದೇವಂ ಲಿಂಗಂ ಲೇಭೇ ಸ ಮಾರುತಿಃ ।
ಏತಸ್ಮಿನ್ನಂತರೇ ವಿಪ್ರಾ ಮುನಿಭಿಸ್ತತ್ವದರ್ಶಿಭಿಃ ॥ ೧೦೩ ॥
ಅನಾಗತಂ ಹನೂಮಂತಂ ಕಾಲಂ ಸ್ವಲ್ಪಾವಶೇಷಿತಂ ।
ಜ್ಞಾತ್ವಾ ಪ್ರಕಥಿತಂ ತತ್ರ ರಾಮಂ ಪ್ರತಿ ಮಹಾಮತಿಂ ॥ ೧೦೪ ॥
ರಾಮರಾಮ ಮಹಾಬಾಹೋ ಕಾಲೋಹ್ಯತ್ಯೇತಿ ಸಾಂಪ್ರತಂ ।
ಜಾನಕ್ಯಾ ಯತ್ಕೃತಂ ಲಿಂಗಂ ಸೈಕತಂ ಲೀಲಯಾ ವಿಭೋ ॥ ೧೦೫ ॥
ತಲ್ಲಿಂಗಂ ಸ್ಥಾಪಯಸ್ವಾದ್ಯ ಮಹಾಲಿಂಗಮನುತ್ತಮಂ ।
ಶ್ರುತ್ವೈತದ್ವಚನಂ ರಾಮೋ ಜಾನಕ್ಯಾ ಸಹ ಸತ್ವರಂ ॥ ೧೦೬ ॥
ಮುನಿಭಿಃ ಸಹಿತಃ ಪ್ರೀತ್ಯಾ ಕೃತಕೌತುಕಮಂಗಲಃ ।
ಜ್ಯೇಷ್ಠೇಮಾಸೇ ಸಿತೇ ಪಕ್ಷೇ ದಶಮ್ಯಾಂ ಬುಧಹಸ್ತಯೋಃ ॥ ೧೦೭ ॥
ಗರಾನಂದೇ ವ್ಯತೀಪಾತೇ ಕನ್ಯಾಚಂದ್ರೇ ವೃಷೇ ರವೌ ।
ದಶಯೋಗೇ ಮಹಾಪುಣ್ಯೇ ಗಂಧಮಾದನಪರ್ವತೇ ॥ ೧೦೮ ॥
ಸೇತುಮಧ್ಯೇ ಮಹಾದೇವಂ ಲಿಂಗರೂಪಧರಂ ಹರಂ ।
ಈಶಾನಂ ಕೃತ್ತಿವಸನಂ ಗಂಗಾಚಂದ್ರಕಲಾಧರಂ ॥ ೧೦೯ ॥

---

ಅಗ್ರಗಳಿರುವ ದರ್ಭೆಗಳಲ್ಲಿ ಕುಳಿತು ಮೇಲಕ್ಕೆತ್ತಿದ ತೋಳುಳ್ಳವನೂ, ಯಾವುದನ್ನೂ ಹಿಡಿದುಕೊಳ್ಳದವನೂ, ಜಿತೇಂದ್ರಿಯನೂ ಆಗಿ ಪ್ರಾಣಾಯಾಮ ಪೂರ್ವಕವಾಗಿ ಭಕ್ತಿಯಿಂದ ತಪಸ್ಸನ್ನಾಚರಿಸಿದನು.

೧೦೩–೧೦೪. ಹೀಗೆ ಶಿವನನ್ನು ಸಂತೋಷಗೊಳಿಸಿ ಲಿಂಗವನ್ನು ಪಡೆದನು. ಇಷ್ಟರಲ್ಲಿ ತತ್ವಜ್ಞಾನಿಗಳಾದ ಮುನಿಗಳು ಹನುಮಂತನು ಬಾರದಿರುವುದನ್ನೂ ಮುಹೂರ್ತವು ಸಮೀಪಿಸಿರುವುದನ್ನೂ ತಿಳಿದು ರಾಮನನ್ನು ಕುರಿತು ಇಂತೆಂದರು:

೧೦೫–೧೧೦. "ರಾಮ! ಈಗ ಮುಹೂರ್ತವು ಮೀರುವುದು. ಸೀತೆಯು ಲೀಲೆಯಿಂದ ಮರಳಿನಿಂದ ನಿರ್ಮಿಸಿದ ಈ ಶ್ರೇಷ್ಠಲಿಂಗವನ್ನೇ ಪ್ರತಿಷ್ಠೆಮಾಡು" ಎನ್ನಲು, ರಾಮನು ಜಾನಕಿಯೊಡನೆ ಈ ಮಾತನ್ನು ಕೇಳಿ ಮುನಿಗಳೊಡನೆ ಕೌತುಕಮಂಗಳವನ್ನಾಚರಿಸಿ ಜ್ಯೇಷ್ಠಮಾಸ ಶುಕ್ಲಪಕ್ಷದ ದಶಮೀ ಬುಧವಾರ ಹಸ್ತಾನಕ್ಷತ್ರದಲ್ಲಿ ಅಮೃತಗಳಿಗೆಯಲ್ಲಿ, ವ್ಯತೀಪಾತದಲ್ಲಿ ಚಂದ್ರನು ಕನ್ಯಾ ರಾಶಿಯಲ್ಲಿಯೂ, ರವಿಯು ವೃಷಭರಾಶಿಯಲ್ಲಿಯೂ ಇರುವ ಪವಿತ್ರವಾದ ದಶಯೋಗದಲ್ಲಿ ಸೇತುಮಧ್ಯದಲ್ಲಿರುವ ಗಂಧಮಾದನಪರ್ವತದಲ್ಲಿ ಲಿಂಗಾಕೃತಿ ಯನ್ನು ತಾಳಿದವನೂ, ಗಜಚರ್ಮವನ್ನು ಹೊದ್ದವನೂ, ಗಂಗೆ ಚಂದ್ರಕಲೆ

ರಾಮೋ ವೈ ಸ್ಥಾಪಯಾಮಾಸ ಶಿವಲಿಂಗಮನುತ್ತಮಂ ।
ಲಿಂಗಸ್ಥಂ ಪೂಜಯಾಮಾಸ ರಾಘವಃ ಸಾಽಂಬಮೀಶ್ವರಂ ॥ ೧೧೦ ॥
ಲಿಂಗಸ್ಥಃ ಸ ಮಹಾದೇವಃ ಪಾರ್ವತ್ಯಾ ಸಹ ಶಂಕರಃ ।
ಪ್ರತ್ಯಕ್ಷಮೇವ ಭಗವಾನ್ಧತ್ತವಾನ್ವರಮುತ್ತಮಂ ॥ ೧೧೧ ॥
ಸರ್ವಲೋಕಶರಣ್ಯಾಯ ರಾಘವಾಯ ಮಹಾತ್ಮನೇ ।
ತ್ವಯಾಽತ್ರಸ್ಥಾಪಿತಂ ಲಿಂಗಂ ಯೇ ಪಶ್ಯಂತಿ ರಘೂದ್ವಹ ॥ ೧೧೨ ॥
ಮಹಾಪಾತಕಯುಕ್ತಾಶ್ಚ ತೇಷಾಂ ಪಾಪಂ ಪ್ರಣಶ್ಯತಿ ।
ಸರ್ವಾಣ್ಯಪಿ ಹಿ ಪಾಪಾನಿ ಧನುಷ್ಕೋಟೌ ನಿಮಜ್ಜನಾತ್ ॥ ೧೧೩ ॥
ದರ್ಶನಾದ್ರಾಮಲಿಂಗಸ್ಯ ಪಾತಕಾನಿ ಮಹಾಂತ್ಯಪಿ ।
ವಿಲಯಂ ಯಾಂತಿ ರಾಜೇಂದ್ರ ರಾಮಚಂದ್ರ ನ ಸಂಶಯಃ ॥ ೧೧೪ ॥
ಸ್ಪ್ರಾದಾದೇವಂ ಹಿ ರಾಮಾಯ ವರಂ ದೇವೋಽಂಬಿಕಾಪತಿಃ ।
ತದಗ್ರೇ ನಂದಿಕೇಶಂ ಚ ಸ್ಥಾಪಯಾಮಾಸ ರಾಘವಃ ॥ ೧೧೫ ॥
ಈಶ್ವರಸ್ಯಾಽಭಿಷೇಕಾರ್ಥಂ ಧನುಷ್ಕೋಟ್ಯಾಽಥ ರಾಘವಃ ।
ಏಕಂ ಕೂಪಂ ಧರಾಂ ಭಿತ್ವಾ ಜನಯಾಮಾಸ ವೈ ದ್ವಿಜಾಃ ॥ ೧೧೬ ॥
ತಸ್ಮಾಜ್ಜಲಮುಪಾದಾಯ ಸ್ನಾಪಯಾಮಾಸ ಶಂಕರಂ ।
ಕೋಟಿತೀರ್ಥಮಿತಿ ಪ್ರೋಕ್ತಂ ತತ್ತೀರ್ಥಂ ಪುಣ್ಯಮುತ್ತಮಂ ॥ ೧೧೭ ॥

---

ಗಳನ್ನು ಶಿರಸ್ಸಿನಲ್ಲಿ ಹೊತ್ತವನೂ ಆದ ಮಹೇಶ್ವರನ ಲಿಂಗವನ್ನು ಪ್ರತಿಷ್ಠೆಮಾಡಿ ಅಲ್ಲಿ ಸನ್ನಿಹಿತನಾದ ಪಾರ್ವತೀಪತಿಯನ್ನು ಅರ್ಚಿಸಿದನು.

೧೧೧. ಪಾರ್ವತಿಯೊಡನೆ ಲಿಂಗದಲ್ಲಿ ಪ್ರತ್ಯಕ್ಷನಾದ ಮಹಾದೇವನು ಅವನಿಗೆ ಉತ್ತಮ ವರವನ್ನು ನೀಡಿದನು.

೧೧೨–೧೧೪. "ರಾಮಚಂದ್ರ! ಸಕಲ ಪ್ರಪಂಚರಕ್ಷಕನೂ, ಮಹಾತ್ಮನೂ ಆದ ನೀನು ಸ್ಥಾಪಿಸಿದ ಈ ಲಿಂಗವನ್ನು ನೋಡಿದ ಮಹಾಪಾತಕಿಗಳ ಮಹಾ ಪಾತಕದೋಷವು ನಾಶವಾಗುವುದು. ಧನುಷ್ಕೋಟಿಸ್ನಾನದಿಂದ ಇತರ ಎಲ್ಲ ಪಾಪಗಳೂ ಪರಿಹಾರವಾಗುವುವು; ಇದರಲ್ಲಿ ಸಂದೇಹವಿಲ್ಲ."

೧೧೫. ಹೀಗೆ ಪಾರ್ವತೀಪತಿಯಾದ ಶಂಕರನು ವರವನ್ನಿತ್ತನು. ರಾಮನು ಅವನ ಮುಂದೆ ನಂದಿಕೇಶನನ್ನು ಪ್ರತಿಷ್ಠೆಮಾಡಿದನು.

೧೧೬. ಆ ಶಂಕರನ ಅಭಿಷೇಕಕ್ಕಾಗಿ ರಾಮನು ಬಿಲ್ಲಿನ ಕೊನೆಯಿಂದ ಭೂಮಿಯನ್ನು ಬಗೆದು ಒಂದು ಬಾವಿಯನ್ನು ನಿರ್ಮಿಸಿದನು.

೧೧೭. ಆ ಬಾವಿಯ ನೀರಿನಿಂದ ರಾಮನು ಶಂಕರನಿಗೆ ಅಭಿಷೇಕಮಾಡಲು ಆ ತೀರ್ಥವು ಕೋಟಿತೀರ್ಥವೆಂದು ಪ್ರಸಿದ್ಧಿಗೊಂಡಿತು.

ಉಕ್ತಂ ತದ್ವೈಭವಂ ಪೂರ್ವಮಸ್ಮಾಭಿರ್ಮುನಿಪುಂಗವಾಃ ।
ದೇವಾಶ್ಚ ಮುನಯೋ ನಾಗಾ ಗಂಧರ್ವಾಽಪ್ಸರಸಾಂ ಗಣಾಃ ।
ಸರ್ವೇಽಪಿ ವಾನರಾಲಿಂಗಮೇಕೈಕಂ ಚಕ್ರುರಾದರಾತ್ ॥ ೧೧೮ ॥

ಶ್ರೀ ಸೂತ ಉವಾಚ :—

ಏವಂ ವಃ ಕಥಿತಂ ವಿಪ್ರಾ ಯಥಾ ರಾಮೇಣ ಧೀಮತಾ ॥ ೧೧೯ ॥
ಸ್ಥಾಪಿತಂ ಶಿವಲಿಂಗಂ ವೈ ಭುಕ್ತಿಮುಕ್ತಿಪ್ರದಾಯಕಂ ।
ಇಮಾಂ ಲಿಂಗಪ್ರತಿಷ್ಠಾಂ ಯಃ ಶೃಣೋತಿ ಪಠತೇಽಥವಾ ॥ ೧೨೦ ॥
ಸ ರಾಮೇಶ್ವರಲಿಂಗಸ್ಯ ಸೇವಾಫಲಮವಾಪ್ನುಯಾತ್ ।
ಸಾಯುಜ್ಯಂ ಚ ಸಮಾಪ್ನೋತಿ ರಾಮನಾಥಸ್ಯ ವೈಭವಾತ್ ॥ ೧೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ರಾಮನಾಥಲಿಂಗಪ್ರತಿಷ್ಠಾವಿಧಿವರ್ಣನಂ"ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

೧೧೮. ಎಲೈ ಮುನಿವರ್ಯರೆ! ಹೀಗೆ ರಾಮಲಿಂಗದ ಮಾಹಾತ್ಮ್ಯೆಯನ್ನು ಹೇಳಿರುವೆನು. ತರುವಾಯ ದೇವತೆಗಳು, ಮುನಿಗಳು, ಸರ್ಪಗಳು, ಗಂಧರ್ವರು, ಅಪ್ಸರೆಯರು, ಸಕಲ ಕಪಿಗಳೂ ಅಲ್ಲಿಯೆ ಒಂದೊಂದು ಲಿಂಗವನ್ನು ಪ್ರತಿಷ್ಠೆ ಮಾಡಿದರು.

೧೧೯–೧೨೧. ಶ್ರೀಸೂತನು ಹೇಳುತ್ತಾನೆ:—ಬ್ರಾಹ್ಮಣರೆ! ಹೀಗೆ ಶ್ರೀ ರಾಮನು ಭುಕ್ತಿಮುಕ್ತಿಗಳನ್ನೀಯುವ ಶಿವಲಿಂಗವನ್ನು ಪ್ರತಿಷ್ಠೆಮಾಡಿರುವುದನ್ನು ನಿಮಗೆ ಹೇಳಿರುತ್ತೇನೆ. ಈ ಲಿಂಗಪ್ರತಿಷ್ಠೆಯ ಕ್ರಮವನ್ನು ಕೇಳಿದವನೂ, ಹೇಳಿದವನೂ ರಾಮೇಶ್ವರಸೇವೆಯ ಫಲವನ್ನು ಹೊಂದುವನು. ಅವನ ಮಾಹಾತ್ಮೆಯಿಂದ ಸಾಯುಜ್ಯವನ್ನೂ ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ರಾಮನಾಥಲಿಂಗಪ್ರತಿಷ್ಠಾವಿಧಿವರ್ಣನ"ವೆಂಬ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಚತ್ವಾರಿಂಶೋಽಧ್ಯಾಯಃ

### ರಾಮಚಂದ್ರಕೃತ ತತ್ತ್ವಜ್ಞಾನೋಪದೇಶವರ್ಣನಂ

ಶ್ರೀ ಸೂತ ಉವಾಚ :—

ಏವಂ ಪ್ರತಿಷ್ಠಿತೇ ಲಿಂಗೇ ರಾಮೇಣಾಕ್ಲಿಷ್ಟಕಾರಿಣಾ ।
ಲಿಂಗಂ ವರಂ ಸಮಾದಾಯ ಮಾರುತಿಃ ಸಹಸಾ ಯಯೌ ॥ ೧ ॥
ರಾಮಂ ದಾಶರಥಿಂ ವೀರಮಭಿವಾದ್ಯ ಸ ಮಾರುತಿಃ ।
ವೈದೇಹೀಲಕ್ಷ್ಮಣೌ ಪಶ್ಚಾತ್ಸುಗ್ರೀವಂ ಪ್ರಣನಾಮ ಚ ॥ ೨ ॥
ಸೀತಾ ಸೈಕತಲಿಂಗಂ ತತ್ಪೂಜಯಂತಂ ರಘೂದ್ವಹಂ ।
ದೃಷ್ಟ್ವಾಽಥ ಮುನಿಭಿಃ ಸಾರ್ಧಂ ಚುಕೋಪ ಪವನಾತ್ಮಜಃ ॥ ೩ ॥
ಅತ್ಯಂತಂ ಖೇದಖಿನ್ನಃ ಸನ್ವೃಥಾ ಕೃತಪರಿಶ್ರಮಃ ।
ಉವಾಚ ರಾಮಂ ಧರ್ಮಜ್ಞಂ ಹನೂಮಾನಂಜನಾತ್ಮಜಃ ॥ ೪ ॥

ಹನೂಮಾನುವಾಚ :—

ದುರ್ಜಾತೋಽಹಂ ವೃಥಾ ರಾಮ ಲೋಕೇ ಕ್ಲೇಶಾಯ ಕೇವಲಂ ।
ಖಿನ್ನೋಽಸ್ಮಿ ಬಹುಶೋ ದೇವ ರಾಕ್ಷಸೈಃ ಕ್ರೂರಕರ್ಮಭಿಃ ॥ ೫ ॥

---

### ಕನ್ನಡದ ಅನುವಾದ

#### ರಾಮಚಂದ್ರಕೃತ ತತ್ವಜ್ಞಾನೋಪದೇಶವರ್ಣನ

೧. ಶ್ರೀಸೂತನು ಹೇಳುತ್ತಾನೆ:—ಸಮಸ್ತ ಜಂತುಗಳಿಗೂ ಸುಖದಾಯಕನಾದ ಆ ಶ್ರೀರಾಮನು ಹೀಗೆ ಶಿವಲಿಂಗವನ್ನು ಪ್ರತಿಷ್ಠೆಮಾಡುತ್ತಲೇ ಆಂಜನೇಯನು ಕೈಲಾಸದಿಂದ ಉತ್ತಮವಾದ ಲಿಂಗವನ್ನು ತೆಗೆದುಕೊಂಡು ಕೂಡಲೆ ಬಂದನು.

೨. ಅವನು ಮೊದಲು ರಾಮನನ್ನು ವಂದಿಸಿ ಬಳಿಕ ಸೀತೆ, ಲಕ್ಷ್ಮಣ, ಸುಗ್ರೀವರನ್ನು ನಮಸ್ಕರಿಸಿದನು.

೩. ಸೀತೆಯ ಮರಳಿನ ಲಿಂಗವನ್ನು ಮುನಿಗಳೊಡನೆ ಪೂಜಿಸುತ್ತಿರುವ ರಾಘವನನ್ನು ನೋಡಿ ಆಂಜನೇಯನು ಸಿಟ್ಟಾದನು.

೪. ಆಂಜನೇಯನು ತನ್ನ ಆಯಾಸವು ವ್ಯರ್ಥವಾದುದರಿಂದ ಬಹಳವಾಗಿ ವ್ಯಥೆಗೊಂಡು ಧರ್ಮಜ್ಞನಾದ ರಾಮನನ್ನು ಕುರಿತು ಇಂತೆಂದನು:

೫. ಹನುಮಂತನು ಹೇಳುತ್ತಾನೆ:—"ರಾಮ! ನಾನು ಪ್ರಪಂಚದಲ್ಲಿ ಕಷ್ಟಪಡುವುದಕ್ಕಾಗಿಯೇ ದುಷ್ಟಜನ್ಮವನ್ನು ಪಡೆದಿರುವೆನು. ಕಠಿನರಾದ ರಾಕ್ಷಸರಿಂದ ನಾನು ಬಹಳವಾಗಿ ವ್ಯಥೆಗೊಂಡಿರುವೆನು.

ಮಾಸ್ಮ ಸೀಮಂತಿನೀ ಕಾಚಿಜ್ಜನಯೇನ್ಮಾದೃಶಂ ಸುತಂ ।
ಯತೋಽನುಭೂಯತೇ ದುಃಖಮನಂತಂ ಭವಸಾಗರೇ ॥ ೬ ॥
ಖಿನ್ನೋಽಸ್ಮಿ ಸೇವಯಾ ಪೂರ್ವಂ ಯುದ್ಧೇನಾಽಪಿ ತತೋಽಧಿಕಂ ।
ಅನಂತಂ ದುಃಖಮಧುನಾ ಯತೋ ಮಾಮವಮನ್ಯಸೇ ॥ ೭ ॥
ಸುಗ್ರೀವೇಣಚ ಭಾರ್ಯಾರ್ಥಂ ರಾಜ್ಯಾರ್ಥಂ ರಾಕ್ಷಸೇನ ಚ ।
ರಾವಣಾವರಜೇನ ತ್ವಂ ಸೇವಿತೋಽಸಿ ರಘೂದ್ವಹ ॥ ೮ ॥
ಮಯಾ ನಿರ್ಹೇತುಕಂ ರಾಮ ಸೇವಿತೋಽಸಿ ಮಹಾಮತೇ ।
ವಾನರಾಣಾಮನೇಕೇಷು ತ್ವಯಾಜ್ಞಪ್ತೋಽಹಮದ್ಯ ವೈ ॥ ೯ ॥
ಶಿವಲಿಂಗಂ ಸಮಾನೇತುಂ ಕೈಲಾಸಾತ್ಪರ್ವತೋತ್ತಮಾತ್ ।
ಕೈಲಾಸಂ ತ್ವರಿತೋ ಗತ್ವಾ ನಚಾಽಪಶ್ಯಂ ಪಿನಾಕಿನಂ ॥ ೧೦ ॥
ತಪಸಾ ಪ್ರೀಣಯಿತ್ವಾ ತಂ ಸಾಂಬಂ ವೃಷಭವಾಹನಂ ।
ಪ್ರಾಪ್ತಲಿಂಗೋ ರಘುಪತೇ ತ್ವರಿತಃ ಸಮುಪಾಗತಃ ॥ ೧೧ ॥
ಅನ್ಯಲ್ಲಿಂಗಂ ತ್ವಮಧುನಾ ಪ್ರತಿಷ್ಠಾಪ್ಯ ತು ಸೈಕತಂ ।
ಮುನಿಭಿರ್ದೇವಗಂಧರ್ವೈಃ ಸಾಕಂ ಪೂಜಯಸೇ ವಿಭೋ ॥ ೧೨ ॥

---

೬. ಸಂಸಾರಸಾಗರದಲ್ಲಿ ಮಿತಿಮೀರಿದ ದುಃಖವನ್ನನುಭವಿಸುತ್ತಿರುವ ನನ್ನಂತಹ ಪುತ್ರನನ್ನು ಯಾವ ಹೆಂಗಸೂ ಹೆರದಿರಲಿ.

೭. ಮೊದಲು ನಿನ್ನ ಸೇವೆಯಿಂದ ನನಗೆ ಬಹಳ ದುಃಖವಾಗಿದೆ. ಯುದ್ಧದಿಂದ ಅದಕ್ಕಿಂತಲೂ ಹೆಚ್ಚಾದ ಕಷ್ಟವನ್ನನುಭವಿಸಿರುತ್ತೇನೆ. ಈಗ ನೀನು ನನ್ನನ್ನು ಅವಮಾನಮಾಡಿದ್ದರಿಂದ ಅತ್ಯಂತ ದುಃಖವನ್ನನುಭವಿಸುತ್ತೇನೆ.

೮. ರಾಮ! ಸುಗ್ರೀವನು ಪತ್ನಿಯನ್ನುಪಡೆಯುವುದಕ್ಕಾಗಿಯೂ, ರಾವಣನ ತಮ್ಮನಾದ ವಿಭೀಷಣನು ರಾಜ್ಯಕ್ಕಾಗಿಯೂ ನಿನ್ನನ್ನು ಸೇವಿಸಿರುತ್ತಾರೆ.

೯–೧೦. ನಾನು ನಿನ್ನನ್ನು ಯಾವದೊಂದು ಪ್ರಯೋಜನದ ಆಶೆಯಿಂದಲೂ ಸೇವಿಸಿರುವುದಿಲ್ಲ. ಈಗ ನೀನು ಅನೇಕ ಕಪಿಗಳ ಮಧ್ಯದಲ್ಲಿ ಕೈಲಾಸಶೈಲದಿಂದ ಶಿವಲಿಂಗವನ್ನು ತರಲು ನನಗೆ ಆಜ್ಞೆಮಾಡಿದೆ. ನಾನು ವೇಗವಾಗಿ ಕೈಲಾಸಕ್ಕೆ ಹೋಗಿ ನೋಡಲು ಅಲ್ಲಿ ಶಿವಲಿಂಗವಿರಲಿಲ್ಲ.

೧೧. ಆಗ ನಾನು ವೃಷಭವಾಹನನಾದ ಪಾರ್ವತೀಪತಿಯನ್ನು ತಪಸ್ಸಿನಿಂದ ಸಂತೋಷಗೊಳಿಸಿ ಅವನಿಂದ ಶಿವಲಿಂಗವನ್ನು ಪಡೆದು ಶೀಘ್ರವಾಗಿ ಬಂದೆನು.

೧೨. ಸ್ವಾಮಿ! ನೀನೀಗ ಬೇರೆ ಮರಳಿನ ಲಿಂಗವನ್ನು ಪ್ರತಿಷ್ಠೆಮಾಡಿ ಮುನಿಗಳು, ದೇವತೆಗಳು, ಗಂಧರ್ವರು ಇವರೊಡನೆ ಅದನ್ನೇ ಪೂಜಿಸುತ್ತಿರುವೆ.

ಮಯಾನೀತಮಿದಂ ಲಿಂಗಂ ಕೈಲಾಸಾತ್ಪರ್ವತಾದ್ವೃಥಾ ।
ಅಹೋ ಭಾರಾಯ ಮೇ ದೇಹೋ ಮಂದಭಾಗ್ಯಸ್ಯ ಜಾಯತೇ ॥ ೧೩ ॥
ಭೂತಲಸ್ಯ ಮಹಾರಾಜ ಜಾನಕೀರಮಣ ಪ್ರಭೋ ।
ಇದಂ ದುಃಖಮಹಂ ಸೋಢುಂ ನ ಶಕ್ನೋಮಿ ರಘೂದ್ವಹ ॥ ೧೪ ॥
ಕಿಂ ಕರಿಷ್ಯಾಮಿ ಕುತ್ರಾಽಹಂ ಗಮಿಷ್ಯಾಮಿ ನಮೇ ಗತಿಃ ।
ಅತಃ ಶರೀರಂ ತ್ಯಕ್ಷ್ಯಾಮಿ ತ್ವಯಾಽಹಮವಮಾನಿತಃ ॥ ೧೫ ॥
ಶ್ರೀ ಸೂತ ಉವಾಚ:—
ಏವಂ ಸ ಬಹುಶೋ ವಿಪ್ರಾಃ ಕ್ರುಶಿತ್ವಾ ಪವನಾತ್ಮಜಃ ।
ದಂಡವತ್ಪ್ರಣತೋ ಭೂಮೌ ಕ್ರೋಧಶೋಕಾಕುಲೋಽಭವತ್ ॥ ೧೬ ॥
ತಂ ದೃಷ್ಟ್ವಾ ರಘುನಾಥೋಽಪಿ ಪ್ರಹಸನ್ನಿದಮಬ್ರವೀತ್ ।
ಪಶ್ಯತಾಂ ಸರ್ವದೇವಾನಾಂ ಮುನೀನಾಂ ಕಪಿರಕ್ಷಸಾಂ ।
ಸಾಂತ್ವಯನ್ಮಾರುತಿಂ ತತ್ರ ದುಃಖಂ ಚಾಽಸ್ಯ ಪ್ರಮಾರ್ಜಯನ್ ॥ ೧೭ ॥
ಶ್ರೀ ರಾಮ ಉವಾಚ:—
ಸರ್ವಂ ಜಾನಾಮ್ಯಹಂ ಕಾರ್ಯಮಾತ್ಮನೋಽಪಿ ಪರಸ್ಯ ಚ ॥ ೧೮ ॥
ಜಾತಸ್ಯ ಜಾಯಮಾನಸ್ಯ ಮೃತಸ್ಯಾಽಪಿ ಸದಾ ಕಪೇ ।
ಜಾಯತೇ ಮ್ರಿಯತೇ ಜಂತುರೇಕ ಏವ ಸ್ವಕರ್ಮಣಾ ॥ ೧೯ ॥
ಪ್ರಯಾತಿ ನರಕಂಚಾಽಪಿ ಪರಮಾತ್ಮಾ ತು ನಿರ್ಗುಣಃ ।
ಏವಂ ತತ್ವಂ ವಿನಿಶ್ಚಿತ್ಯ ಶೋಕಂ ಮಾ ಕುರು ವಾನರ ॥ ೨೦ ॥

---

೧೩–೧೪. ನಾನು ನಿಷ್ಫಲವಾಗಿ ಕೈಲಾಸದಿಂದ ಈ ಲಿಂಗವನ್ನು ತಂದೆನು. ಅಲ್ಪಭಾಗ್ಯನಾದ ನನ್ನೀದೇಹವು ಕೇವಲ ಭೂಭಾರಕ್ಕಾಗಿ ಆಯಿತು. ಮಹಾ ರಾಜ! ನಾನು ಈ ದುಃಖವನ್ನು ಸಹಿಸಲಾರೆನು.

೧೫. ನಿನ್ನಿಂದ ಅವಮಾನಗೊಂಡ ನಾನು ಏನನ್ನುಮಾಡಲಿ? ಎಲ್ಲಿಗೆ ಹೋಗಲಿ? ನನಗೇನು ಗತಿ? ಆದ್ದರಿಂದ ಈ ಶರೀರವನ್ನು ತ್ಯಜಿಸುವೆನು.''

೧೬. ಶ್ರೀಸೂತನು ಹೇಳುತ್ತಾನೆ:—ಬ್ರಾಹ್ಮಣರೆ! ಆ ಆಂಜನೇಯನು ಹೀಗೆ ಬಹಳವಾಗಿ ರೇಗಿ ನುಡಿದು ರಾಮನಿಗೆ ಸಾಷ್ಟಾಂಗ ನಮಸ್ಕಾರಮಾಡಿ ಕೋಪ, ದುಃಖಗಳಿಂದ ವ್ಯಥೆಗೊಂಡನು.

೧೭. ರಾಮಚಂದ್ರನು ಅವನನ್ನು ಕಂಡು ನಗುತ್ತ, ಸಮಸ್ತ ದೇವತೆಗಳೂ, ಮುನಿಗಳೂ, ಕಪಿಗಳೂ, ರಾಕ್ಷಸರೂ ನೋಡುತ್ತಿರುವಾಗಲೆ ಅವನನ್ನು ಸಮಾಧಾನಗೊಳಿಸುತ್ತಲೂ, ದುಃಖವನ್ನು ನಿವಾರಿಸುತ್ತಲೂ ಹೀಗೆಂದನು:

೧೮–೨೦. ಶ್ರೀರಾಮನು ಹೇಳುತ್ತಾನೆ:—''ಆಂಜನೇಯ! ನಾನು ನನ್ನ ಮತ್ತು ಹುಟ್ಟಿದ, ಹುಟ್ಟುತ್ತಿರುವ, ಮೃತವಾದ ಇತರ ಪ್ರಾಣಿಗಳ ಸಮಸ್ತ

ಲಿಂಗತ್ರಯವಿನಿರ್ಮುಕ್ತಂ ಜ್ಯೋತಿರೇಕಂ ನಿರಂಜನಂ ।
ನಿರಾಶ್ರಯಂ ನಿರ್ವಿಕಾರಮಾತ್ಮಾನಂ ಪಶ್ಯ ನಿತ್ಯಶಃ ॥ ೨೧ ॥
ಕಿಮರ್ಥಂ ಕುರುಷೇ ಶೋಕಂ ತತ್ವಜ್ಞಾನಸ್ಯ ಬಾಧಕಂ ।
ತತ್ವಜ್ಞಾನೇ ಸದಾ ನಿಷ್ಠಾಂ ಕುರು ವಾನರಸತ್ತಮ ॥ ೨೨ ॥
ಸ್ವಯಂಪ್ರಕಾಶಮಾತ್ಮಾನಂ ಧ್ಯಾಯಸ್ವ ಸತತಂ ಕಪೇ ।
ದೇಹಾದೌ ಮಮತಾಂ ಮುಂಚ ತತ್ವಜ್ಞಾನವಿರೋಧಿನೀಂ ॥ ೨೩ ॥
ಧರ್ಮಂ ಭಜಸ್ವ ಸತತಂ ಪ್ರಾಣಿಹಿಂಸಾಂ ಪರಿತ್ಯಜ ।
ಸೇವಸ್ವ ಸಾಧುಪುರುಷಾಂಜಹಿ ಸರ್ವೇಂದ್ರಿಯಾಣಿ ಚ ॥ ೨೪ ॥
ಪರಿತ್ಯಜಸ್ವ ಸತತಮನ್ಯೇಷಾಂ ದೋಷಕೀರ್ತನಂ ।
ಶಿವವಿಷ್ಣ್ವಾದಿದೇವಾನಾಮರ್ಚಾಂ ಕುರು ಸದಾ ಕಪೇ ॥ ೨೫ ॥
ಸತ್ಯಂ ವದಸ್ವ ಸತತಂ ಪರಿತ್ಯಜ ಶುಚಂ ಕಪೇ ।
ಪ್ರತ್ಯಗ್ಬ್ರಹ್ಮೈಕತಾಜ್ಞಾನಂ ಮೋಹವಸ್ತುಸಮುದ್ಗತಂ ॥ ೨೬ ॥
ಶೋಭನಾಽಶೋಭನಾಭ್ರಾಂತಿಃ ಕಲ್ಪಿತಾಽಸ್ಮಿನ್ಯಥಾರ್ಥವತ್ ।
ಅಧ್ಯಾಸ್ತೇ ಶೋಭನತ್ವೇನ ಪದಾರ್ಥೇ ಮೋಹವೈಭವಾತ್ ॥ ೨೭ ॥

---

ಕಾರ್ಯವನ್ನು ಯಾವಾಗಲೂ ತಿಳಿಯುತ್ತೇನೆ. ಪ್ರಾಣಿಯು ತನ್ನ ಕರ್ಮವಶದಿಂದಲೇ ಹುಟ್ಟುವುದು; ಸಾಯುವುದು; ನರಕಕ್ಕೂ ಹೋಗುವುದು. ಪರಮಾತ್ಮನು ನಿರ್ಗುಣನು. ಹೀಗೆ ತತ್ವಾರ್ಥವನ್ನರಿತು ನೀನು ದುಃಖಿಸಬೇಡ.

೨೧. ಯಾವಾಗಲೂ ಪುಲ್ಲಿಂಗಾದಿ ಮೂರು ಲಿಂಗಗಳಿಲ್ಲದಿರುವವನೂ, ದೋಷರಹಿತನೂ, ಆಶ್ರಯವಿಕಾರರಹಿತನೂ, ಜ್ಯೋತಿಸ್ಸ್ವರೂಪನೂ ಆದ ಪರಮಾತ್ಮನನ್ನು ನೋಡು.

೨೨. ವಾನರೋತ್ತಮ! ತತ್ವಜ್ಞಾನವನ್ನು ಬಾಧಿಸುವ ದುಃಖವನ್ನೇಕೆ ಕಟ್ಟಿಕೊಳ್ಳುವೆ? ಯಾವಾಗಲೂ ತತ್ವಜ್ಞಾನತತ್ಪರನಾಗು.

೨೩–೨೪. ಯಾವಾಗಲೂ ಸ್ವಪ್ರಕಾಶನಾದ ಪರಬ್ರಹ್ಮನನ್ನೇ ಧ್ಯಾನಿಸುತ್ತಿರು. ತತ್ವಜ್ಞಾನವನ್ನು ಬಾಧಿಸುವ ದೇಹ ಮೊದಲಾದವುಗಳಲ್ಲಿ ನನ್ನದೆಂಬ ಭಾವನೆಯನ್ನು ತೊರೆದುಬಿಡು. ಧರ್ಮವನ್ನು ಮಾಡು. ಪ್ರಾಣಿಹಿಂಸೆಯನ್ನು ತ್ಯಜಿಸು. ಸಜ್ಜನರನ್ನು ಸೇವಿಸು. ಸಕಲೇಂದ್ರಿಯಗಳನ್ನೂ ಜಯಿಸು.

೨೫. ಪರರ ದೋಷವನ್ನು ಹೇಳಬೇಡ. ಯಾವಾಗಲೂ ಶಿವವಿಷ್ಣು ಮೊದಲಾದ ದೇವತೆಗಳನ್ನು ಪೂಜಿಸು.

೨೬. ಯಾವಾಗಲೂ ಸತ್ಯವನ್ನು ಹೇಳು. ದುಃಖಿಸಬೇಡ. ಭ್ರಾಂತಿಮೂಲಕವಾಗಿ ಉಂಟಾದ ಪರಬ್ರಹ್ಮನೇ ಬೇರೆ ಎಂಬ ಅಜ್ಞಾನವನ್ನು ತ್ಯಜಿಸು.

೨೭. ಪದಾರ್ಥದಲ್ಲಿ ಒಳ್ಳೆಯದು ಕೆಟ್ಟದೆಂಬ ಅಯಥಾರ್ಥಜ್ಞಾನ

ರೋಗೋ ವಿಜಾಯತೇ ನೄಣಾಂ ಭ್ರಾಂತಾನಾಂ ಕಪಿಸತ್ತಮ ।
ರಾಗದ್ವೇಷಬಲಾದ್ಬದ್ಧ್ವಾ ಧರ್ಮಾಽಧರ್ಮವಶಂ ಗತಾಃ ॥ ೨೮ ॥
ದೇವ ತಿರ್ಯಙ್ಮನುಷ್ಯಾದ್ಯಾ ನಿರಯಂ ಯಾಂತಿ ಮಾನವಾಃ ।
ಚಂದನಾಽಗರು ಕರ್ಪೂರಪ್ರಮುಖಾ ಅತಿಶೋಭನಾಃ ॥ ೨೯ ॥
ಮಲಂ ಭವಂತಿ ಯತ್ಸ್ಪರ್ಶಾತ್ತಚ್ಛರೀರಂ ಕಥಂ ಸುಖಂ ।
ಭಕ್ಷ್ಯಭೋಜ್ಯಾದಯಃ ಸರ್ವೇ ಪದಾರ್ಥಾ ಅತಿಶೋಭನಾಃ ॥ ೩೦ ॥
ವಿಷ್ಠಾ ಭವಂತಿ ಯತ್ಸಂಗಾತ್ತಚ್ಛರೀರಂ ಕಥಂ ಸುಖಂ ।
ಸುಗಂಧಿಶೀತಲಂ ತೋಯಂ ಮೂತ್ರಂ ಯತ್ಸಂಗಮಾದ್ಭವೇತ್ ॥ ೩೧ ॥
ತತ್ಕಥಂ ಶೋಭನಂ ಪಿಂಡಂ ಭವೇದ್ಬ್ರೂಹಿ ಕಪೇಽಧುನಾ ।
ಅತೀವ ಧವಲಾಃ ಶುದ್ಧಾಃ ಪಟಾ ಯತ್ಸಂಗಮೇನ ಹಿ ॥ ೩೨ ॥
ಭವಂತಿ ಮಲಿನಾಃ ಸ್ವೇದಾತ್ತತ್ಕಥಂ ಶೋಭನಂ ಭವೇತ್ ।
ಶ್ರೂಯತಾಂ ಪರಮಾರ್ಥೋ ಮೇ ಹನೂಮನ್ವಾಯುನಂದನ ॥ ೩೩ ॥
ಅಸ್ಮಿನ್ಸಂಸಾರಗರ್ತೇ ತು ಕಿಂಚಿತ್ಸೌಖ್ಯಂ ನ ವಿದ್ಯತೇ ।
ಪ್ರಥಮಂ ಜಂತುರಾಪ್ನೋತಿ ಜನ್ಮ ಬಾಲ್ಯಂ ತತಃ ಪರಂ ॥ ೩೪ ॥
ಪಶ್ಚಾದ್ಯೌವನಮಾಪ್ನೋತಿ ತತೋ ವಾರ್ಧಕ್ಯಮಶ್ನುತೇ ।
ಪಶ್ಚಾನ್ಮೃತ್ಯುಮವಾಪ್ನೋತಿ ಪುನರ್ಜನ್ಮ ತದಶ್ನುತೇ ॥ ೩೫ ॥

---

ಯಥಾರ್ಥಜ್ಞಾನದಂತೆ ಉಂಟಾಗುವುದು. ಭ್ರಾಂತಿಯಿಂದ ವಸ್ತುವು ಒಳ್ಳೆಯದೆಂದು ಭಾಸವಾಗುವುದು.

೨೮–೩೫. ಎಲೈ ಕಪಿವರ್ಯನೆ! ಭ್ರಾಂತರಾದ ನರರಿಗೆ ವ್ಯಾಧಿಗಳುಂಟಾಗುವುದು. ರಾಗದ್ವೇಷಗಳಿಗೂ, ಧರ್ಮಾಧರ್ಮಗಳಿಗೂ ಕಟ್ಟುಬಿದ್ದ ದೇವತೆಗಳು, ಪಶುಪಕ್ಷಿಗಳು, ಮನುಷ್ಯರು ಮೊದಲಾದವರು ನರಕವನ್ನು ಪ್ರವೇಶಿಸುವರು. ಶರೀರದ ಸಂಬಂಧದಿಂದ ಶ್ರೀಗಂಧ, ಅಗರು, ಕರ್ಪೂರ ಮೊದಲಾದ ಸುಗಂಧ ವಸ್ತುಗಳು ಕೊಳೆಯಾಗಿ ದುರ್ಗಂಧವಾಗುವುದು. ಅತ್ಯಂತ ರುಚಿಕರವಾದ ಭಕ್ಷ್ಯ ಮೊದಲಾದವುಗಳು ಶರೀರದ ಸಂಬಂಧದಿಂದ ಅಮೇಧ್ಯವಾಗುವುವು. ಸುವಾಸನೆಯಾದ ತಣ್ಣೀರು ಮೂತ್ರವಾಗುವುದು. ಬಹಳ ಬೆಳ್ಳಗಿರುವ ಮಡಿ ಬಟ್ಟೆಗಳು ಶರೀರದ ಬೆವರಿನಿಂದ ಕೊಳೆಯಾಗುವುವು. ಇಂತಹ ದೇಹವು ಒಳ್ಳೆಯದೆಂದು ಹೇಗೆ ಹೇಳುವೆ? ವಾಯುತನಯ! ಪಾರಮಾರ್ಥಿಕ ವಿಷಯವನ್ನು ಕೇಳು. ಈ ಸಂಸಾರವೆಂಬ ಹಳ್ಳದಲ್ಲಿ ಸ್ವಲ್ಪವೂ ಸೌಖ್ಯವಿಲ್ಲ. ಜಂತುವು ಮೊದಲು ಹುಟ್ಟುವುದು. ಅನಂತರ ಬಾಲ್ಯ, ಯೌವನ, ಮುಪ್ಪುಗಳನ್ನು ಕ್ರಮವಾಗಿ ಹೊಂದಿ ಮಡಿದು ಮರಳಿ ಹುಟ್ಟುವುದು.

ಅಜ್ಞಾನಪ್ರಭವಾದೇವ ದುಃಖಮಾಪ್ನೋತಿ ಮಾನವಃ ।
ತದಜ್ಞಾನ ನಿವೃತ್ತೌ ತು ಪ್ರಾಪ್ನೋತಿ ಸುಖಮುತ್ತಮಂ ॥ ೩೬ ॥
ಅಜ್ಞಾನಸ್ಯ ನಿವೃತ್ತಿಸ್ತು ಜ್ಞಾನಾದೇವ ನ ಕರ್ಮಣಾ ।
ಜ್ಞಾನಂ ನಾಮ ಪರಂ ಬ್ರಹ್ಮ ಜ್ಞಾನಂ ವೇದಾಂತವಾಕ್ಯಜಂ ॥ ೩೭ ॥
ತದ್ಜ್ಞಾನಂ ಚ ವಿರಕ್ತಸ್ಯ ಜಾಯತೇ ನೇತರಸ್ಯ ಹಿ ।
ಮುಖ್ಯಾಽಧಿಕಾರಿಣಃ ಸತ್ಯಮಾಚಾರ್ಯಸ್ಯ ಪ್ರಸಾದತಃ ॥ ೩೮ ॥
ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿಸ್ಥಿತಾಃ ।
ತದಾ ಮರ್ತ್ಯೋಽಮೃತೋಽತ್ರೈವ ಪರಂ ಬ್ರಹ್ಮಸಮಶ್ನುತೇ ॥ ೩೯ ॥
ಜಾಗ್ರತಂ ಚ ಸ್ವಪಂತಂ ಚ ಭುಂಜಂತಂ ಚ ಸ್ಥಿತಂ ತಥಾ ।
ಇಮಂ ಜನಂ ಸದಾಕ್ರೂರಃ ಕೃತಾಂತಃ ಪರಿಕರ್ಷತಿ ॥ ೪೦ ॥
ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ ।
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂಚ ಜೀವಿತಂ ॥ ೪೧ ॥
ಯಥಾ ಫಲಾನಾಂ ಪಕ್ವಾನಾಂ ನಾಽನ್ಯತ್ರ ಪತನಾದ್ಭಯಂ ।
ಯಥಾ ನರಾಣಾಂ ಜಾತಾನಾಂ ನಾಽನ್ಯತ್ರ ಪತನಾದ್ಭಯಂ ॥ ೪೨ ॥

---

೩೬. ಮಾನವನು ಅಜ್ಞಾನದಿಂದಲೇ ದುಃಖವನ್ನು ಹೊಂದುವನು. ಅಜ್ಞಾನವು ಕಳೆದಕೂಡಲೆ ಉತ್ತಮ ಸೌಖ್ಯವನ್ನು ಪಡೆಯುವನು.

೩೭. ಆ ಅಜ್ಞಾನವು ತತ್ತ್ವಜ್ಞಾನದಿಂದಲೆ ನೀಗುವುದು. ಕರ್ಮದಿಂದಲ್ಲ. ಉಪನಿಷತ್ತಿನ ವಾಕ್ಯಗಳಿಂದುಂಟಾದ ಪರಬ್ರಹ್ಮಜ್ಞಾನವೇ ತತ್ತ್ವಜ್ಞಾನವು.

೩೮. ಆ ಜ್ಞಾನವು ವಿರಕ್ತನಾದ ಉತ್ತಮಾಧಿಕಾರಿಗೆ ಸದ್ಗುರುವಿನ ಅನುಗ್ರಹದಿಂದ ಉಂಟಾಗುವುದು. ಇತರರಿಗೆ ಉಂಟಾಗುವುದಿಲ್ಲ.

೩೯. ಮನುಷ್ಯನ ಮನಸ್ಸಿನಲ್ಲಿ ನೆಲೆಸಿರುವ ವಿಷಯಾಶೆಗಳು ನೀಗಿದ ಕೂಡಲೆ ಅವನು ಮುಕ್ತನಾಗಿ ಪರಬ್ರಹ್ಮನಾಗುವನು.

೪೦. ನರನು ಎಚ್ಚರಗೊಂಡಿದ್ದರೂ, ನಿದ್ರಿಸುತ್ತಿದ್ದರೂ, ಊಟಮಾಡುತ್ತಿದ್ದರೂ, ನಿಂತಿದ್ದರೂ ಅವನನ್ನು ಕ್ರೂರನಾದ ಯಮನು ಎಳೆದುಕೊಂಡು ಹೋಗುವನು.

೪೧. ಎಲ್ಲ ಅಭಿವೃದ್ಧಿಗಳು ನಾಶವಾಗುವವರೆಗೂ, ಉನ್ನತಿಯು ಅವನತಿವರೆಗೂ, ಸಂಯೋಗವು ವಿಯೋಗದವರೆಗೂ, ಜೀವವು ಸಾಯುವವರೆಗೂ ಇರುವುದು.

೪೨. ಮಾಗಿದ ಹಣ್ಣುಗಳಿಗೆ ಬೀಳುವುದಕ್ಕಿಂತ ಬೇರೆ ಭಯವಿಲ್ಲದಂತೆ ಜಂತುಗಳಿಗೆ ಮೃತಿಗಿಂತ ಬೇರೆ ಭಯವಿಲ್ಲ.

ಯಥಾ ಗೃಹಂ ದೃಢಸ್ತಂಭಂ ಜೀರ್ಣಂ ಕಾಲೇ ವಿನಶ್ಯತಿ ।
ಏವಂ ವಿನಶ್ಯಂತಿ ನರಾ ಜರಾಮೃತ್ಯುವಶಂಗತಾಃ ॥ ೪೩ ॥
ಅಹೋರಾತ್ರಸ್ಯ ಗಮನಾನ್ನೃಣಾಮಾಯುರ್ವಿನಶ್ಯತಿ ।
ಆತ್ಮಾನಮನುಶೋಚ ತ್ವಂ ಕಿಮನ್ಯಮನುಶೋಚಸಿ ॥ ೪೪ ॥
ನಶ್ಯತ್ಯಾಯುಃ ಸ್ಥಿತಸ್ಯಾಽಪಿ ಧಾವತೋಽಪಿ ಕಪೀಶ್ವರ ।
ಸಹೈವ ಮೃತ್ಯುರ್ವ್ರಜತಿ ಸಹಮೃತ್ಯುರ್ನಿಷೀದತಿ ॥ ೪೫ ॥
ಚರಿತ್ವಾ ದೂರದೇಶಂ ಚ ಸಹಮೃತ್ಯುರ್ನಿವರ್ತತೇ ।
ಶರೀರೇ ವಲಯಃ ಪ್ರಾಪ್ತಾಃ ಶ್ವೇತಾ ಜಾತಾಃ ಶಿರೋರುಹಾಃ ॥ ೪೬ ॥
ಜೀರ್ಯತೇ ಜರಯಾ ದೇಹಃ ಶ್ವಾಸಕಾಸಾದಿನಾ ತಥಾ ।
ಯಥಾ ಕಾಷ್ಠಂಚ ಕಾಷ್ಠಂಚ ಸಮೇಯಾತಾಂ ಮಹೋದಧೌ ॥ ೪೭ ॥
ಸಮೇತ್ಯ ಚ ವ್ಯಪೇಯಾತಾಂ ಕಾಲಯೋಗೇನ ವಾನರ ।
ಏವಂ ಭಾರ್ಯಾ ಚ ಪುತ್ರಶ್ಚ ಬಂಧುಕ್ಷೇತ್ರಧನಾನಿಚ ॥ ೪೮ ॥
ಕ್ವಚಿತ್ಸಂಭೂಯ ಗಚ್ಛಂತಿ ಪುನರನ್ಯತ್ರ ವಾನರ ।
ಯಥಾ ಹಿ ಪಾಂಥಂ ಗಚ್ಛಂತಂ ಪಥಿಕಶ್ಚಿತ್ಪಥಿಸ್ಥಿತಃ ॥ ೪೯ ॥

---

೪೩–೪೪. ಗಟ್ಟಿಯಾದ ಕಂಬವುಳ್ಳ ಮನೆಯು ಕಾಲಾಂತರದಲ್ಲಿ ಶಿಥಿಲವಾಗಿ ಮುರಿದುಬೀಳುವಂತೆ ಮಾನವರು ಮುಪ್ಪು ಮತ್ತು ಮೃತ್ಯುಗಳಿಗೆ ತುತ್ತಾಗಿ ಮಡಿಯುವರು. ದಿನಗಳು ಕಳೆದಂತೆಲ್ಲ ಮನುಷ್ಯನ ಆಯುಸ್ಸು ಕ್ಷೀಣವಾಗುವುದು. ಆದುದರಿಂದ ಆತ್ಮನನ್ನುದ್ದೇಶಿಸಿ ಚಿಂತಿಸು. ಬೇರೆ ವಿಷಯವನ್ನು ಕುರಿತು ಏಕೆ ದುಃಖಿಸುವೆ?

೪೫. ಎಲೈ ಕಪಿವರ್ಯನೆ! ಮಾನವನು ನಿಂತಿದ್ದರೂ, ಓಡುತ್ತಿದ್ದರೂ ಆಯುಸ್ಸು ಕ್ಷೀಣವಾಗುವುದು. ಅವನೊಡನೆಯೇ ಮೃತ್ಯುವು ಹೋಗುವುದು. ಅವನೊಡನೆಯೇ ನಿಲ್ಲುವುದು.

೪೬. ನರನು ಬಹು ದೂರದೇಶಕ್ಕೆ ಹೋಗಿ ಹಿಂದಿರುಗಿದರೂ ಜೊತೆಗಿರುವ ಮೃತ್ಯುವು ತಾನೂ ಅವನೊಡನೆ ಮರಳಿ ಬರುವುದು. ದೇಹದಲ್ಲಿ ಸುಕ್ಕುಗಳುಂಟಾದುವು. ತಲೆಗೂದಲುಗಳು ನರೆತು ಬೆಳ್ಳಗಾದುವು.

೪೭–೫೦. ದೇಹವು ಉಬ್ಬಸ ಕೆಮ್ಮು ಮೊದಲಾದವುಗಳಿಂದಲೂ, ಮುಪ್ಪಿನಿಂದಲೂ ಶಿಥಿಲವಾಗುವುದು. ಸಮುದ್ರದಲ್ಲಿ ಒಂದು ಕಟ್ಟಿಗೆಯು ಮತ್ತೊಂದು ಕಟ್ಟಿಗೆಯೊಡನೆ ಸೇರಿ ಕಾಲಕ್ರಮದಿಂದ ಬೇರೆಯಾಗುವುದು. ಹೀಗೆಯೇ ಹೆಂಡತಿ, ಮಕ್ಕಳು, ಬಂಧುಗಳು, ಹೊಲಗದ್ದೆಗಳು, ಧನಗಳು ಒಂದೆಡೆಯಲ್ಲಿ ಒಟ್ಟಿಗೆ ಬರುವುವು. ಇನ್ನೊಂದೆಡೆಯಲ್ಲಿ ಅಗಲುವುವು. ಒಬ್ಬ ಮನುಷ್ಯನು ದಾರಿಯಲ್ಲಿ ಹೋಗುತ್ತಿರುವಾಗ ಅಲ್ಲಿದ್ದ ಮತ್ತೊಬ್ಬನು 'ನಾನೂ ನಿನ್ನೊಡನೆ

ಅಹಮುಪ್ಯಾಗಮಿಷ್ಯಾಮಿ ಭವದ್ಭಿಃ ಸಾಕಮಿತ್ಯಥ ।
ಕಂಚಿತ್ಕಾಲಂ ಸಮೇತೌ ತೌ ಪುನರನ್ಯತ್ರ ಗಚ್ಛತಃ ॥ ೩೦ ॥
ಏವಂ ಭಾರ್ಯಾಸುತಾದೀನಾಂ ಸಂಗಮೋ ನಶ್ವರಃ ಕಪೇ ।
ಶರೀರಜನ್ಮನಾ ಸಾಕಂ ಮೃತ್ಯುಃ ಸಂಜಾಯತೇ ಧ್ರುವಂ ॥ ೩೧ ॥
ಅವಶ್ಯಂಭಾವಿಮರಣೇ ನ ಹಿ ಜಾತು ಪ್ರತಿಕ್ರಿಯಾ ।
ಏತಚ್ಛರೀರಪಾತೇ ತು ದೇಹೀ ಕರ್ಮಗತಿಂ ಗತಃ ॥ ೩೨ ॥
ಪ್ರಾಪ್ಯ ಪಿಂಡಾಂತರಂ ವತ್ಸ ಪೂರ್ವಪಿಂಡಂ ತ್ಯಜತ್ಯಸೌ ।
ಪ್ರಾಣಿನಾಂ ನ ಸದೈಕತ್ರ ವಾಸೋ ಭವತಿ ವಾನರ ॥ ೩೩ ॥
ಸ್ವ ಸ್ವಕರ್ಮವಶಾತ್ಸರ್ವೇ ವಿಯುಜ್ಯಂತೇ ಪೃಥಕ್ಪೃಥಕ್ ।
ಯಥಾ ಪ್ರಾಣಿಶರೀರಾಣಿ ನಶ್ಯಂತಿ ಚ ಭವಂತಿ ಚ ॥ ೩೪ ॥
ಆತ್ಮನೋ ಜನ್ಮಮರಣೇ ನೈವಸ್ತಃ ಕಪಿಸತ್ತಮ ।
ಅತಸ್ತ್ವಮಂಜನಾಸೂನೋ ವಿಶೋಕಂ ಜ್ಞಾನಮದ್ವಯಂ ॥ ೩೫ ॥
ಸದ್ರೂಪಮಮಲಂ ಬ್ರಹ್ಮ ಚಿಂತಯಸ್ವ ದಿವಾನಿಶಂ ।
ತ್ವತ್ಕೃತಂ ಮತ್ಕೃತಂ ಕರ್ಮ ಮತ್ಕೃತಂ ತ್ವತ್ಕೃತಂ ತಥಾ ॥ ೩೬ ॥
ಮಲ್ಲಿಂಗಸ್ಥಾಪನಂ ತಸ್ಮಾತ್ತ್ವಲ್ಲಿಂಗಸ್ಥಾಪನಂ ಕಪೇ ।
ಮುಹೂರ್ತಾತಿಕ್ರಮಾಲ್ಲಿಂಗಂ ಸೈಕತಂ ಸೀತಯಾ ಕೃತಂ ॥ ೩೭ ॥

---

ಬರುವೆನು' ಎನ್ನುವನು. ಹೀಗೆ ಸ್ವಲ್ಪಕಾಲ ಅವರಿಬ್ಬರೂ ಒಟ್ಟಿಗೆ ಹೋಗಿ ತಿರುಗಿ ಒಬ್ಬೊಬ್ಬರೂ ಬೇರೆ ಬೇರೆಯಾಗಿ ತಮ್ಮ ಸ್ಥಳಕ್ಕೆ ಹೋಗುವರು.

೩೧. ಹೀಗೆಯೇ ಹೆಂಡತಿ ಮಕ್ಕಳು ಮೊದಲಾದವರ ಸಂಬಂಧವೂ ಸ್ಥಿರವಲ್ಲ. ಹುಟ್ಟಿದೊಡನೆ ಮೃತ್ಯುವು ಜೊತೆಗೆ ಹುಟ್ಟುವುದು.

೩೨–೩೩. ಹೀಗೆ ಅವಶ್ಯವಾಗಿ ಸಂಭವಿಸುವ ಮರಣಕ್ಕೆ ಪ್ರತೀಕಾರವಿಲ್ಲ. ಒಂದು ದೇಹವು ನಾಶವಾದೊಡನೆ ಪ್ರಾಣಿಯು ಕರ್ಮಾನುಸಾರವಾಗಿ ಬೇರೆ ಶರೀರವನ್ನು ಪಡೆಯುವುದು. ಪ್ರಾಣಿಯು ಯಾವಾಗಲೂ ಒಂದೇ ಶರೀರದಲ್ಲಿ ನೆಲೆಸಿರುವುದಿಲ್ಲ.

೩೪. ಶರೀರವು ನಾಶವಾದಹಾಗೆಲ್ಲ ಎಲ್ಲ ಪ್ರಾಣಿಗಳೂ ತಮ್ಮ ತಮ್ಮ ಕರ್ಮಾನುಸಾರವಾಗಿ ಬೇರೆ ಬೇರೆಯಾಗುವುವು.

೩೫–೩೬. ವಾನರೋತ್ತಮ! ಆತ್ಮನಿಗೆ ಹುಟ್ಟುಸಾವುಗಳಿಲ್ಲ. ಆದುದರಿಂದ ನೀನು ಶೋಕರಹಿತನೂ, ಜ್ಞಾನಸ್ವರೂಪನೂ, ಒಬ್ಬನೂ, ಸದ್ರೂಪನೂ, ಶುದ್ಧನೂ ಆಗಿರುವ ಪರಬ್ರಹ್ಮನನ್ನು ಹಗಲು ರಾತ್ರಿಗಳಲ್ಲಿ ಧ್ಯಾನಿಸು. ನೀನು ಮಾಡಿರುವ ಕರ್ಮವೂ, ನಾನು ಮಾಡಿರುವ ಕರ್ಮವೂ ಒಂದೇ ಆಗಿರುವುದು.

೩೭–೩೮. ನಾನು ಲಿಂಗಸ್ಥಾಪನೆಮಾಡಿರುವುದೂ ನೀನು ಮಾಡಿರುವುದೇ

ಮಯಾಽತ್ರ ಸ್ಥಾಪಿತಂ ತಸ್ಮಾತ್ಕ್ಷೋಪಂ ದುಃಖಂ ಚ ಮಾಕುರು ।
ಕೈಲಾಸಾದಾಗತಂ ಲಿಂಗಂ ಸ್ಥಾಪಯಾಽಸ್ಮಿಂಛುಭೇ ದಿನೇ ॥ ೫೮ ॥
ತವ ನಾಮ್ನಾತ್ವಿದಂ ಲಿಂಗಂ ಯಾತು ಲೋಕತ್ರಯೇ ಪ್ರಥಾಂ ।
ಹನೂಮದೀಶ್ವರಂ ದೃಷ್ಟ್ವಾ ದ್ರಷ್ಟವ್ಯೋ ರಾಘವೇಶ್ವರಃ ॥ ೫೯ ॥
ಬ್ರಹ್ಮರಾಕ್ಷಸಯೂಥಾನಿ ಹತಾನಿ ಭವತಾ ಕಪೇ ।
ಅತಃ ಸ್ವನಾಮ್ನಾ ಲಿಂಗಸ್ಯ ಸ್ಥಾಪನಾತ್ತ್ವಂ ಪ್ರಮೋಕ್ಷ್ಯಸೇ ॥ ೬೦ ॥
ಸ್ವಯಂ ಹರೇಣ ದತ್ತಂ ತು ಹನೂಮನ್ನಾಮಕಂ ಶಿವಂ ।
ಸಂಪಶ್ಯನ್ರಾಮನಾಥಂ ಚ ಕೃತಕೃತ್ಯೋ ಭವೇನ್ನರಃ ॥ ೬೧ ॥
ಯೋಜನಾನಾಂ ಸಹಸ್ರೇಽಪಿ ಸ್ಮೃತ್ವಾ ಲಿಂಗಂ ಹನೂಮತಃ ।
ರಾಮನಾಥೇಶ್ವರಂ ಚಾಽಪಿ ಸ್ಮೃತ್ವಾ ಸಾಯುಜ್ಯಮಾಪ್ನುಯಾತ್ ॥ ೬೨ ॥
ತೇನೇಷ್ಟಂ ಸರ್ವಯಜ್ಞೈಶ್ಚ ತಪಶ್ಚಾಕಾರಿ ಕೃತ್ಸ್ನಶಃ ।
ಯೇನ ದೃಷ್ಟೌ ಮಹಾದೇವೌ ಹನೂಮದ್ರಾಘವೇಶ್ವರೌ ॥ ೬೩ ॥
ಹನೂಮತಾ ಕೃತಂ ಲಿಂಗಂ ಯಚ್ಚ ಲಿಂಗಂ ಮಯಾ ಕೃತಂ ।
ಜಾನಕೀಯಂ ಚ ಯಲ್ಲಿಂಗಂ ಯಲ್ಲಿಂಗಂ ಲಕ್ಷ್ಮಣೇಶ್ವರಂ ॥ ೬೪ ॥

---

ಎಂದು ತಿಳಿ. ಮುಹೂರ್ತವು ಮೀರಿದ್ದರಿಂದ ಸೀತೆಯು ನಿರ್ಮಿಸಿದ ಮರಳಿನ ಲಿಂಗವನ್ನುನಾನಿಲ್ಲಿ ಪ್ರತಿಷ್ಠೆಮಾಡಿರುವೆನು. ಆದುದರಿಂದ ಕೋಪಿಸಿಕೊಳ್ಳಬೇಡ; ದುಃಖಿಸಬೇಡ. ಈ ಶುಭ ದಿನದಲ್ಲಿ ಕೈಲಾಸದಿಂದ ತಂದ ಲಿಂಗವನ್ನು ಪ್ರತಿಷ್ಠೆ ಮಾಡು.

೫೯. ಈ ಲಿಂಗವು ನಿನ್ನ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧವಾಗಲಿ. ಭಕ್ತರು ಮೊದಲು ಹನೂಮಲ್ಲಿಂಗವನ್ನು ನೋಡಿ ಅನಂತರ ರಾಮಲಿಂಗ ವನ್ನು ನೋಡಬೇಕು.

೬೦. ಆಂಜನೇಯ! ನೀನು ಬ್ರಾಹ್ಮಣ ರಾಕ್ಷಸರನ್ನು ವಧಿಸಿರುವೆ. ಆದ್ದರಿಂದ ನಿನ್ನ ಹೆಸರಿನಿಂದ ಲಿಂಗವನ್ನು ಪ್ರತಿಷ್ಠೆಮಾಡಿ ಪಾಪಮುಕ್ತನಾಗು.

೬೧. ಮನುಷ್ಯನು ಹರನಿತ್ತ ಹನೂಮಲ್ಲಿಂಗವನ್ನು ನೋಡಿದಮೇಲೆ ರಾಮನಾಥನಲಿಂಗವನ್ನು ನೋಡಿದರೆ ಧನ್ಯನಾಗುವನು.

೬೨. ಸಾವಿರಯೋಜನ ದೂರದಲ್ಲಿ ಹನೂಮಲ್ಲಿಂಗವನ್ನೂ, ರಾಮಲಿಂಗ ವನ್ನೂ ಸ್ಮರಿಸಿದರೆ ಶಿವಸಾಯುಜ್ಯವನ್ನು ಪಡೆಯುವನು.

೬೩. ಹನೂಮದ್ರಾಘವೇಶ್ವರರನ್ನು ದರ್ಶನಮಾಡಿದವನು ಸಕಲ ಯಜ್ಞ ವನ್ನೂ, ತಪಸ್ಸನ್ನೂ ಸಂಪೂರ್ಣವಾಗಿ ಮಾಡಿದಂತಾಗುವನು.

೬೪–೬೭. ನೀನು, ಜಾನಕಿ, ಲಕ್ಷ್ಮಣ, ಸುಗ್ರೀವ, ಸೇತುವನ್ನು ನಿರ್ಮಿಸಿದ ನಳ, ಅಂಗದ, ನೀಲ, ಜಾಂಬವಂತ, ವಿಭೀಷಣ, ಇಂದ್ರನೇ ಮೊದಲಾದ

ಸುಗ್ರೀವೇಣ ಕೃತಂ ಯಚ್ಚ ಸೇತುಕರ್ತ್ರಾ ನಲೇನ ಚ ।
ಅಂಗದೇನ ಚ ನೀಲೇನ ತಥಾ ಜಾಂಬವತಾ ಕೃತಂ ॥ ೬೫ ॥
ವಿಭೀಷಣೇನ ಯಚ್ಚಾಽಪಿ ರತ್ನಲಿಂಗಂ ಪ್ರತಿಷ್ಠಿತಂ ।
ಇಂದ್ರಾದ್ಯೈಶ್ಚ ಕೃತಂ ಲಿಂಗಂ ಯಚ್ಛೇಷಾದ್ಯೈಃ ಪ್ರತಿಷ್ಠಿತಂ ॥ ೬೬ ॥
ಇತ್ಯೇಕಾದಶರೂಪೋಽಯಂ ಶಿವಃ ಸಾಕ್ಷಾದ್ವಿಭಾಸತೇ ।
ಸದಾ ಹ್ಯೇತೇಷು ಲಿಂಗೇಷು ಸನ್ನಿಧತ್ತೇ ಮಹೇಶ್ವರಃ ॥ ೬೭ ॥
ತತ್ಸ್ವಪಾಪೌಘಶುದ್ಧ್ಯರ್ಥಂ ಸ್ಥಾಪಯಸ್ವ ಮಹೇಶ್ವರಂ ।
ಅಥ ಚೇತ್ತ್ವಂ ಮಹಾಭಾಗ ಲಿಂಗಮುತ್ಪಾದಯಿಷ್ಯಸಿ ॥ ೬೮ ॥
ಮಯಾಽತ್ರ ಸ್ಥಾಪಿತಂ ವತ್ಸ ಸೀತಯಾ ಸೈಕತಂ ಕೃತಂ ।
ಸ್ಥಾಪಯಿಷ್ಯಾಮಿ ಚ ತತೋ ಲಿಂಗಮೇತತ್ತ್ವಯಾಕೃತಂ ॥ ೬೯ ॥
ಪಾತಾಲಂ ಸುತಲಂ ಪ್ರಾಪ್ಯ ವಿತಲಂ ಚ ರಸಾತಲಂ ।
ತಲಾತಲಂ ಚ ತದಿದಂ ಭೇದಯಿತ್ವಾ ತು ತಿಷ್ಠತಿ ॥ ೭೦ ॥
ಪ್ರತಿಷ್ಠಿತಂ ಮಯಾ ಲಿಂಗಂ ಭೇತ್ತುಂ ಕಸ್ಯ ಬಲಂ ಭವೇತ್ ।
ಉತ್ತಿಷ್ಠ ಲಿಂಗಮುದ್ವಾಸ್ಯ ಮಯೈತತ್ಸ್ಥಾಪಿತಂ ಕಪೇ ॥ ೭೧ ॥
ತ್ವಯಾ ಸಮಾಹೃತಂ ಲಿಂಗಂ ಸ್ಥಾಪಯಿಷ್ಯೇ ಶು ಮಾ ಶುಚಃ ।
ಇತ್ಯುಕ್ತಸ್ತಂ ಪ್ರಣಮ್ಯಾಥಾಜ್ಞಾತಸತ್ತ್ವೋಽಥ ವಾನರಃ ॥ ೭೨ ॥
ಉದ್ವಾಸಯಾಮಿ ವೇಗೇನ ಸೈಕತಂ ಲಿಂಗಮುತ್ತಮಂ ।
ಸಂಸ್ಥಾಪಯಾಮಿ ಕೈಲಾಸಾದಾನೀತಂ ಲಿಂಗಮಾದರಾತ್ ॥ ೭೩ ॥

---

ದೇವತೆಗಳು, ನಾನೂ ಪ್ರತಿಷ್ಠೆಮಾಡಿರುವ ಈ ಹನ್ನೊಂದು ಲಿಂಗಗಳಲ್ಲಿ ಶಿವನು ಯಾವಾಗಲೂ ಸನ್ನಿಹಿತನಾಗಿರುವನು.

೬೮–೬೯. ಆದುದರಿಂದ ನಿನ್ನ ಪಾಪವು ನೀಗುವುದಕ್ಕಾಗಿ ಶಿವನನ್ನು ಪ್ರತಿಷ್ಠೆಮಾಡು. ಅಥವಾ ನಾನು ಸ್ಥಾಪಿಸಿರುವ ಸೈಕತಲಿಂಗವನ್ನು ಕಿತ್ತು ಹಾಕು. ಬಳಿಕ ನಾನು ನಿನ್ನ ಲಿಂಗವನ್ನು ಪ್ರತಿಷ್ಠೆಮಾಡುವೆನು.

೭೦–೭೧. ನಾನು ಪ್ರತಿಷ್ಠೆಮಾಡಿದ ಲಿಂಗವು ಪಾತಾಳ, ಸುತಳ, ವಿತಳ, ರಸಾತಳ, ತಲಾತಳಗಳನ್ನು ಭೇದಿಸಿ ನಿಂತಿರುವುದು.. ಇದನ್ನು ಕೀಳುವುದಕ್ಕೆ ಯಾರು ಸಮರ್ಥರು? ಏಳು; ಈ ನನ್ನ ಮರಳಿನ ಲಿಂಗವನ್ನು ಕಿತ್ತುಹಾಕು.

೭೨–೭೩. ಜಾಗ್ರತೆಯಾಗಿ ನೀನು ತಂದ ಲಿಂಗವನ್ನು ಪ್ರತಿಷ್ಠೆಮಾಡು.'' ರಾಮನು ಹೀಗೆ ಹೇಳಲು ತನ್ನ ಶಕ್ತಿಯನ್ನರಿಯದ ಆಂಜನೇಯನು ಅವನನ್ನು ನಮಸ್ಕರಿಸಿ, ''ಜಾಗ್ರತೆಯಾಗಿ ಈ ಮರಳಿನಲಿಂಗವನ್ನು ಕಿತ್ತುಹಾಕಿ ಕೈಲಾಸ ದಿಂದ ತಂದ ಲಿಂಗವನ್ನು ಭಕ್ತಿಯಿಂದ ಪ್ರತಿಷ್ಠೆಮಾಡುವೆನು.

ಉದ್ವಾಸನೇ ಸೈಕತಸ್ಯ ಕಿಯಾನ್ಭಾರೋ ಭವೇನ್ಮಮ ।
ಚೇತಸ್ಯೈವಂ ವಿಚಾರ್ಯಾಽಯಂ ಹನೂಮಾನ್ಮಾರುತಾತ್ಮಜಃ ॥ ೭೪ ॥
ಪಶ್ಯತಾಂ ಸರ್ವದೇವಾನಾಂ ಮುನೀನಾಂ ಕಪಿರಕ್ಷಸಾಂ ।
ಪಶ್ಯತೋ ರಾಮಚಂದ್ರಸ್ಯ ಲಕ್ಷ್ಮಣಸ್ಯಾಽಪಿ ಪಶ್ಯತಃ ॥ ೭೫ ॥
ಪಶ್ಯಂತ್ಯಾ ಅಪಿ ವೈದೇಹ್ಯಾ ಲಿಂಗಂ ತತ್ಸೈಕತಂ ಬಲಾತ್ ।
ಪಾಣಿನಾ ಸರ್ವಯತ್ನೇನ ಜಗ್ರಾಹ ತರಸಾ ಬಲೀ ॥ ೭೬ ॥
ಯತ್ನೇನ ಮಹತಾ ಚಾಽಯಂ ಚಾಲಯನ್ನಪಿ ಮಾರುತಿಃ ।
ನಾಽಲಂ ಚಾಲಯಿತುಂ ಹ್ಯಾಸೀತ್ಸೈಕತಂ ಲಿಂಗಮೋಜಸಾ ॥ ೭೭ ॥
ತತಃ ಕಿಲಕಿಲಾಶಬ್ದಂ ಕುರ್ವನ್ವಾನರಪುಂಗವಃ ।
ಪುಚ್ಛಮುದ್ಯಮ್ಯ ಪಾಣಿಭ್ಯಾಂ ನಿರಾಸ್ಥತ್ತನ್ನಿಜೌಜಸಾ ॥ ೭೮ ॥
ಇತ್ಯನೇಕಪ್ರಕಾರೇಣ ಚಾಲಯನ್ನಪಿ ವಾನರಃ ।
ನೈವ ಚಾಲಯಿತುಂ ಶಕ್ತೋ ಬಭೂವ ಪವನಾತ್ಮಜಃ ॥ ೭೯ ॥
ತದ್ವೇಷ್ಟಯಿತ್ವಾ ಪುಚ್ಛೇನ ಪಾಣಿಭ್ಯಾಂ ಧರಣೀಂ ಸ್ಪೃಶನ್ ।
ಉತ್ಪಪಾತಾಽಥ ತರಸಾ ವ್ಯೋಮ್ನಿ ವಾಯುಸುತಃ ಕಪಿಃ ॥ ೮೦ ॥
ಕಂಪಯನ್ಸಧರಾಂ ಸರ್ವಾಂ ಸಪ್ತದ್ವೀಪಾಂ ಸಪರ್ವತಾಂ ।
ಲಿಂಗಸ್ಯ ಕ್ರೋಶಮಾತ್ರೇ ತು ಮೂರ್ಛಿತೋ ರುಧಿರಂ ವಮನ್ ॥ ೮೧ ॥

---

೭೪–೭೭. ಈ ಮರಳಿನ ಲಿಂಗವನ್ನು ಕೀಳುವದಕ್ಕೆ ನನಗೆಷ್ಟು ಕಷ್ಟವಾದೀತು ?'' ಎಂದಾಲೋಚಿಸಿ ಸಕಲ ದೇವತೆಗಳೂ, ಮುನಿಗಳೂ, ರಾಕ್ಷಸರೂ, ಕಪಿಗಳೂ, ರಾಮಲಕ್ಷ್ಮಣರೂ, ಸೀತೆಯೂ ನೋಡುತ್ತಿರುವಂತೆಯೆ ತನ್ನ ಬಲವೆಲ್ಲವನ್ನೂ ಉಪಯೋಗಿಸಿ ಆ ಲಿಂಗವನ್ನು ಕೈಯಿಂದ ಹಿಡಿದುಕೊಂಡನು. ಆಂಜನೇಯನು ಬಹು ಬಲವಾಗಿ ಅಲ್ಲಾಡಿಸಲು ಪ್ರಯತ್ನಿಸಿದರೂ ಆ ಲಿಂಗವು ಸ್ವಲ್ಪವೂ ಅಲ್ಲಾಡಲಿಲ್ಲ.

೭೮. ಬಳಿಕ ಆಂಜನೇಯನು ಬಾಲವನ್ನು ಎತ್ತಿಕೊಂಡು ಕಿಲಕಿಲಶಬ್ದವನ್ನು ಮಾಡುತ್ತ ತನ್ನ ಬಲವನ್ನು ಉಪಯೋಗಿಸಿ ಆ ಲಿಂಗವನ್ನು ಇನ್ನೊಮ್ಮೆ ಅಲ್ಲಾಡಿಸಿದನು.

೭೯. ಅವನು ಹೀಗೆ ಅನೇಕಪ್ರಕಾರವಾಗಿ ಅಲ್ಲಾಡಿಸಿದರೂ ಆ ಲಿಂಗವು ಚಲಿಸಲೇ ಇಲ್ಲ.

೮೦. ಆದುದರಿಂದ ಅವನು ಬಾಲದಿಂದ ಆ ಲಿಂಗವನ್ನು ಸುತ್ತಿಕೊಂಡು ಕೈಗಳನ್ನು ಭೂಮಿಯಲ್ಲಿಟ್ಟು ವೇಗದಿಂದ ಆಕಾಶಕ್ಕೆ ಹಾರಿದನು.

೮೧–೮೩. ಎಲೈ ದ್ವಿಜವರ್ಯರೆ! ಅವನು ಅದರಿಂದ ಸಪ್ತದ್ವೀಪಪರ್ವತಗಳೊಡನೆ ಭೂಮಿಯನ್ನು ಅಲ್ಲಾಡಿಸುತ್ತ ಲಿಂಗಕ್ಕೆ ಎರಡು ಮೈಲಿಗಳ ದೂರದಲ್ಲಿ

ಪಪಾತ ಹನುಮಾನ್ವಿಪ್ರಾಃ ಕಂಪಿತಾಂಗೋ ಧರಾತಲೇ ।
ಪತತೋ ವಾಯುಪುತ್ರಸ್ಯ ವಕ್ತ್ರಾಚ್ಚ ನಯನದ್ವಯಾತ್ ॥ ೮೨ ॥
ನಾಸಾಪುಟಾಚ್ಛ್ರೋತ್ರರಂಧ್ರಾದಪಾನಾಚ್ಚ ದ್ವಿಜೋತ್ತಮಾಃ ।
ರುಧಿರೌಘಃ ಪ್ರಸುಸ್ರಾವ ರಕ್ತಕುಂಡಮಭೂಚ್ಚ ತತ್ ॥ ೮೩ ॥
ತತೋ ಹಾಹಾಕೃತಂ ಸರ್ವಂ ಸದೇವಾಸುರಮಾನುಷಂ ।
ಧಾವಂತೌ ಕಪಿಭಿಃ ಸಾರ್ಧಮುಭೌ ತೌ ರಾಮಲಕ್ಷ್ಮಣೌ ॥ ೮೪ ॥
ಜಾನಕೀಸಹಿತೌ ವಿಪ್ರಾ ಹ್ಯಾಸ್ತಾಂ ಶೋಕಾಕುಲೌ ತದಾ ।
ಸೀತಯಾ ಸಹಿತೌ ವೀರೌ ವಾನರೈಶ್ಚ ಮಹಾಬಲೌ ॥ ೮೫ ॥
ರುರುಚಾತೇ ತದಾ ವಿಪ್ರಾ ಗಂಧಮಾದನಪರ್ವತೇ ।
ಯಥಾ ತಾರಾಗಣಯುತೌ ರಜನ್ಯಾಂ ಶಶಿಭಾಸ್ಕರೌ ॥ ೮೬ ॥
ದದರ್ಶತುರ್ಹನೂಮಂತಂ ಚೂರ್ಣೀಕೃತಕಲೇವರಂ ।
ಮೂರ್ಛಿತಂ ಪತಿತಂ ಭೂಮೌ ವಮಂತಂ ರುಧಿರಂ ಮುಖಾತ್ ॥ ೮೭ ॥
ವಿಲೋಕ್ಯ ಕಪಯಃ ಸರ್ವೇ ಹಾಹಾಕೃತ್ವಾಽಪತನ್ಭುವಿ ।
ಕರಾಭ್ಯಾಂ ಸದಯಂ ಸೀತಾ ಹನೂಮಂತಂ ಮರುತ್ಸುತಂ ॥ ೮೮ ॥
ತಾತ ತಾತೇತಿ ಪಸ್ಪರ್ಶ ಪತಿತಂ ಧರಣೀತಲೇ ।
ರಾಮೋಽಪಿ ದೃಷ್ಟ್ವಾ ಪತಿತಂ ಹನೂಮಂತಂ ಕಪೀಶ್ವರಂ ॥ ೮೯ ॥

---

ಮೂರ್ಛೆಗೊಂಡು ರಕ್ತವನ್ನು ಸುರಿಸುತ್ತ ನಡುಗುತ್ತಿರುವ ಅವಯವಗಳುಳ್ಳವನಾಗಿ ಭೂಮಿಯಲ್ಲಿ ಬಿದ್ದನು. ಹೀಗೆ ಬಿದ್ದಿರುವ ಆಂಜನೇಯನ ಬಾಯಿ, ಕಣ್ಣುಗಳು, ಮೂಗು, ಕಿವಿ, ಗುದಗಳಿಂದ ರಕ್ತವು ಸುರಿಯಿತು. ಅದೊಂದು ರಕ್ತದ ಕುಂಡವೇ ಆಯಿತು.

೮೪–೮೬. ಬಳಿಕ ದೇವತೆಗಳು, ಅಸುರರು, ಮನುಷ್ಯರೂ ಹಾಹಾಕಾರ ಮಾಡಿದರು. ರಾಮಲಕ್ಷ್ಮಣರು ದುಃಖಗೊಂಡು ಸೀತೆ ಮತ್ತು ಮಹಾಬಲ ಪರಾಕ್ರಮಿಗಳಾದ ಕಪಿಗಳೊಡನೆ ಗಂಧಮಾದನದಲ್ಲಿ ಬಿದ್ದಿರುವ ಹನುಮಂತ ನಿದ್ದೆಡೆಗೆ ಓಡುತ್ತ ರಾತ್ರಿಯಲ್ಲಿ ನಕ್ಷತ್ರಗಳಿಂದ ಚಂದ್ರಸೂರ್ಯರು ಸೇರಿದಂತೆ ಕಂಗೊಳಿಸಿದರು.

೮೭. ಅವರು ಮೂರ್ಛೆಗೊಂಡು ಮುರಿದ ಮೈಯುಳ್ಳವನಾಗಿ ರಕ್ತವನ್ನು ಕಾರುತ್ತ ನೆಲದಮೇಲೆ ಬಿದ್ದಿರುವ ಆಂಜನೇಯನನ್ನು ಕಂಡರು.

೮೮–೯೦. ಸಮಸ್ತ ಕಪಿಗಳೂ ಅವನನ್ನು ನೋಡಿ ಹಾಹಾಕಾರಮಾಡುತ್ತ ಭೂಮಿಯಲ್ಲಿ ಬಿದ್ದರು. ಸೀತೆಯು ಭೂಮಿಯಲ್ಲಿ ಬಿದ್ದಿರುವ ಆಂಜನೇಯನನ್ನು 'ಮಗು! ಅಪ್ಪ!!' ಎಂದು ದಯೆಗೊಂಡು ಕೈಗಳಿಂದ ಮುಟ್ಟಿದಳು. ರಾಮನೂ

ಆರೋಪ್ಯಾಂಕಂ ಸ್ವಪಾಣಿಭ್ಯಾಮಾಮುಮರ್ಶ ಕಲೇವರಂ ।
ವಿಮುಂಚನ್ನೇತ್ರಜಂ ವಾರಿ ವಾಯುಜಂ ಚಾಽಬ್ರವೀದ್ದ್ವಿಜಾಃ ॥ ೯೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ರಾಮಚಂದ್ರಕೃತ ತತ್ವಜ್ಞಾನೋಪದೇಶವರ್ಣನಂ" ನಾಮ ಪಂಚಚತ್ವಾರಿಂಶೋऽಧ್ಯಾಯಃ

---

ಅವನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಕೈಗಳಿಂದ ಮುಟ್ಟುತ್ತ ಕಣ್ಣೀರನ್ನು ಸುರಿಸುತ್ತ ಇಂತೆಂದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ರಾಮಚಂದ್ರಕೃತ ತತ್ವಜ್ಞಾನೋಪದೇಶವರ್ಣನ"ವೆಂಬ ನಲವತ್ತೈದನೆ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಚತ್ವಾರಿಂಶೋಽಧ್ಯಾಯಃ

### ರಾಮನಾಥಲಿಂಗಪ್ರತಿಷ್ಠಾಕಾರಣವರ್ಣನಂ

ಶ್ರೀ ರಾಮ ಉವಾಚ :—

ಪಂಪಾಽರಣ್ಯೇ ವಯಂ ದೀನಾಸ್ತ್ವಯಾ ವಾನರಪುಂಗವ ।
ಆಶ್ವಾಸಿತಾಃ ಕಾರಯಿತ್ವಾ ಸಖ್ಯಮಾದಿತ್ಯಸೂನುನಾ ॥ ೧ ॥
ತ್ವಾಂ ದೃಷ್ಟ್ವಾ ಪಿತರಂ ಬಂಧೂನ್ಕೌಸಲ್ಯಾಂ ಜನನೀಮಪಿ ।
ನ ಸ್ಮರಾಮೋ ವಯಂ ಸರ್ವಾನ್ಮೇ ತ್ವಯೋಪಕೃತಂ ಬಹು ॥ ೨ ॥
ಮದರ್ಥಂ ಸಾಗರಸ್ತೀರ್ಣೋ ಭವತಾ ಬಹುಯೋಜನಃ ।
ತಲಪ್ರಹಾರಾಽಭಿಹತೋ ಮೈನಾಕೋಽಪಿ ನಗೋತ್ತಮಃ ॥ ೩ ॥
ನಾಗಮಾತಾ ಚ ಸುರಸಾ ಮದರ್ಥಂ ಭವತಾ ಜಿತಾ ।
ಛಾಯಾಗ್ರಹಾಂ ಮಹಾಕ್ರೂರಾಮವಧೀದ್ರಾಕ್ಷಸೀಂ ಭವಾನ್ ॥ ೪ ॥
ಸಾಯಂ ಸುವೇಲಮಾಸಾದ್ಯ ಲಂಕಾಮಾಹತ್ಯಪಾಣಿನಾ ।
ಅಯಾಸೀ ರಾವಣಗೃಹಂ ಮದರ್ಥಂ ತ್ವಂ ಮಹಾಕಪೇ ॥ ೫ ॥

---

## ಕನ್ನಡದ ಅನುವಾದ

### ರಾಮನಾಥಲಿಂಗಪ್ರತಿಷ್ಠಾಕಾರಣವರ್ಣನ

೧. ರಾಮನು ಹೇಳುತ್ತಾನೆ:—"ಆಂಜನೇಯ! ಪಂಪಾರಣ್ಯದಲ್ಲಿ ನೀನು ದೈನ್ಯಗೊಂಡಿದ್ದ ನನಗೂ ಸುಗ್ರೀವನಿಗೂ ಸ್ನೇಹವನ್ನು ಮಾಡಿಸಿ ಸಮಾಧಾನ ಗೊಳಿಸಿರುವೆ.

೨. ನೀನು ನಮಗೆ ಅತ್ಯಂತೋಪಕಾರವನ್ನು ಮಾಡಿದ್ದರಿಂದ ನಿನ್ನ ಹೊರತು ನಾವು ತಂದೆಯಾದ ದಶರಥನನ್ನೂ, ತಾಯಿಯಾದ ಕೌಸಲ್ಯೆಯನ್ನೂ, ಸಕಲ ಬಂಧುಗಳನ್ನೂ ಸ್ಮರಿಸುವುದಿಲ್ಲ.

೩. ನೀನು ನನಗಾಗಿ ಶತಯೋಜನ ವಿಸ್ತೀರ್ಣವುಳ್ಳ ಸಮುದ್ರವನ್ನು ದಾಟಿದೆ. ಮೈನಾಕನನ್ನು ಮುಷ್ಟಿಯಿಂದ ಪ್ರಹರಿಸಿದೆ.

೪. ನಾಗಮಾತೆಯಾದ ಸುರಸೆಯನ್ನು ನನಗಾಗಿ ಜಯಿಸಿದೆ. ಅತಿ ಕ್ರೂರರಾಕ್ಷಸಿಯಾದ ಛಾಯಾಗ್ರಹವನ್ನು ಕೊಂದೆ.

೫. ವಾನರೋತ್ತಮ! ಸಾಯಂಕಾಲ ಸುವೇಲಾಚಲವನ್ನು ಸೇರಿ ಲಂಕಾಭಿಮಾನಿ ದೇವತೆಯನ್ನು ಕೈಯಿಂದಪ್ಪಳಿಸಿ ರಾವಣನ ಮನೆಗೆ ಹೋದೆ.

ಸೀತಾಮನ್ವಿಷ್ಯ ಲಂಕಾಯಾಂ ರಾತ್ರೌ ಗತಭಯೋ ಭವಾನ್ ।
ಅದೃಷ್ಟ್ವಾ ಜಾನಕೀಂ ಪಶ್ಚಾದಶೋಕವನಿಕಾಂ ಯಯೌ ॥ ೬ ॥
ನಮಸ್ಕೃತ್ಯ ಚ ವೈದೇಹೀಮಭಿಜ್ಞಾನಂ ಪ್ರದಾಯ ಚ ।
ಚೂಡಾಮಣಿಂ ಸಮಾದಾಯ ಸುದರ್ಶಂ ಜಾನಕೀಕರಾತ್ ॥ ೭ ॥
ಅಶೋಕವನಿಕಾವೃಕ್ಷಾನಭಾಂಕ್ಷೀಸ್ತ್ವಂ ಮಹಾಕಪೇ ।
ತತಸ್ತ್ವಶೀತಿಸಾಹಸ್ರಾನ್ಕಿಂಕರಾನ್ನಾಮ ರಾಕ್ಷಸಾನ್ ॥ ೮ ॥
ರಾವಣಪ್ರತಿಮಾನ್ಯುದ್ಧೇ ಪತ್ತ್ಯಶ್ವೇಭರಥಾಕುಲಾನ್ ।
ಅವಧೀಸ್ತ್ವಂ ಸುದರ್ಶೇ ವೈ ಮಹಾಬಲಪರಾಕ್ರಮಾನ್ ॥ ೯ ॥
ತತಃ ಪ್ರಹಸ್ತತನಯಂ ಜಂಬುಮಾಲಿನಮಾಗತಂ ।
ಅವಧೀನ್ಮಂತ್ರಿತನಯಾನ್ಸಪ್ತಸಪ್ತಾರ್ಚಿರ್ವರ್ಚಸಃ ॥ ೧೦ ॥
ಪಂಚಸೇನಾಪತೀನ್ಪಶ್ಚಾದನಯಸ್ತ್ವಂ ಯಮಾಲಯಂ ।
ಕುಮಾರಮಕ್ಷಮವಧೀಸ್ತತಸ್ತ್ವಂ ರಣಮೂರ್ಧನಿ ॥ ೧೧ ॥
ತತ ಇಂದ್ರಜಿತಾನೀತೋ ರಾಕ್ಷಸೇಂದ್ರಸಭಾಂ ಶುಭಾಂ ।
ತತ್ರ ಲಂಕೇಶ್ವರಂ ವಾಚಾ ತೃಣೀಕೃತ್ಯಾಽವಮತ್ಯ ಚ ॥ ೧೨ ॥
ಅಭಾಂಕ್ಷೀಸ್ತ್ವಂ ಪುರೀಂ ಲಂಕಾಂ ಸುದರ್ಶಂ ವಾಯುನಂದನ ।
ಪುನಃ ಪ್ರತಿನಿವೃತ್ತಸ್ತ್ವಮೃಷ್ಯಮೂಕಂ ಮಹಾಗಿರಿಂ ॥ ೧೩ ॥

---

೬. ರಾತ್ರಿಯಲ್ಲಿ ಭಯವಿಲ್ಲದೆ ಸೀತೆಯನ್ನು ಹುಡುಕಿ ಅವಳನ್ನು ಕಾಣದೆ ಅಶೋಕವನವನ್ನು ಪ್ರವೇಶಿಸಿದೆ.

೭–೯. ಅಲ್ಲಿ ಸೀತೆಯನ್ನು ವಂದಿಸಿ ಮುದ್ರೆಯುಂಗುರವನ್ನು ಅವಳಿಗಿತ್ತು ಅವಳ ಕೈಯಿಂದ ಚೂಡಾಮಣಿಯನ್ನು ತೆಗೆದುಕೊಂಡು ಆ ವನದ ಮರಗಳನ್ನೆಲ್ಲ ಮುರಿದೆ. ಬಳಿಕ ರಾವಣನಂತಿರುವ ಕಿಂಕರರೆಂಬ ಕಾಲಾಳು, ಕುದುರೆ, ರಥಗಳಿಂದ ಕೂಡಿದವರೂ, ಬಲಿಷ್ಠರೂ ಆದ ಎಂಬತ್ತುಸಾವಿರ ಮಂದಿ ರಾಕ್ಷಸರನ್ನು ಕೊಂದೆ.

೧೦. ಅನಂತರ ಪ್ರಹಸ್ತನ ಮಗನಾದ ಜಂಬುಮಾಲಿಯನ್ನೂ, ಅಗ್ನಿಯಂತೆ ತೇಜಸ್ಸುಳ್ಳ ಏಳುಮಂದಿ ಮಂತ್ರಿಪುತ್ರರನ್ನೂ ಕೊಂದೆ.

೧೧. ಬಳಿಕ ಐದುಮಂದಿ ಸೇನಾಪತಿಗಳನ್ನೂ, ಅಕ್ಷಕುಮಾರನನ್ನೂ ಯುದ್ಧದಲ್ಲಿ ವಧಿಸಿರುವೆ.

೧೨–೧೩. ತರುವಾಯ ಇಂದ್ರಜಿತ್ತುವಿನಿಂದ ರಾವಣನ ಸಭೆಗೆ ಒಯ್ಯಲ್ಪಟ್ಟು ಅಲ್ಲಿ ರಾವಣನನ್ನು ಹುಲ್ಲಿನಂತೆ ಭಾವಿಸಿ ಅವಮಾನಗೊಳಿಸಿ ಲಂಕೆಯನ್ನು ಪುಡಿಗುಟ್ಟಿ ಋಷ್ಯಮೂಕಕ್ಕೆ ಮರಳಿ ಬಂದಿರುವೆ.

ಏವಮಾದಿ ಮಹಾದುಃಖಂ ಮದರ್ಥಂ ಪ್ರಾಪ್ತವಾನಸಿ ।
ತ್ವಮತ್ರ ಭೂತಲೇ ಶೇಷೇ ಮಮ ಶೋಕಮುದೀರಯನ್ ॥ ೧೪ ॥
ಅಹಂ ಪ್ರಾಣಾನ್ಪರಿತ್ಯಕ್ಷ್ಯೇ ಮೃತೋಽಸಿ ಯದಿ ವಾಯುಜ ।
ಸೀತಯಾ ಮಮ ಕಿಂ ಕಾರ್ಯಂ ಲಕ್ಷ್ಮಣೇನಾಽನುಜೇನ ವಾ ॥ ೧೫ ॥
ಭರತೇನಾಽಪಿ ಕಿಂ ಕಾರ್ಯಂ ಶತ್ರುಘ್ನೇನ ಶ್ರಿಯಾಽಪಿ ವಾ ।
ರಾಜ್ಯೇನಾಽಪಿ ನಮೇ ಕಾರ್ಯಂ ಪರೇತಸ್ತ್ವಂ ಕಪೇ ಯದಿ ॥ ೧೬ ॥
ಉತ್ತಿಷ್ಠ ಹನುಮನ್ವತ್ಸ ಕಿಂ ಶೇಷೇಽದ್ಯ ಮಹೀತಲೇ ।
ಶಯ್ಯಾಂ ಕುರು ಮಹಾಬಾಹೋ ನಿದ್ರಾರ್ಥಂ ಮಮ ವಾನರ ॥ ೧೭ ॥
ಕಂದಮೂಲಫಲಾನಿ ತ್ವಮಾಹಾರಾರ್ಥಂ ಮಮಾಹರ ।
ಸ್ನಾತುಮದ್ಯ ಗಮಿಷ್ಯಾಮಿ ಶೀಘ್ರಂ ಕಲಶಮಾನಯ ॥ ೧೮ ॥
ಅಜಿನಾನಿಚ ವಾಸಾಂಸಿ ದರ್ಭಾಂಶ್ಚ ಸಮುಪಾಹರ ।
ಬ್ರಹ್ಮಾಽಸ್ತ್ರೇಣಾಽವಬದ್ಧೋಽಹಂ ಮೋಚಿತಶ್ಚ ತ್ವಯಾ ಹರೇ ॥ ೧೯ ॥
ಲಕ್ಷ್ಮಣೇನ ಸಹ ಭ್ರಾತ್ರಾ ಹ್ಯೌಷಧಾನಯನೇನ ವೈ ।
ಲಕ್ಷ್ಮಣಪ್ರಾಣದಾತಾ ತ್ವಂ ಪೌಲಸ್ತ್ಯಮದನಾಶನಃ ॥ ೨೦ ॥
ಸಹಾಯೇನ ತ್ವಯಾ ಯುದ್ಧೇ ರಾಕ್ಷಸಾನ್ರಾವಣಾದಿಕಾನ್ ।
ನಿಹತ್ಯಾಽತಿಬಲಾನ್ವೀರಾನವಾಪಂ ಮೈಥಿಲೀಮಹಂ ॥ ೨೧ ॥

---

೧೪. ನನಗಾಗಿ ನೀನು ಇವೇ ಮೊದಲಾದ ಮಹಾ ಕಷ್ಟಗಳನ್ನು ಅನುಭವಿಸಿ ಈಗ ನನಗೆ ದುಃಖವನ್ನೆಸಗುತ್ತ ನೆಲದಮೇಲೆ ಮಲಗಿರುವೆ.

೧೫–೧೬. ನೀನು ನಿಜವಾಗಿಯೂ ಮಡಿದಿದ್ದರೆ ನಾನೂ ಅಸುವನ್ನು ನೀಗುವೆನು. ನೀನು ಮೃತನಾದಮೇಲೆ ಸೀತೆ, ತಮ್ಮಂದಿರಾದ ಲಕ್ಷ್ಮಣ, ಭರತ, ಶತ್ರುಘ್ನರಿಂದಲೂ, ಸಂಪತ್ತು, ರಾಜ್ಯಗಳಿಂದಲೂ ಏನುಪ್ರಯೋಜನ?

೧೭. ಮಗು! ಆಂಜನೇಯ! ಮೇಲಕ್ಕೇಳು. ಏತಕ್ಕೆ ನೆಲದಮೇಲೆ ಮಲಗಿರುವೆ? ನಾನು ನಿದ್ರಿಸುವುದಕ್ಕೆ ಹಾಸಿಗೆಯನ್ನು ರಚಿಸು.

೧೮. ನನ್ನ ಆಹಾರಕ್ಕಾಗಿ ಗೆಡ್ಡೆಗೆಣಸುಗಳನ್ನು ತೆಗೆದುಕೊಂಡು ಬಾ. ಸ್ನಾನಕ್ಕೀಗ ಹೊರಡುವೆನು; ಕಲಶವನ್ನು ತೆಗೆದುಕೊಂಡು ಬಾ.

೧೯–೨೦. ಕೃಷ್ಣಾಜಿನ, ವಸ್ತ್ರ, ದರ್ಭೆಗಳನ್ನು ತೆಗೆದುಕೊಂಡು ಬಾ. ಬ್ರಹ್ಮಾಸ್ತ್ರದಿಂದ ಕಟ್ಟಲ್ಪಟ್ಟ ನನ್ನನ್ನು ನೀನು ಬಿಡಿಸಿರುವೆ. ಸಂಜೀವನ ಮೂಲಿಕೆಯನ್ನು ತಂದು ಲಕ್ಷ್ಮಣನನ್ನು ಬದುಕಿಸಿರುವೆ. ರಾವಣನ ಮದವನ್ನು ಮುರಿದಿರುತ್ತೀಯೆ.

೨೧. ನಾನು ನಿನ್ನ ಸಹಾಯದಿಂದ ಯುದ್ಧದಲ್ಲಿ ಅತಿ ಬಲಿಷ್ಠರಾದ ರಾವಣಾದಿ ರಾಕ್ಷಸರನ್ನು ಕೊಂದು ಜಾನಕಿಯನ್ನು ಮರಳಿ ಪಡೆದೆನು.

ಹನೂಮನ್ನಂಜನಾಸೂನೋ ಸೀತಾಶೋಕವಿನಾಶನ ।
ಕಥಮೇವಂ ಪರಿತ್ಯಜ್ಯ ಲಕ್ಷ್ಮಣಂ ಮಾಂ ಚ ಜಾನಕೀಂ ॥ ೨೨ ॥
ಅಪ್ರಾಪಯಿತ್ವಾಽಯೋಧ್ಯಾಂ ತ್ವಂ ಕಿಮರ್ಥಂ ಗತವಾನಸಿ ।
ಕ್ವ ಗತೋಽಸಿ ಮಹಾವೀರ ಮಹಾರಾಕ್ಷಸಕಂಟಕ ॥ ೨೩ ॥
ಇತಿ ಪಶ್ಯನ್ಮುಖಂ ತಸ್ಯ ನಿರ್ವಾಕ್ಯಂ ರಘುನಂದನಃ ।
ಪ್ರರುದನ್ನಶ್ರುಜಾಲೇನ ಸೇಚಯಾಮಾಸ ವಾಯುಜಂ ॥ ೨೪ ॥
ವಾಯುಪುತ್ರಸ್ತತೋ ಮೂರ್ಛಾಮಪಹಾಯ ಶನೈರ್ದ್ವಿಜಾಃ ।
ಪೌಲಸ್ತ್ಯಭಯಸಂತ್ರಸ್ತಲೋಕರಕ್ಷಾರ್ಥಮಾಗತಂ ॥ ೨೫ ॥
ಆಶ್ರಿತ್ಯಮಾನುಷಂ ಭಾವಂ ನಾರಾಯಣಮಜಂ ವಿಭುಂ ।
ಜಾನಕೀಲಕ್ಷ್ಮಣಯುತಂ ಕಪಿಭಿಃ ಪರಿವಾರಿತಂ ॥ ೨೬ ॥
ಕಾಲಾಂಭೋಧರಸಂಕಾಶಂ ರಣಧೂಲಿಸಮುಕ್ಷಿತಂ ।
ಜಟಾಮಂಡಲಶೋಭಾಢ್ಯಂ ಪುಂಡರೀಕಾಯತೇಕ್ಷಣಂ ॥ ೨೭ ॥
ಖಿನ್ನಂ ಚ ಬಹುಶೋ ಯುದ್ಧೇ ದದರ್ಶ ರಘುನಂದನಂ ।
ಸ್ತೂಯಮಾನಮಮಿತ್ರಘ್ನಂ ದೇವರ್ಷಿಪಿತೃಕಿನ್ನರೈಃ ।
ದೃಷ್ಟ್ವಾ ದಾಶರಥಿಂ ರಾಮಂ ಕೃಪಾಬಹುಲಚೇತಸಂ ॥ ೨೮ ॥
ರಘುನಾಥಕರಸ್ಪರ್ಶಪೂರ್ಣಗಾತ್ರಃ ಸ ವಾನರಃ ॥ ೨೯ ॥

---

೨೨–೨೩. ಅಂಜನಾಸುತನೂ, ಸೀತೆಯ ದುಃಖವನ್ನು ಪರಿಹರಿಸಿದವನೂ ಆದ ಎಲೈ ಹನುಮಂತನೆ! ನೀನು ನನ್ನನ್ನೂ, ಲಕ್ಷ್ಮಣನನ್ನೂ, ಸೀತೆಯನ್ನೂ ಅಯೋಧ್ಯೆಗೆ ಕಳುಹಿಸದೆ ಹೇಗೆ ಹೊರಟುಹೋಗುವೆ? ಅತಿ ವೀರನೂ, ರಾಕ್ಷಸಾಂತಕನೂ ಆದ ನೀನು ಎಲ್ಲಿಗೆಹೋಗುವೆ.”

೨೪. ಹೀಗೆ ರಾಮನು ಮಾತನಾಡದಿರುವ ಆ ಹನುಮಂತನ ವದನವನ್ನು ಕಂಡು ಗೋಳಾಡುತ್ತ ಕಣ್ಣೀರಿನಿಂದ ಅವನನ್ನು ನೆನೆಯಿಸಿದನು.

೨೫–೨೮. ಬಳಿಕ ಆಂಜನೇಯನು ಮೆಲ್ಲನೆ ಎಚ್ಚತ್ತು ರಾವಣನಿಂದ ಭಯಗೊಂಡ ಪ್ರಪಂಚದ ರಕ್ಷಣೆಗಾಗಿ ಅವತರಿಸಿದವನೂ, ಮಾನುಷಶರೀರವನ್ನು ಹೊಂದಿದ ನಾರಾಯಣನೂ, ಜಾನಕಿ, ಲಕ್ಷ್ಮಣ ಮತ್ತು ಕಪಿಗಳಿಂದ ಕೂಡಿದವನೂ, ಕಾರ್ಮೋಡದಂತಿರುವವನೂ, ಯುದ್ಧಾಂಗಣದ ದೂಳಿನಿಂದ ವ್ಯಾಪ್ತನೂ, ಜಟೆಗಳಿಂದ ಪ್ರಕಾಶಿಸುವವನೂ, ಕಮಲಾಕ್ಷನೂ, ಯುದ್ಧದಲ್ಲಿ ಅತ್ಯಂತ ಖೇದಗೊಂಡವನೂ, ದೇವತೆಗಳು, ಋಷಿಗಳು, ಪಿತೃಗಳು, ಕಿನ್ನರರು ಇವರಿಂದ ಸ್ತುತಿಸಲ್ಪಡುವವನೂ, ಶತ್ರುನಾಶಕನೂ ಆದ ಆ ರಾಮನನ್ನು ಕಂಡನು.

೨೯–೩೦. ರಾಮನ ಹಸ್ತಸ್ಪರ್ಶದಿಂದ ಮೂರ್ಛೆಯಿಂದ ಎಚ್ಚತ್ತ ಆ ಹನುಮಂತನು ದಯಾಳುವಾದ ಆತನನ್ನು ಕಂಡು ಸಾಷ್ಟಾಂಗಪ್ರಣಾಮ

ಪತಿತ್ವಾ ದಂಡವದ್ಭೂಮೌ ಕೃತಾಂಜಲಿಪುಟೋ ದ್ವಿಜಾಃ ।
ಅಸ್ತೌಷೀಜ್ಜಾನಕೀನಾಥಂ ಸ್ತೋತ್ರೈಃ ಶ್ರುತಿಮನೋಹರೈಃ ॥ ೩೦ ॥

ಹನೂಮಾನುವಾಚ :—

ನಮೋ ರಾಮಾಯ ಹರಯೇ ವಿಷ್ಣವೇ ಪ್ರಭವಿಷ್ಣವೇ ।
ಆದಿದೇವಾಯ ದೇವಾಯ ಪುರಾಣಾಯ ಗದಾಭೃತೇ ॥ ೩೧ ॥
ವಿಷ್ಟರೇ ಪುಷ್ಪಕೇ ನಿತ್ಯಂ ನಿವಿಷ್ಟಾಯ ಮಹಾತ್ಮನೇ ।
ಪ್ರಹೃಷ್ಟವಾನರಾನೀಕಜುಷ್ಟಪಾದಾಂಬುಜಾಯ ತೇ ॥ ೩೨ ॥
ನಿಷ್ಪಿಷ್ಟರಾಕ್ಷಸೇಂದ್ರಾಯ ಜಗದಿಷ್ಟವಿಧಾಯಿನೇ ।
ನಮಃ ಸಹಸ್ರಶಿರಸೇ ಸಹಸ್ರಚರಣಾಯಚ ॥ ೩೩ ॥
ಸಹಸ್ರಾಕ್ಷಾಯ ಶುದ್ಧಾಯ ರಾಘವಾಯ ಚ ವಿಷ್ಣವೇ ।
ಭಕ್ತಾರ್ತಿಹಾರಿಣೇ ತುಭ್ಯಂ ಸೀತಾಯಾಃ ಪತಯೇ ನಮಃ ॥ ೩೪ ॥
ಹರಯೇ ನಾರಸಿಂಹಾಯ ದೈತ್ಯರಾಜವಿದಾರಿಣೇ ।
ನಮಸ್ತುಭ್ಯಂ ವರಾಹಾಯ ದಂಷ್ಟ್ರೋದ್ಧೃತವಸುಂಧರ ॥ ೩೫ ॥

---

ಮಾಡಿ ಕೈಮುಗಿದುಕೊಂಡು ಕಿವಿಗೆ ಇಂಪಾದ ಸ್ತೋತ್ರಗಳಿಂದ ಅವನನ್ನು ಹೀಗೆ ಸ್ತುತಿಸಿದನು.

೩೧. ಹನುಮಂತನು ಸ್ತುತಿಸುತ್ತಾನೆ:—"ಸರ್ವತ್ರವ್ಯಾಪ್ತನೂ, ಪಾಪ ಪರಿಹಾರಕನೂ, ಸಮರ್ಥನೂ, ಆದಿದೇವತೆಯೂ, ಅನಾದಿಪುರುಷನೂ, ಗದಾ ಧಾರಿಯೂ ಆದ ರಾಮ! ನಿನಗೆ ನಮಸ್ಕಾರವು.

೩೨. ಪುಷ್ಪಕವಿಮಾನದಲ್ಲಿ ಕುಳಿತವನೂ, ಮಹಾತ್ಮನೂ, ಸಂತುಷ್ಟರಾದ ಕಪಿಗಳ ಸೈನ್ಯದಿಂದ ಸೇವಿಸಲ್ಪಟ್ಟ ಪಾದಕಮಲವುಳ್ಳವನೂ ಆದ ರಾಮ! ನಿನಗೆ ನಮಸ್ಕಾರವು.

೩೩. ರಾವಣನನ್ನು ಕೊಂದು ಪ್ರಪಂಚಕ್ಕೆ ಹಿತವನ್ನುಂಟುಮಾಡಿದವನೂ, ಸಹಸ್ರಶಿರಸ್ಸುಗಳುಳ್ಳವನೂ, ಸಾವಿರಕಾಲುಗಳುಳ್ಳವನೂ ಆದ ರಾಮ! ನಿನಗೆ ನಮಸ್ಕಾರವು.

೩೪. ಸಹಸ್ರನಯನಗಳುಳ್ಳವನೂ, ಶುದ್ಧನೂ, ರಘುವಂಶಸಂಜಾತನೂ, ಭಕ್ತರ ದುಃಖವನ್ನು ಪರಿಹರಿಸುವವನೂ, ಸೀತಾಕಾಂತನೂ ಆದ ರಾಮ! ನಿನಗೆ ನಮಸ್ಕಾರವು.

೩೫. ಹಿರಣ್ಯಕಶಿಪುವನ್ನು ಸಂಹರಿಸಿದ ನರಸಿಂಹರೂಪನೂ, ಕೋರೆದಾಡೆಯಿಂದ ಭೂಮಿಯನ್ನು ಎತ್ತಿದ ವರಾಹನೂ ಆದ ಓ ರಾಮ! ನಿನಗೆ ನಮಸ್ಕಾರವು.

ತ್ರಿವಿಕ್ರಮಾಯ ಭವತೇ ಬಲಿಯಜ್ಞವಿಭೇದಿನೇ ।
ನಮೋ ವಾಮನರೂಪಾಯ ನಮೋ ಮಂದರಧಾರಿಣೇ ॥ ೩೬ ॥
ನಮಸ್ತೇ ಮತ್ಸ್ಯರೂಪಾಯ ತ್ರಯೀಪಾಲನಕಾರಿಣೇ ।
ನಮಃ ಪರಶುರಾಮಾಯ ಕ್ಷತ್ರಿಯಾಂತಕರಾಯ ತೇ ॥ ೩೭ ॥
ನಮಸ್ತೇ ರಾಕ್ಷಸಘ್ನಾಯ ನಮೋ ರಾಘವರೂಪಿಣೇ ।
ಮಹಾದೇವ ಮಹಾಭೀಮ ಮಹಾಕೋದಂಡಭೇದಿನೇ ॥ ೩೮ ॥
ಕ್ಷತ್ರಿಯಾಂತಕರಕ್ರೂರ ಭಾರ್ಗವತ್ರಾಸಕಾರಿಣೇ ।
ನಮೋಽಸ್ತ್ವಹಲ್ಯಾಸಂತಾಪಹಾರಿಣೇ ಚಾಪಹಾರಿಣೇ ॥ ೩೯ ॥
ನಾಗಾಽಯುತ ಬಲೋಪೇತ ತಾಟಕಾದೇಹಹಾರಿಣೇ ।
ಶಿಲಾಕಠಿನವಿಸ್ತಾರವಾಲಿವಕ್ಷೋವಿಭೇದಿನೇ ॥ ೪೦ ॥
ನಮೋ ಮಾಯಾಮೃಗೋನ್ಮಾಥಕಾರಿಣೇಽಜ್ಞಾನಹಾರಿಣೇ ।
ದಶಸ್ಯಂದನ ದುಃಖಾಽಬ್ಧಿಶೋಷಣಾಽಗಸ್ತ್ಯರೂಪಿಣೇ ॥ ೪೧ ॥
ಅನೇಕೋರ್ಮಿಸಮಾಧೂತ ಸಮುದ್ರಮದಹಾರಿಣೇ ।
ಮೈಥಿಲೀ ಮಾನಸಾಽಂಭೋಜಭಾವನೇ ಲೋಕಸಾಕ್ಷಿಣೇ ॥ ೪೨ ॥

---

೩೬–೩೭. ಮೂರಡಿ ಭೂಮಿಯನ್ನು ಬೇಡಿ ಬಲಿಯ ಯಜ್ಞವನ್ನು ಕೆಡಿಸಿದ ವಾಮನನೂ, ಮಂದರಪರ್ವತವನ್ನು ಹೊತ್ತವನೂ ಆದ ರಾಮ! ನಿನಗೆ ನಮಸ್ಕಾರವು. ಮತ್ಸ್ಯರೂಪನಾಗಿ ವೇದಗಳನ್ನುದ್ಧರಿಸಿದವನೂ, ಪರಶುರಾಮನಾಗಿ ಕ್ಷತ್ರಿಯರನ್ನು ಸದೆಬಡಿದವನೂ ಆದ ರಾಮ! ನಿನಗೆ ನಮಸ್ಕಾರವು.

೩೮. ರಾಕ್ಷಸರನ್ನು ಕೊಂದವನೂ, ಶಿವನ ಬಿಲ್ಲನ್ನು ಮುರಿದವನೂ ಆದ ರಾಘವ! ನಿನಗೆ ವಂದನೆಯು.

೩೯. ಕ್ಷತ್ರಿಯಾಂತಕನಾದ ಪರಶುರಾಮನನ್ನು ಹೆದರಿಸಿದವನೂ, ಅಹಲ್ಯೆಯ ದುಃಖವನ್ನು ನೀಗಿಸಿದವನೂ, ಬಿಲ್ಲುಹೊತ್ತು ಮನೋಹರನೂ ಆದ ರಾಮ! ನಿನಗೆ ನಮಸ್ಕಾರವು.

೪೦. ಹತ್ತುಸಾವಿರ ಆನೆಗಳ ಬಲವುಳ್ಳ ತಾಟಕೆಯ ದೇಹವನ್ನು ನಾಶಗೊಳಿಸಿದವನೂ, ಕಲ್ಲಿನಂತೆ ಗಟ್ಟಿಯಾದ ವಾಲಿಯ ವಿಶಾಲವಾದ ಎದೆಯನ್ನು ಸೀಳಿದವನೂ ಆದ ರಾಮ! ನಿನಗೆ ನಮಸ್ಕಾರವು.

೪೧–೪೨. ಮಾಯಾಮೃಗವನ್ನು ಕೊಂದವನೂ, ಅಜ್ಞಾನವನ್ನು ಪರಿಹರಿಸುವವನೂ, ದಶರಥನ ದುಃಖವೆಂಬ ಸಮುದ್ರವನ್ನು ಒಣಗಿಸುವುದರಲ್ಲಿ ಅಗಸ್ತ್ಯನಂತಿರುವವನೂ, ಅನೇಕ ಅಲೆಗಳಿಂದ ಮೆರೆಯುತ್ತಿರುವ ಸಮುದ್ರದ ಮದವನ್ನು ನಾಶಗೊಳಿಸಿದವನೂ, ಸೀತೆಯ ಮನಸ್ಸೆಂಬ ಕಮಲಕ್ಕೆ ಸೂರ್ಯರೂಪನೂ, ಲೋಕಕ್ಕೆ ಸಾಕ್ಷಿಭೂತನೂ ಆದ ರಾಮ! ನಿನಗೆ ನಮಸ್ಕಾರವು.

ರಾಜೇಂದ್ರಾಯ ನಮಸ್ತುಭ್ಯಂ ಜಾನಕೀಪತಯೇ ಹರೇ ।
ತಾರಕಬ್ರಹ್ಮಣೇ ತುಭ್ಯಂ ನಮೋ ರಾಜೀವಲೋಚನ ॥ ೪೩ ॥
ರಾಮಾಯ ರಾಮಚಂದ್ರಾಯ ವರೇಣ್ಯಾಯ ಸುಖಾತ್ಮನೇ ।
ವಿಶ್ವಾಮಿತ್ರಪ್ರಿಯಾಯೇದಂ ನಮಃ ಖರವಿದಾರಿಣೇ ॥ ೪೪ ॥
ಪ್ರಸೀದ ದೇವದೇವೇಶ ಭಕ್ತಾನಾಮಭಯಪ್ರದ ।
ರಕ್ಷ ಮಾಂ ಕರುಣಾಸಿಂಧೋ ರಾಮಚಂದ್ರ ನಮೋಽಸ್ತುತೇ ॥ ೪೫ ॥
ರಕ್ಷ ಮಾಂ ವೇದವಚಸಾಮಪ್ಯಗೋಚರ ರಾಘವ ।
ಪಾಹಿ ಮಾಂ ಕೃಪಯಾ ರಾಮ ಶರಣಂ ತ್ವಾಮುಪೈಮ್ಯಹಂ ॥ ೪೬ ॥
ರಘುವೀರ ಮಹಾಮೋಹಮಪಾಕುರು ಮಮಾಽಧುನಾ ।
ಸ್ನಾನೇ ಚಾಚಮನೇ ಭುಕ್ತೌ ಜಾಗ್ರತ್ಸ್ವಪ್ನಸುಷುಪ್ತಿಷು ॥ ೪೭ ॥
ಸರ್ವಾಽವಸ್ಥಾಸು ಸರ್ವತ್ರ ಪಾಹಿ ಮಾಂ ರಘುನಂದನ ।
ಮಹಿಮಾನಂ ತವ ಸ್ತೋತುಂ ಕಃ ಸಮರ್ಥೋಽ ಜಗತ್ರಯೇ ॥ ೪೮ ॥
ತ್ವಮೇವ ತ್ವನ್ಮಹತ್ವಂ ವೈ ಜಾನಾಸಿ ರಘುನಂದನ ।
ಇತಿ ಸ್ತುತ್ವಾ ವಾಯುಪುತ್ರೋ ರಾಮಚಂದ್ರಂ ಘೃಣಾನಿಧಿಂ ॥ ೪೯ ॥
ಸೀತಾಮಪ್ಯಭಿತುಷ್ಟಾವ ಭಕ್ತಿಯುಕ್ತೇನ ಚೇತಸಾ ।
ಜಾನಕಿ ತ್ವಾಂ ನಮಸ್ಯಾಮಿ ಸರ್ವಪಾಪಪ್ರಣಾಶಿನೀಂ ॥ ೫೦ ॥

---

೪೩. ರಾಜಶ್ರೇಷ್ಠನೂ, ತಾರಕಬ್ರಹ್ಮರೂಪನೂ, ಕಮಲದಂತೆ ಕಣ್ಣುಳ್ಳವನೂ ಆದ ರಾಮ! ನಿನಗೆ ನಮಸ್ಕಾರವು.

೪೪. ಚಂದ್ರನಂತಿರುವವನೂ, ಶ್ರೇಷ್ಠನೂ, ಸುಖರೂಪನೂ, ವಿಶ್ವಾಮಿತ್ರಪ್ರಿಯನೂ, ಖರನಾಶಕನೂ ಆದ ರಾಮ! ನಿನಗೆ ನಮಸ್ಕಾರವು.

೪೫–೪೬. ದೇವತೆಗಳಿಗೆ ಒಡೆಯನಾದ ಬ್ರಹ್ಮನಿಗೂ ಒಡೆಯನಾಗಿ, ಭಕ್ತರಿಗೆ ಅಭಯವನ್ನು ಕೊಡುವವನೂ, ದಯಾಳುವೂ ಆದ ರಾಮ! ನಿನಗೆ ನಮಸ್ಕಾರವು. ವೇದವಾಕ್ಯಗಳಿಗೂ ಅಗೋಚರನಾದ ರಾಮ! ನನ್ನನ್ನು ಕಾಪಾಡು. ನಿನ್ನನ್ನು ಮರೆಹೊಕ್ಕಿರುವೆನು.

೪೭–೪೮. ರಾಮ! ನೀನು ಈಗ ನನ್ನ ಅಜ್ಞಾನವನ್ನು ತೊಲಗಿಸು. ಸ್ನಾನ, ಆಚಮನ, ಭೋಜನ, ಜಾಗ್ರದವಸ್ಥೆ, ನಿದ್ರೆ, ಸುಷುಪ್ತಿಗಳೇ ಮೊದಲಾದ ಸಮಸ್ತ ಅವಸ್ಥೆಗಳಲ್ಲಿಯೂ ನನ್ನನ್ನು ಕಾಪಾಡು. ಮೂರು ಲೋಕಗಳಲ್ಲಿ ನಿನ್ನ ಮಾಹಾತ್ಮ್ಯೆಯನ್ನು ಹೊಗಳಲು ಸಮರ್ಥರಾರು?

೪೯–೫೦. ನೀನೇ ನಿನ್ನ ಮಾಹಾತ್ಮ್ಯವನ್ನರಿತಿರುವೆ.'' ಆಂಜನೇಯನು ದಯಾಳುವಾದ ರಾಮನನ್ನು ಹೀಗೆ ಸ್ತುತಿಸಿ ಭಕ್ತಿಯಿಂದ ಸೀತೆಯನ್ನೂ ಸ್ತೋತ್ರ ಮಾಡಿದನು: "ಸಮಸ್ತ ಪಾಪಗಳನ್ನು ಪರಿಹರಿಸುವವಳೂ, ಬಡತನವನ್ನು

ದಾರಿದ್ರ್ಯರಣಸಂಹರ್ತ್ರೀಂ ಭಕ್ತಾನಾಮಿಷ್ಟದಾಯಿನೀಂ ।
ವಿದೇಹರಾಜತನಯಾಂ ರಾಘವಾನಂದಕಾರಿಣೀಂ ॥ ೫೧ ॥
ಭೂಮೇರ್ದುಹಿತರಂ ವಿದ್ಯಾಂ ನಮಾಮಿ ಪ್ರಕೃತಿಂ ಶಿವಾಂ ।
ಪೌಲಸ್ತ್ಯೈಶ್ವರ್ಯಸಂಹರ್ತ್ರೀಂ ಭಕ್ತಾಽಭೀಷ್ಟಾಂ ಸರಸ್ವತೀಂ ॥ ೫೨ ॥
ಪತಿವ್ರತಾಧುರೀಣಾಂ ತ್ವಾಂ ನಮಾಮಿ ಜನಕಾತ್ಮಜಾಂ ।
ಅನುಗ್ರಹಪರಾಮೃದ್ಧಿಮನಘಾಂ ಹರಿವಲ್ಲಭಾಂ ॥ ೫೩ ॥
ಆತ್ಮವಿದ್ಯಾಂ ತ್ರಯೀರೂಪಾಮುಮಾರೂಪಾಂ ನಮಾಮ್ಯಹಂ ।
ಪ್ರಸಾದಾಭಿಮುಖೀಂ ಲಕ್ಷ್ಮೀಂ ಕ್ಷೀರಾಬ್ಧಿತನಯಾಂ ಶುಭಾಂ ॥ ೫೪ ॥
ನಮಾಮಿ ಚಂದ್ರಭಗಿನೀಂ ಸೀತಾಂ ಸರ್ವಾಂಗಸುಂದರೀಂ ।
ನಮಾಮಿ ಧರ್ಮನಿಲಯಾಂ ಕರುಣಾಂ ವೇದಮಾತರಂ ॥ ೫೫ ॥
ಪದ್ಮಾಲಯಾಂ ಪದ್ಮಹಸ್ತಾಂ ವಿಷ್ಣುವಕ್ಷಸ್ಥಲಾಲಯಾಂ ।
ನಮಾಮಿ ಚಂದ್ರನಿಲಯಾಂ ಸೀತಾಂ ಚಂದ್ರನಿಭಾನನಾಂ ॥ ೫೬ ॥
ಆಹ್ಲಾದರೂಪಿಣೀಂ ಸಿದ್ಧಿಂ ಶಿವಾಂ ಶಿವಕರೀಂ ಸತೀಂ ।
ನಮಾಮಿ ವಿಶ್ವಜನನೀಂ ರಾಮಚಂದ್ರೇಷ್ಟವಲ್ಲಭಾಂ ॥ ೫೭ ॥

---

ನೀಗಿಸುವವಳೂ, ಭಕ್ತರಿಗಿಷ್ಟಾರ್ಥಗಳನ್ನು ನೀಡುವವಳೂ, ಜನಕನ ಮಗಳೂ, ಶ್ರೀರಾಮನಿಗೆ ಆನಂದವನ್ನುಂಟುಮಾಡುವವಳೂ ಆದ ಓ ಜಾನಕಿ! ನಿನಗೆ ನಮಸ್ಕಾರವು.

೫೨. ಭೂದೇವಿಯ ಮಗಳೂ, ವಿದ್ಯಾರೂಪಳೂ, ಪ್ರಕೃತಿಸ್ವರೂಪಳೂ, ಮಂಗಳಕರಳೂ, ರಾವಣನ ಸಂಪತ್ತನ್ನು ನಾಶಗೊಳಿಸಿದವಳೂ, ಸರಸ್ವತೀ ರೂಪಳೂ, ಭಕ್ತಪ್ರಿಯಳೂ ಆದ ಎಲೌ ಸೀತೆಯೆ! ನಿನಗೆ ನಮಸ್ಕಾರವು.

೫೩. ಪತಿವ್ರತೆಯರಲ್ಲಿ ಅಗ್ರಗಣ್ಯಳೂ, ಅನುಗ್ರಹವನ್ನು ಮಾಡುವವಳೂ, ಸಂಪತ್ತಿನ ರೂಪಳೂ, ನಿರ್ದುಷ್ಟಳೂ, ನಾರಾಯಣಪ್ರಿಯಳೂ ಆದ ಜಾನಕಿಯೆ! ನಿನಗೆ ನಮಸ್ಕಾರವು.

೫೪. ಪರಬ್ರಹ್ಮವಿದ್ಯೆಯ ರೂಪಳೂ, ವೇದಸ್ವರೂಪಳೂ, ಪಾರ್ವತೀ ರೂಪಳೂ ಆದ ಓ ಸೀತೆ! ನಿನಗೆ ನಮಸ್ಕಾರವು.

೫೫–೫೬. ಚಂದ್ರಸಹೋದರಿಯೂ, ಸರ್ವಾಂಗಸುಂದರಳೂ, ಧರ್ಮಗಳಿಗೆ ಆಶ್ರಯಳೂ, ದಯಾವತಿಯೂ, ವೇದಮಾತೆಯೂ ಆದ ಓ ಸೀತೆ! ನಿನ್ನನ್ನು ನಮಸ್ಕರಿಸುತ್ತೇನೆ. ಪದ್ಮದಲ್ಲಿ ನೆಲೆಸಿದವಳೂ, ಕಮಲವನ್ನು ಕೈಯಲ್ಲಿ ಹಿಡಿದವಳೂ, ವಿಷ್ಣುವಿನ ಎದೆಯಲ್ಲಿರುವವಳೂ, ಚಂದ್ರನಲ್ಲಿ ನೆಲಸಿರುವವಳೂ, ಚಂದ್ರಮುಖಿಯೂ ಆದ ನಿನ್ನನ್ನು ನಮಸ್ಕರಿಸುತ್ತೆನೆ.

೫೭. ಆನಂದವನ್ನುಂಟುಮಾಡುವವಳೂ, ಮಂಗಳಕರಳೂ, ಪತಿ

ಶ್ರೀ ಸೂತ ಉವಾಚ:—

ಸೀತಾಂ ಸರ್ವಾಽನವದ್ಯಾಂಗೀಂ ಭಜಾಮಿ ಸತತಂ ಹೃದಾ ।
ಸ್ತುತ್ವೈವಂ ಹನುಮಾನ್ಸೀತಾರಾಮಚಂದ್ರೌ ಸಭಕ್ತಿಕಂ ॥ ೫೮ ॥
ಆನಂದಾಽಶ್ರುಪರಿಕ್ಲಿನ್ನಸ್ತೂಷ್ಣೀಮಾಸ್ತೇ ದ್ವಿಜೋತ್ತಮಾಃ ।
ಯ ಇದಂ ವಾಯುಪುತ್ರೇಣ ಕಥಿತಂ ಪಾಪನಾಶನಂ ॥ ೫೯ ॥
ಸ್ತೋತ್ರಂ ಶ್ರೀರಾಮಚಂದ್ರಸ್ಯ ಸೀತಾಯಾಃ ಪಠತೇಽನ್ವಹಂ ।
ಸ ನರೋ ಮಹದೈಶ್ವರ್ಯಮಶ್ನುತೇ ವಾಂಛಿತಂ ಸದಾ ॥ ೬೦ ॥
ಅನೇಕಕ್ಷೇತ್ರಧಾನ್ಯಾನಿ ಗಾಶ್ಚ ದೋಗ್ಧ್ರೀಃ ಪಯಸ್ವಿನೀ ।
ಆಯುರ್ವಿದ್ಯಾಶ್ಚ ಪುತ್ರಾಂಶ್ಚ ಭಾರ್ಯಾಮಪಿ ಮನೋರಮಾಂ ॥ ೬೧ ॥
ಏತತ್ಸ್ತೋತ್ರಂ ಸಕೃದ್ವಿಪ್ರಾಃ ಪಠನ್ನಾಪ್ನೋತ್ಯಸಂಶಯಃ ।
ಏತತ್ಸ್ತೋತ್ರಸ್ಯ ಪಾಠೇನ ನರಕಂ ನೈವ ಯಾಸ್ಯತಿ ॥ ೬೨ ॥
ಬ್ರಹ್ಮಹತ್ಯಾದಿಪಾಪಾನಿ ನಶ್ಯಂತಿ ಸುಮಹಾಂತ್ಯಪಿ ।
ಸರ್ವಪಾಪವಿನಿರ್ಮುಕ್ತೋ ದೇಹಾಂತೇ ಮುಕ್ತಿಮಾಪ್ನುಯಾತ್ ॥ ೬೩ ॥
ಇತಿ ಸ್ತುತೋ ಜಗನ್ನಾಥೋ ವಾಯುಪುತ್ರೇಣ ರಾಘವಃ ।
ಸೀತಯಾ ಸಹಿತೋ ವಿಪ್ರಾ ಹನೂಮಂತಮಥಾಽಬ್ರವೀತ್ ॥ ೬೪ ॥

---

ವ್ರತೆಯೂ, ಪ್ರಪಂಚಕ್ಕೆ ಮಾತೆಯೂ, ಶ್ರೀರಾಮಚಂದ್ರನ ಪ್ರಿಯಪತ್ನಿಯೂ, ನಿರ್ದುಷ್ಟಳಾದ ಸಕಲಾವಯವವುಳ್ಳವಳೂ ಆದ ಸೀತೆಯನ್ನು ಮನಸ್ಸಿನಿಂದ ಸೇವಿಸುತ್ತೇನೆ.”

೫೮–೬೦. ಶ್ರೀಸೂತನು ಹೇಳುತ್ತಾನೆ:—ಹನುಮಂತನು ಹೀಗೆ ಸೀತಾ ರಾಮರನ್ನು ಭಕ್ತಿಯಿಂದ ಸ್ತುತಿಸಿ ಆನಂದಬಾಷ್ಪಗಳಿಂದ ಒದ್ದೆಯಾದ ಕಣ್ಣು ಗಳುಳ್ಳವನಾಗಿ ಸುಮ್ಮನಾದನು. ಆಂಜನೇಯನು ಹೇಳಿದ ಪಾಪವನ್ನು ನೀಗಿಸುವ ಸೀತಾರಾಮರ ಈ ಸ್ತೋತ್ರವನ್ನು ನಿತ್ಯವೂ ಪಠಿಸುವ ನರನು ಹೆಚ್ಚಾದ ಸಂಪತ್ತನ್ನೂ, ಇಷ್ಟಾರ್ಥವನ್ನೂ ಹೊಂದುವನು.

೬೧–೬೩. ಈ ಸ್ತೋತ್ರವನ್ನು ಒಂದು ಸಾರಿ ಪಠಿಸುವವನು ಹೊಲ, ಗದ್ದೆ, ಧಾನ್ಯ, ಹಾಲನ್ನು ಕೊಡುವ ಹಸುಗಳು, ಆಯುಸ್ಸು, ವಿದ್ಯೆ, ಪುತ್ರರು, ಸುಂದರಿಯಾದ ಪತ್ನಿ ಇವರನ್ನು ಪಡೆಯುವನು; ನರಕವನ್ನು ಹೊಂದುವುದಿಲ್ಲ. ಬ್ರಹ್ಮಹತ್ಯೆ ಮೊದಲಾದ ಅವನ ಮಹಾಪಾತಕಗಳೂ ನಾಶವಾಗುವುವು. ಹೀಗೆ ಸಕಲ ಪಾಪಮುಕ್ತನಾಗಿ ದೇಹಾವಸಾನದಲ್ಲಿ ಮೋಕ್ಷವನ್ನು ಪಡೆಯುವನು.

೬೪. ಆಂಜನೇಯನು ಈ ರೀತಿ ಸ್ತುತಿಸಲು ಜಗನ್ನಾಥನಾದ ರಾಮಚಂದ್ರನು ಸೀತೆಯೊಡನೆ ಹನುಮಂತನನ್ನು ಕುರಿತು ಇಂತೆಂದನು:

ಶ್ರೀರಾಮ ಉವಾಚ:—

ಅಜ್ಞಾನಾದ್ವಾನರಶ್ರೇಷ್ಠ ತ್ವಯೇದಂ ಸಾಹಸಂ ಕೃತಂ ।
ಬ್ರಹ್ಮಣಾ ವಿಷ್ಣುನಾವಾಽಪಿ ಶಕ್ರಾದಿತ್ರಿದಶೈರಪಿ ॥ ೬೩ ॥
ನೇದಂ ಲಿಂಗಂ ಸಮುದ್ಧರ್ತುಂ ಶಕ್ಯತೇ ಸ್ಥಾಪಿತಂ ಮಯಾ ।
ಮಹಾದೇವಾಽಪರಾಧೇನ ಪತಿತೋಽಸ್ಯದ್ಯ ಮೂರ್ಛಿತಃ ॥ ೬೬ ॥
ಇತಃಪರಂ ಮಾ ಕ್ರಿಯತಾಂ ದ್ರೋಹಃ ಸಾಂಬಸ್ಯ ಶೂಲಿನಃ ।
ಅದ್ಯಾರಭ್ಯ ತ್ವಿದಂ ಕುಂಡಂ ತವ ನಾಮ್ನಾ ಜಗತ್ರಯೇ ॥ ೬೭ ॥
ಖ್ಯಾತಿಂ ಪ್ರಯಾತು ಯತ್ರ ತ್ವಂ ಪತಿತೋ ವಾನರೋತ್ತಮ ।
ಮಹಾಪಾತಕಸಂಘಾನಾಂ ನಾಶಃ ಸ್ಯಾದತ್ರಮಜ್ಜನಾತ್ ॥ ೬೮ ॥
ಮಹಾದೇವಜಟಾಜಾತಾ ಗೌತಮೀ ಸರಿತಾಂ ವರಾ ।
ಅಶ್ವಮೇಧಸಹಸ್ರಸ್ಯ ಫಲದಾ ಸ್ನಾಯಿನಾಂ ನೃಣಾಂ ॥ ೬೯ ॥
ತತಃ ಶತಗುಣಾ ಗಂಗಾಯಮುನಾ ಚ ಸರಸ್ವತೀ ।
ಏತನ್ನದೀತ್ರಯಂ ಯತ್ರ ಸ್ಥಲೇ ಪ್ರವಹತೇ ಕೃಪೇ ॥ ೭೦ ॥
ಮಿಲಿತ್ವಾ ತತ್ರ ತು ಸ್ನಾನಂ ಸಹಸ್ರಗುಣಿತಂ ಸ್ಮೃತಂ ।
ನದೀಷ್ವೇತಾಸು ಯತ್ಸ್ನಾನಾತ್ಫಲಂ ಪುಂಸಾಂ ಭವೇತ್ಕಪೇ ॥ ೭೧ ॥

---

೬೫–೬೬. ಶ್ರೀರಾಮನು ಹೇಳುತ್ತಾನೆ:—"ವಾನರೋತ್ತಮ! ನೀನು ಅಜ್ಞಾನದಿಂದ ಇಂತಹ ಸಾಹಸಕಾರ್ಯವನ್ನು ಮಾಡಿರುವೆ. ನಾನು ಪ್ರತಿಷ್ಠಾಪಿಸಿದ ಈ ಲಿಂಗವನ್ನು ಬ್ರಹ್ಮನಾಗಲಿ, ವಿಷ್ಣುವಾಗಲಿ, ಇಂದ್ರಾದಿ ದೇವತೆಗಳಾಗಲಿ ಯಾರೂ ಕೀಳಲಾರರು. ನೀನು ಶಿವನಿಗೆ ಅಪರಾಧ ಮಾಡಿದು ದರಿಂದ ಮೂರ್ಛೆಗೊಂಡು ಬಿದ್ದಿರುವೆ.

೬೭–೬೮. ಇನ್ನುಮುಂದೆ ಮಹೇಶ್ವರನಿಗೆ ಅಪರಾಧ ಮಾಡಬೇಡ. ನೀನು ಇಲ್ಲಿ ಬಿದ್ದುದರಿಂದ ಇಂದಿನಿಂದ ಈ ಕುಂಡವು ನಿನ್ನ ಹೆಸರಿನಿಂದ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಲಿ. ಇಲ್ಲಿ ಸ್ನಾನಮಾಡಿದ್ದರಿಂದ ಮಹಾಪಾತಕಗಳು ಪರಿಹಾರವಾಗಲಿ.

೬೯. ಮಹಾದೇವನ ಜಟೆಯಿಂದ ಹುಟ್ಟಿದ ಗೌತಮಿಯೆಂಬ ಉತ್ತಮ ನದಿಯು ಸ್ನಾನಮಾಡಿದವರಿಗೆ ಸಹಸ್ರಾಶ್ವಮೇಧಯಾಗಗಳ ಫಲವನ್ನೀಯುವುದು.

೭೦–೭೧. ಅದಕ್ಕಿಂತ ನೂರರಷ್ಟು ಗಂಗಾ ಯಮುನಾ ನದಿಗಳು ಹೆಚ್ಚು ಫಲವನ್ನು ಕೊಡುವುವು. ಈ ಗೌತಮೀ, ಗಂಗೆ, ಯಮುನಾ ನದಿಗಳು ಒಟ್ಟಿಗೆ ಹರಿಯುವ ಸ್ಥಳದಲ್ಲಿ ಸ್ನಾನಮಾಡಿದರೆ ಸಾವಿರದಷ್ಟು ಫಲವು ಹೆಚ್ಚುವುದು.

ತತ್ಫಲಂ ತವಕುಂಡೇಽಸ್ಮಿನ್ಸ್ನಾನಾತ್ಪ್ರಾಪ್ನೋತ್ಯಸಂಶಯಂ ।
ದುರ್ಲಭಂ ಪ್ರಾಪ್ಯ ಮಾನುಷ್ಯಂ ಹನೂಮತ್ಕುಂಡತೀರತಃ ॥ ೭೨ ॥
ಶ್ರಾದ್ಧಂ ನ ಕುರುತೇ ಯಸ್ತು ಭಕ್ತಿಯುಕ್ತೇನ ಚೇತಸಾ ।
ನಿರಾಶಾಸ್ತಸ್ಯ ಪಿತರಃ ಪ್ರಯಾಂತಿ ಕುಪಿತಾಃ ಕಪೇ ॥ ೭೩ ॥
ಕುಪ್ಯಂತಿ ಮುನಯೋಽಪ್ಯಸ್ಮೈ ದೇವಾಃ ಸೇಂದ್ರಾಃ ಸಚಾರಣಾಃ ।
ನ ದತ್ತಂ ನ ಹುತಂ ಯೇನ ಹನೂಮತ್ಕುಂಡತೀರತಃ ॥ ೭೪ ॥
ವೃಥಾಜೀವಿತ ಏವಾಸಾವಿಹಾಮುತ್ರ ಚ ದುಃಖಭಾಕ್ ।
ಹನೂಮತ್ಕುಂಡಸವಿಧೇ ಯೇನ ದತ್ತಂ ತಿಲೋದಕಂ ।
ಮೋದಂತೇ ಪಿತರಸ್ತಸ್ಯ ಘೃತಕುಲ್ಯಾಃ ಪಿಬಂತಿ ಚ ॥ ೭೫ ॥

ಶ್ರೀ ಸೂತ ಉವಾಚ :—

ಶ್ರುತ್ವೈತದ್ವಚನಂ ವಿಪ್ರಾ ರಾಮೇಣೋಕ್ತಂ ಸ ವಾಯುಜಃ ॥ ೭೬ ॥
ಉತ್ತರೇ ರಾಮನಾಥಸ್ಯ ಲಿಂಗಂ ಸ್ವೇನಾಹೃತಂ ಮುದಾ ।
ಆಜ್ಞಯಾ ರಾಮಚಂದ್ರಸ್ಯ ಸ್ಥಾಪಯಾಮಾಸ ವಾಯುಜಃ ॥ ೭೭ ॥
ಪ್ರತ್ಯಕ್ಷಮೇವ ಸರ್ವೇಷಾಂ ಕಪಿಲಾಂಗೂಲವೇಷ್ಟಿತಂ ।
ಹರೋಽಪಿ ತತ್ಪುಚ್ಛಜಾತಂ ಬಿಭರ್ತಿ ಚ ವಲಿತ್ರಯಂ ।
ತದುತ್ತರಾಯಾಂ ಕಕುಭಿ ಗೌರೀಂ ಸಂಸ್ಥಾಪಯನ್ಮುದಾ ॥ ೭೮ ॥

---

ಆಂಜನೇಯ ! ಮಾನವನು ಈ ಮೂರು ನದಿಗಳಲ್ಲಿ ಮಿಂದಷ್ಟು ಫಲವು ಈ ನಿನ್ನ ಕುಂಡದಲ್ಲಿ ಮಿಂದರೆ ಲಭಿಸುವುದು. ಈ ಪ್ರಪಂಚದಲ್ಲಿ ದುರ್ಲಭವಾದ ಮನುಷ್ಯಜನ್ಮವನ್ನು ಪಡೆದು ಈ ಕುಂಡದ ದಡದಲ್ಲಿ ಭಕ್ತಿಯಿಂದ ಶ್ರಾದ್ಧ ಮಾಡದ ನರನ ಪಿತೃಗಳು ನಿರಾಶರಾಗಿ ಕೋಪದಿಂದ ಹೊರಟುಹೋಗುವರು.

೭೪–೭೫. ಹನುಮತ್ಕುಂಡದ ದಡದಲ್ಲಿ ದಾನ ಹೋಮಗಳನ್ನು ಮಾಡದ ನರನಲ್ಲಿ ಮುನಿಗಳೂ, ಇಂದ್ರಾದಿ ದೇವತೆಗಳೂ, ಚಾರಣರೂ ಕೋಪಗೊಳ್ಳುವರು. ಆ ಮನುಷ್ಯನ ಬಾಳು ನಿಷ್ಫಲವಾಗುವುದು. ಅವನು ಇಹಪರಗಳಲ್ಲಿ ದುಃಖ ಗಳನ್ನು ಅನುಭವಿಸುವನು. ಇಲ್ಲಿ ತಿಲತರ್ಪಣವನ್ನು ಮಾಡಿದವನ ಪಿತೃಗಳು ಸಂತುಷ್ಟರಾಗುವರು. ಅವರು ತುಪ್ಪದ ಕಾಲುವೆಗಳನ್ನು ಕುಡಿಯುವರು.''

೭೬–೭೭. ಶ್ರೀಸೂತನು ಹೇಳುತ್ತಾನೆ:—ಆಂಜನೇಯನು ಶ್ರೀರಾಮನು ಹೇಳಿದ ಈ ಮಾತನ್ನು ಕೇಳಿ ಆತನ ಆಜ್ಞೆಯಿಂದ ತಾನು ತಂದ ಶಿವಲಿಂಗ ವನ್ನು ರಾಮನಾಥಲಿಂಗದ ಉತ್ತರ ದಿಕ್ಕಿನಲ್ಲಿ ಪ್ರತಿಷ್ಠೆಮಾಡಿದನು.

೭೮. ಎಲ್ಲರ ಮುಂದೆ ಶಿವನು, ಕಪಿಯು ಬಾಲವನ್ನು ಸುತ್ತಿದುದರಿಂದಾದ ಮೂರು ಸುಕ್ಕುಗಳನ್ನು ಧರಿಸಿದನು. ಆಂಜನೇಯನು ಆ ಶಿವಲಿಂಗದ ಉತ್ತರ ದಿಕ್ಕಿನಲ್ಲಿ ಗೌರಿಯನ್ನು ಪ್ರತಿಷ್ಠೆಮಾಡಿದನು.

ಏವಂ ವಃ ಕಥಿತಂ ವಿಪ್ರಾ ಯದರ್ಥಂ ರಾಘವೇಣ ತು ।
ಲಿಂಗಂ ಪ್ರತಿಷ್ಠಿತಂ ಸೇತೌ ಭುಕ್ತಿಮುಕ್ತಿಪ್ರದಂ ನೃಣಾಂ ॥ ೭೯ ॥
ಯಃ ಪಠೇದಿಮಮಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ಸ ವಿಧೂಯೇಹ ಪಾಪಾನಿ ಶಿವಲೋಕೇ ಮಹೀಯತೇ ॥ ೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ರಾಮನಾಥಲಿಂಗಪ್ರತಿಷ್ಠಾಕಾರಣ ವರ್ಣನಂ" ನಾಮ ಷಟ್ಚತ್ವಾರಿಂಶೋಽಧ್ಯಾಯಃ

---

೭೯. ಶ್ರೀಸೂತನು ಹೇಳುತ್ತಾನೆ:—ಎಲೈ ವಿಪ್ರರೆ! ರಾಮನು ಈ ಸೇತುವೆಯಲ್ಲಿ ಮಾನವರಿಗೆ ಭುಕ್ತಿಮುಕ್ತಿಗಳನ್ನೀಯುವ ರಾಮನಾಥಲಿಂಗವನ್ನು ಪ್ರತಿಷ್ಠೆಮಾಡಲು ಕಾರಣವನ್ನು ತಿಳಿಸಿರುವೆನು.

೮೦. ಈ ಅಧ್ಯಾಯವನ್ನು ಪಠಿಸುವವನೂ, ಒಮ್ಮನಸ್ಸಿನಿಂದ ಕೇಳುವವನೂ ಈ ಲೋಕದಲ್ಲಿ ಪಾಪಮುಕ್ತನಾಗಿ ಶಿವಲೋಕದಲ್ಲಿ ಪೂಜ್ಯನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ರಾಮನಾಥಲಿಂಗಪ್ರತಿಷ್ಠಾಕಾರಣವರ್ಣನ"ವೆಂಬ ನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಚತ್ವಾರಿಂಶೋಽಧ್ಯಾಯಃ

### ರಾಮಸ್ಯ ಬ್ರಹ್ಮಹತ್ಯೋತ್ಪತ್ತಿಹೇತುನಿರೂಪಣಂ

ಋಷಯ ಊಚುಃ:—

ರಾಕ್ಷಸಸ್ಯ ವಧಾತ್ಸೂತ ರಾವಣಸ್ಯ ಮಹಾಮುನೇ ।
ಬ್ರಹ್ಮಹತ್ಯಾ ಕಥಮಭೂದ್ರಾಘವಸ್ಯ ಮಹಾತ್ಮನಃ ॥ ೧ ॥
ಬ್ರಾಹ್ಮಣಸ್ಯವಧಾತ್ಸೂತ ಬ್ರಹ್ಮಹತ್ಯಾಽಭಿಜಾಯತೇ ।
ನ ಬ್ರಾಹ್ಮಣೋದಶಗ್ರೀವಃ ಕಥಂ ತದ್ವದ ನೋ ಮುನೇ ॥ ೨ ॥
ಬ್ರಹ್ಮಹತ್ಯಾ ಭವೇತ್ಕ್ರೂರಾ ರಾಮಚಂದ್ರಸ್ಯ ಧೀಮತಃ ।
ಏತನ್ನಃ ಶ್ರದ್ದಧಾನಾನಾಂ ವದ ಕಾರುಣ್ಯತೋಽಧುನಾ ॥ ೩ ॥
ಇತಿ ಪೃಷ್ಟಸ್ತತಃ ಸೂತೋ ನೈಮಿಷಾರಣ್ಯವಾಸಿಭಿಃ ।
ವಕ್ತುಂ ಪ್ರಚಕ್ರಮೇ ತೇಷಾಂ ಪ್ರಶ್ನಸ್ಯೋತ್ತರಮುತ್ತಮಂ ॥ ೪ ॥

ಶ್ರೀ ಸೂತ ಉವಾಚ:—

ಬ್ರಹ್ಮಪುತ್ರೋ ಮಹಾತೇಜಾಃ ಪುಲಸ್ತ್ಯೋನಾಮ ವೈ ದ್ವಿಜಾಃ ।
ಬಭೂವ ತಸ್ಯ ಪುತ್ರೋಽಭೂದ್ವಿಶ್ರವಾ ಇತಿವಿಶ್ರುತಃ ॥ ೫ ॥
ತಸ್ಯ ಪುತ್ರಃ ಪುಲಸ್ತ್ಯಸ್ಯ ವಿಶ್ರವಾ ಮುನಿಪುಂಗವಾಃ ।
ಚಿರಕಾಲಂ ತಪಸ್ತೇಪೇ ದೈವೈರಪಿ ಸುದುಷ್ಕರಂ ॥ ೬ ॥

---

### ಕನ್ನಡದ ಅನುವಾದ

#### ರಾಮನಿಗೆ ಬ್ರಹ್ಮಹತ್ಯೋತ್ಪತ್ತಿಹೇತುನಿರೂಪಣ

೧–೩. ಋಷಿಗಳು ಕೇಳುತ್ತಾರೆ:— ಸೂತ! ರಾಕ್ಷಸನಾದ ರಾವಣನನ್ನು ಕೊಂದುದರಿಂದ ಮಹಾತ್ಮನಾದ ರಾಮನಿಗೆ ಬ್ರಹ್ಮಹತ್ಯೆಯು ಹೇಗೆ ಸಂಭವಿಸಿತು? ಬ್ರಾಹ್ಮಣನನ್ನು ವಧಿಸಿದರೆ ಬ್ರಹ್ಮಹತ್ಯೆಯುಂಟಾಗುವುದು. ರಾವಣನು ಬ್ರಾಹ್ಮಣನಲ್ಲ. ಆ ಕ್ರೂರಬ್ರಹ್ಮಹತ್ಯೆಯು ಶ್ರೀರಾಮನಿಗೆ ಉಂಟಾದುದು ಹೇಗೆ? ಅದನ್ನು ಶ್ರದ್ಧೆಯಿಂದ ನಮಗೆ ಹೇಳು.

೪. ಹೀಗೆ ನೈಮಿಷಾರಣ್ಯವಾಸಿಗಳಾದ ಮುನಿಗಳು ಕೇಳಲು ಸೂತನು ಅವರ ಪ್ರಶ್ನೆಗೆ ಶ್ರೇಷ್ಠವಾದ ಉತ್ತರವನ್ನು ಹೇಳಲಾರಂಭಿಸಿದನು.

೫. ಶ್ರೀಸೂತನು ಹೇಳುತ್ತಾನೆ:— ಎಲೈ ಬ್ರಾಹ್ಮಣರೆ! ತೇಜಸ್ವಿಯಾದ ಪುಲಸ್ತ್ಯನೆಂಬ ಬ್ರಹ್ಮಪುತ್ರನಿದ್ದನು. ಅವನಿಗೆ ವಿಶ್ರವಸ್ಸೆಂದು ಪ್ರಸಿದ್ಧನಾದ ಮಗನು ಹುಟ್ಟಿದನು.

೬. ಪುಲಸ್ತ್ಯನ ಮಗನಾದ ವಿಶ್ರವಸ್ಸು ಬಹುಕಾಲ ದೇವತೆಗಳಿಗೂ ಮಾಡಲಾಗದ ತಪಸ್ಸನ್ನಾಚರಿಸಿದನು.

ತಪಃ ಕುರ್ವತಿ ತಸ್ಮಿಂಸ್ತು ಸುಮಾಲೀನಾಮ ರಾಕ್ಷಸಃ ।
ಪಾತಾಲಲೋಕಾದ್ಭೂಲೋಕಂ ಸರ್ವಂ ವೈ ವಿಚಚಾರಹ ॥ ೭ ॥
ಹೇಮನಿಷ್ಕಾಂಗದ ಧರಃ ಕಾಲಮೇಘನಿಭಚ್ಛವಿಃ ।
ಸಮಾದಾಯ ಸುತಾಂ ಕನ್ಯಾಂ ಪದ್ಮಹೀನಾಮಿವ ಶ್ರಿಯಂ ॥ ೮ ॥
ವಿಚರನ್ಸಮಹೀಪೃಷ್ಠೇ ಕದಾಚಿತ್ಪುಷ್ಪಕಸ್ಥಿತಂ ।
ದೃಷ್ಟ್ವಾ ವಿಶ್ರವಸಃ ಪುತ್ರಂ ಕುಬೇರಂ ವೈ ಧನೇಶ್ವರಂ ॥ ೯ ॥
ಚಿಂತಯಾಮಾಸ ವಿಪ್ರೇಂದ್ರಾಃ ಸುಮಾಲೀ ಸತು ರಾಕ್ಷಸಃ ।
ಕುಬೇರಸದೃಶಃ ಪುತ್ರೋ ಯದ್ಯಸ್ಮಾಕಂ ಭವಿಷ್ಯತಿ ॥ ೧೦ ॥
ವಯಂ ವರ್ಧಾಮಹೇ ಸರ್ವೇ ರಾಕ್ಷಸಾಹ್ಯಕುತೋಭಯಾಃ ।
ವಿಚಾರ್ಯೈವಂ ನಿಜಸುತಾಮಬ್ರವೀದ್ರಾಕ್ಷಸೇಶ್ವರಃ ॥ ೧೧ ॥
ಸುತೇ ಪ್ರದಾನಕಾಲೋಽದ್ಯ ತವ ಕೈಕಸಿಶೋಭನೇ ।
ಅದ್ಯ ತೇ ಯೌವನಂ ಪ್ರಾಪ್ತಂ ತದ್ವೇಯಾ ತ್ವಂ ವರಾಯ ಹಿ ॥ ೧೨ ॥
ಅಪ್ರದಾನೇನ ಪುತ್ರೀಣಾಂ ಪಿತರೋ ದುಃಖಮಾಪ್ನುಯುಃ ।
ಕಿಂ ಚ ಸರ್ವಗುಣೋತ್ಕೃಷ್ಟಾ ಲಕ್ಷ್ಮೀರಿವ ಸುತೇ ಶುಭೇ ॥ ೧೩ ॥
ಪ್ರತ್ಯಾಖ್ಯಾನಭಯಾತ್ವಂಭಿರ್ನ ಚ ತ್ವಂ ಪ್ರಾರ್ಥ್ಯಸೇ ಶುಭೇ ।
ಕನ್ಯಾಪಿತೃತ್ವಂ ದುಃಖಾಯ ಸರ್ವೇಷಾಂ ಮಾನಕಾಂಕ್ಷಿಣಾಂ ॥ ೧೪ ॥

---

೭. ಅವನು ತಪಸ್ಸನ್ನು ಮಾಡುತ್ತಿರಲು ಸುಮಾಲಿಯೆಂಬ ರಾಕ್ಷಸನು ಪಾತಾಳದಿಂದ ಬಂದು ಭೂಲೋಕದಲ್ಲೆಲ್ಲ ಸಂಚರಿಸಿದನು.

೮–೧೧. ಚಿನ್ನದ ನಾಗಮುರಿಗೆಯನ್ನು ಧರಿಸಿದವನೂ, ಕಾರ್ಮೋಡದಂತೆ ಕಾಂತಿಯುಳ್ಳವನೂ ಆದ ಆ ಸುಮಾಲಿಯು ತಾವರೆಹೂವನ್ನು ಹಿಡಿದಿಲ್ಲದ ಲಕ್ಷ್ಮಿಯಂತಿರುವ ತನ್ನ ಮಗಳನ್ನು ಕರೆದುಕೊಂಡು ಭೂಮಿಯಲ್ಲಿ ಸಂಚರಿಸುತ್ತ ಒಂದಾನೊಂದುವೇಳೆ ಪುಷ್ಪಕವಿಮಾನದಲ್ಲಿ ಕುಳಿತಿರುವ ವಿಶ್ರವಸ್ಸಿನ ಮಗನಾದ ಕುಬೇರನನ್ನೀಕ್ಷಿಸಿ ಹೀಗೆ ಆಲೋಚಿಸಿದನು: "ಈ ಕುಬೇರನಂತಹ ಮಗನು ನಮಗೆ ಸಂಭವಿಸಿದರೆ ರಾಕ್ಷಸರಾದ ನಾವು ಯಾವ ಭಯವೂ ಇಲ್ಲದೆ ವೃದ್ಧಿಗೊಳ್ಳುವೆವು." ಎಂದು ಆಲೋಚಿಸಿ ತನ್ನ ಮಗಳನ್ನು ಕುರಿತು ಇಂತೆಂದನು:

೧೨. "ಮಗು! ಕೈಕಸಿ! ಈಗ ನಿನಗೆ ವಿವಾಹಸಮಯವು ಒದಗಿದೆ. ಈಗ ನೀನು ಯುವತಿಯಾಗಿರುವೆ. ಆದ್ದರಿಂದ ನಿನ್ನನ್ನು ಒಬ್ಬ ವರನಿಗೆ ಕೊಡಬೇಕಾಗಿದೆ.

೧೩–೧೪. ಕನ್ಯೆಗೆ ವಿವಾಹವಾಗದಿದ್ದರೆ ತಂದೆ ತಾಯಿಗಳು ದುಃಖಗೊಳ್ಳುವರು. ಲಕ್ಷ್ಮಿಯಂತೆ ಸಕಲಗುಣಗಳಿಂದ ಉತ್ತಮಳೂ, ಮಂಗಳಕರಳೂ

ನ ಜಾನೇಽಹಂ ವರಃ ಕೋ ವಾ ವರಯೇದಿತಿ ಕನ್ಯಕೇ ।
ಸಾ ತ್ವಂ ಪುಲಸ್ತ್ಯತನಯಂ ಮುನಿಂ ವಿಶ್ರವಸಂ ದ್ವಿಜಂ ॥ ೧೫ ॥
ಪಿತಾಮಹಕುಲೋದ್ಭೂತಂ ವರಯಸ್ವ ಸ್ವಯಂಗತಾ ।
ಕುಬೇರತುಲ್ಯಾಸ್ತನಯಾ ಭವೇಯುಸ್ತೇ ನ ಸಂಶಯಃ ॥ ೧೬ ॥
ಕೈಕಸೀ ತದ್ವಚಃಶ್ರುತ್ವಾ ಸಾ ಕನ್ಯಾ ಪಿತೃಗೌರವಾತ್ ।
ಅಂಗೀಚಕಾರ ತದ್ವಾಕ್ಯಂ ತಥಾಽಸ್ತ್ವಿತಿ ಶುಚಿಸ್ಮಿತಾ ॥ ೧೭ ॥
ಪರ್ಣಶಾಲಾಂ ಮುನಿಶ್ರೇಷ್ಠಾ ಗತ್ವಾ ವಿಶ್ರವಸೋ ಮುನೇಃ ।
ಅತಿಷ್ಠದಂತಿಕೇ ತಸ್ಯ ಲಜ್ಜಮಾನಾ ಹ್ಯಧೋಮುಖೀ ॥ ೧೮ ॥
ತಸ್ಮಿನ್ನವಸರೇ ವಿಪ್ರಾಃ ಪುಲಸ್ತ್ಯತನಯಃ ಸುಧೀಃ ।
ಅಗ್ನಿಹೋತ್ರಮುಪಾಸ್ತೇಸ್ಮ ಜ್ವಲತ್ಪಾವಕಸನ್ನಿಭಃ ॥ ೧೯ ॥
ಸಂಧ್ಯಾಕಾಲಮತಿಕ್ರೂರಮವಿಚಿಂತ್ಯ ತು ಕೈಕಸೀ ।
ಅಭ್ಯೇತ್ಯ ತಂ ಮುನಿಂ ಸುಭ್ರೂಃ ಪಿತುರ್ವಚನಗೌರವಾತ್ ॥ ೨೦ ॥
ತಸ್ಥಾವಧೋಮುಖೀ ಭೂಮಿಂ ಲಿಖತ್ಯಂಗುಷ್ಠಕೋಟಿನಾ ।
ವಿಶ್ರವಾಸ್ತಾಂ ವಿಲೋಕ್ಯಾಥ ಕೈಕಸೀಂ ತನುಮಧ್ಯಮಾಂ ।
ಉವಾಚ ಸಸ್ಮಿತೋ ವಿಪ್ರಾಃ ಪೂರ್ಣಚಂದ್ರನಿಭಾನನಾಂ ॥ ೨೧ ॥

---

ಆದ ನೀನು ತಿರಸ್ಕಾರಮಾಡುವೆಯೆಂದು ಪುರುಷರು ನಿನ್ನನ್ನು ಬೇಡುವುದಿಲ್ಲ. ಮರ್ಯಾದೆಯನ್ನು ಬಯಸುವ ಮಾನವರಿಗೆ ಕನ್ಯೆಯ ತಂದೆಯಾಗಿರುವುದು ದುಃಖವನ್ನುಂಟುಮಾಡುವುದು.

೧೫–೧೬. ಮಗಳೆ! ಯಾವ ವರನು ನಿನ್ನನ್ನು ವರಿಸುವನೆಂದರಿಯೆನು. ಈಗ ಬ್ರಹ್ಮನ ವಂಶದಲ್ಲಿ ಜನಿಸಿದ ಪುಲಸ್ತ್ಯನ ಮಗನಾದ ವಿಶ್ರವಸ್ಸನ್ನು ನೀನೇ ವರಿಸು. ನಿನ್ನಲ್ಲಿ ಕುಬೇರನಂತಿರುವ ಮಕ್ಕಳು ಜನಿಸುವರು."

೧೭. ಆ ಕೈಕಸಿಯು ತಂದೆಯಮಾತನ್ನು ಕೇಳಿ ಅವನಲ್ಲಿನ ಗೌರವದಿಂದ ಹಾಗೆಯೇ ಆಗಲೆಂದು ಸಂತೋಷದಿಂದ ಒಪ್ಪಿದಳು.

೧೮. ಮುನಿವರ್ಯರೆ! ಅವಳು ವಿಶ್ರವಸ್ಸಿನ ಪರ್ಣಶಾಲೆಗೆ ಹೋಗಿ ಅವನ ಬಳಿ ನಾಚಿಕೆಯಿಂದ ಮುಖವನ್ನು ತಗ್ಗಿಸಿಕೊಂಡು ನಿಂತಳು.

೧೯. ಆ ಸಮಯದಲ್ಲಿ ಜ್ಞಾನಿಯಾಗಿ ಉರಿಯುವ ಬೆಂಕಿಯಂತಿರುವ ವಿಶ್ರವಸ್ಸು ಅಗ್ನಿಹೋತ್ರವನ್ನು ಮಾಡುತ್ತಿದ್ದನು.

೨೦–೨೧. ಕೈಕಸಿಯು ಸಂಜೆಯ ಸಮಯವು ಅತಿ ಕಠಿನವಾದುದೆಂದರಿಯದೆ ತಂದೆಯ ಮಾತಿನಂತೆ ಆ ಮುನಿಯನ್ನು ಸಮಾಪಿಸಿ ನೆಲವನ್ನು ಕಾಲಿನ ಹೆಬ್ಬೆಟ್ಟಿನ ತುದಿಯಿಂದ ಕೆರೆಯುತ್ತ ತಲೆಬಾಗಿ ನಿಂತಳು. ವಿಪ್ರರೆ! ವಿಶ್ರವಸ್ಸು ಕೃಶಾಂಗಿಯಾದ ಕೈಕಸಿಯನ್ನು ಕಂಡು ಮುಗುಳ್ನಗೆಯಿಂದ ಇಂತೆಂದನು:

ವಿಶ್ರವಾ ಉವಾಚ :–

ಶೋಭನೇ ಕಸ್ಯ ಪುತ್ರೀ ತ್ವಂ ಕುತೋ ವಾ ತ್ವಮಿಹಾಗತಾ ॥ ೨೨ ॥
ಕಾರ್ಯಂ ಕಿಂ ವಾ ತ್ವಮುದ್ದಿಶ್ಯ ವರ್ತಸೇಽತ್ರ ಶುಚಿಸ್ಮಿತೇ ।
ಯಥಾರ್ಥತೋ ವದಸ್ವಾಽದ್ಯ ಮಮ ಸರ್ವಮನಿಂದಿತೇ ॥ ೨೩ ॥
ಇತೀರಿತಾ ಕೈಕಸೀ ಸಾ ಕನ್ಯಾ ಬದ್ಧಾಽಂಜಲಿರ್ದ್ವಿಜಾಃ ।
ಉವಾಚ ತಂ ಮುನಿಂ ಪ್ರಹ್ವಾ ವಿನಯೇನ ಸಮನ್ವಿತಾ ॥ ೨೪ ॥
ತಪಃಪ್ರಭಾವೇನ ಮುನೇ ಮದಭಿಪ್ರಾಯಮದ್ಯತು ।
ವೇತ್ತುಮರ್ಹಸಿ ಸಮ್ಯಕ್ತ್ವಂ ಪುಲಸ್ತ್ಯಕುಲದೀಪನ ॥ ೨೫ ॥
ಅಹಂ ತು ಕೈಕಸೀನಾಮ ಸುಮಾಲಿದುಹಿತಾ ಮುನೇ ।
ಮತ್ತಾತಸ್ಯಾಜ್ಞಯಾ ಬ್ರಹ್ಮಂಸ್ತವಾಽಂತಿಕಮುಪಾಗತಾ ॥ ೨೬ ॥
ಶೇಷಂ ತ್ವಂ ಜ್ಞಾನದೃಷ್ಟ್ಯಾಽದ್ಯ ಜ್ಞಾತುಮರ್ಹಸ್ಯಸಂಶಯಃ ।
ಕ್ಷಣಂ ಧ್ಯಾತ್ವಾ ಮುನಿಃ ಪ್ರಾಹ ವಿಶ್ರವಾಃ ಸ ತು ಕೈಕಸೀಂ ॥ ೨೭ ॥
ಮಯಾ ತೇ ವಿದಿತಂ ಸುಭ್ರೂರ್ಮನೋಗತಮಭೀಪ್ಸಿತಂ ।
ಪುತ್ರಾಽಭಿಲಾಷಿಣೀ ಸಾ ತ್ವಂ ಮಾಮಗಾಃ ಸಾಂಪ್ರತಂ ಶುಭೇ ॥ ೨೮ ॥
ಸಾಯಂಕಾಲೇಽಧುನಾ ಕ್ರೂರೇ ಯಸ್ಮಾನ್ಮಾಂತ್ವಮುಪಾಗತಾ ।
ಪುತ್ರಾಽಭಿಲಾಷಿಣೀಭೂತ್ವಾ ತಸ್ಮಾತ್ವಾಂ ಪ್ರಬ್ರವೀಮ್ಯಹಂ ॥ ೨೯ ॥

---

೨೨–೨೩. "ಎಲೌ ಮಂಗಳಕರಳೆ! ನೀನು ಯಾರ ಮಗಳು? ಇಲ್ಲಿಗೆ ಏಕೆ ಬಂದೆ? ಯಾವ ಕಾರ್ಯವನ್ನು ಉದ್ದೇಶಿಸಿ ಇಲ್ಲಿ ನಿಂತಿರುವೆ? ಈಗ ಎಲ್ಲವನ್ನೂ ನಿಜವಾಗಿ ಹೇಳು."

೨೪. ಎಲೈ ಬ್ರಾಹ್ಮಣರೆ! ವಿಶ್ರವಸ್ಸು ಹೀಗೆ ಹೇಳಲು ಆ ಕೈಕಸಿಯು ಕೈಮುಗಿದುಕೊಂಡು ನಮ್ರತೆಯಿಂದ ಅವನನ್ನು ಕುರಿತು ಹೀಗೆಂದಳು:

೨೫–೨೬. "ಪುಲಸ್ತ್ಯನ ವಂಶಕ್ಕೆ ದೀಪದಂತಿರುವ ಎಲೈ ಮುನಿಯೆ! ನೀನು ತಪಸ್ಸಿನ ಸಾಮರ್ಥ್ಯದಿಂದ ನನ್ನ ಅಭಿಪ್ರಾಯವನ್ನು ಚೆನ್ನಾಗಿ ತಿಳಿಯಲು ಅರ್ಹನಾಗಿದ್ದೀಯೆ. ನಾನು ಸುಮಾಲಿಯ ಮಗಳಾದ ಕೈಕಸಿಯೆಂಬವಳು. ನನ್ನ ತಂದೆಯ ಆಜ್ಞೆಯಿಂದ ನಿನ್ನ ಬಳಿಗೆ ಬಂದಿರುವೆನು.

೨೭–೨೮. ಉಳಿದ ವಿಷಯವನ್ನುನೀನು ಜ್ಞಾನದೃಷ್ಟಿಯಿಂದ ತಿಳಿಯಲರ್ಹನಾಗಿದ್ದೀಯೆ." ಆ ವಿಶ್ರವಸ್ಸು ಕ್ಷಣಕಾಲ ಆಲೋಚಿಸಿ ಕೈಕಸಿಯನ್ನು ಕುರಿತು ಇಂತೆಂದನು: "ಎಲೌ ಮಂಗಳಕರಳೆ! ಈಗ ನಾನು ನಿನ್ನ ಅಭೀಪ್ಸಿತವನ್ನರಿತೆನು. ನೀನು ಮಕ್ಕಳನ್ನು ಪಡೆಯಲೋಸುಗ ನನ್ನ ಹತ್ತಿರ ಬಂದಿರುವೆ.

೨೯. ಎಲೌ ಕ್ರೂರಳೆ! ನೀನು ಈ ಸಾಯಂಕಾಲದಲ್ಲಿ ನನ್ನೆಡೆಗೆ ಪುತ್ರಾಭಿಲಾಷೆಯಿಂದ ಬಂದಿರುವುದರಿಂದ ನಾನು ನಿನಗೆ ಹೀಗೆ ಹೇಳುವೆನು.

ಶ್ರುಣುಷ್ವಾವಹಿತಾ ರಾಮೇ ಕೈಕಸಿ ತ್ವಮನಿಂದಿತೇ ।
ದಾರುಣಾನ್ದಾರುಣಾಕಾರಾನ್ದಾರುಣಾಭಿಜನಪ್ರಿಯಾನ್ ।
ಜನಯಿಷ್ಯಸಿ ಪುತ್ರಾಂಸ್ತ್ವಂ ರಾಕ್ಷಸಾನ್ಕ್ರೂರಕರ್ಮಣಃ ॥ ೩೦ ॥
ಶ್ರುತ್ವಾ ತದ್ವಚನಂ ಸಾ ತು ಕೈಕಸೀ ಪ್ರಣಿಪತ್ಯ ತಂ ॥ ೩೧ ॥
ಪುಲಸ್ತ್ಯತನಯಂ ಪ್ರಾಹ ಕೃತಾಂಜಲಿಪುಟಾ ದ್ವಿಜಾಃ ।
ಭಗವನ್ನೀದೃಶಾಃ ಪುತ್ರಾಸ್ತ್ವತ್ತಃ ಪ್ರಾಪ್ತುಂ ನ ಯುಜ್ಯತೇ ॥ ೩೨ ॥
ಇತ್ಯುಕ್ತಃ ಸ ಮುನಿಃ ಪ್ರಾಹ ಕೈಕಸೀಂ ತಾಂ ಸುಮಧ್ಯಮಾಂ ।
ಮದ್ವಂಶಾನುಗುಣಃ ಪುತ್ರಃ ಪಶ್ಚಿಮಸ್ತೇ ಭವಿಷ್ಯತಿ ॥ ೩೩ ॥
ಧಾರ್ಮಿಕಃ ಶಾಸ್ತ್ರವಿಚ್ಛಾಂತೋ ನ ತು ರಾಕ್ಷಸಚೇಷ್ಟಿತಃ ।
ಇತ್ಯುಕ್ತಾ ಕೈಕಸೀ ವಿಪ್ರಾಃ ಕಾಲೇ ಕತಿಪಯೇ ಗತೇ ॥ ೩೪ ॥
ಸುಷುವೇ ತನಯಂ ಕ್ರೂರಂ ರಕ್ಷೋರೂಪಂ ಭಯಂಕರಂ ।
ದ್ವಿಪಂಚಶೀರ್ಷಂ ಕುಮತಿಂ ವಿಂಶದ್ಬಾಹುಂ ಭಯಾನಕಂ ॥ ೩೫ ॥
ತಾಮ್ರೋಷ್ಠಕೃಷ್ಣವದನಂ ರಕ್ತಶ್ಮಶ್ರುಶಿರೋರುಹಂ ।
ಮಹಾದಂಷ್ಟ್ರಂ ಮಹಾಕಾಯಂ ಲೋಕತ್ರಾಸಕರಂ ಸದಾ ॥ ೩೬ ॥

---

೩೦. ನೀನು ಸಾವಧಾನಮನಸ್ಸಿನಿಂದ ಕೇಳು. ನೀನು ಭಯಂಕರರೂ, ಭಯಂಕರಾಕೃತಿಯುಳ್ಳವರೂ, ಭಯಂಕರವಂಶದಲ್ಲಿ ಹುಟ್ಟಿದವರಲ್ಲಿ ಪ್ರೀತಿಯುಳ್ಳವರೂ, ಕ್ರೂರಕರ್ಮಗಳನ್ನಾಚರಿಸುವವರೂ ಆದ ರಾಕ್ಷಸರನ್ನು ಪಡೆಯುವೆ.''

೩೧–೩೨. ಕೈಕಸಿಯು ಆ ಮಾತನ್ನು ಕೇಳಿ ಅವನನ್ನು ಕುರಿತು ನಮಸ್ಕಾರಪೂರ್ವಕವಾಗಿ ಕೈಮುಗಿದುಕೊಂಡು ಇಂತೆಂದಳು: "ಪೂಜ್ಯನೆ! ನಿನ್ನಿಂದ ನನಗೆ ಇಂತಹ ಮಕ್ಕಳಾಗದಿರಲಿ. ಇದು ಉಚಿತವಲ್ಲ.''

೩೩–೩೬. ಕೈಕಸಿಯು ಹೀಗೆನ್ನಲು, ಆ ಮುನಿಯು ಅವಳನ್ನು ಕುರಿತು, "ನಿನಗೆ ಕೊನೆಯಲ್ಲಿ ನನ್ನ ವಂಶಕ್ಕೆ ಸರಿಯಾದವನೂ, ಧರ್ಮಿಷ್ಠನೂ, ಶಾಸ್ತ್ರಜ್ಞನೂ, ಶಾಂತನೂ, ರಾಕ್ಷಸರ ವೃತ್ತಿಯಿಲ್ಲದವನೂ ಆದ ಮಗನು ಜನಿಸುವನು'' ಎಂದು ಹೇಳಲು, ಕೈಕಸಿಯು ಕೆಲವುಕಾಲದಮೇಲೆ ರಾಕ್ಷಸಸ್ವರೂಪನೂ, ಭಯಂಕರನೂ, ಹತ್ತುತಲೆಯುಳ್ಳವನೂ, ದುರ್ಬುದ್ಧಿಯುಳ್ಳವನೂ, ಇಪ್ಪತ್ತು ತೋಳುಗಳುಳ್ಳವನೂ, ಕೆಂಪುತುಟಿಯುಳ್ಳವನೂ, ಕಪ್ಪುಮುಖದವನೂ, ಕೆಂಪುಮೀಸೆ ತಲೆಗೂದಲುಗಳುಳ್ಳವನೂ, ದೊಡ್ಡ ಹಲ್ಲುಶರೀರಗಳುಳ್ಳವನೂ, ಯಾವಾಗಲೂ ಲೋಕಗಳನ್ನು ಹೆದರಿಸುವವನೂ ಆದ ಮಗನನ್ನು ಹೆತ್ತಳು.

ದಶಗ್ರೀವಾಽಭಿಧಃ ಸೋಽಭೂತ್ತಥಾ ರಾವಣನಾಮವಾನ್ ।
ರಾವಣಾಽನಂತರಂ ಜಾತಃ ಕುಂಭಕರ್ಣಾಽಭಿಧಃ ಸುತಃ ॥ ೩೭ ॥
ತತಃ ಶೂರ್ಪಣಖಾ ನಾಮ್ನಾ ಕ್ರೂರಾ ಜಜ್ಞೇ ಚ ರಾಕ್ಷಸೀ ।
ತತೋ ಬಭೂವ ಕೈಕಸ್ಯಾ ವಿಭೀಷಣ ಇತಿ ಶ್ರುತಃ ॥ ೩೮ ॥
ಪಶ್ಚಿಮಸ್ತನಯೋ ಧೀಮಾನ್ಧಾರ್ಮಿಕೋ ವೇದಶಾಸ್ತ್ರವಿತ್ ।
ಏತೇ ವಿಶ್ರವಸಃ ಪುತ್ರಾ ದಶಗ್ರೀವಾದಯೋ ದ್ವಿಜಾಃ ॥ ೩೯ ॥
ಅತೋ ದಶಗ್ರೀವವಧಾತ್ಕುಂಭಕರ್ಣವಧಾದಪಿ ।
ಬ್ರಹ್ಮಹತ್ಯಾ ಸಮಭವದ್ರಾಮಸ್ಯಾಕ್ಲಿಷ್ಟಕರ್ಮಣಃ ॥ ೪೦ ॥
ಅತಸ್ತಚ್ಛಾಂತಯೇ ರಾಮೋ ಲಿಂಗಂ ರಾಮೇಶ್ವರಾಽಭಿಧಂ ।
ಸ್ಥಾಪಯಾಮಾಸ ವಿಧಿನಾ ವೈದಿಕೇನ ದ್ವಿಜೋತ್ತಮಾಃ ॥ ೪೧ ॥
ಏವಂ ರಾವಣಘಾತೇನ ಬ್ರಹ್ಮಹತ್ಯಾ ಸಮುದ್ಭವಃ ।
ಸಮಭೂದ್ರಾಮಚಂದ್ರಸ್ಯ ಲೋಕಕಾಂತಸ್ಯ ಧೀಮತಃ ॥ ೪೨ ॥
ತತ್ಸಹೈತುಕಮಾಖ್ಯಾತಂ ಭವತಾಂ ಬ್ರಹ್ಮಘಾತಜಂ ।
ಪಾಪಂ ಯಚ್ಛಾಂತಯೇ ರಾಮೋ ಲಿಂಗಂ ಪ್ರಾಽತಿಷ್ಠಿಪತ್ಸ್ವಯಂ ॥ ೪೩ ॥
ಏವಂ ಲಿಂಗಂ ಪ್ರತಿಷ್ಠಾಪ್ಯ ರಾಮಚಂದ್ರೋಽತಿಧಾರ್ಮಿಕಃ ।
ಮೇನೇ ಕೃತಾರ್ಥಮಾತ್ಮಾನಂ ಸಸೀತಾವರಜೋ ದ್ವಿಜಾಃ ॥ ೪೪ ॥

---

೩೭. ಅವನು ದಶಗ್ರೀವರಾವಣ ಎಂದು ಹೆಸರುಗೊಂಡನು. ರಾವಣನ ತರುವಾಯ ಕುಂಭಕರ್ಣನೆಂಬ ತನಯನು ಜನಿಸಿದನು.

೩೮–೩೯. ಬಳಿಕ ಕ್ರೂರಳಾದ ಶೂರ್ಪಣಖಿಯೆಂಬ ರಾಕ್ಷಸಿಯು ಹುಟ್ಟಿದಳು. ಕೊನೆಯಲ್ಲಿ ಬುದ್ಧಿಶಾಲಿಯೂ, ಧರ್ಮಿಷ್ಠನೂ, ವೇದಶಾಸ್ತ್ರಗಳನ್ನರಿತವನೂ ಆದ ವಿಭೀಷಣನೆಂಬ ತನಯನು ಜನಿಸಿದನು. ಈ ದಶಗ್ರೀವನೇ ಮೊದಲಾದವರು ವಿಶ್ರವಸ್ಸಿನ ಮಕ್ಕಳು.

೪೦. ಈ ರಾವಣ ಕುಂಭಕರ್ಣರನ್ನು ರಾಮನು ಕೊಂದುದರಿಂದ ಸತ್ಕರ್ಮನಿರತನಾದ ಅವನಿಗೆ ಬ್ರಹ್ಮಹತ್ಯೆಯು ಸಂಭವಿಸಿತು.

೪೧–೪೨. ಎಲೈ ದ್ವಿಜವರ್ಯರೆ! ಆದ್ದರಿಂದಲೆ ರಾಮನು ಆ ಬ್ರಹ್ಮಹತ್ಯೆಯ ಶಾಂತಿಗಾಗಿ ರಾಮೇಶ್ವರಲಿಂಗವನ್ನು ವೇದೋಕ್ತವಿಧಿಯಿಂದ ಪ್ರತಿಷ್ಠೆ ಮಾಡಿದನು. ಹೀಗೆ ಲೋಕಮನೋಹರನೂ, ಬುದ್ಧಿವಂತನೂ ಆದ ರಾಮನಿಗೆ ರಾವಣನ ವಧೆಯಿಂದ ಬ್ರಹ್ಮಹತ್ಯೆಯು ಉಂಟಾಯಿತು.

೪೩–೪೪. ಎಲೈ ಮುನಿಗಳೇ! ಈ ಬ್ರಹ್ಮಹತ್ಯೆಯ ನಿವಾರಣೆಗಾಗಿ ರಾಮನು ರಾಮನಾಥಲಿಂಗವನ್ನು ಸ್ಥಾಪಿಸಿದನೆಂಬ ಸಂಗತಿಯನ್ನು ಸಕಾರಣವಾಗಿ ನಿಮಗೆ ಹೇಳಿರುವೆನು. ಅಯ್ಯಾಬ್ರಾಹ್ಮಣರೆ! ಅತಿ ಧರ್ಮಿಷ್ಠನಾದ ರಾಮನು ಹೀಗೆ ಲಿಂಗವನ್ನುಪ್ರತಿಷ್ಠೆಮಾಡಿ ಸೀತಾಲಕ್ಷ್ಮಣರೊಡನೆ ತಾನು ಧನ್ಯನಾದೆನೆಂದು ತಿಳಿದನು.

ಬ್ರಹ್ಮಹತ್ಯಾ ಗತಾ ಯತ್ರ ರಾಮಚಂದ್ರಸ್ಯ ಭೂಪತೇಃ ।
ತತ್ರ ತೀರ್ಥಮಭೂತ್ಕಿಂಚಿದ್ಬ್ರಹ್ಮಹತ್ಯಾವಿಮೋಚನಂ ॥ ೪೫ ॥
ತತ್ರ ಸ್ನಾನಂ ಮಹಾಪುಣ್ಯಂ ಬ್ರಹ್ಮಹತ್ಯಾವಿನಾಶನಂ ।
ದೃಶ್ಯತೇ ರಾವಣೋಽದ್ಯಾಪಿ ಛಾಯಾರೂಪೇಣ ತತ್ರ ವೈ ॥ ೪೬ ॥
ತದಗ್ರೇ ನಾಗಲೋಕಸ್ಯ ಬಿಲಮಸ್ತಿ ಮಹತ್ತರಂ ।
ದಶಗ್ರೀವವಧೋತ್ಪನ್ನಾಂ ಬ್ರಹ್ಮಹತ್ಯಾಂ ಬಲೀಯಸೀಂ ॥ ೪೭ ॥
ತದ್ಬಿಲಂ ಪ್ರಾಪಯಾಮಾಸ ಜಾನಕೀರಮಣೋ ದ್ವಿಜಾಃ ।
ತಸ್ಯೋಪರಿ ಬಿಲಸ್ಯಾಽಥ ಕೃತ್ವಾ ಮಂಡಪಮುತ್ತಮಂ ॥ ೪೮ ॥
ಭೈರವಂ ಸ್ಥಾಪಯಾಮಾಸ ರಕ್ಷಾರ್ಥಂ ತತ್ರ ರಾಘವಃ ।
ಭೈರವಾಜ್ಞಾಪರಿತ್ರಸ್ತಾ ಬ್ರಹ್ಮಹತ್ಯಾ ಭಯಂಕರೀ ॥ ೪೯ ॥
ನಾಽಶಕ್ನೋತ್ತದ್ಬಿಲಾದೂರ್ಧ್ವಂ ನಿರ್ಗಂತುಂ ದ್ವಿಜಸತ್ತಮಾಃ ।
ತಸ್ಮಿನ್ನೇವ ಬಿಲೇ ತಸ್ಥೌ ಬ್ರಹ್ಮಹತ್ಯಾನಿರುದ್ಯಮಾ ॥ ೫೦ ॥
ರಾಮನಾಥಮಹಾಲಿಂಗಂ ದಕ್ಷಿಣೇ ಗಿರಿಜಾ ಮುದಾ ।
ವರ್ತತೇ ಪರಮಾನಂದಶಿವಸ್ಯಾಽರ್ಧಶರೀರಿಣೀ ॥ ೫೧ ॥
ಆದಿತ್ಯಸೋಮೌ ವರ್ತೇತೇ ಪಾರ್ಶ್ವಯೋಸ್ತತ್ರ ಶೂಲಿನಃ ।
ದೇವಸ್ಯ ಪುರತೋ ವಹ್ನೀ ರಾಮನಾಥಸ್ಯ ವರ್ತತೇ ॥ ೫೨ ॥

---

೪೫. ಅಲ್ಲಿ ಶ್ರೀರಾಮಚಂದ್ರನನ್ನು ಮುತ್ತಿದ್ದ ಬ್ರಹ್ಮಹತ್ಯೆಯು ಪರಿಹಾರವಾದುದರಿಂದ ಅದೊಂದು ಬ್ರಹ್ಮಹತ್ಯಾಪಾಪವನ್ನು ನೀಗಿಸುವ ತೀರ್ಥವಾಯಿತು.

೪೬. ಅಲ್ಲಿ ಮಿಂದರೆ ಅತಿಶಯಪುಣ್ಯವುಂಟಾಗಿ ಬ್ರಹ್ಮಹತ್ಯೆಯು ಪರಿಹಾರವಾಗುವುದು. ಅಲ್ಲಿ ಈಗಲೂ ರಾವಣನು ನೆರಳಿನ ರೂಪದಿಂದ ಕಾಣುತ್ತಾನೆ.

೪೭–೫೦. ಅದರ ಮೇಲ್ಭಾಗದಲ್ಲಿ ನಾಗಲೋಕದ ದೊಡ್ಡ ಬಿಲವಿದೆ. ಸೀತಾಪತಿಯು ರಾವಣನ ವಧೆಯಿಂದುಂಟಾದ ಬಲಿಷ್ಠವಾದ ಬ್ರಹ್ಮಹತ್ಯೆಯನ್ನು ಆ ಬಿಲದಲ್ಲಿ ಪ್ರವೇಶಗೊಳಿಸಿದನು. ಆ ಬಿಲದಮೇಲೆ ಉತ್ತಮ ಮಂಡಪವನ್ನು ನಿರ್ಮಿಸಿ ರಕ್ಷಣೆಗಾಗಿ ಭೈರವನನ್ನು ಸ್ಥಾಪಿಸಿದನು. ಭಯಂಕರವಾದ ಆ ಬ್ರಹ್ಮಹತ್ಯೆಯು ಭೈರವನ ಆಜ್ಞೆಯಿಂದ ಹೆದರಿ ಆ ಬಿಲದಿಂದ ಮೇಲಕ್ಕೆ ಬರಲು ಸಮರ್ಥವಾಗಲಿಲ್ಲ. ಅದು ತನ್ನ ಪ್ರಯತ್ನವು ಏನೂ ಸಾಗದೆ ಅದೇ ಬಿಲದಲ್ಲಿ ಇದ್ದಿತು.

೫೧. ರಾಮನಾಥಲಿಂಗದ ಬಲಗಡೆಯಲ್ಲಿ ಆನಂದರೂಪಿಣಿಯಾದ ಶಿವನ ಅರ್ಧಾಂಗಿ ಗಿರಿಜೆಯು ನೆಲೆಸಿರುವಳು.

೫೨. ರಾಮೇಶ್ವರನ ಎರಡು ಪಾರ್ಶ್ವಗಳಲ್ಲಿಯೂ ಸೂರ್ಯಚಂದ್ರರೂ, ಮುಂದೆ ಅಗ್ನಿಯೂ ಇರುವರು.

ಆಸ್ತೇ ಶತಕ್ರತುಃ ಪ್ರಾಚ್ಯಾಮಾಗ್ನೇಯ್ಯಾಂ ಚ ತಥಾಽನಲಃ ।
ಆಸ್ತೇ ಯಮೋ ದಕ್ಷಿಣಸ್ಯಾಂ ರಾಮನಾಥಸ್ಯ ಸೇವಕಃ ॥ ೫೩ ॥
ನೈರ್ಋತೇ ನಿರ್ಋತಿರ್ವಿಪ್ರಾ ವರ್ತತೇ ಶಂಕರಸ್ಯ ತು ।
ವಾರುಣ್ಯಾಂ ವರುಣೋ ಭಕ್ತ್ಯಾ ಸೇವತೇ ರಾಘವೇಶ್ವರಂ ॥ ೫೪ ॥
ವಾಯವ್ಯೇ ತು ದಿಶೋಭಾಗೇ ವಾಯುರಾಸ್ತೇ ಶಿವಸ್ಯ ತು ।
ಉತ್ತರಸ್ಯಾಂ ಚ ಧನದೋ ರಾಮನಾಥಸ್ಯ ವರ್ತತೇ ॥ ೫೫ ॥
ಈಶಾನ್ಯೇಽಸ್ಯ ಚ ದಿಗ್ಭಾಗೇ ಮಹೇಶೋ ವರ್ತತೇ ದ್ವಿಜಾಃ ।
ವಿನಾಯಕಕುಮಾರೌ ಚ ಮಹಾದೇವಸುತಾವುಭೌ ॥ ೫೬ ॥
ಯಥಾಪ್ರದೇಶಂ ವರ್ತಂತೇ ರಾಮನಾಥಾಲಯೇಽಧುನಾ ।
ವೀರಭದ್ರಾದಯಃ ಸರ್ವೇ ಮಹೇಶ್ವರಗಣೇಶ್ವರಾಃ ॥ ೫೭ ॥
ಯಥಾಪ್ರದೇಶಂ ವರ್ತಂತೇ ರಾಮನಾಥಾಲಯೇ ಸದಾ ।
ಮುನಯಃ ಪನ್ನಗಾಃ ಸಿದ್ಧಾಃ ಗಂಧರ್ವಾಽಪ್ಸರಸಾಂ ಗಣಾಃ ॥ ೫೮ ॥
ಸಂತುಷ್ಯಮಾಣಹೃದಯಾ ಯಥೇಷ್ಟಂ ಶಿವಸನ್ನಿಧೌ ।
ವರ್ತಂತೇ ರಾಮನಾಥಸ್ಯ ಸೇವಾರ್ಥಂ ಭಕ್ತಿಪೂರ್ವಕಂ ॥ ೫೯ ॥
ರಾಮನಾಥಸ್ಯ ಪೂಜಾರ್ಥಂ ಶ್ರೋತ್ರಿಯಾನ್ಬ್ರಾಹ್ಮಣಾನ್ಬಹೂನ್ ।
ರಾಮೇಶ್ವರೇ ರಘುಪತಿಃ ಸ್ಥಾಪಯಾಮಾಸ ಪೂಜಕಾನ್ ॥ ೬೦ ॥
ರಾಮಪ್ರತಿಷ್ಠಿತಾನ್ವಿಪ್ರಾನ್ಹವ್ಯಕವ್ಯಾದಿನಾಽರ್ಚಯೇತ್ ।
ತುಷ್ಟಾಸ್ತೇ ತೋಷಿತಾಃ ಸರ್ವಾ ಪಿತೃಭಿಃ ಸಹ ದೇವತಾಃ ॥ ೬೧ ॥

---

೫೩. ಪೂರ್ವದಿಕ್ಕಿನಲ್ಲಿ ಇಂದ್ರನೂ, ಆಗ್ನೇಯದಲ್ಲಿ ಅಗ್ನಿಯೂ, ದಕ್ಷಿಣದಲ್ಲಿ ಸೇವಕನಾದ ಯಮನೂ ಇರುವರು.

೫೪. ನೈಋತ್ಯದಲ್ಲಿ ನಿರ್ಋತಿಯೂ, ಪಶ್ಚಿಮದಲ್ಲಿ ವರುಣನೂ ಆ ರಾಮೇಶ್ವರನನ್ನು ಭಕ್ತಿಯಿಂದ ಸೇವಿಸುತ್ತಿರುತ್ತಾರೆ.

೫೫–೫೯. ವಾಯುವ್ಯದಲ್ಲಿ ವಾಯುವೂ, ಉತ್ತರದಲ್ಲಿ ಕುಬೇರನೂ, ಈಶಾನ್ಯದಲ್ಲಿ ಈಶ್ವರನೂ ಇರುವರು. ಮಹೇಶ್ವರನ ಪುತ್ರರಾದ ಗಣೇಶ ಕುಮಾರಸ್ವಾಮಿಯವರು ತಮ್ಮತಮ್ಮ ಸ್ಥಳದಲ್ಲಿ ನೆಲಸಿರುವರು. ವೀರಭದ್ರನೇ ಮೊದಲಾದ ಮಹೇಶ್ವರನ ಗಣಗಳೂ ತಮ್ಮತಮ್ಮ ಸ್ಥಾನದಲ್ಲಿರುವುವು. ಮುನಿಗಳು, ಸರ್ಪಗಳು, ಸಿದ್ಧರು, ಗಂಧರ್ವರು, ಅಪ್ಸರಸರು ಸಂತುಷ್ಟರಾಗಿ ಆರಾಮ ಶಿವನ ಬಳಿ ಭಕ್ತಿಯಿಂದ ಸೇವೆ ಸಲ್ಲಿಸುತ್ತಿರುವರು.

೬೦. ರಾಮಚಂದ್ರನು ರಾಮೇಶ್ವರನ ಪೂಜೆಗಾಗಿ ಬಹುಮಂದಿ ಶ್ರೋತ್ರಿಯರಾದ ಬ್ರಾಹ್ಮಣರನ್ನು ಸ್ಥಾಪಿಸಿದನು.

೬೧–೬೪. ರಾಮನು ಸ್ಥಾಪಿಸಿದ ಈ ಬ್ರಾಹ್ಮಣರನ್ನು ಹವ್ಯಕವ್ಯಗಳಿಂದ

ತೇಭ್ಯೋ ಬಹುಧನಾನ್ಗ್ರಾಮಾನ್ಪ್ರದದೌ ಜಾನಕೀಪತಿಃ ।
ರಾಮನಾಥಮಹಾದೇವನೈವೇದ್ಯಾರ್ಥಮಪಿ ದ್ವಿಜಾಃ ॥ ೬೨ ॥
ಬಹೂನ್ಗ್ರಾಮಾನ್ಬಹುಧನಂ ಪ್ರದದೌ ಲಕ್ಷ್ಮಣಾಗ್ರಜಃ ।
ಹಾರಕೇಯೂರಕಟಕನಿಷ್ಕಾದ್ಯಾಭರಣಾನಿಚ ॥ ೬೩ ॥
ಅನೇಕಪಟ್ಟವಸ್ತ್ರಾಣಿ ಕ್ಷೌಮಾಣಿ ವಿವಿಧಾನಿ ಚ ।
ರಾಮನಾಥಾಯ ದೇವಾಯ ದದೌ ದಶರಥಾತ್ಮಜಃ ॥ ೬೪ ॥
ಗಂಗಾ ಚ ಯಮುನಾ ಪುಣ್ಯಾ ಸರಯೂಶ್ಚ ಸರಸ್ವತೀ ।
ಸೇತೌ ರಾಮೇಶ್ವರಂ ದೇವಂ ಭಜಂತೇ ಸ್ವಾಘಶಾಂತಯೇ ॥ ೬೫ ॥
ಏತದಧ್ಯಾಯಪಠನಾಚ್ಛ್ರವಣಾದಪಿ ಮಾನವಾಃ ।
ವಿಮುಕ್ತಃ ಸರ್ವಪಾಪೇಭ್ಯಃ ಸಾಯುಜ್ಯಂ ಲಭತೇ ಹರೇಃ ॥ ೬೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ರಾಮಸ್ಯ ಬ್ರಹ್ಮಹತ್ಯೋತ್ಪತ್ತಿ ಹೇತುನಿರೂಪಣಂ"ನಾಮ ಸಪ್ತಚತ್ವಾರಿಂಶೋಽಧ್ಯಾಯಃ

---

ಪೂಜಿಸಬೇಕು. ಆ ಬ್ರಾಹ್ಮಣರು ಸಂತುಷ್ಟರಾದರೆ ಸಕಲ ದೇವತೆಗಳೂ ಪಿತೃಗಳೊಡನೆ ಸಂತುಷ್ಟರಾಗುವರು. ಎಲೈ ದ್ವಿಜರೆ! ರಾಮನು ಆ ಬ್ರಾಹ್ಮಣರಿಗೆ ಬಹಳ ಹಣವನ್ನೂ, ಗ್ರಾಮಗಳನ್ನೂ ಕೊಟ್ಟನು. ರಾಮೇಶ್ವರನ ನೈವೇದ್ಯಕ್ಕಾಗಿ ಬಹು ಗ್ರಾಮಗಳನ್ನೂ, ಹಣಗಳನ್ನೂ ಕೊಟ್ಟನು. ಹಾರ, ಕೇಯೂರ, ನಿಷ್ಕ, ಕಂಕಣವೇ ಮೊದಲಾದ ಒಡವೆಗಳನ್ನೂ, ಅನೇಕ ಪಟ್ಟುವಸ್ತ್ರಗಳನ್ನೂ, ರೇಷ್ಮೆಯ ತೆಳುಬಟ್ಟೆಗಳನ್ನೂ ಕೊಟ್ಟನು.

೬೫. ಪವಿತ್ರವಾದ ಗಂಗೆ, ಯಮುನೆ, ಸರಯೂ, ಸರಸ್ವತೀ ನದಿಗಳು ಈ ಸೇತುವೆಯಲ್ಲಿ ತಮ್ಮ ಪಾಪಶಾಂತಿಗಾಗಿ ರಾಮೇಶ್ವರನನ್ನು ಸೇವಿಸುತ್ತಿವೆ.

೬೬. ಈ ಅಧ್ಯಾಯವನ್ನು ಪಠಿಸಿದವನೂ, ಕೇಳಿದವನೂ ಸಕಲ ಪಾಪ ಮುಕ್ತನಾಗಿ ಹರಿಯ ಸಾಯುಜ್ಯವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ರಾಮನಿಗೆ ಬ್ರಹ್ಮಹತ್ಯೋತ್ಪತ್ತಿ ಹೇತುನಿರೂಪಣ"ವೆಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾ ಅಷ್ಟಚತ್ವಾರಿಂಶೋಽಧ್ಯಾಯಃ

### ಶಾಕಲ್ಯದುರ್ಮರಣದೋಷಶಾಂತಿಪೂರ್ವಕ ಶಂಕರಸ್ತ್ರೀಹತ್ಯಾ ಬ್ರಹ್ಮಹತ್ಯಾದೋಷ ಶಾಂತಿವರ್ಣನಂ

ಶ್ರೀಸೂತ ಉವಾಚ :—

ರಾಮನಾಥಂ ಸಮುದ್ದಿಶ್ಯ ಕಥಾಂ ಪಾಪವಿನಾಶಿನೀಂ ।
ಪ್ರವಕ್ಷ್ಯಾಮಿ ಮುನಿಶ್ರೇಷ್ಠಾಃ ಶೃಣುಧ್ವಂ ಸುಸಮಾಹಿತಾಃ ॥ ೧ ॥
ಪಾಂಡ್ಯದೇಶಾಽಧಿಪೋ ರಾಜಾ ಪುರಾಸೀಚ್ಛಂಕರಾಽಭಿಧಃ ।
ಬ್ರಹ್ಮಣ್ಯಃ ಸತ್ಯಸಂಧಶ್ಚ ಯಾಯಜೂಕಶ್ಚ ಧಾರ್ಮಿಕಃ ॥ ೨ ॥
ವೇದವೇದಾಂಗತತ್ವಜ್ಞಃ ಪರಸೈನ್ಯವಿದಾರಣಃ ।
ಚತುರೋಽಪ್ಯಾಶ್ರಮಾನ್ವರ್ಣಾನ್ಧರ್ಮತಃ ಪರಿಪಾಲಯನ್ ॥ ೩ ॥
ವೈದಿಕಾಚಾರನಿರತಃ ಪುರಾಣಸ್ಮೃತಿಪಾರಗಃ ।
ಶಿವವಿಷ್ಣ್ವರ್ಚಕೋ ನಿತ್ಯಮನ್ಯದೈವತಪೂಜಕಃ ॥ ೪ ॥
ಮಹಾದಾನಪ್ರದೋ ನಿತ್ಯಂ ಬ್ರಾಹ್ಮಣಾನಾಂ ಮಹಾತ್ಮನಾಂ ।
ಮೃಗಯಾರ್ಥಂ ಯಯೌ ಧೀಮಾನ್ಸ ಕದಾಚಿತ್ತಪೋವನಂ ॥ ೫ ॥

---

## ಕನ್ನಡದ ಅನುವಾದ

### ಶಾಕಲ್ಯದುರ್ಮರಣದೋಷಶಾಂತಿಪೂರ್ವಕ ಶಂಕರಸ್ತ್ರೀಹತ್ಯಾ ಬ್ರಹ್ಮಹತ್ಯಾದೋಷ ಶಾಂತಿವರ್ಣನ

೧. ಎಲೈ ಮುನಿವರ್ಯರೆ! ರಾಮನಾಥನನ್ನು ಉದ್ದೇಶಿಸಿ ಪಾಪನಾಶಕವಾದ ಒಂದು ಕಥೆಯನ್ನು ಹೇಳುವೆನು. ಸಾವಧಾನಮನಸ್ಸಿನಿಂದ ಕೇಳಿರಿ.

೨–೫. ಹಿಂದೆ ಬ್ರಹ್ಮನಿಷ್ಠನೂ, ಸತ್ಯಸಂಧನೂ, ಸೋಮಯಾಜಿಯೂ, ಧರ್ಮಿಷ್ಠನೂ, ವೇದವೇದಾಂಗಗಳ ತತ್ವವನ್ನರಿತವನೂ, ಶತ್ರುಸೈನ್ಯನಾಶಕನೂ, ನಾಲ್ಕೂ ಆಶ್ರಮದ ಜನರನ್ನು ಧರ್ಮದಿಂದ ಪಾಲಿಸುವವನೂ, ವೇದೋಕ್ತಾಚಾರದಲ್ಲಿ ಆಸಕ್ತನೂ, ಪುರಾಣ, ಸ್ಮೃತಿಗಳನ್ನು ಸಂಪೂರ್ಣವಾಗಿ ಓದಿದವನೂ, ಹರಿಹರರನ್ನೂ ಇತರ ದೇವತೆಗಳನ್ನೂ ಅರ್ಚಿಸುವವನೂ, ಮಹಾತ್ಮರಾದ ಬ್ರಾಹ್ಮಣರಿಗೆ ಯಾವಾಗಲೂ ಆನಂದದಾಯಕನೂ ಆದ ಶಂಕರನೆಂಬ ಪಾಂಡ್ಯದೇಶದ ಅರಸನಿದ್ದನು. ಬುದ್ಧಿವಂತನಾದ ಅವನು ಒಂದಾನೊಂದು ದಿನ ಬೇಟೆಗಾಗಿ ತಪೋವನಕ್ಕೆ ತೆರಳಿದನು.

ಸಿಂಹವ್ಯಾಘ್ರೇಭಮಹಿಷಕ್ರೂರಸತ್ವಭಯಂಕರಂ ।
ಝಿಲ್ಲಿಕಾಭೀಷಣರವಂ ಸರೀಸೃಪಸಮಾಕುಲಂ ॥ ೬ ॥
ಭೀಮಶ್ವಾಪದಸಂಪೂರ್ಣಂ ದಾವಾನಲಭಯಂಕರಂ ।
ಮಹಾರಣ್ಯಂ ಪ್ರವಿಶ್ಯಾಥ ಶಂಕರೋ ರಾಜಶೇಖರಃ ॥ ೭ ॥
ಅನೇಕಸೈನಿಕೋಪೇತ ಆಖೇಟಿಕುಲಸಂಕುಲಃ ।
ಪಾದುಕಾಗೂಢಚರಣೋ ರಕ್ತೋಷ್ಣೀಷೋ ಹರಿಚ್ಛದಃ ॥ ೮ ॥
ಬದ್ಧಗೋಧಾಂಗುಲಿತ್ರಾಣೋ ಧೃತಕೋದಂಡಸಾಯಕಃ ।
ಕಕ್ಷ್ಯಾಬದ್ಧಮಹಾಖಡ್ಗಃ ಶ್ವೇತಾಶ್ವವರಮಾಸ್ಥಿತಃ ॥ ೯ ॥
ಸುವೇಷಧಾರೀ ಸನ್ನದ್ಧಃ ಪತ್ತಿಸಂಘಸಮಾವೃತಃ ।
ಕಾಂತಾರೇಷು ಚ ರಮ್ಯೇಷು ಪರ್ವತೇಷು ಗುಹಾಸು ಚ ॥ ೧೦ ॥
ಸಮುತ್ತೀರ್ಣಮಹಾಸ್ರೋತಾ ಯುವಾ ಸಿಂಹಪರಾಕ್ರಮಃ ।
ವಿಚಚಾರ ಬಲೈಃ ಸಾಕಂ ದರೀಷು ಮೃಗಯನ್ಮೃಗಾನ್ ॥ ೧೧ ॥
ಬಧ್ಯತಾಂ ಬಧ್ಯತಾಮೇಷ ಯಾತಿ ವೇಗಾನ್ಮೃಗೋ ವನೇ ।
ಏವಂ ವದತ್ಸು ಸೈನ್ಯೇಷು ಸ್ವಯಮುತ್ಪ್ಲುತ್ಯ ಶಂಕರಃ ॥ ೧೨ ॥
ಮೃಗಂ ಹಂತಿ ಮಹಾರಾಜೋ ವಿಗಾಹ್ಯ ವಿಪಿನಸ್ಥಲೀಂ ।
ಸಿಂಹಾನ್ವರಾಹಾನ್ಮಹಿಷಾನ್ಕುಂಜರಾಂಛರಭಾಂಸ್ತಥಾ ॥ ೧೩ ॥

---

೬–೧೧. ಆ ರಾಜನು ಸಿಂಹ, ಹುಲಿ, ಆನೆ, ಕೋಣ ಮೊದಲಾದ ಕ್ರೂರ ಪ್ರಾಣಿಗಳಿಂದ ಭಯಂಕರವೂ, ಝಿಲ್ಲಿಕೆ ಹುಳುಗಳ ಭಯಂಕರ ಶಬ್ದವುಳ್ಳುದೂ, ಸರ್ಪವೇ ಮೊದಲಾದ ಕೀಟಗಳಿಂದ ತುಂಬಿದುದೂ, ಕಾಳ್ಕಿಚ್ಚಿನಿಂದ ಘೋರವಾದುದೂ ಆದ ಆ ದೊಡ್ಡ ಕಾಡನ್ನು ಹೊಕ್ಕು ಬಹು ಸೈನ್ಯಗಳಿಂದ ಕೂಡಿ, ಬೇಟೆಗಾರರ ಗುಂಪಿನಿಂದ ವ್ಯಾಪ್ತನಾಗಿ, ಪಾದರಕ್ಷೆಗಳಿಂದ ಮುಚ್ಚಿದ ಕಾಲುಳ್ಳವನೂ, ಕೆಂಪು ರುಮಾಲುಳ್ಳವನೂ, ಹಸುರು ಹೊದ್ದಿಕೆಯುಳ್ಳವನೂ, ಗೋಧಾಮೃಗದ (ಉದ) ತೊಗಲಿನಿಂದಾದ ಬೆರಳ ಚೀಲವುಳ್ಳವನೂ, ಬಿಲ್ಲುಬಾಣಗಳನ್ನು ಹಿಡಿದವನೂ, ಸೊಂಟದಲ್ಲಿ ಬಿಗಿದ ಖಡ್ಗವುಳ್ಳವನೂ, ಬಿಳಿಯಕುದುರೆಯನ್ನೇರಿದವನೂ, ಒಳ್ಳೆಯ ಉಡುಪನ್ನು ಧರಿಸಿದವನೂ, ಕಾಲಾಳುಗಳ ಗುಂಪಿನಿಂದ ಕೂಡಿ ಸಿಂಹದಂತೆ ಬಲವುಳ್ಳವನೂ ಆಗಿ ನದಿಗಳನ್ನು ದಾಟಿ, ಕಾಡು, ರಮ್ಯಪರ್ವತ, ಗುಹೆ ಇವುಗಳಲ್ಲಿ ಮೃಗಗಳನ್ನು ಬೇಟೆಯಾಡುತ್ತ ಸಂಚರಿಸಿದನು.

೧೨–೧೩. ಸೈನ್ಯದವರು, "ಈ ಮೃಗವು ವೇಗವಾಗಿ ಓಡುತ್ತಿದೆ. ಕೊಲ್ಲು, ಕೊಲ್ಲು" ಎಂದು ಹೇಳಲು, ಶಂಕರನು ನೆಗೆದು ತಾನೇ ಕಾಡನ್ನು ಹೊಕ್ಕು ಸಿಂಹ, ಹಂದಿ, ಕೋಣ, ಆನೆ, ಶರಭ ಮೊದಲಾದವುಗಳನ್ನು ಕೊಲ್ಲುತ್ತಿದ್ದನು.

ವಿನಿಘ್ನನ್ಸ ಮೃಗಾನನ್ಯಾನ್ಸನ್ಯಾನ್ಸ್ಶಂಕರಭೂಪತಿಃ ।
ಕುತ್ರಚಿದ್ವಿಪಿನೋದ್ದೇಶೇ ದರೀಮಧ್ಯನಿವಾಸಿನಂ ॥ ೧೪ ॥
ವ್ಯಾಘ್ರಚರ್ಮಧರಂ ಶಾಂತಂ ಮುನಿಂ ನಿಯತಮಾನಸಂ ।
ವ್ಯಾಘ್ರಬುಧ್ಯಾ ಜಘಾನಾಶು ಶರೇಣಾನತಪರ್ವಣಾ ॥ ೧೫ ॥
ಅತಿವೇಗೇನ ವಿಪ್ರೇಂದ್ರಾಸ್ತತ್ಪತ್ನೀಂ ಚ ಸಸಾಯಕಃ ।
ನಿಜಘಾನ ಪತಿಪ್ರಾಣಾಂ ನಿವಿಷ್ಟಾಂ ಪತ್ಯುರಂತಿಕೇ ॥ ೧೬ ॥
ವಿಲೋಕ್ಯ ಮಾತಾಪಿತರೌ ತತ್ಪುತ್ರೋ ನಿಹತೌ ವನೇ ।
ರುರೋದ ಭೃಶದುಃಖಾರ್ತೋ ವಿಲಲಾಪ ಚ ಕಾತರಃ ॥ ೧೭ ॥
ಭೋಸ್ತಾತ ಮಾತರ್ಮಾಂ ಹಿತ್ವಾ ಯುವಾಂ ಯಾತೌ ಕ್ವವಾಽಧುನಾ ।
ಅಹಂ ಕುತ್ರ ಗಮಿಷ್ಯಾಮಿ ಕೋ ವಾ ಮೇ ಶರಣಂ ಭವೇತ್ ॥ ೧೮ ॥
ಕೋ ಮಾಮಧ್ಯಾಪಯೇದ್ವೇದಾನ್ಶಾಸ್ತ್ರಂ ವಾ ಪಾಠಯೇತ್ಪಿತಃ ।
ಅಂಬ ಮೇ ಭೋಜನಂ ಕಾ ವಾ ದಾಸ್ಯತೇ ಸೋಪದೇಶಕಂ ॥ ೧೯ ॥
ಆಚಾರಾಶ್ಶಿಕ್ಷಯೇತ್ಕೋ ವಾ ತಾತ ತ್ವಯಿ ಮೃತೇಽಧುನಾ ।
ಅಂಬ ಬಾಲಂ ಪ್ರಕುಪಿತಂ ಕಾ ವಾ ಮಾಮುಪಲಾಲಯೇತ್ ॥ ೨೦ ॥

---

೧೪–೧೫. ಆ ಶಂಕರರಾಜನು ಹೀಗೆ ಇತರ ಮೃಗಗಳನ್ನೂ ಕೊಲ್ಲುತ್ತ ಒಂದಾನೊಂದು ಕಾಡಿನಲ್ಲಿ ಗುಹೆಯ ನಡುವೆ ವಾಸಿಸುತ್ತಿರುವವನೂ, ವ್ಯಾಘ್ರ ಚರ್ಮಧಾರಿಯೂ, ಶಾಂತನೂ, ಚಿತ್ತೈಕಾಗ್ರ್ಯವುಳ್ಳವನೂ ಆದ ಒಬ್ಬ ಮುನಿಯನ್ನು ಹುಲಿಯೆಂದರಿತು ಹರಿತವಾದ ಬಾಣದಿಂದ ಕೂಡಲೆ ಕೊಂದನು.

೧೬. ಎಲೈ ವಿಪ್ರವರ್ಯರೆ! ಆ ಬಾಣವು ಅತಿ ವೇಗದಿಂದ ಪತಿಯ ಹತ್ತಿರದಲ್ಲಿದ್ದ ಪತಿಯೇ ಪ್ರಾಣವೆಂದು ತಿಳಿದಿದ್ದ ಆ ಮುನಿಯ ಹೆಂಡತಿಯನ್ನೂ ಕೊಂದಿತು.

೧೭. ಆಗ ಅವರ ಮಗನು ಕಾಡಿನಲ್ಲಿ ಕೊಲ್ಲಲ್ಪಟ್ಟ ತನ್ನ ತಂದೆ ತಾಯಿಗಳನ್ನು ಕಂಡು ಅತ್ಯಂತ ದುಃಖಗೊಂಡು ಭಯದಿಂದ ಗೋಳಾಡಿದನು.

೧೮. "ಅಮ್ಮಾ! ಅಪ್ಪ! ಈಗ ನೀವು ನನ್ನನ್ನು ಬಿಟ್ಟು ಎಲ್ಲಿಗೆಹೋದಿರಿ? ನಾನೀಗ ಎಲ್ಲಿಗೆ ಹೋಗಲಿ? ನನಗೆ ಗತಿಯಾರು?

೧೯. ಅಪ್ಪ! ನನಗೆ ವೇದಗಳನ್ನೂ, ಶಾಸ್ತ್ರಗಳನ್ನೂ ಯಾರು ಹೇಳಿಕೊಡುವರು? ಅಮ್ಮಾ! ನನಗೆ ಒಳ್ಳೆಯ ಬುದ್ಧಿಯನ್ನು ಹೇಳಿ ಊಟವನ್ನು ಹಾಕುವವರು ಯಾರು?

೨೦. ಅಪ್ಪ! ನೀನು ಮೃತನಾಗಲು ಈಗ ನನಗೆ ಆಚಾರಗಳನ್ನು ಯಾರು ಕಲಿಸುವರು? ಅಮ್ಮಾ! ಸಿಟ್ಟುಗೊಂಡ ಬಾಲಕನಾದ ನನ್ನನ್ನು ಯಾರುತಾನೆ ಲಾಲನೆಮಾಡುವರು?

ಯುವಾಂ ನಿರಾಗಸಾವದ್ಯ ಕೇನ ಪಾಪೇನ ಸಾಯಕೈಃ ।
ನಿಹತೌ ವೈ ತಪೋನಿಷ್ಠೌ ಮತ್ಪ್ರಾಣೌ ಮದ್ಗುರೂ ವನೇ ॥ ೨೧ ॥
ಏವಂ ತಯೋಃ ಸುತೋ ವಿಪ್ರಾ ಮುಕ್ತಕಂಠಂ ರುರೋದ ವೈ ।
ಅಥ ಪ್ರಲಪಿತಂ ಶ್ರುತ್ವಾ ಶಂಕರೋ ವಿಪಿನೇ ಚರನ್ ॥ ೨೨ ॥
ತಚ್ಛಬ್ದಾಭಿಮುಖಃ ಸದ್ಯಃ ಪ್ರಯಯೌ ಸ ದರೀಮುಖಂ ।
ತತ್ರತ್ಯಾ ಮುನಯೋಽಪ್ಯಾಶು ಸಮಾಗಚ್ಛಂಸ್ತಮಾಶ್ರಮಂ ॥ ೨೩ ॥
ತೇ ದೃಷ್ಟ್ವಾ ಮುನಯಃ ಸರ್ವೇ ಶರೇಣ ನಿಹತಂ ಮುನಿಂ ।
ತತ್ಪತ್ನೀಂ ಚ ಹತಾಂ ವಿಪ್ರಾ ರಾಜಾನಂ ಚ ಧನುರ್ಧರಂ ॥ ೨೪ ॥
ವಿಲಪಂತಂ ಸುತಂ ಚಾಽಪಿ ವಿಲೋಕ್ಯ ಭೃಶವಿಹ್ವಲಾಃ ।
ಪುತ್ರಮಾಶ್ವಾಸಯಾಮಾಸುರ್ಮಾ ರೋದೀರಿತಿ ಕಾತರಂ ॥ ೨೫ ॥

ಮುನಯ ಊಚುಃ :—

ಆಢ್ಯೇ ವಾಽಪಿ ದರಿದ್ರೇ ವಾ ಮೂರ್ಖೇವಾ ಪಂಡಿತೇಽಪಿ ವಾ ।
ಪೀನೇವಾಽಥ ಕೃಶೇ ವಾಽಪಿ ಸಮವರ್ತೀ ಪರೇತರಾಟ್ ॥ ೨೬ ॥
ವನೇ ವಾ ನಗರೇ ಗ್ರಾಮೇ ಪರ್ವತೇ ವಾ ಸ್ಥಲಾಂತರೇ ।
ಮೃತ್ಯೋರ್ವಶೇ ಪ್ರಯಾತವ್ಯಂ ಸರ್ವೈರಪಿ ಹಿ ಜಂತುಭಿಃ ॥ ೨೭ ॥

---

೨೧. ತಪ್ಪುಮಾಡದವರೂ, ತಪೋನಿರತರೂ ಆದ ನಿಮ್ಮನ್ನು ಬಾಣದಿಂದ ಕೊಂದವರಾರು ?''

೨೨–೨೩. ಈ ರೀತಿ ಅವರ ಮಗನು ಗಟ್ಟಿಯಾಗಿ ಗೋಳಾಡಲು ಕಾಡಿನಲ್ಲಿ ಸಂಚರಿಸುತ್ತಿರುವ ಶಂಕರನು ಅವನ ರೋದನವನ್ನು ಕೇಳಿ ಕೂಡಲೆ ಆ ಶಬ್ದವನ್ನು ಅನುಸರಿಸಿ ಆ ಗುಹೆಯ ಬಳಿಗೆ ಹೋದನು. ಅಲ್ಲಿರುವ ಮುನಿಗಳೂ ಕೂಡಲೆ ಆ ಆಶ್ರಮಕ್ಕೆ ಬಂದರು.

೨೪–೨೫. ಆ ಋಷಿಗಳೆಲ್ಲರೂ ಬಾಣದಿಂದ ಕೊಲ್ಲಲ್ಪಟ್ಟ ಆ ಮುನಿಯನ್ನೂ, ಅವನ ಹೆಂಡತಿಯನ್ನೂ, ಧನುರ್ಧಾರಿಯಾದ ಆ ದೊರೆಯನ್ನೂ, ಗೋಳಾಡುತ್ತಿರುವ ಆ ಮಗನನ್ನೂ ನೋಡಿ ಅತ್ಯಂತ ವ್ಯಥೆಗೊಂಡವರಾಗಿ ಭಯಗೊಂಡ ಆ ಮುನಿ ಬಾಲಕನನ್ನು ಅಳಬೇಡವೆಂದು ಸಮಾಧಾನಗೊಳಿಸಿದರು.

೨೬. ಮುನಿಗಳು ಹೇಳುತ್ತಾರೆ :—ಯಮನು ಧನಿಕ, ಬಡವ, ಮೂರ್ಖ, ಪಂಡಿತ, ಪುಷ್ಟ, ಕೃಶ ಇವರೆಲ್ಲರಲ್ಲಿಯೂ ಒಂದೇ ರೀತಿಯಾಗಿ ನಡೆಯುವನು.

೨೭. ಸಕಲ ಪ್ರಾಣಿಗಳೂ ಕಾಡಿನಲ್ಲಾಗಲಿ, ಪಟ್ಟಣದಲ್ಲಾಗಲಿ, ಗ್ರಾಮದಲ್ಲಾಗಲಿ, ಪರ್ವತದಲ್ಲಾಗಲಿ, ಯಾವ ಸ್ಥಳದಲ್ಲಿಯೇ ಇದ್ದರೂ ಮೃತ್ಯುವಿನ ವಶವಾಗತಕ್ಕುವೆ.

ವತ್ಸ ನಿತ್ಯಂ ಚ ಗರ್ಭಸ್ಥೈರ್ಜಾತೈರಪಿ ಚ ಜಂತುಭಿಃ ।
ಯುವಭಿಃ ಸ್ಥವಿರೈಃ ಸರ್ವೈರ್ಯಾತವ್ಯಂ ಯಮಪತ್ತನಂ ॥ ೨೮ ॥
ವರ್ಣಿಭಿಶ್ಚ ಗೃಹಸ್ಥೈಶ್ಚ ವಾನಪ್ರಸ್ಥೈಶ್ಚ ಭಿಕ್ಷುಭಿಃ ।
ಕಾಲೇ ಪ್ರಾಪ್ತೇ ತ್ವಯಂ ದೇಹಸ್ತ್ಯಕ್ತವ್ಯೋ ದ್ವಿಜಪುತ್ರಕ ॥ ೨೯ ॥
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈರಪಿ ಚ ಸಂಕರೈಃ ।
ಯಾತವ್ಯಂ ಪ್ರೇತನಿಲಯೇ ದ್ವಿಜಪುತ್ರ ಮಹಾಮತೇ ॥ ೩೦ ॥
ದೇವಾಶ್ಚ ಮುನಯೋ ಯಕ್ಷಾ ಗಂಧರ್ವೋರಗರಾಕ್ಷಸಾಃ ।
ಅನ್ಯೇಚ ಜಂತವಃ ಸರ್ವೇ ಬ್ರಹ್ಮವಿಷ್ಣುಹರಾದಯಃ ॥ ೩೧ ॥
ಸರ್ವೇ ಯಾಸ್ಯಂತಿ ವಿಲಯಂ ನ ತ್ವಂ ಶೋಚಿತುಮರ್ಹಸಿ ।
ಅದ್ವಯಂ ಸಚ್ಚಿದಾನಂದಂ ಯದ್ಬ್ರಹ್ಮೋಪನಿಷದ್ಗತಂ ॥ ೩೨ ॥
ನ ತಸ್ಯ ವಿಲಯೋ ಜನ್ಮ ವರ್ಧನಂ ಚಾಽಪಿ ಸತ್ತಮ ।
ಮಲಭಾಂಡೇ ನವದ್ವಾರೇ ಪೂಯಾಽಸೃಕ್ಶೋಣಿತಾಲಯೇ ॥ ೩೩ ॥
ದೇಹೇಽಸ್ಮಿನ್ಬುದ್ಬುದಾಕಾರೇ ಕೃಮಿಯೂಥಸಮಾಕುಲೇ ।
ಕಾಮಕ್ರೋಧಭಯದ್ರೋಹಮೋಹಮಾತ್ಸರ್ಯಕಾರಿಣಿ ॥ ೩೪ ॥
ಪರದಾರಪರಕ್ಷೇತ್ರಪರದ್ರವ್ಯೈಕಲೋಲುಪೇ ।
ಹಿಂಸಾಽಸೂಯಾಽಶುಚಿವ್ಯಾಪ್ತೇ ವಿಣ್ಮೂತ್ರೈಕಭಾಜನೇ ॥ ೩೫ ॥

---

೨೮. ಮಗು! ನಿತ್ಯವೂ ಗರ್ಭಸ್ಥರೂ, ಹುಟ್ಟಿದವರೂ, ಯುವಕರೂ, ಮುದುಕರೂ ಆದ ಎಲ್ಲರೂ ಯಮಾಲಯಕ್ಕೆ ತೆರಳುವವರೆ.

೨೯. ಬ್ರಹ್ಮಚಾರಿಗಳು, ಗೃಹಸ್ಥರು, ವಾನಪ್ರಸ್ಥರು, ಸನ್ಯಾಸಿಗಳು ಎಲ್ಲರೂ ಸಮಯ ಒದಗಿದಾಗ ಈ ದೇಹವನ್ನು ಬಿಡುತ್ತಾರೆ.

೩೦. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಸಂಕರ ಜಾತಿಯವರು ಎಲ್ಲರೂ ಯಮನ ಆಲಯಕ್ಕೆ ಹೋಗುವವರೆ.

೩೧-೩೭. ದೇವತೆಗಳು, ಮುನಿಗಳು, ಯಕ್ಷರು, ಗಂಧರ್ವರು, ನಾಗರು, ರಾಕ್ಷಸರು ಇವರೇ ಮೊದಲಾದ ಸಮಸ್ತರೂ, ಬ್ರಹ್ಮ, ವಿಷ್ಣು, ಶಿವರೂ ನಾಶವಾಗುವವರೆ. ನೀನು ದುಃಖಿಸಬೇಡ. ಸಚ್ಚಿದಾನಂದ ಸ್ವರೂಪನೂ, ವೇದಾಂತವೇದ್ಯನೂ ಆದ ಪರಬ್ರಹ್ಮನೊಬ್ಬನಿಗೆ ಮಾತ್ರ ಸೃಷ್ಟಿ, ಸ್ಥಿತಿ, ಲಯಗಳಿಲ್ಲ. ಅಮೇಧ್ಯದ ಪಾತ್ರೆಯೂ, ಒಂಬತ್ತು ದ್ವಾರಗಳುಳ್ಳದೂ, ಕೀವು, ರಕ್ತ ಇವುಗಳಿಗೆ ಆಶ್ರಯವೂ, ನೀರಿನ ಗುಳ್ಳೆಯಂತೆ ನಾಶವಾಗುವುದೂ, ಕೃಮಿಗಳಿಂದ ತುಂಬಿರುವುದೂ, ಕಾಮ, ಕ್ರೋಧ, ಭಯ, ದ್ರೋಹ, ಮೋಹ, ಮಾತ್ಸರ್ಯಗಳನ್ನುಂಟುಮಾಡುವುದೂ, ಪರರ ಪತ್ನಿ, ಹೊಲಗದ್ದೆಗಳು, ದ್ರವ್ಯ

ಯಃ ಕುರ್ಯಾಚ್ಛೋಭನಧಿಯಂ ಸ ಮೂಢಃ ಸ ಚ ದುರ್ಮತಿಃ ।
ಬಹುಚ್ಛಿದ್ರಘಟಾಕಾರೇ ದೇಹೇಽಸ್ಮಿನ್ನಶುಚೌ ಸದಾ ॥ ೩೬ ॥
ವಾಯೋರವಸ್ಥಿತಿಃ ಕಿಂ ಸ್ಯಾತ್ಪ್ರಾಣಾಖ್ಯಸ್ಯ ಚಿರಂ ದ್ವಿಜ ।
ಅತೋ ಮಾ ಕುರು ಶೋಕಂ ತ್ವಂ ಜನನೀಂ ಪಿತರಂ ಪ್ರತಿ ॥ ೩೭ ॥
ತೌ ಸ್ವಕರ್ಮವಶಾದ್ಯಾತೌ ಗೃಹಂ ತ್ಯಕ್ತ್ವಾ ತ್ವಿದಂ ಕ್ವಚಿತ್ ।
ತವ ಕರ್ಮವಶಾತ್ತ್ವಂ ಚ ತಿಷ್ಠಸ್ಯಸ್ಮಿನ್ಮಹೀತಲೇ ॥ ೩೮ ॥
ಯದಾ ಕರ್ಮಕ್ಷಯಸ್ತೇ ಸ್ಯಾತ್ತದಾ ತ್ವಂ ಚ ಮರಿಷ್ಯಸಿ ।
ಮರಿಷ್ಯಮಾಣಪ್ರೇತೋ ಹಿ ಮೃತಪ್ರೇತಸ್ಯ ಶೋಚತಿ ॥ ೩೯ ॥
ಯಸ್ಮಿನ್ಕಾಲೇ ಸಮುತ್ಪನ್ನೌ ತವ ಮಾತಾ ಪಿತಾ ತಥಾ ।
ನ ತಸ್ಮಿಂಸ್ತ್ವಂ ಸಮುತ್ಪನ್ನಸ್ತತೋ ಭಿನ್ನಾ ಗತಿರ್ಹಿ ವಃ ॥ ೪೦ ॥
ಯದಿ ತುಲ್ಯಾ ಗತಿಸ್ತೇ ಸ್ಯಾತ್ತಾಭ್ಯಾಂ ಸಹ ಮಹಾಮತೇ ।
ತರ್ಹಿ ತ್ವಯಾಽಪಿ ಯಾತವ್ಯಂ ಮೃತೌ ಯತ್ರ ಹಿ ತೌ ಗತೌ ॥ ೪೧ ॥
ಮೃತಾನಾಂ ಬಾಂಧವಾ ಯೇ ತು ಮುಂಚಂತ್ಯಶ್ರೂಣಿ ಭೂತಲೇ ।
ಪಿಬಂತ್ಯಶ್ರೂಣಿ ತಾನ್ಯದ್ಧಾ ಮೃತಾಃ ಪ್ರೇತಾಃ ಪರತ್ರ ವೈ ॥ ೪೨ ॥

---

ಇವುಗಳಲ್ಲಿ ಆಶೆಯುಳ್ಳುದೂ, ಹಿಂಸೆ, ಹೊಟ್ಟೆಕಿಚ್ಚು, ಅಶುಭ ಇವುಗಳಿಂದ ವ್ಯಾಪ್ತವಾದುದೂ, ಮಲಮೂತ್ರಗಳಿಗೆ ಆಶ್ರಯವಾದುದೂ ಆದ ಈ ದೇಹದಲ್ಲಿ ಒಳ್ಳೆಯದೆಂದು ಆಶೆಗೊಳ್ಳುವ ಮನುಷ್ಯನು ಮೂಢನು. ದುರ್ಬುದ್ಧಿಯುಳ್ಳವನು. ಅನೇಕ ರಂಧ್ರಗಳುಳ್ಳ ಗಡಿಗೆಯಂತಿರುವ ಈ ಅಶುದ್ಧವಾದ ದೇಹದಲ್ಲಿ ಬಹುಕಾಲ ಪ್ರಾಣವಾಯುವು ಹೇಗಿರುವುದು? ಆದುದರಿಂದ ನೀನು ತಂದೆ ತಾಯಿಗಳನ್ನು ಕುರಿತು ದುಃಖಿಸಬೇಡ.

೩೮. ಆ ನಿನ್ನ ತಂದೆತಾಯಿಗಳು ಕರ್ಮವಶದಿಂದ ಈ ಮನೆಯನ್ನು ಬಿಟ್ಟು ಎಲ್ಲಿಗೋ ಹೋದರು. ನೀನು ನಿನ್ನ ಕರ್ಮವಶದಿಂದ ಈ ಭೂಮಿಯಲ್ಲಿರುವೆ.

೩೯. ನಿನ್ನ ಕರ್ಮಗಳು ನಾಶವಾದಕೂಡಲೆ ನೀನೂ ಸಾಯುವೆ. ಸಾಯುವ ಜೀವವು ಸತ್ತಜೀವವನ್ನುದ್ದೇಶಿಸಿ ಅಳುವುದು.

೪೦. ನಿನ್ನ ತಂದೆತಾಯಿಗಳು ಜನಿಸಿದ ಕಾಲದಲ್ಲಿ ನೀನು ಹುಟ್ಟಲಿಲ್ಲ. ಆದ್ದರಿಂದ ನಿನ್ನ ಗತಿಯೇ ಬೇರೆ.

೪೧. ನಿನಗೂ ನಿನ್ನ ತಂದೆತಾಯಿಗಳಿಗೂ ಗತಿಯು ಒಂದೇ ಆಗಿದ್ದರೆ ಮೃತರಾದ ಅವರು ಹೋದಲ್ಲಿಗೆ ನೀನೂ ಹೋಗಬೇಕಾಗಿದ್ದಿತು.

೪೨. ಮೃತರ ಬಾಂಧವರು ಭೂಮಿಯಲ್ಲಿ ಕಣ್ಣೀರನ್ನು ಸುರಿಸಿದರೆ ಅದನ್ನು ಪರಲೋಕದಲ್ಲಿ ಮೃತಪ್ರೇತರು ಕುಡಿಯುತ್ತಾರೆ.

ಅತಃ ಶೋಕಂ ಪರಿತ್ಯಜ್ಯ ಧೃತಿಂ ಕೃತ್ವಾ ಸಮಾಹಿತಃ ।
ಅನಯೋಃ ಪ್ರೇತಕಾರ್ಯಾಣಿ ಕುರು ತ್ವಂ ವೈದಿಕಾನಿ ತು ॥ ೪೩ ॥
ಶರಘಾತಾನ್ಮೃತಾನೇತೌ ಯಸ್ಮಾತ್ತೇ ಜನನೀ ಪಿತಾ ।
ಅತಸ್ತದ್ದೋಷಶಾಂತ್ಯರ್ಥಮಸ್ಥೀನ್ಯಾದಾಯ ವೈ ತಯೋಃ ॥ ೪೪ ॥
ರಾಮನಾಥಶಿವಕ್ಷೇತ್ರೇ ರಾಮಸೇತೌ ವಿಮುಕ್ತಿದೇ ।
ಸ್ಥಾಪಯಸ್ವ ತಥಾ ಶ್ರಾದ್ಧಂ ಸಪಿಂಡೀಕರಣಾದಿಕಂ ॥ ೪೫ ॥
ತತ್ರೈವ ಕುರು ಶುದ್ಧ್ಯರ್ಥಂ ತಯೋರ್ಬ್ರಾಹ್ಮಣಪುತ್ರಕ ।
ತೇನ ದುರ್ಮೃತ್ಯುದೋಷಸ್ಯ ಶಾಂತಿರ್ಭವತಿ ನಾಽನ್ಯಥಾ ॥ ೪೬ ॥

ಶ್ರೀ ಸೂತ ಉವಾಚ :—

ಏವಮುಕ್ತಃ ಸ ಮುನಿಭಿಃ ಶಾಕಲ್ಯಸ್ಯ ಸುತೋ ದ್ವಿಜಾಃ ।
ಜಾಂಗಲಾಖ್ಯಸ್ತಯೋಃ ಸರ್ವಂ ಪಿತೃಮೇಧಂ ಚಕಾರ ವೈ ॥ ೪೭ ॥
ಅನ್ಯೇದ್ಯುರಸ್ಥೀನ್ಯಾದಾಯ ಹಾಲಾಸ್ಯಂ ಪ್ರಯಯೌ ಚ ಸಃ ।
ತಸ್ಮಾದ್ರಾಮೇಶ್ವರಂ ಸದ್ಯೋ ಗತ್ವಾಽಯಂ ಜಾಂಗಲೋ ದ್ವಿಜಃ ॥ ೪೮ ॥
ಮುನಿಪ್ರೋಕ್ತಪ್ರಕಾರೇಣ ತಸ್ಮಿನ್ರಾಮೇಶ್ವರಸ್ಥಲೇ ।
ನಿಧಾಯ ಪಿತ್ರೋರಸ್ಥೀನಿ ಶ್ರಾದ್ಧಾದೀನ್ಯಕರೋತ್ತಥಾ ॥ ೪೯ ॥
ಪ್ರಥಮಾಬ್ದಿಕಪರ್ಯಂತಂ ಕಾರ್ಯಂ ತತ್ರಾಕರೋಚ್ಚ ಸಃ ।
ಸ್ಥಿತ್ವಾಽಬ್ದಂ ಸ ಮುನೇಃ ಪುತ್ರ ಏಕೋ ಜಾಂಗಲಸಂಜ್ಞಕಃ ॥ ೫೦ ॥

---

೪೩. ಆದುದರಿಂದ ನೀನು ದುಃಖಿಸದೆ ಧೈರ್ಯವನ್ನು ತಾಳಿ ಸಮಾಧಾನದಿಂದ ಇವರಿಗೆ ವೇದೋಕ್ತಗಳಾದ ಉತ್ತರಕ್ರಿಯೆಗಳನ್ನು ಮಾಡು.

೪೪–೪೬. ನಿನ್ನ ತಂದೆತಾಯಿಗಳಾದ ಇವರು ಬಾಣದ ಏಟನಿಂದ ಮೃತರಾದ್ದರಿಂದ ಆ ದೋಷದ ಶಾಂತಿಗಾಗಿ ಇವರ ಮೂಳೆಗಳನ್ನು ತೆಗೆದುಕೊಂಡು ರಾಮಸೇತುವೆಯಲ್ಲಿರುವ ಮುಕ್ತಿಪ್ರದವಾದ ರಾಮೇಶ್ವರಕ್ಷೇತ್ರದಲ್ಲಿ ಸ್ಥಾಪಿಸು. ಇವರ ಶುದ್ಧಿಗಾಗಿ ಅಲ್ಲಿಯೇ ಸಪಿಂಡೀಕರಣ ಮೊದಲಾದುವನ್ನು ನೆರವೇರಿಸು. ಅದರಿಂದ ದುರ್ಮರಣದೋಷವು ಶಾಂತವಾಗುವುದು.

೪೭–೪೯. ಶ್ರೀಸೂತನು ಹೇಳುತ್ತಾನೆ:— ಮುನಿಗಳು ಹೀಗೆ ಹೇಳಲು ಶಾಕಲ್ಯನ ಮಗನಾದ ಜಾಂಗಲನು ಆ ತಂದೆತಾಯಿಗಳಿಗೆ ಉತ್ತರಕ್ರಿಯೆಗಳನ್ನೆಲ್ಲ ಮಾಡಿದನು. ಮಾರನೆಯ ದಿನ ಆ ಜಾಂಗಲನು ಹಾಲಾಸ್ಯಕ್ಕೆ ಹೋಗಿ ಅಲ್ಲಿಂದ ಕೂಡಲೆ ರಾಮೇಶ್ವರವನ್ನು ಸೇರಿ ಅಲ್ಲಿ ಮುನಿಗಳು ಹೇಳಿದ ಕ್ರಮದಿಂದ ತಂದೆತಾಯಿಗಳ ಅಸ್ಥಿಗಳನ್ನು ಇಟ್ಟು ಶ್ರಾದ್ಧ ಮೊದಲಾದುವುಗಳನ್ನು ಮಾಡಿದನು.

೫೦. ಅವನು ಒಬ್ಬನೆ ಪ್ರಥಮಾಬ್ದಿಕದವರೆಗೆ ಅಲ್ಲಿಯೇ ಇದ್ದು ಕಾರ್ಯಗಳನ್ನೆಲ್ಲ ಮಾಡಿದನು.

ಆಬ್ದಿಕಾಂತೇ ದಿನೇ ವಿಪ್ರೋ ರಾತ್ರೌ ಸ್ವಪ್ನೇ ವಿಲೋಕ್ಯ ತು ।
ಸ್ವಮಾತರಂ ಚ ಪಿತರಂ ಶಂಖಚಕ್ರಗದಾಧರೌ ॥ ೫೧ ॥
ಗರುಡೋಪರಿ ಸಂವಿಷ್ಟೌ ಪದ್ಮಮಾಲಾವಿಭೂಷಿತೌ ।
ಶೋಭಿತೌ ತುಲಸೀದಾಮ್ನಾ ಸ್ಫುರನ್ಮಕರಕುಂಡಲೌ ॥ ೫೨ ॥
ಕೌಸ್ತುಭಾಲಂಕೃತೋರಸ್ಕೌ ಪೀತಾಂಬರವಿರಾಜಿತೌ ।
ಏವಂ ದೃಷ್ಟ್ವಾ ಮುನಿಸುತೋ ಜಾಂಗಲಃ ಸುಪ್ರಸನ್ನಧೀಃ ॥ ೫೩ ॥
ಸ್ವಾಶ್ರಮಂ ಪುನರಾಗತ್ಯ ಸುಖೇನ ನ್ಯವಸದ್ದ್ವಿಜಾಃ ।
ಸ್ವಪ್ನದೃಷ್ಟಂಚ ವೃತ್ತಾಂತಂ ಮಾತಾಪಿತ್ರೋಃ ಸ ಜಾಂಗಲಃ ॥ ೫೪ ॥
ತೇಭ್ಯೋ ನ್ಯವೇದಯತ್ಸರ್ವಂ ಬ್ರಾಹ್ಮಣೇಭ್ಯೋಽತಿಹರ್ಷಿತಃ ।
ಶ್ರುತ್ವಾ ತೇ ಮುನಯೋ ವೃತ್ತಮಾಸನ್ಸಂಪ್ರೀತಮಾನಸಾಃ ॥ ೫೫ ॥
ಅಥ ರಾಜಾನಮಾಲೋಕ್ಯ ಸರ್ವೇ ತೇಽಪಿ ಮಹರ್ಷಯಃ ।
ಅವದನ್ಕುಪಿತಾ ವಿಪ್ರಾಃ ಶಪಂತಃ ಶಂಕರಂ ನೃಪಂ ॥ ೫೬ ॥
ಪಾಂಡ್ಯಭೂಪ ಮಹಾಮೂರ್ಖ ಕ್ರೌರ್ಯಾದ್ಬ್ರಾಹ್ಮಣಘಾತಕ ।
ಸ್ತ್ರೀಹತ್ಯಾ ಬ್ರಹ್ಮಹತ್ಯಾ ಚ ಕೃತಾ ಯಸ್ಮಾತ್ತ್ವಯಾಽಧುನಾ ॥ ೫೭ ॥
ಅತಃ ಶರೀರಸಂತ್ಯಾಗಂ ಕುರು ತ್ವಂ ಹವ್ಯವಾಹನೇ ।
ನೋಚೇತ್ತವ ನ ಶುದ್ಧಿಃ ಸ್ಯಾತ್ಪ್ರಾಯಶ್ಚಿತ್ತಶತೈರಪಿ ॥ ೫೮ ॥

---

೫೧–೫೫. ಆಬ್ದಿಕದ ಕೊನೆಯ ದಿನ ಆ ಜಾಂಗಲನು ರಾತ್ರಿಯ ಸ್ವಪ್ನದಲ್ಲಿ ಶಂಖ, ಚಕ್ರ, ಗದೆಗಳನ್ನು ಧರಿಸಿ ಗರುಡನ ಮೇಲೆ ಕುಳಿತು ತಾವರೆ ಮಣಿಮಾಲೆಯನ್ನು ಧರಿಸಿ, ತುಲಸೀಮಾಲೆಯಿಂದ ಅಲಂಕೃತರಾಗಿ, ಪ್ರಕಾಶಮಾನವಾದ ಮಕರಕುಂಡಲವುಳ್ಳವರೂ, ಕೌಸ್ತುಭರತ್ನದಿಂದ ಅಲಂಕರಿಸಲ್ಪಟ್ಟ ಎದೆಯುಳ್ಳವರೂ, ಪೀತಾಂಬರವನ್ನುಟ್ಟವರೂ ಆದ ತನ್ನ ತಂದೆ ತಾಯಿಗಳನ್ನು ನೋಡಿ ಸಂತೋಷಗೊಂಡು ತನ್ನ ಆಶ್ರಮಕ್ಕೆ ಮರಳಿ ಬಂದು ಸುಖದಿಂದ ವಾಸಮಾಡಿದನು. ಅವನು ಸ್ವಪ್ನದಲ್ಲಿ ಕಂಡ ತಂದೆತಾಯಿಗಳ ವೃತ್ತಾಂತವನ್ನು ಆ ಬ್ರಾಹ್ಮಣರಿಗೆ ಸಂತೋಷದಿಂದ ತಿಳಿಸಿದನು. ಅವರು ಅದನ್ನು ಕೇಳಿ ಸಂತೋಷಗೊಂಡರು.

೫೬. ಬಳಿಕ ಆ ಸಮಸ್ತಮಹರ್ಷಿಗಳೂ ದೊರೆಯನ್ನು ಕಂಡು ಕೋಪದಿಂದ ಶಪಿಸುತ್ತ ಹೀಗೆಂದರು:

೫೭–೫೮. "ಪಾಂಡ್ಯರಾಜ! ಮೂರ್ಖ! ಬ್ರಾಹ್ಮಣಘಾತಕ! ನೀನು ಸ್ತ್ರೀಹತ್ಯೆಯನ್ನೂ, ಬ್ರಾಹ್ಮಣಹತ್ಯೆಯನ್ನೂ ಮಾಡಿದಕಾರಣ ಬೆಂಕಿಯಲ್ಲಿ ಬಿದ್ದು ದೇಹವನ್ನು ತ್ಯಜಿಸು. ಇಲ್ಲದಿದ್ದರೆ ನಿನಗೆ ಅನೇಕ ಪ್ರಾಯಶ್ಚಿತ್ತಗಳಿಂದಲೂ ಶುದ್ಧಿಯಿರುವುದಿಲ್ಲ.

ತ್ವತ್ಸಂಭಾಷಣಮಾತ್ರೇಣ ಬ್ರಹ್ಮಹತ್ಯಾಽಯುತಂ ಭವೇತ್ ।
ಅಸ್ಮತ್ಸಕಾಶಾದ್ಗಚ್ಛ ತ್ವಂ ಪಾಂಡ್ಯಾನಾಂ ಕುಲಪಾಂಸನ ॥ ೫೯ ॥
ಇತ್ಯುಕ್ತೋ ಮುನಿಭಿಃ ಪಾಂಡ್ಯಃ ಶಂಕರೋ ದ್ವಿಜಪುಂಗವಾಃ ।
ತಥಾಽಸ್ತು ದೇಹಸಂತ್ಯಾಗಂ ಕರಿಷ್ಯೇ ಹವ್ಯವಾಹನೇ ॥ ೬೦ ॥
ಬ್ರಹ್ಮಹತ್ಯಾವಿಶುದ್ಧ್ಯರ್ಥಂ ಭವತಾಂ ಸನ್ನಿಧಾವಹಂ ।
ಅನುಗ್ರಹಂ ಮೇ ಕುರ್ವಂತು ಭವಂತೋ ಮುನಿಸತ್ತಮಾಃ ॥ ೬೧ ॥
ತಥಾ ಶರೀರಸಂತ್ಯಾಗಾತ್ಪಾತಕಂ ಮೇ ಲಯಂ ವ್ರಜೇತ್ ।
ಏವಮುಕ್ತ್ವಾ ಮುನೀನ್ಸರ್ವಾನ್ಶಂಕರಃ ಪಾಂಡ್ಯಭೂಪತಿಃ ॥ ೬೨ ॥
ಸ್ವಾನ್ಮಂತ್ರಿಣಃ ಸಮಾಹೂಯ ಬಭಾಷೇ ವಚನಂ ತ್ವಿದಂ ।
ಭೋ ಮಂತ್ರಿಣೋ ಬ್ರಹ್ಮಹತ್ಯಾ ಮಯಾಽಕಾರ್ಯವಿಚಾರತಃ ॥ ೬೩ ॥
ಸ್ತ್ರೀಹತ್ಯಾ ಚ ತಥಾ ಕ್ರೂರಾ ಮಹಾನರಕದಾಯಿನೀ ।
ಏತತ್ಪಾತಕಶುದ್ಧ್ಯರ್ಥಂ ಮುನೀನಾಂ ವಚನಾದಹಂ ॥ ೬೪ ॥
ಪ್ರದೀಪ್ತೇಽಗ್ನೌ ಮಹಾಜ್ವಾಲೇ ಪರಿತ್ಯಕ್ಷ್ಯೇ ಕಲೇವರಂ ।
ಕಾಷ್ಠಾನ್ಯಾನಯತ ಕ್ಷಿಪ್ರಂ ತೈರಗ್ನಿಶ್ಚ ಸಮಿಧ್ಯತಾಂ ॥ ೬೫ ॥
ಮಮ ಪುತ್ರಂ ಚ ಸುರುಚಿಂ ರಾಜ್ಯೇ ಸ್ಥಾಪಯತಾಽಚಿರಾತ್ ।
ಮಾಶೋಕಂ ಕುರುತಾಽಮಾತ್ಯಾ ದೈವತಂ ದುರತಿಕ್ರಮಂ ॥ ೬೬ ॥

---

೫೯. ಪಾಂಡ್ಯವಂಶದಲ್ಲಿ ಹುಟ್ಟಿದ ನೀಚನೆ! ನಿನ್ನೊಡನೆ ಮಾತಾಡಿದರೇನೇ ಹತ್ತುಸಾವಿರ ಬ್ರಹ್ಮಹತ್ಯೆಗಳು ಸಂಭವಿಸುವುವು. ನೀನು ಇಲ್ಲಿಂದ ಹೊರಡು."

೬೦–೬೬. ದ್ವಿಜವರ್ಯರೆ! ಮುನಿಗಳು ಹೀಗೆನ್ನಲು, ಶಂಕರರಾಜನು ಹಾಗೆಯೇ "ಬ್ರಹ್ಮಹತ್ಯೆಯ ಶುದ್ಧಿಗಾಗಿ ನಿಮ್ಮ ಹತ್ತಿರದಲ್ಲಿಯೇ ಬೆಂಕಿಯಲ್ಲಿ ದೇಹವನ್ನು ತ್ಯಜಿಸುವೆನು. ಮುನಿವರ್ಯರೆ! ನೀವು ನನಗೆ ಅನುಗ್ರಹ ಮಾಡಿರಿ. ಹಾಗೆ ದೇಹವನ್ನು ತ್ಯಜಿಸಿದ್ದರಿಂದ ನನ್ನ ಪಾಪವು ನಾಶವಾದೀತು" ಎಂದನು. ಹೀಗೆ ಪಾಂಡ್ಯರಾಜನು ಮುನಿಗಳನ್ನು ಕುರಿತು ಹೇಳಿ ತನ್ನ ಮಂತ್ರಿಗಳನ್ನು ಕರೆದು ಹೀಗೆಂದನು: "ಎಲೈ ಮಂತ್ರಿಗಳೆ! ನಾನು ಆಲೋಚಿಸದೆ ಬ್ರಹ್ಮಹತ್ಯೆ ಮಾಡಿದೆ. ಹಾಗೆಯೇ ಮಹಾ ನರಕವನ್ನುಂಟುಮಾಡುವ ಕ್ರೂರವಾದ ಸ್ತ್ರೀಹತ್ಯೆಯನ್ನೂ ಮಾಡಿರುವೆನು. ಈ ಪಾಪವನ್ನು ನೀಗುವುದಕ್ಕೆ ಮುನಿಗಳ ಮಾತಿನಂತೆ ನಾನು ಜ್ವಲಿಸುತ್ತಿರುವ ಮಹಾಜ್ವಾಲೆಯುಳ್ಳ ಬೆಂಕಿಯಲ್ಲಿ ದೇಹವನ್ನು ತ್ಯಜಿಸುವೆನು. ನೀವು ಕಟ್ಟಿಗೆಗಳನ್ನು ಶೀಘ್ರವಾಗಿ ತಂದು ಬೆಂಕಿಯನ್ನು ಪ್ರಜ್ವಲಗೊಳಿಸಿರಿ. ನನ್ನ ಮಗನಾದ ಸುರುಚಿಯನ್ನು ಶೀಘ್ರವಾಗಿ ರಾಜ್ಯದಲ್ಲಿ ಸ್ಥಾಪಿಸಿರಿ. ಎಲೈ ಮಂತ್ರಿಗಳೆ! ದುಃಖಪಡಬೇಡಿ, ವಿಧಿಯನ್ನು ಮೀರಲಾಗದು."

ಇತೀರಿತಾ ನೃಪತಿನಾ ಮಂತ್ರಿಣೋ ರುರುದುಸ್ತದಾ ।
ಪಾಂಡ್ಯನಾಥ ಮಹಾರಾಜ ರಿಪೂಣಾಮಪಿ ವತ್ಸಲ ॥ ೬೭ ॥
ವಯಂ ಹಿ ಭವತಾ ನಿತ್ಯಂ ಪುತ್ರವತ್ಪರಿಪಾಲಿತಾಃ ।
ತ್ವಾಂ ವಿನಾ ನ ಪ್ರವೇಕ್ಷ್ಯಾಮ ಪುರೀಂ ದೇವಪುರೋಪಮಾಂ ॥ ೬೮ ॥
ಹವ್ಯವಾಹಂ ಪ್ರವೇಕ್ಷ್ಯಾಮೋ ಮಹಾಕಾಷ್ಠಸಮೇಧಿತಂ ।
ತೇಷಾಂ ಪ್ರಲಪಿತಂ ಶ್ರುತ್ವಾ ಪಾಂಡ್ಯಃ ಶಂಕರಭೂಪತಿಃ ।
ಪ್ರೋವಾಚ ಮಂತ್ರಿಣಃ ಸರ್ವಾನ್ವಚನಂ ಸಾಂತ್ವಪೂರ್ವಕಂ ॥ ೬೯ ॥

ಶಂಕರ ಉವಾಚ :—

ಕಿಂ ಕರಿಷ್ಯಥ ಭೋಽಮಾತ್ಯಾ ಮಹಾಪಾತಕಿನಾ ಮಯಾ ॥ ೭೦ ॥
ಸಿಂಹಾಸನಂ ಸಮಾರುಹ್ಯ ನ ಕರ್ತುಂ ಯುಜ್ಯತೇ ಬತ ।
ಚತುರರ್ಣವಪರ್ಯಂತಧರಾಪಾಲನಮಂಜಸಾ ॥ ೭೧ ॥
ಮತ್ಪುತ್ರಂ ಸುರುಚಿಂ ಶೀಘ್ರಮತಃ ಸ್ಥಾಪಯತಾಸನೇ ।
ಕಾಷ್ಠಾನ್ಯಾನಯತ ಕ್ಷಿಪ್ರಂ ಪ್ರವೇಷ್ಟುಂ ಹವ್ಯವಾಹನಂ ॥ ೭೨ ॥
ಮಮ ಮಂತ್ರಿವರಾ ಯೂಯಂ ವಿಲಂಬಂ ತ್ಯಜತಾಽಧುನಾ ।
ಇತ್ಯುಕ್ತಾ ಮಂತ್ರಿಣಃ ಕಾಷ್ಠಂ ಸಮಾನಿನ್ಯುಃ ಕ್ಷಣೇನ ತೇ ॥ ೭೩ ॥
ಅಗ್ನಿಂ ಪ್ರಜ್ವಲಿತಂ ಕಾಷ್ಠೈರ್ದೃಷ್ಟ್ವಾ ಶಂಕರಭೂಪತಿಃ ।
ಸ್ನಾತ್ವಾಚಮ್ಯ ವಿಶುದ್ಧಾತ್ಮಾ ಮುನೀನಾಂ ಸನ್ನಿಧೌ ತದಾ ॥ ೭೪ ॥

---

೬೭–೬೯. ರಾಜನು ಹೀಗೆನ್ನಲು ಮಂತ್ರಿಗಳು, "ಶತ್ರುಗಳಿಗೂ ಪ್ರಿಯನಾದ ಎಲೈ ಪಾಂಡ್ಯಮಹಾರಾಜನೆ! ನೀನು ನಮ್ಮನ್ನು ಮಕ್ಕಳಂತೆ ಕಾಪಾಡಿರುವೆ. ನಿನ್ನನ್ನು ಬಿಟ್ಟು ಅಮರಾವತಿಯಂತಿರುವ ಆ ನಿನ್ನ ಪಟ್ಟಣವನ್ನು ಪ್ರವೇಶಿಸುವುದಿಲ್ಲ. ಕಟ್ಟಿಗೆಗಳಿಂದ ಪ್ರಜ್ವಲಿಸುವ ಅಗ್ನಿಯನ್ನು ನಾವೂ ಪ್ರವೇಶಮಾಡುವೆವು" ಎಂದು ಗೋಳಾಡಿದರು. ಪಾಂಡ್ಯರಾಜನು ಅವರ ಗೋಳಾಟವನ್ನು ಕೇಳಿ ಅವರನ್ನು ಕುರಿತು ಸಮಾಧಾನಪೂರ್ವಕವಾಗಿ ಹೀಗೆಂದನು :

೭೦–೭೧. "ಮಂತ್ರಿಗಳೆ! ಅತ್ಯಂತ ಪಾಪಿಯಾದ ನಾನು ಸಿಂಹಾಸನವನ್ನು ಏರಿ ನಾಲ್ಕುಸಮುದ್ರಗಳ ವರೆಗಣ ರಾಜ್ಯವನ್ನಾಳಲು ಯೋಗ್ಯನಲ್ಲ.

೭೨. ಆದ್ದರಿಂದ ನನ್ನ ಪುತ್ರನಾದ ಸುರುಚಿಯನ್ನು ಶೀಘ್ರವಾಗಿ ನನ್ನ ಸಿಂಹಾಸನದಲ್ಲಿ ಸ್ಥಾಪಿಸಿರಿ. ಅಗ್ನಿಯನ್ನು ಪ್ರವೇಶಿಸುವುದಕ್ಕೆ ಜಾಗ್ರತೆಯಾಗಿ ಕಟ್ಟಿಗೆಗಳನ್ನು ತೆಗೆದುಕೊಂಡು ಬನ್ನಿರಿ.

೭೩. ಮಂತ್ರಿವರ್ಯರೆ! ಈಗ ವಿಳಂಬಮಾಡಬೇಡಿರಿ." ಹೀಗೆನ್ನಲು, ಮಂತ್ರಿಗಳು ಕೂಡಲೆ ಕಟ್ಟಿಗೆಗಳನ್ನು ತಂದರು.

೭೪–೭೭. ಶಂಕರರಾಜನು ಕಟ್ಟಿಗೆಗಳಿಂದ ಉರಿಯುತ್ತಿರುವ ಬೆಂಕಿ

ಅಗ್ನಿಂ ಪ್ರದಕ್ಷಿಣೀಕೃತ್ಯ ತಾನ್ಮುನೀನಪಿ ಸತ್ವರಂ ।
ಅಗ್ನಿಂ ಮುನೀನ್ನಮಸ್ಕೃತ್ಯ ಧ್ಯಾತ್ವಾ ದೇವಮುಮಾಪತಿಂ ॥ ೨೫ ॥
ಅಗ್ನೌ ಪತಿತುಮಾರೇಭೇ ಧೈರ್ಯಮಾಲಂಬ್ಯ ಭೂಪತಿಃ ।
ತಸ್ಮಿನ್ನವಸರೇ ವಿಪ್ರಾ ಮುನೀನಾಮಪಿ ಶೃಣ್ವತಾಂ ॥ ೨೬ ॥
ಅಶರೀರಾ ಸಮುದಭೂದ್ವಾಣೀ ಭೈರವನಾದಿನೀ ।
ಭೋಃ ಶಂಕರಮಹೀಪಾಲ ಮಾಽನಲಂ ಪ್ರವಿಶಾಽಧುನಾ ॥ ೨೭ ॥
ಬ್ರಹ್ಮಹತ್ಯಾನಿಮಿತ್ತಂ ತೇ ಭಯಂ ಮಾಽಭೂನ್ಮಹಾಮತೇ ।
ತವೋಪದೇಶಂ ವಕ್ಷ್ಯಾಮಿ ರಹಸ್ಯಂ ವೇದಸಂಮಿತಂ ॥ ೨೮ ॥
ಶೃಣುಷ್ವಾವಹಿತೋ ರಾಜನ್ಮದುಕ್ತಂ ಕ್ರಿಯತಾಂ ತ್ವಯಾ ।
ದಕ್ಷಿಣಾಂಬುನಿಧೇಸ್ತೀರೇ ಗಂಧಮಾದನಪರ್ವತೇ ॥ ೨೯ ॥
ರಾಮಸೇತೌ ಮಹಾಪುಣ್ಯೇ ಮಹಾಪಾತಕನಾಶನೇ ।
ರಾಮಪ್ರತಿಷ್ಠಿತಂ ಲಿಂಗಂ ರಾಮನಾಥಂ ಮಹೇಶ್ವರಂ ॥ ೩೦ ॥
ಸೇವಸ್ವ ವರ್ಷಮೇಕಂ ತ್ವಂ ತ್ರಿಕಾಲಂ ಭಕ್ತಿಪೂರ್ವಕಂ ।
ಪ್ರದಕ್ಷಿಣಪ್ರಕ್ರಮಣಂ ನಮಸ್ಕಾರಂ ಚ ವೈ ಕುರು ॥ ೩೧ ॥
ಮಹಾಽಭಿಷೇಕಃ ಕ್ರಿಯತಾಂ ರಾಮನಾಥಸ್ಯ ವೈ ತ್ವಯಾ ।
ನೈವೇದ್ಯಂ ವಿವಿಧಂ ರಾಜನ್ಕ್ರಿಯತಾಂ ಚ ದಿನೇ ದಿನೇ ॥ ೩೨ ॥

---

ಯನ್ನು ನೋಡಿ ಸ್ನಾನಮಾಡಿ ಆಚಮನಮಾಡಿ ಶುದ್ಧನಾಗಿ ಮುನಿಗಳ ಮುಂದೆ ಅಗ್ನಿಗೂ ಆ ಮುನಿಗಳಿಗೂ ಪ್ರದಕ್ಷಿಣ ನಮಸ್ಕಾರವನ್ನುಮಾಡಿ ಮಹೇಶ್ವರನನ್ನು ಧ್ಯಾನಿಸಿ ಧೈರ್ಯವನ್ನು ತಾಳಿ ಬೆಂಕಿಯಲ್ಲಿ ಬೀಳಲು ಆರಂಭಿಸಿದನು. ಆ ಸಮಯದಲ್ಲಿ ಮುನಿಗಳು ಕೇಳುತ್ತಿರುವಂತೆಯೆ ಭಯಂಕರವಾಗಿ ಧ್ವನಿ ಮಾಡುತ್ತಿರುವ ಅಶರೀರವಾಣಿಯುಂಟಾಯಿತು. "ಎಲೈ ಶಂಕರರಾಜನೆ! ಈಗ ನೀನು ಬೆಂಕಿಯಲ್ಲಿ ಬೀಳಬೇಡ.

೨೮. ಪ್ರಾಜ್ಞನೆ! ನೀನು ಈ ಬ್ರಹ್ಮಹತ್ಯೆಗೆ ಹೆದರಬೇಡ. ವೇದದಲ್ಲಿ ಪ್ರತಿಪಾದಿತವಾದ ತತ್ವಾರ್ಥವನ್ನು ನಿನಗೆ ಉಪದೇಶಿಸುವೆನು.

೨೯. ನೀನು ಒಮ್ಮನಸ್ಸಿನಿಂದ ಕೇಳು. ನಾನು ಹೇಳಿದ್ದನ್ನು ಮಾಡು. ದಕ್ಷಿಣಸಮುದ್ರದ ದಡದಲ್ಲಿ ಗಂಧಮಾದನಪರ್ವತವಿದೆ.

೩೦–೩೧. ಅಲ್ಲಿರುವ ಪಾಪವನ್ನು ಪರಿಹರಿಸುವುದೂ, ಪವಿತ್ರವೂ ಆದ ರಾಮಸೇತುವಿನಲ್ಲಿ ರಾಮನು ಪ್ರತಿಷ್ಠಿಸಿದ ರಾಮೇಶ್ವರನನ್ನು ಒಂದು ವರ್ಷ ತ್ರಿಕಾಲಗಳಲ್ಲಿ ಭಕ್ತಿಯಿಂದ ಪ್ರದಕ್ಷಿಣ ನಮಸ್ಕಾರಪೂರ್ವಕವಾಗಿ ಸೇವಿಸು.

೩೨. ನೀನು ರಾಮನಾಥನಿಗೆ ಪ್ರತಿದಿನವೂ ಅಭಿಷೇಕಮಾಡು. ವಿವಿಧ ನೈವೇದ್ಯವನ್ನು ಸಮರ್ಪಿಸು.

ಚಂದನಾಗರುಕರ್ಪೂರೈ ರಾಮಲಿಂಗಂ ಪ್ರಪೂಜಯ ।
ಭಾರದ್ವಯೇನ ಗವ್ಯೇನ ಹ್ಯಾಜ್ಯೇನ ತ್ವಭಿಷೇಚಯ ॥ ೮೩ ॥
ಪ್ರತ್ಯಹಂ ಚ ಗವಾಂ ಕ್ಷೀರೈರ್ದ್ವಿಭಾರಪರಿಸಂಮಿತೈಃ ।
ಮಧುದ್ರೋಣೇನ ತಲ್ಲಿಂಗಂ ಪ್ರತ್ಯಹಂ ಸ್ನಾಪಯ ಪ್ರಭೋ ॥ ೮೪ ॥
ಪ್ರತ್ಯಹಂ ಪಾಯಸಾನ್ನೇನ ನೈವೇದ್ಯಂ ಕುರು ಭೂಪತೇ ।
ಪ್ರತ್ಯಹಂ ತಿಲತೈಲೇನ ದೀಪಾರಾಧನಮಾಚರ ॥ ೮೫ ॥
ಏತೇನ ತವ ರಾಜೇಂದ್ರ ರಾಮನಾಥಸ್ಯ ಶೂಲಿನಃ ।
ಸ್ತ್ರೀಹತ್ಯಾ ಬ್ರಹ್ಮಹತ್ಯಾ ಚ ತತ್ಕ್ಷಣಾದೇವ ನಶ್ಯತಃ ॥ ೮೬ ॥
ದರ್ಶನಾದ್ರಾಮನಾಥಸ್ಯ ಭ್ರೂಣಹತ್ಯಾಶತಾನಿ ಚ ।
ಅಯುತಂ ಬ್ರಹ್ಮಹತ್ಯಾನಾಂ ಸುರಾಪಾನಾಽಯುತಂ ತಥಾ ॥ ೮೭ ॥
ಸ್ವರ್ಣಸ್ತೇಯಾಽಯುತಂ ರಾಜನ್ಗುರುಸ್ತ್ರೀಗಮನಾಽಯುತಂ ।
ಏತತ್ಸಂಸರ್ಗದೋಷಾಶ್ಚ ವಿನಶ್ಯಂತಿ ಕ್ಷಣಾದ್ವಿಭೋ ॥ ೮೮ ॥
ಮಹಾಪಾತಕತುಲ್ಯಾನಿ ಯಾನಿ ಪಾಪಾನಿ ಸಂತಿ ವೈ ।
ತಾನಿ ಸರ್ವಾಣಿ ನಶ್ಯಂತಿ ರಾಮನಾಥಸ್ಯ ಸೇವಯಾ ॥ ೮೯ ॥
ಮಹತೀ ರಾಮನಾಥಸ್ಯ ಸೇವಾ ಲಭ್ಯೇತ ಚೇನ್ನೃಣಾಂ ।
ಕಿಂ ಗಂಗಯಾ ಚ ಗಯಯಾ ಪ್ರಯಾಗೇಣಾಽಧ್ವರೇಣವಾ ॥ ೯೦ ॥

---

೮೩. ಶ್ರೀಗಂಧ, ಅಗುರು, ಕರ್ಪೂರಗಳಿಂದ ರಾಮೇಶ್ವರನನ್ನು ಪೂಜಿಸು. ನಲವತ್ತುತೊಲೆ ಆಕಳ ತುಪ್ಪದಿಂದ ಅಭಿಷೇಕಮಾಡು.

೮೪. ನಲವತ್ತುತೊಲೆ ತೂಕದ ಹಸುವಿನ ಹಾಲಿನಿಂದಲೂ, ಒಂದು ಕೊಳಗ ಜೇನುತುಪ್ಪದಿಂದಲೂ ಅಭಿಷೇಕಮಾಡು.

೮೫. ಪ್ರತಿದಿನವೂ ಪಾಯಸವನ್ನು ನೈವೇದ್ಯಮಾಡು. ಎಳ್ಳೆಣ್ಣೆಯಿಂದ ದೀಪಾರಾಧನಮಾಡು.

೮೬. ದೊರೆಯೆ! ಇದರಿಂದ ನಿನ್ನ ಸ್ತ್ರೀಹತ್ಯೆ ಬ್ರಹ್ಮಹತ್ಯೆಗಳು ಕೂಡಲೆ ನಾಶವಾಗುವುವು.

೮೭–೮೮. ರಾಮನಾಥನ ದರ್ಶನದಿಂದಲೆ ಶಿಶುಹತ್ಯೆಗಳೂ, ಹತ್ತುಸಾವಿರ ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪಗಮನಗಳೂ, ಇತರ ಸಂಪರ್ಕದೋಷಗಳೂ ಕೂಡಲೆ ನಾಶವಾಗುವುವು.

೮೯. ರಾಮನಾಥನ ಸೇವೆಯಿಂದ ಮಹಾಪಾತಕಸದೃಶಗಳಾದ ಇತರ ಎಲ್ಲ ಪಾಪಗಳೂ ನಾಶವಾಗುವುವು.

೯೦. ಮಹತ್ತಾದ ರಾಮನಾಥನ ಈ ಸೇವೆಯು ಲಭಿಸಿದರೆ ಗಂಗಾ, ಗಯಾ, ಪ್ರಯಾಗ ಕ್ಷೇತ್ರಗಂಳಿದಲೂ ಯಾಗಗಳಿಂದಲೂ ಏನುಪ್ರಯೋಜನ?

ತದ್ಗಚ್ಛ ರಾಮಸೇತುಂ ತ್ವಂ ರಾಮನಾಥಂ ಭಜಾಽನಿಶಂ ।
ವಿಲಂಬಂ ಮಾಕುರು ವಿಭೋ ಗಮನೇ ಚ ತ್ವರಾಂ ಕುರು ॥ ೯೧ ॥
ಇತ್ಯುಕ್ತ್ವಾ ವಿರರಾಮಾಽಥ ಸಾಽಪಿ ವಾಗಶರೀರಿಣೀ ।
ತಚ್ಛ್ರುತ್ವಾ ಮುನಯಃ ಸರ್ವೇ ತ್ವರಯಂತಿ ಸ್ಮ ಭೂಪತಿಂ ॥ ೯೨ ॥
ಗಚ್ಛ ಶೀಘ್ರಂ ಮಹಾರಾಜ ರಾಮಸೇತುಂ ವಿಮುಕ್ತಿದಂ ।
ರಾಮನಾಥಸ್ಯ ಮಾಹಾತ್ಮ್ಯಮಜ್ಞಾತ್ವಾಽಸ್ಮಾಭಿರೀರಿತಂ ॥ ೯೩ ॥
ದೇಹತ್ಯಾಗಂ ಕುರುಷ್ವೇತಿ ವಹ್ನೌ ಪ್ರಜ್ವಲಿತೇಽಧುನಾ ।
ಅನುಜ್ಞಾತೋ ಮುನಿವರ್ಯೈರಿತಿ ರಾಜಾ ಸ ಶಂಕರಃ ॥ ೯೪ ॥
ಚತುರಂಗಬಲಂ ಪುರ್ಯಾಂ ಪ್ರಾಪಯಿತ್ವಾ ತ್ವರಾನ್ವಿತಃ ।
ನಮಸ್ಕೃತ್ಯ ಮುನೀನ್ಸರ್ವಾನ್ಪ್ರಹೃಷ್ಟೇನಾಂತರಾತ್ಮನಾ ॥ ೯೫ ॥
ವೃತಃ ಕತಿಪಯೈಃ ಸೈನ್ಯೈಃ ಸಮಾದಾಯ ಧನಂ ಬಹು ।
ರಾಮನಾಥಸ್ಯ ಸೇವಾರ್ಥಮಯಾಸೀದ್ಗಂಧಮಾದನಂ ॥ ೯೬ ॥
ಉವಾಸ ವರ್ಷಮೇಕಂ ಚ ರಾಮಸೇತೌ ವಿಶುದ್ಧಿದೇ ।
ಏಕಭುಕ್ತೋ ಜಿತಕ್ರೋಧೋ ವಿಜಿತೇಂದ್ರಿಯಸಂಚಯಃ ॥ ೯೭ ॥
ತ್ರಿಸಂಧ್ಯಂ ರಾಮನಾಥಂ ಚ ಸೇವಮಾನಃ ಸಭಕ್ತಿಕಂ ।
ಪ್ರದದೌ ರಾಮನಾಥಾಯ ದಶಭಾರಂ ಧನಂ ಮುದಾ ॥ ೯೮ ॥

---

೯೧. ಆದ್ದರಿಂದ ನೀನು ರಾಮಸೇತುವಿಗೆ ಹೋಗು. ರಾಮನಾಥನನ್ನು ಯಾವಾಗಲೂ ಸೇವಿಸು. ಸಾವಕಾಶಮಾಡಬೇಡ. ಬೇಗನೆ ಹೋಗು."

೯೨. ಅಶರೀರವಾಣಿಯು ಹೀಗೆಂದು ಸುಮ್ಮನಾಯಿತು. ಅದನ್ನು ಕೇಳಿ ಎಲ್ಲ ಮುನಿಗಳು ರಾಜನನ್ನು ಹಾಗೆಮಾಡೆಂದು ತ್ವರೆಗೊಳಿಸಿದರು.

೯೩. "ಮಹಾರಾಜ! ಮೋಕ್ಷವನ್ನೀಯುವ ರಾಮಸೇತುವೆಗೆ ಶೀಘ್ರವಾಗಿ ತೆರಳು. ನಾವು ರಾಮನಾಥನ ಮಾಹಾತ್ಮ್ಯೆಯನ್ನು ತಿಳಿಯದೆ ಉರಿಯುವ ಈ ಬೆಂಕಿಯಲ್ಲಿ ದೇಹವನ್ನು ತ್ಯಜಿಸು ಎಂದು ಹೇಳಿದೆವು."

೯೪–೯೬. ಹೀಗೆ ಮುನಿಗಳಿಂದ ಆಜ್ಞೆಯನ್ನು ಪಡೆದ ಶಂಕರರಾಜನು ಚತುರಂಗಬಲವನ್ನು ಶೀಘ್ರವಾಗಿ ಪಟ್ಟಣಕ್ಕೆ ಕಳುಹಿಸಿ ಸಂತೋಷದಿಂದ ಅಲ್ಲಿದ್ದ ಸಕಲಮುನಿಗಳನ್ನೂ ವಂದಿಸಿ ಕೆಲವು ಸೈನ್ಯಗಳೊಡನೆ ಬಹಳ ಹಣವನ್ನು ತೆಗೆದುಕೊಂಡು ರಾಮನಾಥನ ಸೇವೆಗಾಗಿ ಗಂಧಮಾದನಪರ್ವತಕ್ಕೆ ಹೋದನು.

೯೭–೯೮. ಅಲ್ಲಿ ಎಲ್ಲಪಾಪಗಳನ್ನುಕಳೆದು ಶುದ್ಧಿಗೊಳಿಸುವ ರಾಮಸೇತುವೆಯಲ್ಲಿ ಒಂದು ವರ್ಷ ಒಂದೇ ಊಟವುಳ್ಳವನೂ, ಕೋಪವನ್ನು ಜಯಿಸಿದವನೂ, ಜಿತೇಂದ್ರಿಯನೂ, ಆಗಿ ಮೂರು ಸಂಧ್ಯಾಕಾಲದಲ್ಲಿಯೂ ರಾಮನಾಥನನ್ನು ಭಕ್ತಿಯಿಂದ ಸೇವಿಸುತ್ತ ಅವನಿಗೆ ಇನ್ನೂರು ತೊಲೆ (೫ ರಾತ್ಲ) ಹಣವನ್ನು ಸಂತೋಷದಿಂದ ಕೊಟ್ಟನು.

ಪ್ರತ್ಯಹಂ ರಾಮನಾಥಸ್ಯ ಮಹಾಪೂಜಾಮಕಾರಯತ್ ।
ಅಕರೋಚ್ಚ ಧನುಷ್ಕೋಟೌ ಪ್ರತ್ಯಹಂ ಭಕ್ತಿಪೂರ್ವಕಂ ॥ ೯೯ ॥
ಸ್ನಾನಂ ಪ್ರತಿದಿನಂ ಚಾಽನ್ನಂ ಬ್ರಾಹ್ಮಣೇಭ್ಯೋ ದದೌ ಮುದಾ ।
ಅಶರೀರವಚಃಪ್ರೋಕ್ತಮಖಿಲಂ ಪೂಜನಂ ತಥಾ ॥ ೧೦೦ ॥
ಏವಂ ಕೃತವತಸ್ತಸ್ಯ ವರ್ಷಮೇಕಂ ಗತಂ ದ್ವಿಜಾಃ ।
ವರ್ಷಾಂತೇ ಸ ಶುಚಿರ್ಭೂತ್ವಾ ಶಂಕರಸ್ತುಷ್ಟಮಾನಸಃ ।
ತುಷ್ಟಾವ ಪರಮೇಶಾನಂ ರಾಮನಾಥಂ ಘೃಣಾನಿಧಿಂ ॥ ೧೦೧ ॥

ಶಂಕರ ಉವಾಚ :—

ನಮಾಮಿ ರುದ್ರಮೀಶಾನಂ ರಾಮನಾಥಮುಮಾಪತಿಂ ॥ ೧೦೨ ॥
ಪಾಹಿ ಮಾಂ ಕೃಪಯಾ ದೇವ ಬ್ರಹ್ಮಹತ್ಯಾಂ ದಹಾಶು ಮೇ ।
ತ್ರಿಪುರಘ್ನ ಮಹಾದೇವ ಕಾಲಕೂಟವಿಷಾಽದನ ॥ ೧೦೩ ॥
ರಕ್ಷ ಮಾಂ ತ್ವಂ ದಯಾಸಿಂಧೋ ಸ್ತ್ರೀಹತ್ಯಾಂ ಮೇ ವಿಮೋಚಯ ।
ಗಂಗಾಧರ ವಿರೂಪಾಕ್ಷ ರಾಮನಾಥ ತ್ರಿಲೋಚನ ॥ ೧೦೪ ॥
ಮಾಂ ಪಾಲಯ ಕೃಪಾದೃಷ್ಟ್ಯಾ ಛಿನ್ಧಿ ಮತ್ಪಾತಕಂ ವಿಭೋ ।
ಕಾಮಾರೇ ಕಾಮಸಂದಾಯಿನ್ಭಕ್ತಾನಾಂ ರಾಘವೇಶ್ವರ ॥ ೧೦೫ ॥
ಕಟಾಕ್ಷಂ ಪಾತಯ ಮಯಿ ಶುದ್ಧಂ ಮಾಂ ಕುರು ಧೂರ್ಜಟೇ ।
ಮಾರ್ಕಂಡೇಯಭಯತ್ರಾಣ ಮೃತ್ಯುಂಜಯ ಶಿವಾಽವ್ಯಯ ॥ ೧೦೬ ॥

---

೯೯–೧೦೦. ಪ್ರತಿದಿನವೂ ರಾಮನಾಥನಿಗೆ ಮಹಾಪೂಜೆಯನ್ನು ಮಾಡಿಸಿದನು. ಧನುಷ್ಕೋಟಿಯಲ್ಲಿ ನಿತ್ಯವೂ ಭಕ್ತಿಯಿಂದ ಮಿಂದು ಬ್ರಾಹ್ಮಣರಿಗೆ ಭೋಜನಮಾಡಿಸಿದನು. ಹಾಗೆಯೇ ಅಶರೀರವಾಣಿಯು ಹೇಳಿದ ಎಲ್ಲವನ್ನೂ ಮಾಡಿದನು.

೧೦೧. ಎಲೈ ದ್ವಿಜರೆ! ಆ ಶಂಕರನು ಹೀಗೆ ಮಾಡುತ್ತಿರಲು ಒಂದು ವರ್ಷವು ಕಳೆಯಿತು. ಅವನು ಒಂದು ವರ್ಷವಾದಮೇಲೆ ಶುದ್ಧನಾಗಿ ಸಂತೋಷದಿಂದ ದಯಾಳುವಾದ ರಾಮನಾಥನನ್ನು ಸ್ತುತಿಸಿದನು.

೧೦೨–೧೦೬. ಶಂಕರನು ಸ್ತುತಿಸುತ್ತಾನೆ :— "ಉಮಾಪತಿಯಾದ ರಾಮೇಶ್ವರ, ನಿನ್ನನ್ನು ವಂದಿಸುತ್ತೇನೆ. ನೀನು ದಯೆಯಿಂದ ನನ್ನನ್ನು ಕಾಪಾಡು. ಜಾಗ್ರತೆಯಾಗಿ ನನ್ನ ಬ್ರಹ್ಮಹತ್ಯೆಯನ್ನು ಸುಡು. ತ್ರಿಪುರಸಂಹಾರಕನೂ, ಕಾಲಕೂಟ ವಿಷವನ್ನು ಕುಡಿದವನೂ ಆದ ಮಹೇಶ್ವರ! ನನ್ನನ್ನು ಕಾಪಾಡು. ನನ್ನ ಸ್ತ್ರೀಹತ್ಯೆಯನ್ನು ಬಿಡಿಸು. ಗಂಗೆಯನ್ನು ಧರಿಸಿದವನೂ, ಮುಕ್ಕಣ್ಣನೂ ಆದ ರಾಮನಾಥ! ದಯಾದೃಷ್ಟಿಯಿಂದ ನನ್ನನ್ನು ಕಾಪಾಡು. ನನ್ನ ಪಾಪವನ್ನು ನಿವಾರಿಸು. ಕಾಮನನ್ನು ದಹಿಸಿದವನೂ, ಭಕ್ತರ ಇಷ್ಟಾರ್ಥ

ನಮಸ್ತೇ ಗಿರಿಜಾಽರ್ಧಾಯ ನಿಷ್ಪಾಪಂ ಕುರು ಮಾಂ ಸದಾ ।
ರುದ್ರಾಕ್ಷಮಾಲಾಭರಣ ಚಂದ್ರಶೇಖರ ಶಂಕರ ॥ ೧೦೭ ॥
ವೇದೋಕ್ತಸಮ್ಯಗಾಚಾರಯೋಗ್ಯಂ ಮಾಂ ಕುರು ತೇ ನಮಃ ।
ಸೂರ್ಯದಂತಭಿದೇ ತುಭ್ಯಂ ಭಾರತೀನಾಸಿಕಾಚ್ಛಿದೇ ॥ ೧೦೮ ॥
ರಾಮೇಶ್ವರಾಯ ದೇವಾಯ ನಮೋ ಮೇ ಶುದ್ಧಿದೋ ಭವ ।
ಆನಂದಂ ಸಚ್ಚಿದಾನಂದಂ ರಾಮನಾಥಂ ವೃಷಧ್ವಜಂ ॥ ೧೦೯ ॥
ಭೂಯೋ ಭೂಯೋ ನಮಸ್ಯಾಮಿ ಪಾತಕಂ ಮೇ ವಿನಶ್ಯತು ।
ಭಕ್ತ್ಯೈವಂ ಸ್ತುವತಸ್ತಸ್ಯ ರಾಮನಾಥಂ ಮಹೇಶ್ವರಂ ॥ ೧೧೦ ॥
ನಿರ್ಜಗಾಮ ಮುಖಾದ್ರಾಜ್ಞೋ ಬ್ರಹ್ಮಹತ್ಯಾಽತಿಭೀಷಣಾ ।
ನೀಲವಸ್ತ್ರಧರಾ ಕ್ರೂರಾ ಮಹಾರಕ್ತಶಿರೋರುಹಾ ॥ ೧೧೧ ॥
ತಾಂ ಬ್ರಹ್ಮಹತ್ಯಾಂ ಬೀಭತ್ಸಾಂ ನೃಪವಕ್ತ್ರಾದ್ವಿನಿರ್ಗತಾಂ ।
ನಿಜಘಾನ ತ್ರಿಶೂಲೇನ ಭೈರವೋ ರುದ್ರಶಾಸನಾತ್ ॥ ೧೧೨ ॥
ಹತಾಯಾಂ ಬ್ರಹ್ಮಹತ್ಯಾಯಾಂ ಭೈರವೇಣ ಶಿವಾಜ್ಞಯಾ ।
ರಾಮನಾಥೋ ನೃಪಂ ಪ್ರಾಹ ಸ್ತುತ್ವಾ ತಸ್ಯ ಪ್ರಸನ್ನಧೀಃ ॥ ೧೧೩ ॥

---

ಗಳನ್ನು ಕೊಡುವವನೂ ಆದ ಎಲೈ ರಾಮೇಶ್ವರನೇ! ನಿನ್ನ ಕಟಾಕ್ಷವನ್ನು ನನ್ನ ಮೇಲೆ ಬೀರು. ಮಾರ್ಕಂಡೇಯನ ಭಯವನ್ನು ಪರಿಹರಿಸಿದವನೂ, ಯಮನನ್ನು ಜಯಿಸಿದವನೂ, ನಾಶರಹಿತನೂ ಆದ ಎಲೈ ಶಿವನೇ! ನನ್ನನ್ನು ಪವಿತ್ರಗೊಳಿಸು.

೧೦೭–೧೧೧. ದೇಹದ ಅರ್ಧಭಾಗದಲ್ಲಿ ಗಿರಿಜೆಯನ್ನು ಧರಿಸಿರುವ ನಿನಗೆ ನಮಸ್ಕಾರವು. ನನ್ನನ್ನು ಯಾವಾಗಲೂ ಪಾಪರಹಿತನನ್ನಾಗಿ ಮಾಡು. ರುದ್ರಾಕ್ಷಮಾಲೆಯನ್ನು ಧರಿಸಿದವನೂ, ಚಂದ್ರಮೌಳಿಯೂ ಆದ ಶಂಕರ! ನನ್ನನ್ನು ವೇದೋಕ್ತಸದಾಚಾರಯೋಗ್ಯನನ್ನಾಗಿ ಮಾಡು. ನಿನಗೆ ನಮಸ್ಕಾರವು. ಸೂರ್ಯನ ಹಲ್ಲನ್ನು ಸೀಳಿದವನೂ, ಸರಸ್ವತಿಯ ಮೂಗನ್ನು ಕತ್ತರಿಸಿದವನೂ ಆದ ರಾಮೇಶ್ವರನಿಗೆ ನಮಸ್ಕಾರವು. ನನ್ನನ್ನು ಶುದ್ಧಮಾಡು. ಸಚ್ಚಿದಾನಂದ ರೂಪನೂ, ವೃಷಭಧ್ವಜನೂ ಆದ ರಾಮೇಶ್ವರನನ್ನು ಬಾರಿ ಬಾರಿಗೂ ನಮಸ್ಕಾರ ಮಾಡುತ್ತೇನೆ. ನನ್ನ ಪಾಪವು ನಾಶವಾಗಲಿ.” ಅವನು ಹೀಗೆ ರಾಮನಾಥನನ್ನು ಭಕ್ತಿಯಿಂದ ಸ್ತುತಿಸುತ್ತಿರಲು ಅವನ ಬಾಯಿಯಿಂದ ಅತಿ ಭಯಂಕರವೂ, ನೀಲವಸ್ತ್ರವನ್ನು ಧರಿಸಿದುದೂ, ಕಠಿನವೂ, ಕೆಂಪುಕೂದಲುಳ್ಳುದೂ ಆದ ಬ್ರಹ್ಮಹತ್ಯೆಯು ಹೊರಟಿತು.

೧೧೨. ಆಗ ಭೈರವನು ರುದ್ರನ ಅಪ್ಪಣೆಯಿಂದ ರಾಜನ ಬಾಯಿಯಿಂದ ಹೊರಟ ಅಸಹ್ಯವಾದ ಆ ಬ್ರಹ್ಮಹತ್ಯೆಯನ್ನು ತ್ರಿಶೂಲದಿಂದ ಹೊಡೆದನು.

೧೧೩. ಭೈರವನು ಶಿವನ ಅಪ್ಪಣೆಯಿಂದ ಬ್ರಹ್ಮಹತ್ಯೆಯನ್ನು ಕೊಲ್ಲಲು

ಶ್ರೀ ರಾಮನಾಥ ಉವಾಚ :—

ಪಾಂಡ್ಯಭೂಪ ಮಹಾರಾಜ ಸ್ತೋತ್ರೇಣಾಽನೇನ ತೇಽನಘ ।
ಪ್ರಸನ್ನೋಽಹಂ ವರಂ ದಾಸ್ಯೇ ತುಭ್ಯಂ ವರಯ ಚೇಪ್ಸಿತಂ ॥ ೧೧೪ ॥
ಸ್ತ್ರೀಹತ್ಯಾಬ್ರಹ್ಮಹತ್ಯಾಭ್ಯಾಂ ಯಸ್ತೇ ದೋಷಃ ಸ ನಿರ್ಗತಃ ।
ಶುದ್ಧೋ ವಿಧೂತಪಾಪೋಽಸಿ ರಾಜ್ಯಂ ಪಾಲಯ ಪೂರ್ವವತ್ ॥ ೧೧೫ ॥
ಯೇ ಮಾಮತ್ರ ನಿಷೇವಂತೇ ಭಕ್ತಿಯುಕ್ತೇನ ಚೇತಸಾ ।
ನಾಶಯಾಮಿ ನೃಣಾಂ ತೇಷಾಂ ಬ್ರಹ್ಮಹತ್ಯಾಽಯುತಾನ್ಯಪಿ ॥ ೧೧೬ ॥
ಸುರಾಪಾನಾಽಯುತಂ ಭೂಪ ಗುರುಸ್ತ್ರೀಗಮನಾಽಯುತಂ ।
ಸ್ವರ್ಣಸ್ತೇಯಾಽಯುತಮಪಿ ತತ್ಸಂಸರ್ಗಾಽಯುತಂ ತಥಾ ॥ ೧೧೭ ॥
ಅನ್ಯಾನ್ಯಪಿ ಚ ಪಾಪಾನಿ ನಾಶಯಾಮಿ ನ ಸಂಶಯಃ ।
ಮತ್ಸೇವಿನೋ ನರಾ ರಾಜನ್ನ ಭೂಯಃ ಸಂಸರಂತಿ ತೇ ॥ ೧೧೮ ॥
ಕಿಂ ತು ಸಾಯುಜ್ಯರೂಪಾಂ ಮೇ ಮುಕ್ತಿಂ ಯಾಸ್ಯಂತ್ಯಸಂಶಯಂ ।
ಸ್ತುವಂತ್ಯನೇನ ಸ್ತೋತ್ರೇಣ ಯೇ ಮಾಂ ಭಕ್ತಿಪುರಸ್ಸರಂ ॥ ೧೧೯ ॥
ನಾಶಯಾಮ್ಯಹಮೇತೇಷಾಂ ಮಹಾಪಾತಕಸಂಚಯಂ ।
ಪ್ರೀತೋಽಹಂ ತವ ಭಕ್ತ್ಯಾ ಚ ಸ್ತೋತ್ರೇಣ ಮನುಜೇಶ್ವರ ॥ ೧೨೦ ॥

---

ಶಂಕರರಾಜನ ಸ್ತುತಿಯಿಂದ ಪ್ರಸನ್ನನಾದ ರಾಮನಾಥನು ಆ ರಾಜನನ್ನು ಕುರಿತು ಇಂತೆಂದನು.

೧೧೪–೧೧೫. ಶ್ರೀರಾಮನಾಥನು ಹೇಳುತ್ತಾನೆ:—"ಎಲೈ ಪಾಂಡ್ಯರಾಜನೆ! ನಾನು ನಿನ್ನ ಈ ಸ್ತುತಿಯಿಂದ ಪ್ರಸನ್ನನಾದೆನು. ನಿನಗೆ ಇಷ್ಟವಾದ ವರವನ್ನು ಕೊಡುವೆನು, ಕೇಳಿಕೊ. ನಿನ್ನ ಸ್ತ್ರೀಹತ್ಯೆ ಬ್ರಹ್ಮಹತ್ಯೆ ದೋಷಗಳು ಪರಿಹಾರ ವಾದುವು. ಈಗ ಶುದ್ಧನಾಗಿರುವೆ. ಹಿಂದಿನಂತೆ ರಾಜ್ಯವನ್ನು ಆಳುವವನಾಗು.

೧೧೬. ನಾನು ನನ್ನನ್ನು ಭಕ್ತಿಯಿಂದ ಸೇವಿಸುವ ಮಾನವರ ಹತ್ತುಸಾವಿರ ಬ್ರಹ್ಮಹತ್ಯೆಗಳನ್ನು ಪರಿಹರಿಸುವೆನು.

೧೧೭–೧೧೮. ಹತ್ತುಸಾವಿರ ಸುರಾಪಾನ, ಗುರುತಲ್ಪಗಮನ, ಸ್ವರ್ಣ ಸ್ತೇಯಗಳನ್ನೂ, ಅವುಗಳ ಸಂಬಂಧದಿಂದುಂಟಾದ ಹತ್ತುಸಾವಿರ ಪಾಪ ಗಳನ್ನೂ, ಇತರ ಪಾಪಗಳನ್ನೂ ನಿಶ್ಚಯವಾಗಿಯೂ ನಾಶಗೊಳಿಸುವೆನು. ನನ್ನನ್ನು ಸೇವಿಸುವ ಮನುಷ್ಯರು ತಿರುಗಿ ಸಂಸಾರದುಃಖವನ್ನನುಭವಿಸುವುದಿಲ್ಲ.

೧೧೯. ಭಕ್ತಿಯಿಂದ ಈ ಸ್ತೋತ್ರವನ್ನುಹೇಳಿ ನನ್ನನ್ನುಸ್ತುತಿಮಾಡುವವರು ನನ್ನ ಸಾಯುಜ್ಯರೂಪವಾದ ಮುಕ್ತಿಯನ್ನು ಪಡೆಯುವರು.

೧೨೦. ಅವರ ಪಾಪವನ್ನೆಲ್ಲ ನಾನು ನಾಶಗೊಳಿಸುವೆನು. ನಿನ್ನ ಈ ಸ್ತೋತ್ರ ದಿಂದಲೂ, ಭಕ್ತಿಯಿಂದಲೂ ನಾನು ಸಂತುಷ್ಟನಾಗಿದ್ದೇನೆ.

ಯಥೇಷ್ಟಂ ಪ್ರಾರ್ಥಯ ವರಂ ಮತ್ತಸ್ತ್ವಂ ವರದಾನ್ನೃಪ ।
ಏವಮುಕ್ತಃ ಶಿವೇನಾಽಥ ಶಂಕರೋ ನೃಪಪುಂಗವಃ ।
ರಾಮನಾಥಂ ಬಭಾಷೇ ತಂ ಶಂಕರಂ ಕರುಣಾನಿಧಿಂ ॥ ೧೨೧ ॥

ನೃಪ ಉವಾಚ :—

ತವ ಸಂದರ್ಶನೇನಾಽಹಂ ಕೃತಾರ್ಥೋಽಸ್ಮಿ ಮಹೇಶ್ವರ ॥ ೧೨೨ ॥
ಇತಃ ಪರಂ ಪ್ರಾರ್ಥನೀಯಂ ಮಮ ನಾಽಸ್ತ್ಯಧುನಾಽಧಿಕಂ ।
ಮೃಕಂಡುಸುತಸಂತಾಪಹಾರಿ ಪಾದಯುಗಂ ತವ ॥ ೧೨೩ ॥
ದೃಷ್ಟಂ ಮಯಾ ಮಹಾದೇವ ನಾಽತಃ ಪ್ರಾರ್ಥ್ಯಂ ವಿಭೋಽಸ್ತಿ ವೈ ।
ತ್ವತ್ಪಾದಪದ್ಮಯುಗಲೇ ನಿಶ್ಚಲಾ ಭಕ್ತಿರಸ್ತು ಮೇ ॥ ೧೨೪ ॥
ನ ಪುನರ್ಜನ್ಮ ಮೇ ಭೂಯಾನ್ಮಾತೃಣಾಮುದರೇಽಶುಚೌ ।
ಯೇ ಮತ್ಕೃತಮಿದಂ ಸ್ತೋತ್ರಂ ಕೀರ್ತಯಂತಿ ತವ ಪ್ರಭೋ ।
ತೇ ನರಾಃ ಪಾಪನಿರ್ಮುಕ್ತಾಸ್ತ್ವತ್ಸೇವಾಫಲಮಾಪ್ನುಯುಃ ॥ ೧೨೫ ॥

ಶ್ರೀ ಸೂತ ಉವಾಚ :—

ತಥಾಽಸ್ತ್ವಿತ್ಯನುಗೃಹ್ಯೈನಂ ರಾಮನಾಥೋ ದ್ವಿಜೋತ್ತಮಾಃ ॥ ೧೨೬ ॥
ನೀಲಕಂಠೋ ವಿರೂಪಾಕ್ಷೋ ಲಿಂಗರೂಪೇ ತಿರೋಹಿತಃ ।
ರಾಜಾಽಪಿ ರಾಮನಾಥೇನ ವಿಹಿತಾಽನುಗ್ರಹಸ್ತತಃ ॥ ೧೨೭ ॥
ರಾಮನಾಥಂ ನಮಸ್ಕೃತ್ಯ ಕೃತಾರ್ಥೇನಾಂತರಾತ್ಮನಾ ।
ಸ ಸೇನಾಸಂವೃತಃ ಪ್ರೀತಃ ಪ್ರಯಯಾವಾತ್ಮನಃ ಪುರೀಂ ॥ ೧೨೮ ॥

---

೧೨೧. ನೃಪವರ್ಯ! ವರವನ್ನು ಅನುಗ್ರಹಿಸುವ ನನ್ನಿಂದ ಇಷ್ಟಾರ್ಥವನ್ನು ಪಡೆ'' ಎಂದು ಶಿವನು ಹೇಳಲು, ಶಂಕರರಾಜನು ದಯಾಳುವಾದ ಆ ರಾಮನಾಥನನ್ನು ಕುರಿತು ಹೀಗೆಂದನು.

೧೨೨–೧೨೪. ರಾಜನು ಹೇಳುತ್ತಾನೆ:—''ಮಹೇಶ್ವರ! ನಾನು ನಿನ್ನ ದರ್ಶನದಿಂದ ಧನ್ಯನಾದೆನು. ಇದಕ್ಕಿಂತಲೂ ಹೆಚ್ಚಾಗಿ ಪ್ರಾರ್ಥಿಸುವ ವಸ್ತುವು ಯಾವುದೂ ಇಲ್ಲ. ಮಾರ್ಕಂಡೇಯನ ಸಂತಾಪವನ್ನು ಪರಿಹರಿಸಿದ ನಿನ್ನ ಪಾದಗಳನ್ನು ನೋಡಿದ ಮೇಲೆ ಪ್ರಾರ್ಥನೆಮಾಡತಕ್ಕದ್ದೇನೂ ಇರುವುದಿಲ್ಲ. ನನಗೆ ನಿನ್ನ ಪಾದಗಳಲ್ಲಿ ದೃಢಭಕ್ತಿಯುಂಟಾಗಲಿ.

೧೨೫. ನನಗೆ ತಿರುಗಿ ಅಶುದ್ಧವಾದ ತಾಯಿಯ ಹೊಟ್ಟೆಯಲ್ಲಿ ಜನ್ಮವಾಗದಿರಲಿ. ನಾನು ಮಾಡಿದ ಈ ಸ್ತೋತ್ರವನ್ನು ಹೇಳುವ ಮಾನವರು ಪಾಪಮುಕ್ತರಾಗಿ ನಿನ್ನ ಸೇವೆಯ ಫಲವನ್ನು ಹೊಂದುವರು.

೧೨೬–೧೨೮. ರಾಮನಾಥನು ಹಾಗೆಯೇ ಆಗಲೆಂದು ಶಂಕರರಾಜನಿಗೆ ಅನುಗ್ರಹಮಾಡಿ ಲಿಂಗದಲ್ಲಿ ಮಾಯವಾದನು. ರಾಜನೂ ರಾಮನಾಥನ

ವೃತ್ತಾಂತಮೇತಮುವದನ್ಮುನೀನಾಂ ವನವಾಸಿನಾಂ ।
ತೇಽಭ್ಯಷಿಂಚನ್ನೃಪಂ ರಾಜ್ಯೇ ಮುನಯಃ ಪ್ರೀತಮಾನಸಾಃ ॥ ೧೨೯ ॥
ಪುತ್ರದಾರಯುತೋ ರಾಜಾ ಪ್ರಾಪ್ಯ ರಾಜ್ಯಮಕಂಟಕಂ ।
ಮಂತ್ರಿಭಿಃ ಸಹಿತೋ ವಿಪ್ರಾ ರರಕ್ಷ ಪೃಥಿವೀಂ ಚಿರಂ ॥ ೧೩೦ ॥
ತತೋಽಂತಕಾಲೇ ಸಂಪ್ರಾಪ್ತೇ ಧ್ಯಾಯನ್ರಾಮೇಶ್ವರಂ ಶಿವಂ ।
ದೇಹಾಂತೇ ರಾಮನಾಥಸ್ಯ ಸಾಯುಜ್ಯಂ ಪ್ರಯಯೌ ಶುಭಂ ॥ ೧೩೧ ॥
ಏವಂ ವಃ ಕಥಿತಂ ವಿಪ್ರಾ ರಾಮನಾಥಸ್ಯ ವೈಭವಂ ।
ಚರಿತಂ ಪುಣ್ಯಮಾಖ್ಯಾನಂ ಶಂಕರಾಖ್ಯ ನೃಪಸ್ಯ ಚ ॥ ೧೩೨ ॥
ಶೃಣ್ವನ್ಪಠನ್ಮಾ ಮನುಜಸ್ತ್ವಿಮಮಧ್ಯಾಯಮಾದರಾತ್ ।
ಸರ್ವಪಾಪವಿನಿರ್ಮುಕ್ತೋ ರಾಮನಾಥಂ ಸಮಶ್ನುತೇ ॥ ೧೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ ''ಶಾಕಲ್ಯ ದುರ್ಮರಣದೋಷಶಾಂತಿಪೂರ್ವಕ ಶಂಕರಸ್ತ್ರೀಹತ್ಯಾ ಬ್ರಹ್ಮಹತ್ಯಾದೋಷ ಶಾಂತಿವರ್ಣನಂ'' ನಾಮಾಷ್ಟಚತ್ವಾರಿಂಶೋಽಧ್ಯಾಯಃ

---

ಅನುಗ್ರಹವನ್ನು ಪಡೆದು ಅವನನ್ನು ಧನ್ಯವಾದ ಮನಸ್ಸಿನಿಂದ ವಂದಿಸಿ ಸೇನೆಯೊಡನೆ ತನ್ನ ಪಟ್ಟಣಕ್ಕೆ ತೆರಳಿದನು.

೧೨೯. ಅಲ್ಲಿ ರಾಜನು ಈ ವೃತ್ತಾಂತವನ್ನು ವನವಾಸಿಗಳಾದ ಮುನಿಗಳಿಗೆ ಹೇಳಿದನು. ಅವರೂ ಸಂತೋಷಗೊಂಡು ಅವನನ್ನು ರಾಜ್ಯದಲ್ಲಿ ಅಭಿಷೇಕ ಮಾಡಿದರು.

೧೩೦. ದೊರೆಯು ಶತ್ರುಗಳಿಲ್ಲದ ತನ್ನ ರಾಜ್ಯವನ್ನು ಹೊಂದಿ ಸತೀಪುತ್ರ ಮಂತ್ರಿಗಳೊಡನೆ ಬಹುಕಾಲ ಭೂಮಿಯನ್ನು ಆಳಿದನು.

೧೩೧. ಅನಂತರ ಅವಸಾನಕಾಲವು ಒದಗಲು ರಾಮೇಶ್ವರನನ್ನು ಧ್ಯಾನಿಸುತ್ತ ದೇಹವನ್ನು ತ್ಯಜಿಸಿ ರಾಮನಾಥನ ಶುಭಸಾಯುಜ್ಯವನ್ನು ಪಡೆದನು.

೧೩೨. ಎಲೈ ಬ್ರಾಹ್ಮಣರೆ! ನಿಮಗೆ ಈ ರೀತಿ ರಾಮನಾಥನ ಮಾಹಾತ್ಮ್ಯೆಯನ್ನೂ, ಶಂಕರನೃಪನ ಪವಿತ್ರವಾದ ಕಥೆಯನ್ನೂ ಹೇಳಿರುವೆನು.

೧೩೩. ಈ ಅಧ್ಯಾಯವನ್ನು ಭಕ್ತಿಯಿಂದ ಪಠಿಸುವವನಾಗಲಿ, ಕೇಳುವವನಾಗಲಿ ಸಕಲ ಪಾಪಮುಕ್ತನಾಗಿ ರಾಮನಾಥನನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯೆದಲ್ಲಿ "ಶಾಕಲ್ಯ ಮರ್ದುರಣದೋಷಶಾಂತಿಪೂರ್ವಕ ಶಂಕರ ಸ್ತ್ರೀಹತ್ಯಾಬ್ರಹ್ಮಹತ್ಯಾದೋಷಶಾಂತಿವರ್ಣನ"ವೆಂಬ ನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಪಂಚಾಶತ್ತಮೋಽಧ್ಯಾಯಃ

### ರಾಮಾದಿಭೀ ರಾಮನಾಥಸ್ತೋತ್ರಕರಣಂ

ಶ್ರೀ ಸೂತ ಉವಾಚ :—

ಅಥಾತಃ ಸಂಪ್ರವಕ್ಷ್ಯಾಮಿ ರಾಮನಾಥಸ್ಯ ಶೂಲಿನಃ ।
ಸ್ತೋತ್ರಾಽಧ್ಯಾಯಂ ಮಹಾಪುಣ್ಯಂ ಶೃಣುತ ಶ್ರದ್ಧಯಾ ದ್ವಿಜಾಃ ॥ ೧ ॥
ರಾಮಃ ಪ್ರತಿಷ್ಠಿತೇ ಲಿಂಗೇ ತುಷ್ಟಾವ ಪರಮೇಶ್ವರಂ ।
ಲಕ್ಷ್ಮಣೋ ಜಾನಕೀ ಸೀತಾ ಸುಗ್ರೀವಾದ್ಯಾಃ ಕಪೀಶ್ವರಾಃ ॥ ೨ ॥
ಬ್ರಹ್ಮ ಪ್ರಭೃತಯೋ ದೇವಾಃ ಕುಂಭಜಾದ್ಯಾ ಮಹರ್ಷಯಃ ।
ಅಸ್ತುವನ್ಭಕ್ತಿಸಂಯುಕ್ತಾಃ ಪ್ರತ್ಯೇಕಂ ರಾಘವೇಶ್ವರಂ ॥ ೩ ॥
ತದ್ವಕ್ಷ್ಯಾಮ್ಯಾನುಪೂರ್ವ್ಯೇಣ ಶೃಣುತಾದರಪೂರ್ವಕಂ ।
ಏತಚ್ಛ್ರವಣಮಾತ್ರೇಣ ಮುಕ್ತಾಃ ಸ್ಯುರ್ಮಾನವೋ ದ್ವಿಜಾಃ ॥ ೪ ॥

ಶ್ರೀ ರಾಮ ಉವಾಚ :—

ನಮೋ ಮಹಾತ್ಮನೇ ತುಭ್ಯಂ ಮಹಾಮಾಯಾಯ ಶೂಲಿನೇ ।
ಸ್ವಪದಾಂಬುಜಭಕ್ತಾರ್ತಿಹಾರಿಣೇ ಸರ್ಪಹಾರಿಣೇ ॥ ೫ ॥
ನಮೋ ದೇವಾಧಿದೇವಾಯ ರಾಮನಾಥಾಯ ಸಾಕ್ಷಿಣೇ ।
ನಮೋ ವೇದಾಂತವೇದ್ಯಾಯ ಯೋಗಿನಾಂ ತತ್ವದಾಯಿನೇ ॥ ೬ ॥

---

## ಕನ್ನಡದ ಅನುವಾದ

### ರಾಮಾದಿಗಳೆಸಗಿದ ರಾಮನಾಥಸ್ತೋತ್ರಕರಣ

೧. ಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರೆ! ಬಳಿಕ ಪವಿತ್ರವಾದ ರಾಮನಾಥನ ಸ್ತೋತ್ರಾಧ್ಯಾಯವನ್ನು ಹೇಳುವೆನು. ಶ್ರದ್ಧೆಯಿಂದ ಕೇಳಿರಿ.

೨–೩. ರಾಮಲಿಂಗ ಪ್ರತಿಷ್ಠೆಯಾದ ಬಳಿಕ ರಾಮ, ಸೀತೆ, ಲಕ್ಷ್ಮಣ, ಸುಗ್ರೀವಾದಿ ಕಪಿಗಳು, ಬ್ರಹ್ಮಾದಿ ದೇವತೆಗಳು, ಅಗಸ್ತ್ಯ ಮೊದಲಾದ ಮಹರ್ಷಿಗಳು—ಭಕ್ತಿಯಿಂದ ಪ್ರತ್ಯೇಕವಾಗಿ ರಾಮೇಶ್ವರನನ್ನು ಸ್ತೋತ್ರಮಾಡಿದರು.

೪. ಆ ಸ್ತೋತ್ರವನ್ನು ಮೊದಲಿನಿಂದ ಹೇಳುವೆನು. ಭಕ್ತಿಯಿಂದ ಕೇಳಿರಿ. ಇದನ್ನು ಕೇಳಿದುದರಿಂದ ಮಾನವರು ಮುಕ್ತಿಯನ್ನೈದುವರು.

೫. ಶ್ರೀರಾಮನು ಹೇಳುತ್ತಾನೆ:—ಮಹಾತ್ಮನೂ, ಮಹಾಮಾಯೆಗೆ ಅಧಿಷ್ಠಾನವೂ, ನಿನ್ನಲ್ಲಿ ಭಕ್ತಿಯುಳ್ಳವರ ದುಃಖವನ್ನು ನಿವಾರಿಸುವವನೂ, ಸರ್ಪಭೂಷಣನೂ ಆದ ಮಹೇಶ್ವರ! ನಿನಗೆ ನಮಸ್ಕಾರವು.

೬. ದೇವಾಧಿದೇವತೆಯೂ, ಸಾಕ್ಷಿರೂಪನೂ, ವೇದಾಂತಗಳಾದ ಉಪ

ಸರ್ವದಾನಂದಪೂರ್ಣಾಯ ವಿಶ್ವನಾಥಾಯ ಶಂಭವೇ ।
ನಮೋ ಭಕ್ತಭಯಚ್ಛೇದಹೇತುಪಾದಾಬ್ಜರೇಣವೇ ॥ ೭ ॥
ನಮಸ್ತೇಽಖಿಲನಾಥಾಯ ನಮಃ ಸಾಕ್ಷಾತ್ಪರಾತ್ಮನೇ ।
ನಮಸ್ತೇಽದ್ಭುತವೀರ್ಯಾಯ ಮಹಾಪಾತಕನಾಶಿನೇ ॥ ೮ ॥
ಕಾಲಕಾಲಾಯ ಕಾಲಾಯ ಕಾಲಾತೀತಾಯ ತೇ ನಮಃ ।
ನಮೋಽವಿದ್ಯಾನಿಹಂತ್ರೇ ತೇ ನಮಃ ಪಾಪಹರಾಯ ಚ ॥ ೯ ॥
ನಮಃ ಸಂಸಾರತಪ್ತಾನಾಂ ತಾಪನಾಶೈಕಹೇತವೇ ।
ನಮೋ ಮದ್ಬ್ರಹ್ಮಹತ್ಯಾವಿನಾಶಿನೇ ಚ ವಿಷಾಽಶಿನೇ ॥ ೧೦ ॥
ನಮಸ್ತೇ ಪಾರ್ವತೀನಾಥ ಕೈಲಾಸನಿಲಯಾಽವ್ಯಯ ।
ಗಂಗಾಧರ ವಿರೂಪಾಕ್ಷ ಮಾಂ ರಕ್ಷ ಸಕಲಾಪದಃ ॥ ೧೧ ॥
ತುಭ್ಯಂ ಪಿನಾಕಹಸ್ತಾಯ ನಮೋ ಮದನಹಾರಿಣೇ ।
ಭೂಯೋ ಭೂಯೋ ನಮಸ್ತುಭ್ಯಂ ಸರ್ವಾಽವಸ್ಥಾಸು ಸರ್ವದಾ ॥ ೧೨ ॥

---

ವಿಪತ್ತುಗಳಿಂದ ತಿಳಿಯಲರ್ಹನೂ, ಯೋಗಿಗಳಿಗೆ ತತ್ವಜ್ಞಾನವನ್ನುಂಟುಮಾಡುವವನೂ ಆದ ಮಹೇಶ್ವರ! ನಿನಗೆ ನಮಸ್ಕಾರವು.

೭. ಯಾವಾಗಲೂ ಆನಂದಪೂರ್ಣನೂ, ಪ್ರಪಂಚದೊಡೆಯನೂ, ಭಕ್ತರ ಭಯವನ್ನು ನಾಶಗೊಳಿಸುವ ಪಾದಾರವಿಂದಗಳ ಧೂಳಿಯುಳ್ಳವನೂ ಆದ ಶಂಕರ! ನಿನಗೆ ನಮಸ್ಕಾರವು.

೮. ಸಕಲರಿಗೂ ಒಡೆಯನೂ, ಪರಮಾತ್ಮರೂಪನೂ, ಆಶ್ಚರ್ಯಕರವಾದ ಸಾಮರ್ಥ್ಯವುಳ್ಳವನೂ, ಮಹಾಪಾತಕಗಳನ್ನು ನಾಶಗೊಳಿಸುವವನೂ ಆದ ಶಂಕರ! ನಿನಗೆ ನಮಸ್ಕಾರವು.

೯. ಕಾಲಕ್ಕೆ ಕಾಲರೂಪನೂ, ಕಾಲವನ್ನು ಮೀರಿದವನೂ, ಅಜ್ಞಾನವನ್ನು ನಾಶಗೊಳಿಸುವವನೂ, ಪಾಪಪರಿಹಾರಕನೂ ಆದ ಶಂಕರ! ನಿನಗೆ ವಂದನೆಯು.

೧೦. ಸಂಸಾರದುಃಖದಿಂದ ವ್ಯಥೆಗೊಂಡ ಮಾನವರ ಸಂತಾಪವನ್ನು ಪರಿಹರಿಸುವವನೂ, ಬ್ರಹ್ಮಹತ್ಯೆಯನ್ನು ನಿವಾರಿಸುವವನೂ, ಕಾಲಕೂಟವಿಷವನ್ನು ಕುಡಿದವನೂ ಆದ ಶಂಕರ! ನಿನಗೆ ನಮಸ್ಕಾರವು.

೧೧. ನಾಶರಹಿತನೂ, ಪಾರ್ವತೀಪತಿಯೂ, ಕೈಲಾಸನಿವಾಸಿಯೂ, ಗಂಗೆಯನ್ನು ತಲೆಯಲ್ಲಿ ಹೊತ್ತವನೂ ಆದ ಶಂಕರ! ಸಮಸ್ತ ಆಪತ್ತುಗಳಿಂದ ನನ್ನನ್ನು ರಕ್ಷಿಸು.

೧೨. ಪಿನಾಕವೆಂಬ ಬಿಲ್ಲನ್ನು ಹಿಡಿದವನೂ, ಮದನನಾಶಕನೂ ಆದ ಮಹೇಶ್ವರ! ಸಕಲ ಸ್ಥಿತಿಗಳಲ್ಲಿಯೂ ನಿನ್ನನ್ನು ವಂದಿಸುತ್ತೇನೆ.

ಲಕ್ಷ್ಮಣ ಉವಾಚ:—
ನಮಸ್ತೇ ರಾಮನಾಥಾಯ ತ್ರಿಪುರಘ್ನಾಯ ಶಂಭವೇ ।
ಪಾರ್ವತೀಜೀವಿತೇಶಾಯ ಗಣೇಶಸ್ಕಂದಸೂನವೇ ॥ ೧೩ ॥
ನಮಸ್ತೇ ಸೂರ್ಯಚಂದ್ರಾಗ್ನಿಲೋಚನಾಯ ಕಪರ್ದಿನೇ ।
ನಮಃ ಶಿವಾಯ ಸೋಮಾಯ ಮಾರ್ಕಂಡೇಯಭಯಚ್ಛಿದೇ ॥ ೧೪ ॥
ನಮಃ ಸರ್ವಪ್ರಪಂಚಸ್ಯ ಸೃಷ್ಟಿಸ್ಥಿತ್ಯಂತಹೇತವೇ ।
ನಮ ಉಗ್ರಾಯ ಭೀಮಾಯ ಮಹಾದೇವಾಯ ಸಾಕ್ಷಿಣೇ ॥ ೧೫ ॥
ಸರ್ವಜ್ಞಾಯ ವರೇಣ್ಯಾಯ ವರದಾಯ ವರಾಯ ತೇ ।
ಶ್ರೀಕಂಠಾಯ ನಮಸ್ತುಭ್ಯಂ ಪಂಚಪಾತಕಭೇದಿನೇ ॥ ೧೬ ॥
ನಮಸ್ತೇಽಸ್ತು ಪರಾನಂದಸತ್ಯವಿಜ್ಞಾನರೂಪಿಣೇ ।
ನಮಸ್ತೇ ಭವರೋಗಘ್ನ ಸ್ಥಾಯೂನಾಂ ಪತಯೇ ನಮಃ ॥ ೧೭ ॥
ಪತಯೇ ತಸ್ಕರಾಣಾಂ ತೇ ವನಾನಾಂ ಪತಯೇ ನಮಃ ।
ಗಣಾನಾಂ ಪತಯೇ ತುಭ್ಯಂ ವಿಶ್ವರೂಪಾಯ ಸಾಕ್ಷಿಣೇ ॥ ೧೮ ॥
ಕರ್ಮಣಾ ಪ್ರೇರಿತಃ ಶಂಭೋ ಜನಿಷ್ಯೇ ಯತ್ರ ಯತ್ರ ತು ।
ತತ್ರ ತತ್ರ ಪದದ್ವಂದ್ವೇ ಭವತೋ ಭಕ್ತಿರಸ್ತು ಮೇ ॥ ೧೯ ॥

---

೧೩. ಲಕ್ಷ್ಮಣನು ಹೇಳುತ್ತಾನೆ:—ತ್ರಿಪುರನಾಶಕನೂ, ಗಣೇಶ, ಸ್ಕಂದರ ತಂದೆಯೂ, ಪಾರ್ವತಿಯ ಪ್ರಾಣೇಶನೂ ಆದ ಶಂಕರನೆ! ನಿನಗೆ ನಮಸ್ಕಾರವು.

೧೪. ಸೂರ್ಯ, ಚಂದ್ರ, ಅಗ್ನಿಗಳೆಂಬ ಮೂರು ಕಣ್ಣುಗುಳ್ಳವನೂ, ಕಪರ್ದವೆಂಬ ಜಡೆಯ ಸಮೂಹವುಳ್ಳವನೂ, ಮಾರ್ಕಂಡೇಯಭಯನಿವಾರಕನೂ ಆದ ಉಮಾಪತಿಯೆ! ನಿನಗೆ ನಮಸ್ಕಾರವು.

೧೫. ಸಕಲಪ್ರಪಂಚದ ಸೃಷ್ಟಿ, ಸ್ಥಿತಿ, ನಾಶಗಳಿಗೆ ಕಾರಣನೂ, ಭಯಂಕರನೂ, ಸಾಕ್ಷಿಯೂ ಆದ ಮಹಾದೇವ! ನಿನಗೆ ನಮಸ್ಕಾರವು.

೧೬. ಸರ್ವವನ್ನರಿತವನೂ, ಶ್ರೇಷ್ಠನೂ, ವರಪ್ರದನೂ, ಪಂಚಮಹಾಪಾತಕನಾಶಕನೂ ಆದ ಓ ಶ್ರೀಕಂಠ! ನಿನಗೆ ನಮಸ್ಕಾರವು.

೧೭. ಸತ್ಯ, ಜ್ಞಾನ ಆನಂದ, ಸ್ವರೂಪನೂ, ಸಂಸಾರವೆಂಬ ರೋಗವನ್ನು ಪರಿಹರಿಸುವವನೂ ಆದ ಪಶುಪತಿ! ನಿನಗೆ ನಮಸ್ಕಾರವು.

೧೮. ಕಳ್ಳರು, ಕಾಡುಗಳು, ಗಣಗಳು ಇವುಗಳಿಗೆ ಒಡೆಯನೂ, ಪ್ರಪಂಚರೂಪನೂ ಆದ ಶಂಕರ! ನಿನಗೆ ನಮಸ್ಕಾರವು.

೧೯. ಶಂಭುವೆ! ನಾನು ಕರ್ಮವಶದಿಂದ ಎಲ್ಲೆಲ್ಲಿ ಹುಟ್ಟುವೆನೊ, ಆಯಾ ಜನ್ಮಗಳಲ್ಲೆಲ್ಲ ನಿನ್ನ ಪಾದಗಳಲ್ಲಿ ನನಗೆ ಭಕ್ತಿಯುಂಟಾಗಲಿ.

ಅಸನ್ಮಾರ್ಗೇ ಮತಿರ್ಮಾಭೂದ್ಭವತಃ ಕೃಪಯಾ ಮಮ ।
ವೈದಿಕಾಚಾರಮಾರ್ಗೇ ಚ ರತಿಃ ಸ್ಯಾದ್ಭವತೇ ನಮಃ ॥ ೨೦ ॥

ಸೀತೋವಾಚ :—

ಪರಮಕಾರಣ ಶಂಕರ ಧೂರ್ಜಟೇ
ಗಿರಿಸುತಾಸ್ತನಕುಂಕುಮಶೋಭಿತ ।
ಮಮ ಪತೌ ಪರಿದೇಹಿ ಮತಿಂ ಸದಾ
ನ ವಿಷಮಾಂ ಪರಪೂರುಷಗೋಚರಾಂ ॥ ೨೧ ॥

ಗಂಗಾಧರ ವಿರೂಪಾಕ್ಷ ನೀಲಲೋಹಿತ ಶಂಕರ ।
ರಾಮನಾಥ ನಮಸ್ತುಭ್ಯಂ ರಕ್ಷ ಮಾಂ ಕರುಣಾಕರ ॥ ೨೨ ॥
ನಮಸ್ತೇ ದೇವದೇವೇಶ ನಮಸ್ತೇ ಕರುಣಾಲಯ ।
ನಮಸ್ತೇ ಭವಭೀತಾನಾಂ ಭವಭೀತಿವಿಮರ್ದನ ॥ ೨೩ ॥

ನಾಥ ತ್ವದೀಯ ಚರಣಾಂಬುಜಚಿಂತನೇನ
ನಿರ್ಧೂಯ ಭಾಸ್ಕರಸುತಾದ್ಭಯಮಾಶು ಶಂಭೋ ।
ನಿತ್ಯತ್ವಮಾಶು ಗತವಾನ್ಸ ಮೃಕಂಡುಪುತ್ರಃ
ಕಿಂ ವಾ ನ ಸಿಧ್ಯತಿ ತವಾಶ್ರಯಣಾತ್ಪರೇಶ ॥ ೨೪ ॥

ಪರೇಶ ಪರಮಾನಂದ ಶರಣಾಗತಪಾಲಕ ।
ಪಾತಿವ್ರತ್ಯಂ ಮಮ ಸದಾ ದೇಹಿ ತುಭ್ಯಂ ನಮೋ ನಮಃ ॥ ೨೫ ॥

---

೨೦. ನನಗೆ ನಿನ್ನ ದಯೆಯಿಂದ ದುರ್ಮಾರ್ಗದಲ್ಲಿ ಆಸಕ್ತಿಯುಂಟಾಗದಿರಲಿ. ವೇದೋಕ್ತಾಚಾರಮಾರ್ಗದಲ್ಲಿ ಪ್ರೀತಿಯುಂಟಾಗಲಿ. ನಿನಗೆ ನಮಸ್ಕಾರವು.

೨೧. ಸೀತೆಯು ಹೇಳುತ್ತಾಳೆ:—ಉತ್ತಮಕಾರಣರೂಪನೂ, ಪಾರ್ವತೀ ರಮಣನೂ ಆದ ಎಲೈ ಶಂಕರನೆ! ನನ್ನ ಮನಸ್ಸನ್ನು ಪರಪುರುಷರಲ್ಲಿ ಹೋಗದಂತೆ ಮಾಡಿ ಪತಿಯಲ್ಲಿಯೇ ನೆಲಸುವಂತೆ ಅನುಗ್ರಹಿಸು.

೨೨. ಗಂಗಾಧರನೂ, ವಿರೂಪಾಕ್ಷನೂ, ದಯಾಳುವೂ ಆದ ರಾಮನಾಥ! ನಿನಗೆ ನಮಸ್ಕಾರವು.

೨೩. ಇಂದ್ರಾದಿ ದೇವತೆಗಳಿಗೆ ಒಡೆಯನೂ, ದಯಾಳುವೂ, ಸಂಸಾರ ದಿಂದ ಭಯಗೊಂಡವರ ಭೀತಿಯನ್ನು ನಿವಾರಿಸುವವನೂ ಆದ ಶಂಕರ! ನಿನಗೆ ನಮಸ್ಕಾರವು.

೨೪. ಪರಮೇಶ್ವರ! ನಿನ್ನ ಅಡಿದಾವರೆಗಳನ್ನು ಧ್ಯಾನಿಸುವುದರಿಂದ ಮಾರ್ಕಂಡೇಯನು ಯಮನ ಭಯವಿಲ್ಲದೆ ಚಿರಂಜೀವಿಯಾದನು. ನಿನ್ನನ್ನು ಆಶ್ರಯಿಸಿದವರಿಗೆ ಕೈಗೂಡದಿರುವುದು ಯಾವುದು?

೨೫. ಪರಮಾನಂದರೂಪನೂ, ಶರಣಾಗತರನ್ನು ರಕ್ಷಿಸುವವನೂ ಆದ

ಹನೂಮಾನುವಾಚ :—

ದೇವದೇವ ಜಗನ್ನಾಥ ರಾಮನಾಥ ಕೃಪಾನಿಧೇ ।
ತ್ವತ್ಪಾದಾಂಭೋರುಹಗತಾ ನಿಶ್ಚಲಾ ಭಕ್ತಿರಸ್ತು ಮೇ ॥ ೨೬ ॥
ಯಂ ವಿನಾ ನ ಜಗತ್ಸತ್ತಾ ತದ್ಭಾನಮಪಿ ನೋ ಭವೇತ್ ।
ನಮಃ ಸದ್ಭಾನರೂಪಾಯ ರಾಮನಾಥಾಯ ಶಂಭವೇ ॥ ೨೭ ॥

ಅಂಗದ ಉವಾಚ :—

ಯಸ್ಯ ಭಾಸಾ ಜಗದ್ಭಾನಂ ಯತ್ಪ್ರಕಾಶಂ ವಿನಾ ಜಗತ್ ।
ನ ಭಾಸತೇ ನಮಸ್ತಸ್ಮೈ ರಾಮನಾಥಾಯ ಶಂಭವೇ ॥ ೨೮ ॥

ಜಾಂಬವಾನುವಾಚ :—

ಸರ್ವಾನಂದೋ ಯದಾನಂದೋ ಭಾಸತೇ ಪರಮಾರ್ಥತಃ ।
ನಮೋ ರಾಮೇಶ್ವರಾಯಾಽಸ್ಮೈ ಪರಮಾನಂದರೂಪಿಣೇ ॥ ೨೯ ॥

ನೀಲ ಉವಾಚ :—

ಯದ್ದೇಶಕಾಲದಿಗ್ಭೇದೈರಭಿನ್ನಂ ಸರ್ವದಾ ದ್ವಯಂ ।
ತಸ್ಮೈ ರಾಮೇಶ್ವರಾಯಾಽಸ್ಮೈ ನಮೋಽಭಿನ್ನಸ್ವರೂಪಿಣೇ ॥ ೩೦ ॥

---

ಪರಮೇಶ್ವರ! ನನಗೆ ಯಾವಾಗಲೂ ಪಾತಿವ್ರತ್ಯವನ್ನು ಕೊಡು. ನಿನಗೆ ನಮಸ್ಕಾರವು.

೨೬. ಹನುಮಂತನು ಹೇಳುತ್ತಾನೆ:—ದಯಾಳುವೂ, ಜಗದೊಡೆಯನೂ ಆದ ರಾಮನಾಥ! ನಿನ್ನ ಪಾದಕಮಲಗಳಲ್ಲಿ ನನಗೆ ದೃಢವಾದ ಭಕ್ತಿಯುಂಟಾಗಲಿ.

೨೭. ನಿನ್ನ ಹೊರತು ಈ ಪ್ರಪಂಚವು ಇರಲಾರದು ಮತ್ತು ಪ್ರಕಾಶಿಸಲಾರದು. ಸದ್ರೂಪನೂ, ಪ್ರಕಾಶರೂಪನೂ ಆದ ರಾಮನಾಥ! ನಿನಗೆ ನಮಸ್ಕಾರವು.

೨೮. ಅಂಗದನು ಹೇಳುತ್ತಾನೆ:—ಯಾವ ನಿನ್ನಪ್ರಕಾಶದಿಂದಲೇ ಜಗತ್ತು ಪ್ರಕಾಶಿಸುವುದೊ, ಯಾವನ ಪ್ರಕಾಶವಿಲ್ಲದಿದ್ದರೆ ಪ್ರಕಾಶಿಸುವುದಿಲ್ಲವೊ ಅಂತಹ ರಾಮನಾಥನಿಗೆ ನಮಸ್ಕಾರವು.

೨೯. ಜಾಂಬವಂತನು ಹೇಳುತ್ತಾನೆ:— ಸಕಲಾನಂದವೂ ನಿಜವಾಗಿ ಯಾವನ ಆನಂದವಾಗಿ ಪ್ರಕಾಶಿಸುವುದೊ, ಆನಂದರೂಪನಾದ ಆ ರಾಮೇಶ್ವರನಿಗೆ ನಮಸ್ಕಾರವು.

೩೦. ನೀಲನು ಹೇಳುತ್ತಾನೆ:—ದೇಶ, ದಿಕ್ಕು, ಕಾಲಗಳಿಂದ ಅಭಿನ್ನನಾಗಿ ಅಭೇದವನ್ನು ಹೊಂದಿರುವ ರಾಮೇಶ್ವರನಿಗೆ ನಮಸ್ಕಾರಗಳು.

ನಲ ಉವಾಚ :—

ಬ್ರಹ್ಮವಿಷ್ಣುಮಹೇಶಾನಾ ಯದವಿದ್ಯಾವಿಜೃಂಭಿತಾಃ ।
ನಮೋಽವಿದ್ಯಾವಿಹೀನಾಯ ತಸ್ಮೈ ರಾಮೇಶ್ವರಾಯ ತೇ ॥ ೩೧ ॥

ಕುಮುದ ಉವಾಚ :—

ಯಸ್ತ್ವರೂಪಾಽಪರಿಜ್ಞಾನಾತ್ಪ್ರಧಾನಂ ಕಾರಣತ್ವತಃ ।
ಕಲ್ಪಿತಂ ಕಾರಣಾಯಾಽಸ್ಮೈ ರಾಮನಾಥಾಯ ಶಂಭವೇ ॥ ೩೨ ॥

ಪನಸ ಉವಾಚ :—

ಜಾಗ್ರತ್ಸ್ವಪ್ನಸುಷುಪ್ತ್ಯಾದಿ ಯದವಿದ್ಯಾವಿಜೃಂಭಿತಂ ।
ಜಾಗ್ರದಾದಿವಿಹೀನಾಯ ನಮೋಽಸ್ಮೈ ಜ್ಞಾನರೂಪಿಣೇ ॥ ೩೩ ॥

ಗಜ ಉವಾಚ :—

ಯತ್ಸ್ವರೂಪಾಽಪರಿಜ್ಞಾನಾತ್ಕಾರ್ಯಾಣಾಂ ಪರಮಾಣವಃ ।
ಕಲ್ಪಿತಾಃ ಕಾರಣತ್ವೇನ ತಾರ್ಕಿಕಾಪಸದೈರ್ವೃಥಾ ॥ ೩೪ ॥
ತಮಹಂ ಪರಮಾನಂದಂ ರಾಮನಾಥಂ ಮಹೇಶ್ವರಂ ।
ಆತ್ಮರೂಪತಯಾ ನಿತ್ಯಮುಪಾಸೇ ಸರ್ವಸಾಕ್ಷಿಣಂ ॥ ೩೫ ॥

ಗವಾಕ್ಷ ಉವಾಚ :—

ಅಜ್ಞಾನಪಾಶಬದ್ಧಾನಾಂ ಪಶೂನಾಂ ಪಾಶಮೋಚಕಂ ।
ರಾಮೇಶ್ವರಂ ಶಿವಂ ಶಾಂತಮುಪೈಮಿ ಶರಣಂ ಸದಾ ॥ ೩೬ ॥

---

೩೧. ನಳನು ಹೇಳುತ್ತಾನೆ:—ಬ್ರಹ್ಮ ವಿಷ್ಣು ಮಹೇಶ್ವರರು ಯಾವನ ಅವಿದ್ಯೆಯಿಂದ ವಿಜೃಂಭಿಸುವರೊ, ಅಂತಹ ಅವಿದ್ಯೆಯಿಲ್ಲದ ಆ ರಾಮೇಶ್ವರನಿಗೆ ನಮಸ್ಕಾರವು.

೩೨. ಕುಮುದನು ಹೇಳುತ್ತಾನೆ:—ಯಾವನ ಸ್ವರೂಪವನ್ನು ಅರಿಯದಿರುವುದರಿಂದ ಪ್ರಕೃತಿಯನ್ನು ಕಾರಣವೆಂದು ಕಲ್ಪಿಸುವರೊ, ಆ ಜಗತ್ಕಾರಣನಾದ ರಾಮೇಶ್ವರನಿಗೆ ನಮಸ್ಕಾರವು.

೩೩. ಪನಸನು ಹೇಳುತ್ತಾನೆ:—ಜಾಗ್ರತ್ಸ್ವಪ್ನಸುಷುಪ್ತ್ಯಾದ್ಯವಸ್ಥೆಗಳು ಯಾವನ ಅವಿದ್ಯೆಯಿಂದ ಉಂಟಾಗುವುವೊ, ಆ ಜಾಗ್ರದಾದ್ಯವಸ್ಥೆಗಳಿಲ್ಲದ ಜ್ಞಾನಸ್ವರೂಪನಾದ ಶಂಕರನಿಗೆ ನಮಸ್ಕಾರವು.

೩೪–೩೫. ಗಜನು ಹೇಳುತ್ತಾನೆ:—ತಾರ್ಕಿಕರು ಯಾವನ ಸ್ವರೂಪವನ್ನರಿಯದೆ ಪರಮಾಣುಗಳು ಕಾರ್ಯಗಳಿಗೆ ಕಾರಣಗಳೆಂದು ಹೇಳುವರೊ, ಆ ಪರಮಾನಂದರೂಪನೂ, ಸರ್ವಸಾಕ್ಷಿಯೂ ಆದ ಮಹೇಶ್ವರನನ್ನು ಸೇವಿಸುವೆನು.

೩೬. ಗವಾಕ್ಷನು ಹೇಳುತ್ತಾನೆ:—ಅಜ್ಞಾನವೆಂಬ ಹಗ್ಗದಿಂದ ಕಟ್ಟಲ್ಪಟ್ಟ

ಗವಯ ಉವಾಚ :—

ಸಾಧ್ವಸ್ತ್ರಜಗದಾಧಾರಂ ಚಂದ್ರಚೂಡಮುಮಾಪತಿಂ ।
ರಾಮನಾಥ ಶಿವಂ ವಂದೇ ಸಂಸಾರಾಮಯಭೇಷಜಂ ॥ ೩೭ ॥

ಶರಭ ಉವಾಚ :—

ಅಂತಃಕರಣಮಾತ್ಮೇತಿ ಯದಜ್ಞಾನಾದ್ವಿಮೋಹಿತೈಃ ।
ಭಣ್ಯತೇ ರಾಮನಾಥಂ ತಮಾತ್ಮಾನಂ ಪ್ರಣಮಾಮ್ಯಹಂ ॥ ೩೮ ॥

ಗಂಧಮಾದನ ಉವಾಚ :—

ರಾಮನಾಥಮುಮಾನಾಥಂ ಗಣನಾಥಂ ಚ ತ್ರ್ಯಂಬಕಂ ।
ಸರ್ವಪಾತಕಶುದ್ಧ್ಯರ್ಥಮುಪಾಸೇ ಜಗದೀಶ್ವರಂ ॥ ೩೯ ॥

ಸುಗ್ರೀವ ಉವಾಚ :—

ಸಂಸಾರಾಂಭೋಧಿಮಧ್ಯೇ ಮಾಂ ಜನ್ಮಮೃತ್ಯುಜಲೇ ಭಯೇ ।
ಪುತ್ರದಾರಧನಕ್ಷೇತ್ರವೀಚಿಮಾಲಾಸಮಾಕುಲೇ ॥ ೪೦ ॥
ಮಜ್ಜದ್ಬ್ರಹ್ಮಾಂಡಖಂಡೇ ಚ ಪತಿತಂ ನಾಪ್ತಪಾರಕಂ ।
ಕ್ರೋಶಂತಮನಿಶಂ ದೀನಂ ವಿಷಯವ್ಯಾಲಕಾತರಂ ॥ ೪೧ ॥

---

ಜಂತುಗಳ ಪಾಶವನ್ನು ಬಿಡಿಸುವ ಶಾಂತನಾದ ರಾಮೇಶ್ವರನನ್ನು ಯಾವಾಗಲೂ ಮರೆಹೋಗುವೆನು.

೩೭. ಗವಯನು ಹೇಳುತ್ತಾನೆ:—ಜಗತ್ತುಗಳಿಗೆ ಆಶ್ರಯನೂ, ಚಂದ್ರಮೌಳಿಯೂ, ಸಂಸಾರವೆಂಬ ರೋಗಕ್ಕೆ ಔಷಧರೂಪನೂ ಆದ ಶಿವನನ್ನು ವಂದಿಸುವೆನು.

೩೮. ಶರಭನು ಹೇಳುತ್ತಾನೆ :—ಮೂಢರು ಯಾವನನ್ನರಿಯದೆ ಮನಸ್ಸನ್ನು ಪರಮಾತ್ಮನೆಂದು ಹೇಳುವರೊ, ಆ ಪರಮಾತ್ಮನಾದ ರಾಮನಾಥನನ್ನು ನಮಸ್ಕರಿಸುತ್ತೇನೆ.

೩೯. ಗಂಧಮಾದನನು ಹೇಳುತ್ತಾನೆ:—ಉಮೆಯ ಅರಸನೂ, ಪ್ರಮಥಗಣಗಳಿಗೆ ಒಡೆಯನೂ, ಮುಕ್ಕಣ್ಣನೂ, ಜಗನ್ನಾಥನೂ ಆದ ರಾಮನಾಥನನ್ನು ಸಮಸ್ತ ಪಾಪಗಳ ಶುದ್ಧಿಗಾಗಿ ಸೇವಿಸುತ್ತೇನೆ.

೪೦–೪೩. ಸುಗ್ರೀವನು ಹೇಳುತ್ತಾನೆ:— ಜನನಮರಣಗಳೆಂಬ ನೀರುಳ್ಳುದೂ, ಪುತ್ರ, ಪತ್ನಿ, ಧನ, ಕ್ಷೇತ್ರಗಳೆಂಬ ಅಲೆಗಳ ಸಮೂಹಗಳಿಂದ ವ್ಯಾಪ್ತವಾದುದೂ, ಮುಳುಗುತ್ತಿರುವ ಬ್ರಹ್ಮಾಂಡಖಂಡವುಳ್ಳುದೂ ಆದ ಸಂಸಾರವೆಂಬ ಸಾಗರದ ನಡುವೆ ಬಿದ್ದಿರುವವನೂ, ದಾಟಿಸುವವರನ್ನು ಪಡೆಯದಿರುವವನೂ, ಕೂಗುತ್ತಿರುವವನೂ, ಪರಾಧೀನನೂ, ದೀನನೂ, ವಿಷಯಗಳೆಂಬ ಹುಲಿಗಳಿಂದ ಭಯಗೊಂಡವನೂ, ವ್ಯಾಧಿಯೆಂಬ ಮೊಸಳೆಯಿಂದ ಭಯ

ವ್ಯಾಧಿನಕ್ರಸಮುದ್ವಿಗ್ನಂ ತಾಪತ್ರಯಝುಷಾರ್ತಿದಂ ।
ಮಾಂ ರಕ್ಷ ಗಿರಿಜಾನಾಥ ರಾಮನಾಥ ನಮೋಽಸ್ತು ತೇ ॥ ४೨ ॥

ವಿಭೀಷಣ ಉವಾಚ :—

ಸಂಸಾರವನಮಧ್ಯೇ ಮಾಂ ವಿನಷ್ಟನಿಜಮಾರ್ಗಕೇ ।
ವ್ಯಾಧಿಚೌರೇ ಕ್ರೋಧಸಿಂಹೇ ಜನ್ಮವ್ಯಾಘ್ರೇ ಲಯೋರಗೇ ॥ ४೩ ॥
ಬಾಲ್ಯಯೌವನವಾರ್ಧಕ್ಯಮಹಾಭೀಮಾಂಧಕೂಪಕೇ ।
ಕ್ರೋಧೇರ್ಷ್ಯಾಲೋಭವಹ್ನೌ ಚ ವಿಷಯಕ್ರೂರಪರ್ವತೇ ॥ ४४ ॥
ತ್ರಾಸಭೂಕಂಟಕಾಢ್ಯೇ ಚ ಸೀದಂತಮಧುನಾಂಧಕಂ ।
ಶೋಭನಾಂ ಪಥವೀಂ ಶಂಭೋ ನಯ ರಾಮೇಶ್ವರಾಽಧುನಾ ॥ ४೫ ॥

ಸರ್ವೇ ವಾನರಾ ಊಚುಃ :—

ನಿಂದ್ಯಾಽನಿಂದ್ಯೇಷು ಸರ್ವತ್ರ ಜನಿತ್ವಾ ಯೋನಿಷು ಪ್ರಭೋ ।
ಕುಂಭೀಪಾಕಾದಿನರಕೇ ಪತಿತ್ವಾ ಚ ಪುನಸ್ತಥಾ ॥ ४೬ ॥
ಜನಿತ್ವಾ ಚ ಪುನರ್ಯೋನೌ ಕರ್ಮಶೇಷೇಣ ಕುತ್ಸಿತೇ ।
ಸಂಸಾರೇ ಪತಿತಾನಸ್ಮಾನ್ರಾಮನಾಥ ದಯಾನಿಧೇ ॥ ४೭ ॥
ಅನಾಥಾನ್ವಿವಶಾನ್ದೀನಾನ್ಕ್ಲೇಶತಃ ಪಾಹಿ ಶಂಕರ ।
ನಮಸ್ತೇಽಸ್ತು ದಯಾಸಿಂಧೋ ರಾಮನಾಥ ಮಹೇಶ್ವರ ॥ ४೮ ॥

---

ಗೊಂಡವನೂ, ಆಧ್ಯಾತ್ಮಿಕಾದಿ ತಾಪತ್ರಯಗಳೆಂಬ ಮೀನುಗಳಿಂದ ಪೀಡಿತನೂ ಆದ ನನ್ನನ್ನು ಕಾಪಾಡು. ರಾಮನಾಥ! ನಿನಗೆ ನಮಸ್ಕಾರವು.

४೩—४೫. ವಿಭೀಷಣನು ಹೇಳುತ್ತಾನೆ:— ದಾರಿಯಿಲ್ಲದಿರುವುದೂ, ರೋಗಗಳೆಂಬ ಕಳ್ಳರುಳ್ಳುದೂ, ಕೋಪವೆಂಬ ಸಿಂಹವುಳ್ಳುದೂ, ಜನನವೆಂಬ ಹುಲಿಯುಳ್ಳುದೂ, ನಾಶವೆಂಬ ಸರ್ಪವುಳ್ಳುದೂ, ಬಾಲ್ಯ, ಯೌವನ, ಮುಪ್ಪುಗಳೆಂಬ ಅತಿಭಯಂಕರವಾದ ಕತ್ತಲೆಯ ಬಾವಿಯುಳ್ಳುದೂ, ಕೋಪ, ಅಸೂಯೆ, ಅತ್ಯಾಶೆಗಳೆಂಬ ಬೆಂಕಿಯುಳ್ಳುದೂ, ವಿಷಯಗಳೆಂಬ ಕಠಿನಪರ್ವತವುಳ್ಳುದೂ, ಭಯವೆಂಬ ಮುಳ್ಳುಗಳುಳ್ಳುದೂ ಆದ ಸಂಸಾರವೆಂಬ ಕಾಡಿನ ಮಧ್ಯದಲ್ಲಿ ಈಗ ವ್ಯಥೆಪಡುತ್ತಿರುವ ಕುರುಡನಾದ ನನ್ನನ್ನು ರಾಮೇಶ್ವರ! ಶುಭದಾರಿಯನ್ನು ಹೊಂದಿಸು.

४೬—४೮. ಸ್ವಾಮಿ! ಉಚ್ಚನೀಚಯೋನಿಗಳಲ್ಲಿ ಜನಿಸಿ ಕುಂಭೀಪಾಕ ಮೊದಲಾದ ನರಕಗಳಲ್ಲಿ ಬಿದ್ದು ಉಳಿದ ಕರ್ಮವಶದಿಂದ ಮರಳಿ ಹುಟ್ಟಿ ನಿಂದ್ಯವಾದ ಸಂಸಾರದಲ್ಲಿ ಬಿದ್ದಿರುವವರೂ, ದಿಕ್ಕಿಲ್ಲದವರೂ, ಪರಾಧೀನನೂ, ದೀನರೂ, ಗೋಳಾಡುತ್ತಿರುವವರೂ ಆದ ನಮ್ಮನ್ನು ಕಾಪಾಡು. ದಯಾನಿಧೇ! ರಾಮನಾಥ! ನಿನಗೆ ನಮಸ್ಕಾರವು.

ಬ್ರಹ್ಮೋವಾಚ :—

ನಮಸ್ತೇ ಲೋಕನಾಥಾಯ ರಾಮನಾಥಾಯ ಶಂಭವೇ ।
ಪ್ರಸೀದ ಮಮ ಸರ್ವೇಶ ಮದವಿದ್ಯಾಂ ವಿನಾಶಯ ॥ ೪೯ ॥

ಇಂದ್ರ ಉವಾಚ :—

ಯಸ್ಯ ಶಕ್ತಿರುಮಾದೇವೀ ಜಗನ್ಮಾತಾ ತ್ರಯೀಮಯೀ ।
ತಮಹಂ ಶಂಕರಂ ವಂದೇ ರಾಮನಾಥಮುಮಾಪತಿಂ ॥ ೫೦ ॥

ಯಮ ಉವಾಚ :—

ಪುತ್ರೌ ಗಣೇಶ್ವರಸ್ಕಂದೌ ವೃಷೋ ಯಸ್ಯ ಚ ವಾಹನಂ ।
ತಂ ವೈ ರಾಮೇಶ್ವರಂ ಸೇವೇ ಸರ್ವಾಽಜ್ಞಾನನಿವೃತ್ತಯೇ ॥ ೫೧ ॥

ವರುಣ ಉವಾಚ :—

ಯಸ್ಯ ಪೂಜಾಪ್ರಭಾವೇನ ಜಿತಮೃತ್ಯುರ್ಮೃಕಂಡುಜಃ ।
ಮೃತ್ಯುಂಜಯಮುಪಾಸೇಽಹಂ ರಾಮನಾಥಂ ಹೃದಾ ತು ತಂ ॥ ೫೨ ॥

ಕುಬೇರ ಉವಾಚ :—

ಈಶ್ವರಾಯ ಲಸತ್ಕರ್ಣಕುಂಡಲಾಭರಣಾಯ ತೇ ।
ಲಾಕ್ಷಾಽರುಣಶರೀರಾಯ ನಮೋ ರಾಮೇಶ್ವರಾಯ ವೈ ॥ ೫೩ ॥

---

೪೯. ಬ್ರಹ್ಮನು ಹೇಳುತ್ತಾನೆ:—ಜಗತ್ತುಗಳಿಗೆ ಒಡೆಯನಾದ ರಾಮನಾಥ! ನಿನಗೆ ನಮಸ್ಕಾರವು. ಪ್ರಸನ್ನನಾಗು. ನನ್ನ ಅಜ್ಞಾನವನ್ನು ನೀಗಿಸು.

೫೦. ಇಂದ್ರನು ಹೇಳುತ್ತಾನೆ:—ಯಾವನ ಶಕ್ತಿಯು ವೇದರೂಪಳಾಗಿಯೂ, ಜಗನ್ಮಾತೆಯಾಗಿಯೂ ಇರುವ ಪಾರ್ವತಿಯೊ, ಅಂತಹ ಶಂಕರನನ್ನು ವಂದಿಸುತ್ತೇನೆ.

೫೧. ಯಮನು ಹೇಳುತ್ತಾನೆ:—ಯಾವನ ಪುತ್ರರು ಗಣೇಶ ಸ್ಕಂದರೊ, ವಾಹನವು ವೃಷಭವೊ, ಆ ರಾಮೇಶ್ವರನನ್ನು ಸಕಲ ಅಜ್ಞಾನದ ಪರಿಹಾರಕ್ಕಾಗಿ ಸೇವಿಸುತ್ತೇನೆ.

೫೨. ವರುಣನು ಹೇಳುತ್ತಾನೆ:—ಮಾರ್ಕಂಡೇಯನು ಯಾವನನ್ನು ಪೂಜಿಸಿದ್ದರಿಂದ ಚಿರಂಜೀವಿಯಾದನೊ, ಅಂತಹ ಮೃತ್ಯುಂಜಯನಾದ ರಾಮನಾಥನನ್ನು ಮನಸ್ಸಿನಿಂದ ಉಪಾಸಿಸುತ್ತೇನೆ.

೫೩. ಕುಬೇರನು ಹೇಳುತ್ತಾನೆ:—ಪ್ರಕಾಶಮಾನವಾದ ಕರ್ಣಕುಂಡಲವುಳ್ಳವನೂ, ಅರಗಿನಂತೆ ಕೆಂಪುದೇಹವುಳ್ಳವನೂ ಆದ ರಾಮನಾಥ! ನಿನಗೆ ನಮಸ್ಕಾರವು.

ಆದಿತ್ಯ ಉವಾಚ :—

ನಮಸ್ತೇಽಸ್ತು ಮಹಾದೇವ ರಾಮನಾಥ ತ್ರಿಯಂಬಕ ।
ದಕ್ಷಾಽಧ್ವರವಿನಾಶಾಯ ನಮಸ್ತೇ ಪಾಹಿ ಮಾಂ ಶಿವ ॥ ೫೪ ॥

ಸೋಮ ಉವಾಚ :—

ನಮಸ್ತೇ ಭಸ್ಮದಿಗ್ಧಾಯ ಶೂಲಿನೇ ಸರ್ಪಮಾಲಿನೇ ।
ರಾಮನಾಥ ದಯಾಽಂಭೋಧೇ ಶ್ಮಶಾನನಿಲಯಾಯ ತೇ ॥ ೫೫ ॥

ಅಗ್ನಿರುವಾಚ :—

ಇಂದ್ರಾದ್ಯಖಿಲದಿಕ್ಪಾಲಸಂಸೇವಿತಪದಾಽಂಬುಜ ।
ರಾಮನಾಥಾಯ ಶುದ್ಧಾಯ ನಮೋ ದಿಗ್ವಾಸಸೇ ಸದಾ ॥ ೫೬ ॥

ವಾಯುರುವಾಚ :—

ಹರಾಯ ಹರಿರೂಪಾಯ ವ್ಯಾಘ್ರಚರ್ಮಾಂಬರಾಯ ಚ ।
ರಾಮನಾಥ ನಮಸ್ತುಭ್ಯಂ ಮಮಾಽಭೀಷ್ಟಪ್ರದೋ ಭವ ॥ ೫೭ ॥

ಬೃಹಸ್ಪತಿರುವಾಚ :—

ಅಹಂತಾ ಸಾಕ್ಷಿಣೇ ನಿತ್ಯಂ ಪ್ರತ್ಯಗದ್ವಯವಸ್ತವೇ ।
ರಾಮನಾಥ ಮಮಾಽಜ್ಞಾನಮಾಶು ನಾಶಯ ತೇ ನಮಃ ॥ ೫೮ ॥

---

೫೪. ಆದಿತ್ಯನು ಹೇಳುತ್ತಾನೆ:—ಮೂರು ಕಣ್ಣುಗಳುಳ್ಳವನೂ, ದಕ್ಷನ ಯಾಗವನ್ನು ನಾಶಗೊಳಿಸಿದವನೂ ಆದ ಶಂಕರ! ನನ್ನನ್ನು ಕಾಪಾಡು.

೫೫. ಚಂದ್ರನು ಹೇಳುತ್ತಾನೆ:—ಭಸ್ಮವನ್ನು ಲೇಪನಮಾಡಿಕೊಂಡಿರುವವನೂ, ತ್ರಿಶೂಲಧಾರಿಯೂ, ಸರ್ಪಗಳೇ ಒಡವೆಗಳಾಗಿಉಳ್ಳವನೂ, ದಯಾಳುವೂ, ಸ್ಮಶಾನವಾಸಿಯೂ ಆದ ರಾಮನಾಥ! ನಿನಗೆ ನಮಸ್ಕಾರವು.

೫೬. ಅಗ್ನಿಯು ಹೇಳುತ್ತಾನೆ:—ಇಂದ್ರನೇ ಮೊದಲಾದ ಸಮಸ್ತ ದಿಕ್ಪಾಲಕರೂ ಸೇವಿಸುತ್ತಿರುವ ಪಾದವುಳ್ಳವನೂ, ಯಾವಾಗಲೂ ದಿಗಂಬರನೂ ಆದ ರಾಮನಾಥ! ನಿನಗೆ ನಮಸ್ಕಾರವು.

೫೭. ವಾಯುವು ಹೇಳುತ್ತಾನೆ:—ವಿಷ್ಣುರೂಪನೂ, ಹುಲಿದೊಗಲನ್ನು ಧರಿಸಿದವನೂ ಆದ ರಾಮನಾಥ! ನಿನಗೆ ನಮಸ್ಕಾರವು. ನನಗೆ ಇಷ್ಟಾರ್ಥವನ್ನು ಕೊಡು.

೫೮. ಬೃಹಸ್ಪತಿಯು ಹೇಳುತ್ತಾನೆ:—ಅಹಂಕಾರಕ್ಕೆ ಸಾಕ್ಷಿಯೂ, ಪರಬ್ರಹ್ಮರೂಪಿಯೂ ಆದ ರಾಮನಾಥನೆ! ನಿನಗೆ ನಮಸ್ಕಾರವು. ನನ್ನ ಅಜ್ಞಾನವನ್ನು ಶೀಘ್ರವಾಗಿ ಪರಿಹರಿಸು.

ಶುಕ್ರ ಉವಾಚ :—

ವಂಚಕಾನಾಮಲಭ್ಯಾಯ ಮಹಾಮಂತ್ರಾರ್ಥರೂಪಿಣೇ ।
ನಮೋ ದ್ವೈತವಿಹೀನಾಯ ರಾಮನಾಥಾಯ ಶಂಭವೇ ॥ ೫೯ ॥

ಅಶ್ವಿನಾವೂಚತುಃ :—

ಆತ್ಮರೂಪತಯಾ ನಿತ್ಯಂ ಯೋಗಿನಾಂ ಭಾಸತೇ ಹೃದಿ ।
ಅನನ್ಯಭಾನವೇದ್ಯಾಯ ನಮಸ್ತೇ ರಾಘವೇಶ್ವರ ॥ ೬೦ ॥

ಅಗಸ್ತ್ಯ ಉವಾಚ :—

ಆದಿದೇವ ಮಹಾದೇವ ವಿಶ್ವೇಶ್ವರ ಶಿವಾಽವ್ಯಯ ।
ರಾಮನಾಥಾಂಬಿಕಾನಾಥ ಪ್ರಸೀದ ವೃಷಭಧ್ವಜ ॥ ೬೧ ॥
ಅಪರಾಧಸಹಸ್ರಂ ಮೇ ಕ್ಷಮಸ್ವ ವಿಧುಶೇಖರ ।
ಮಮಾಽಪಮಿತಿ ಪುತ್ರಾದಾವಹಂತಾಂ ಮಮ ಮೋಚಯ ॥ ೬೨ ॥

ಸುತೀಕ್ಷ್ಣ ಉವಾಚ :—

ಕ್ಷೇತ್ರಾಣಿ ರತ್ನಾನಿ ಧನಾನಿ ದಾರಾ
ಮಿತ್ರಾಣಿ ವಸ್ತ್ರಾಣಿ ಗವಾಽಶ್ವಪುತ್ರಾಃ ।
ನೈವೋಪಕಾರಾಯ ಹಿ ರಾಮನಾಥ
ಮಹ್ಯಂ ಪ್ರಯಚ್ಛ ತ್ವಮತೋ ವಿರಕ್ತಿಂ ॥ ೬೩ ॥

---

೫೯. ಶುಕ್ರನು ಹೇಳುತ್ತಾನೆ:—ವಂಚಕರಿಗೆ ಹೊಂದಲಶಕ್ಯನೂ, ಮಹಾಮಂತ್ರಾರ್ಥಸ್ವರೂಪನೂ, ಭೇದರಹಿತನೂ ಆದ ಓ ರಾಮನಾಥ! ನಿನಗೆ ನಮಸ್ಕಾರವು.

೬೦. ಅಶ್ವಿನೀದೇವತೆಗಳು ಹೇಳುತ್ತಾರೆ:—ಯಾವಾಗಲೂ ಆತ್ಮರೂಪದಿಂದ ಯೋಗಿಗಳ ಹೃದಯದಲ್ಲಿ ಪ್ರಕಾಶಿಸುವವನೂ, ಸ್ವಪ್ರಕಾಶರೂಪನೂ ಆದ ರಾಮನಾಥ! ನಿನಗೆ ನಮಸ್ಕಾರವು.

೬೧. ಅಗಸ್ತ್ಯನು ಹೇಳುತ್ತಾನೆ:—ಆದಿದೇವನೂ, ಜಗದೊಡೆಯನೂ, ನಾಶರಹಿತನೂ, ಮಂಗಳಕರನೂ, ಪಾರ್ವತೀರಮಣನೂ, ವೃಷಭವಾಹನನೂ ಆದ ರಾಮನಾಥ! ಪ್ರಸನ್ನನಾಗು.

೬೨. ಎಲೈ ಚಂದ್ರಮೌಳೀಶ್ವರನೆ! ನನ್ನ ಸಹಸ್ರಾಪರಾಧಗಳನ್ನೂ ಕ್ಷಮಿಸು. ಸುತಾದಿಗಳಲ್ಲಿರುವ ನನ್ನವರೆಂಬ ಭಾವನೆಯನ್ನು ಬಿಡಿಸು.

೬೩. ಸುತೀಕ್ಷ್ಣನು ಹೇಳುತ್ತಾನೆ:—ರಾಮನಾಥ! ಹೊಲಗದ್ದೆಗಳು, ರತ್ನಗಳು, ಹಣ, ಹೆಂಡತಿ, ಮಿತ್ರರು, ವಸ್ತ್ರಗಳು, ಗೋವುಗಳು, ಕುದುರೆಗಳು, ಪುತ್ರರು ಇವರಾರೂ ನನಗೆ ಉಪಕಾರಮಾಡತಕ್ಕವರಲ್ಲ. ಆದುದರಿಂದ ನೀನು ನನಗೆ ವೈರಾಗ್ಯವನ್ನು ಕೊಡು.

ವಿಶ್ವಾಮಿತ್ರ ಉವಾಚ :—

ಶ್ರುತಾನಿ ಶಾಸ್ತ್ರಾಣ್ಯಪಿ ನಿಷ್ಫಲಾನಿ
ತ್ರಯ್ಯಪ್ಯಧೀತಾ ವಿಫಲೈವ ನೂನಂ ।
ತ್ವಯೀಶ್ವರೇ ಚೇನ್ನ ಭವೇದ್ಧಿ ಭಕ್ತಿಃ
ಶ್ರೀರಾಮನಾಥೇ ಶಿವ ಮಾನುಷಸ್ಯ ॥ ೬೪ ॥

ಗಾಲವ ಉವಾಚ :—

ದಾನಾನಿ ಯಜ್ಞಾನಿ ಯಮಾಸ್ತಪಾಂಸಿ
ಗಂಗಾದಿತೀರ್ಥೇಷು ನಿಮಜ್ಜನಾನಿ ।
ರಾಮೇಶ್ವರಂ ತ್ವಾಂ ನ ನಮಂತಿ ಯೇ ತು
ವ್ಯರ್ಥಾನಿ ತೇಷಾಮಿತಿ ನಿಶ್ಚಯೋಽತ್ರ ॥ ೬೫ ॥

ವಸಿಷ್ಠ ಉವಾಚ :—

ಕೃತ್ವಾಽಪಿ ಪಾಪಾನ್ಯಖಿಲಾನಿ ಲೋಕ
ಸ್ತ್ವಾಮೇತ್ಯ ರಾಮೇಶ್ವರ ಭಕ್ತಿಯುಕ್ತಃ ।
ನಮೇತಚೇತ್ತಾನಿ ಲಯಂ ವ್ರಜೇಯು
ರ್ಯಥಾಽಂಧಕಾರೋ ರವಿತೇಜಸಾಽದ್ಧಾ ॥ ೬೬ ॥

ಅತ್ರಿರುವಾಚ :—

ದೃಷ್ಟ್ವಾತು ರಾಮೇಶ್ವರಮೇಕದಾಽಪಿ
ಸ್ಪೃಷ್ಟ್ವಾ ನಮಸ್ಕೃತ್ಯ ಭವಂತಮೀಶಂ ।
ಪುನರ್ನ ಗರ್ಭಂ ಸ ನರಃ ಪ್ರಯಾಯಾ
ತ್ಕಿಂ ತ್ವದ್ವಯಂ ತೇ ಲಭತೇ ಸ್ವರೂಪಂ ॥ ೬೭ ॥

---

೬೪. ವಿಶ್ವಾಮಿತ್ರನು ಹೇಳುತ್ತಾನೆ:—ಶ್ರೀರಾಮನಾಥ! ಮಾನವನಿಗೆ ನಿನ್ನಲ್ಲಿ ಭಕ್ತಿಯಿಲ್ಲದಿದ್ದರೆ ಶ್ರವಣಮಾಡಿದ ಶಾಸ್ತ್ರಗಳೂ, ಅಧ್ಯಯನಮಾಡಿದ ವೇದಗಳೂ ನಿಷ್ಫಲವಾಗುವುವು.

೬೫. ಗಾಲವನು ಹೇಳುತ್ತಾನೆ:—ಈ ಪ್ರಪಂಚದಲ್ಲಿ ರಾಮನಾಥನಾದ ನಿನ್ನನ್ನು ವಂದಿಸದ ಮಾನವರು ಮಾಡಿದ ದಾನಗಳೂ, ಯಜ್ಞಗಳೂ, ವ್ರತಗಳೂ ತಪಸ್ಸೂ ಗಂಗಾದಿ ತೀರ್ಥಗಳ ಸ್ನಾನವೂ ವ್ಯರ್ಥವಾಗುವುವು.

೬೬. ವಸಿಷ್ಠನು ಹೇಳುತ್ತಾನೆ:—ರಾಮೇಶ್ವರ! ನರರು ಸಕಲ ಪಾಪಗಳನ್ನು ಮಾಡಿದ್ದರೂ ನಿನ್ನನ್ನು ಹೊಂದಿ ಭಕ್ತಿಯಿಂದ ನಮಸ್ಕಾರ ಮಾಡಿದರೆ ಆ ಪಾಪಗಳು ಸೂರ್ಯನ ತೇಜಸ್ಸಿನಿಂದ ಕತ್ತಲೆಯು ಮಾಯವಾಗುವಂತೆ ಮಾಯವಾಗುವುವು.

೬೭. ಅತ್ರಿಯು ಹೇಳುತ್ತಾನೆ:—ರಾಮೇಶ್ವರ! ಮಾನವರು ಜಗದೊಡೆ

ಅಂಗಿರಾ ಉವಾಚ :—

ಯೋ ರಾಮನಾಥಂ ಮನುಜೋ ಭವಂತ
ಮುಪೇತ್ಯ ಬಂಧೂನ್ಪ್ರಣಮನ್ಸ್ಮರೇತ ।
ಸಂತಾರಯೇತ್ತಾನಪಿ ಸರ್ವಪಾಪಾ
ತ್ಕಿಮದ್ಭುತಂ ತಸ್ಯ ಕೃತಾರ್ಥತಾಯಾಂ ॥ ೬೮ ॥

ಗೌತಮ ಉವಾಚ :—

ಶ್ರೀರಾಮನಾಥೇಶ್ವರ ಗೂಢಮೇತ
ದ್ದ್ರಹಸ್ಯಭೂತಂ ಪರಮಂ ವಿಶೋಕಂ ।
ತ್ವತ್ಪಾದಮೂಲಂ ಭಜತಾಂ ನೃಣಾಂ ಯೇ
ಸೇವಾಂ ಪ್ರಕುರ್ವಂತಿ ಹಿ ತೇಽಪಿ ಧನ್ಯಾಃ ॥ ೬೯ ॥

ಶತಾನಂದ ಉವಾಚ :—

ವೇದಾಂತವಿಜ್ಞಾನರಹಸ್ಯವಿದ್ಭಿ
ರ್ವಿಜ್ಞೇಯಮೇತದ್ಧಿ ಮುಮುಕ್ಷುಭಿಸ್ತು ।
ಶಾಸ್ತ್ರಾಣಿ ಸರ್ವಾಣಿ ವಿಹಾಯ ದೇವ
ತ್ವತ್ಸೇವನಂ ಯದ್ರಘುವೀರನಾಥಂ ॥ ೭೦ ॥

ಭೃಗುರುವಾಚ :—

ರಾಮನಾಥ ತವಪಾದಪಂಕಜ
ದ್ವಂದ್ವಚಿಂತನವಿಧೂತಕಲ್ಮಷಃ ।
ನಿರ್ಭಯಂ ವ್ರಜತಿ ಸತ್ಸುಖಾದ್ವಯಂ
ಸುಪ್ರಭಂ ತ್ವಥ ಅಮೋಘಚಿಂತನಂ ॥ ೭೧ ॥

---

ಯನಾದ ನಿನ್ನನ್ನು ಒಂದು ಸಾರಿ ಮುಟ್ಟಿ, ನಮಸ್ಕಾರಮಾಡಿದರೆ ಮರಳಿ ಜನಿಸು ವುದಿಲ್ಲ. ನಿನ್ನಲ್ಲಿಯೇ ಐಕ್ಯನಾಗುವನು.

೬೮. ಅಂಗಿರಸ್ಸು ಹೇಳುತ್ತಾನೆ:—ನರನು ನಿನ್ನನ್ನು ಹೊಂದಿ ನಮಸ್ಕರಿ ಸುತ್ತ ತನ್ನ ಬಂಧುಗಳನ್ನು ಸ್ಮರಿಸಿದರೆ ನೀನು ಆ ಬಂಧುಗಳನ್ನೂ ಸಕಲ ಪಾಪ ಗಳಿಂದ ದಾಟಿಸುವೆ. ನಮಸ್ಕರಿಸಿದವನೂ ಧನ್ಯನಾಗುವುದರಲ್ಲಿ ಆಶ್ಚರ್ಯವೇನು?

೬೯. ಗೌತಮನು ಹೇಳುತ್ತಾನೆ:—ಶ್ರೀರಾಮನಾಥ! ರಹಸ್ಯವಾಗಿಯೂ ಉತ್ತಮವಾಗಿಯೂ, ದುಃಖರಹಿತವಾಗಿಯೂ ಇರುವ ನಿನ್ನ ಪಾದಗಳನ್ನು ಭಜಿಸುವ ಜನರನ್ನು ಸೇವಿಸುವ ಮಾನವರೂ ಧನ್ಯರು.

೭೦. ಶತಾನಂದನು ಹೇಳುತ್ತಾನೆ:—ರಾಮೇಶ್ವರ! ವೇದಾಂತರಹಸ್ಯ ವನ್ನರಿತ ಮೋಕ್ಷಾರ್ಥಿಗಳು ಸಕಲ ಶಾಸ್ತ್ರಗಳನ್ನು ಬಿಟ್ಟು ನಿನ್ನನ್ನೇ ಸೇವಿಸಬೇಕು.

೭೧. ಭೃಗುವು ಹೇಳುತ್ತಾನೆ:—ರಾಮೇಶ್ವರ! ನಿನ್ನ ಪಾದಕಮಲಗಳ

ಕುತ್ಸ ಉವಾಚ :—

ರಾಮನಾಥ ತವ ಪಾದಸೇವನಂ
ಭೋಗಮೋಕ್ಷವರದಂ ನೃಣಾಂ ಸದಾ ।
ರೌರವಾದಿ ನರಕಪ್ರಣಾಶನಂ
ಕಃ ಪುಮಾನ್ನ ಭಜತೇ ರಸಗ್ರಹಃ ॥ ೭೨ ॥

ಕಾಶ್ಯಪ ಉವಾಚ :—

ರಾಮನಾಥ ತವ ಪಾದಸೇವಿನಾಂ
ಕಿಂ ವ್ರತೈರುತ ತಪೋಭಿರಧ್ವರೈಃ ।
ವೇದಶಾಸ್ತ್ರ ಜಪಚಿಂತಯಾ ಚ ಕಿಂ
ಸ್ವರ್ಗಸಿಂಧುಪಯಸಾಽಪಿ ಕಿಂ ಫಲಂ ॥ ೭೩ ॥
ಶ್ರೀ ರಾಮನಾಥ ತ್ವಮಾಗತ್ಯ ಶೀಘ್ರಂ
ಮಮೋತ್ಕ್ರಾಂತಿಕಾಲೇ ಭವಾನ್ಯಾ ಚ ಸಾಕಂ ।
ಮಾಂ ಪ್ರಾಪಯ ಸ್ವಾತ್ಮಪಾದಾಽರವಿಂದಂ
ವಿಶೋಕಂ ವಿಮೋಹಂ ಸುಖಂ ಚಿತ್ಸ್ವರೂಪಂ ॥ ೭೪ ॥

ಗಂಧರ್ವಾ ಊಚುಃ :—

ರಾಮನಾಥ ತ್ವಮಸ್ಮಾಕಂ ಭಜತಾಂ ಭವಸಾಗರೇ ।
ಅಪಾರೇ ದುಃಖಕಲ್ಲೋಲೇ ಸ ತ್ವತ್ತೋಽನ್ಯಾ ಗತಿರ್ಹಿನಃ ॥ ೭೫ ॥

---

ಧ್ಯಾನದಿಂದ ಪಾಪಮುಕ್ತನಾದ ಮಾನವನು ಭಯರಹಿತನೂ, ಸುಖಸ್ವರೂಪನೂ, ಅತಿಶಯಕಾಂತಿಯುಳ್ಳವನೂ, ಅಮೂಲ್ಯವಾದ ಜ್ಞಾನಸ್ವರೂಪನೂ ಆದ ನಿನ್ನನ್ನು ಸೇರುವನು.

೭೨. ಕುತ್ಸನು ಹೇಳುತ್ತಾನೆ:—ರಾಮನಾಥ! ಮಾನವರಿಗೆ ಭುಕ್ತಿಮುಕ್ತಿಯನ್ನೀಯುವುದೂ, ರೌರವಾದಿ ನರಕಗಳನ್ನು ನಾಶಮಾಡುವುದೂ ಆದ ನಿನ್ನ ಪಾದಸೇವೆಯನ್ನು, ಸಾರವನ್ನು ಗ್ರಹಿಸುವ ಸಾಮರ್ಥ್ಯವುಳ್ಳ ಯಾವ ಮನುಷ್ಯನು ತಾನೆ ಮಾಡುವುದಿಲ್ಲ ?

೭೩. ಕಾಶ್ಯಪನು ಹೇಳುತ್ತಾನೆ:—ರಾಮನಾಥ ! ನಿನ್ನ ಚರಣವನ್ನು ಸೇವಿಸುವ ಮನುಷ್ಯರಿಗೆ ವ್ರತಗಳಿಂದಲೂ, ಯಾಗಗಳಿಂದಲೂ, ವೇದ, ಶಾಸ್ತ್ರ, ಜಪ, ಧ್ಯಾನಗಳಿಂದಲೂ, ಗಂಗಾಜಲದಿಂದಲೂ ಏನು ಪ್ರಯೋಜನ ?

೭೪. ನನ್ನ ಮರಣಕಾಲದಲ್ಲಿ ನೀನು ಭವಾನಿಯೊಡನೆ ಶೀಘ್ರವಾಗಿ ಬಂದು ದುಃಖವಿಲ್ಲದುದಾಗಿ ಅಜ್ಞಾನರಹಿತವೂ, ಸುಖಕರವೂ, ಜ್ಞಾನಸ್ವರೂಪವೂ ಆದ ನಿನ್ನ ಅಡಿದಾವರೆಗಳನ್ನು ಹೊಂದಿಸು.

೭೫. ಗಂಧರ್ವರು ಹೇಳುತ್ತಾರೆ:—ರಾಮನಾಥ ! ನಿನ್ನನ್ನು ಸೇವಿಸು

ಕಿನ್ನರಾ ಊಚುಃ:—

ರಾಮನಾಥ ಭವಾಽರಣ್ಯೇ ವ್ಯಾಧಿವ್ಯಾಘ್ರಭಯಾನಕೇ ।
ತ್ವಮಂತರೇಣ ನಾಽಸ್ಮಾಕಂ ಪದವೀದರ್ಶಕೋ ಭವೇತ್ ॥ ೭೬ ॥

ಯಕ್ಷಾ ಊಚುಃ:—

ರಾಮನಾಥೇಂದ್ರಿಯಾಽರಾತಿ ಬಾಧಾ ನೋ ದುಃಸಹಾ ಸದಾ ।
ತಾನ್ನಿರ್ಜೇತುಂ ಸಹಾಯಸ್ತ್ವಮಸ್ಮಾಕಂ ಭವ ಧೂರ್ಜಟೇ ॥ ೭೭ ॥

ನಾಗಾ ಊಚುಃ:—

ಅಚಿಂತ್ಯಮಹಿಮಾನಂ ತ್ವಾ ರಾಮನಾಥ ವಯಂ ಕಥಂ ।
ಸ್ತೋತುಮಲ್ಪಧಿಯಃ ಶಕ್ತಾ ಭವಿಷ್ಯಾಮೋಽಂಬಿಕಾಪತೇ ॥ ೭೮ ॥

ಕಿಂಪುರುಷಾ ಊಚುಃ:—

ನಾನಾಯೋನೌಚ ಜನನಂ ಮರಣಂ ಚಾಽಪ್ಯನೇಕಶಃ ।
ವಿನಾಶಯ ತಥಾಽಜ್ಞಾನಂ ರಾಮನಾಥ ನಮೋಽಸ್ತು ತೇ ॥ ೭೯ ॥

ವಿದ್ಯಾಧರಾ ಊಚುಃ:—

ಅಂಬಿಕಾಪತಯೇ ತುಭ್ಯಮಸಂಗಾಯ ಮಹಾತ್ಮನೇ ।
ನಮಸ್ತೇ ರಾಮನಾಥಾಯ ಪ್ರಸೀದ ವೃಷಭಧ್ವಜ ॥ ೮೦ ॥

---

ತ್ತಿರುವ ನಮಗೆ ಕೊನೆಯಿಲ್ಲದುದೂ, ದುಃಖಗಳೆಂಬ ಅಲೆಗಳುಳ್ಳುದೂ ಆದ ಸಂಸಾರಸಮುದ್ರದಲ್ಲಿ ನಿನ್ನನ್ನು ಬಿಟ್ಟರೆ ಬೇರೆ ಗತಿಯಿಲ್ಲ.

೭೬. ಕಿನ್ನರರು ಹೇಳುತ್ತಾರೆ:—ರಾಮನಾಥ! ರೋಗಗಳೆಂಬ ಹುಲಿಗಳಿಂದ ತುಂಬಿ ಭಯಂಕರವಾದ ಸಂಸಾರವೆಂಬ ಕಾಡಿನಲ್ಲಿ ನಿನ್ನನ್ನು ಬಿಟ್ಟರೆ ದಾರಿ ತೋರಿಸುವವರು ಮತ್ತಾರೂ ಇಲ್ಲ.

೭೭. ಯಕ್ಷರು ಹೇಳುತ್ತಾರೆ:—ರಾಮನಾಥ! ನಮಗೆ ಇಂದ್ರಿಯಗಳೆಂಬ ಶತ್ರುಪೀಡೆಯು ಸಹಿಸಲಶಕ್ಯವಾಗಿದೆ. ಆ ಶತ್ರುಗಳನ್ನು ಜಯಿಸುವುದಕ್ಕೆ ನೀನು ಸಹಾಯಕನಾಗು.

೭೮. ಪಾರ್ವತೀರಮಣನಾದ ಓ ರಾಮನಾಥನೆ! ಆಲೋಚಿಸಲಾಗದ ಮಾಹಾತ್ಮ್ಯಯುಳ್ಳ ನಿನ್ನನ್ನು ಸ್ತುತಿಸಲು ಅಲ್ಪಬುದ್ಧಿಯುಳ್ಳ ನಾವು ಹೇಗೆತಾನೆ ಶಕ್ತರಾಗುವೆವು?

೭೯. ಕಿಂಪುರುಷರು ಹೇಳುತ್ತಾರೆ:—ರಾಮನಾಥ! ಹಲವು ಯೋನಿಗಳಲ್ಲಿ ಹುಟ್ಟುವಿಕೆಯನ್ನೂ, ಬಹುಬಾರಿ ಸಾಯುವುದನ್ನೂ, ಪ್ರಕೃತದಲ್ಲಿ ನಮಗಿರುವ ಅಜ್ಞಾನವನ್ನೂ ಪರಿಹರಿಸು. ಇದೊ ನಿನಗೆ ನಮಸ್ಕಾರವು.

೮೦. ವಿದ್ಯಾಧರರು ಹೇಳುತ್ತಾರೆ:—ಪಾರ್ವತೀರಮಣನೂ, ರಾಗದ್ವೇಷರಹಿತನೂ, ಮಹಾತ್ಮನೂ, ವೃಷಭಧ್ವಜನೂ ಆದ ಓ ರಾಮನಾಥ! ನಿನಗೆ ನಮಸ್ಕಾರವು. ಪ್ರಸನ್ನನಾಗು.

ವಸವ ಊಚುಃ:—

ರಾಮನಾಥ ಗಣೇಶಾಯ ಗಣವೃಂದಾಽರ್ಚಿತಾಂಘ್ರಯೇ ।
ಗಂಗಾಧರಾಯ ಗುಹ್ಯಾಯ ನಮಸ್ತೇ ಪಾಹಿ ನಃ ಸದಾ ॥ ೮೧ ॥

ವಿಶ್ವೇದೇವಾ ಊಚುಃ:—

ಜ್ಞಪ್ತಿಮಾತ್ರೈಕನಿಷ್ಠಾನಾಂ ಮುಕ್ತಿದಾಯ ಸುಯೋಗಿನಾಂ ।
ರಾಮನಾಥಾಯ ಸಾಂಬಾಯ ನಮೋಽಸ್ಮಾನ್ರಕ್ಷ ಶಂಕರ ॥ ೮೨ ॥

ಮರುತ ಊಚುಃ:—

ಪರತತ್ತ್ವಾಯ ತತ್ತ್ವಾನಾಂ ತತ್ತ್ವಭೂತಾಯ ವಸ್ತುತಃ ।
ನಮಸ್ತೇ ರಾಮನಾಥಾಯ ಸ್ವಯಂಭಾನಾಯ ಶಂಭವೇ ॥ ೮೩ ॥

ಸಾಧ್ಯಾ ಊಚುಃ:—

ಸ್ವಾತಿರಿಕ್ತವಿಹೀನಾಯ ಜಗತ್ಸತ್ತಾಪ್ರದಾಯಿನೇ ।
ರಾಮೇಶ್ವರಾಯ ದೇವಾಯ ನಮೋಽವಿದ್ಯಾವಿಭೇದಿನೇ ॥ ೮೪ ॥

ಸರ್ವೇ ದೇವಾ ಊಚುಃ:—

ಸಚ್ಚಿದಾನಂದ ಸಂಪೂರ್ಣಂ ದ್ವೈತವಸ್ತುವಿವರ್ಜಿತಂ ।
ಬ್ರಹ್ಮಾತ್ಮಾನಂ ಸ್ವಯಂಭಾನಮಾದಿಮಧ್ಯಾಂತವರ್ಜಿತಂ ॥ ೮೫ ॥

---

೮೧. ವಸುಗಳು ಹೇಳುತ್ತಾರೆ:— ಪ್ರಮಥಗಣಗಳಿಗೆ ಒಡೆಯನೂ, ಪ್ರಮಥಗಣಗಳ ಗುಂಪಿನಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನೂ, ಗಂಗಾಧರನೂ ಆದ ಎಲೈ ರಾಮನಾಥನೆ! ನಿನಗೆ ನಮಸ್ಕಾರವು. ನಮ್ಮನ್ನು ಯಾವಾಗಲೂ ಕಾಪಾಡು.

೮೨. ವಿಶ್ವೇದೇವತೆಗಳು ಹೇಳುತ್ತಾರೆ:—ನಿನ್ನ ಸ್ಮರಣೆಯಲ್ಲಿ ಮಾತ್ರ ನಿರತರಾದ ಯೋಗಿಗಳಿಗೆ ಮೋಕ್ಷವನ್ನೀಯುವ ರಾಮನಾಥ! ನಿನಗೆ ನಮಸ್ಕಾರವು. ಓ ಶಂಕರ! ನಮ್ಮನ್ನು ರಕ್ಷಿಸು.

೮೩. ಮರುತ್ತುಗಳು ಹೇಳುತ್ತಾರೆ:—ಇಪ್ಪತ್ತನಾಲ್ಕು ತತ್ತ್ವಗಳಲ್ಲಿ ಉತ್ತಮ ತತ್ತ್ವರೂಪನೂ, ಯಥಾರ್ಥರೂಪನೂ, ಸ್ವಯಂಪ್ರಕಾಶನೂ ಆದ ರಾಮನಾಥ! ನಿನಗೆ ನಮಸ್ಕಾರವು.

೮೪. ಸಾಧ್ಯರು ಹೇಳುತ್ತಾರೆ:—ತನಗಿಂತ ಇತರಗಳಾದ ನಿತ್ಯವಸ್ತುಗಳಿಲ್ಲದವನೂ, ಜಗತ್ತನ್ನು ಸೃಜಿಸುವವನೂ, ಅವಿದ್ಯಾನಾಶಕನೂ ಆದ ರಾಮನಾಥ! ನಿನಗೆ ನಮಸ್ಕಾರವು.

೮೫–೯೦. ಸಮಸ್ತದೇವತೆಗಳೂ ಹೇಳುತ್ತಾರೆ:—ಸಚ್ಚಿದಾನಂದದಿಂದ ತುಂಬಿದವನೂ, ತನಗಿಂತ ಭಿನ್ನವಸ್ತುಗಳಿಲ್ಲದವನೂ, ಬ್ರಹ್ಮಸ್ವರೂಪನೂ, ಸ್ವಯಂಪ್ರಕಾಶನೂ, ಆದಿ, ಮಧ್ಯ, ಅವಸಾನಗಳಿಲ್ಲದವನೂ, ವಿಕಾರಹೀನನೂ

ಅವಿಕ್ರಿಯಮಸಂಗಂ ಚ ಪರಿಶುದ್ಧಂ ಸನಾತನಂ ।
ಆಕಾಶಾದಿ ಪ್ರಪಂಚಾನಾಂ ಸಾಕ್ಷಿಭೂತಂ ಪರಾವೃತಂ ॥ ೮೬ ॥
ಪ್ರಮಾತೀತಂ ಪ್ರಮಾಣಾನಾಮಪಿ ಬೋಧಪ್ರದಾಯಿನಂ ।
ಆವಿರ್ಭಾವಂ ತಿರೋಭಾವಸಂಕೋಚರಹಿತಂ ಸದಾ ॥ ೮೭ ॥
ಸ್ವಸ್ಮಿನ್ನಧ್ಯಸ್ತರೂಪಸ್ಯ ಪ್ರಪಂಚಸ್ಯಾಽಸ್ಯ ಸಾಕ್ಷಿಣಂ ।
ನಿರ್ಲೇಪಂ ಪರಮಾನಂದಂ ನಿರಸ್ತಸಕಲಕ್ರಿಯಂ ॥ ೮೮ ॥
ಭೂಮಾನಂದಂ ಮಹಾತ್ಮಾನಂ ಚಿದ್ರೂಪಂ ಭೋಗವರ್ಜಿತಂ ।
ರಾಮನಾಥಂ ವಯಂ ಸರ್ವೇ ಸ್ವಪಾತಕವಿಶುದ್ಧಯೇ ॥ ೮೯ ॥
ಚಿಂತಯಾಮಃ ಸದಾ ಚಿತ್ತೇ ಸ್ವಾತ್ಮಾನಂದಬುಭುತ್ಸವಃ ।
ರಕ್ಷಾಽಸ್ಮಿನ್ಕರುಣಾಸಿಂಧೋ ರಾಮನಾಥ ನಮೋಽಸ್ತು ತೇ ॥ ೯೦ ॥
ರಾಮನಾಥಾಯ ರುದ್ರಾಯ ನಮಃ ಸಂಸಾರಹಾರಿಣೇ ।
ಬ್ರಹ್ಮವಿಷ್ಣ್ವಾದಿರೂಪೇಣ ವಿಭಿನ್ನಾಯ ಸ್ವಮಾಯಯಾ ॥ ೯೧ ॥

ವಿಭೀಷಣಸಚಿವಾ ಊಚುಃ:—

ವರದಾಯ ವರೇಣ್ಯಾಯ ತ್ರಿನೇತ್ರಾಯ ತ್ರಿಶೂಲಿನೇ ।
ಯೋಗಿಧ್ಯೇಯಾಯ ನಿತ್ಯಾಯ ರಾಮನಾಥಾಯ ತೇ ನಮಃ ॥ ೯೨ ॥

ಸೂತ ಉವಾಚ:—

ಇತಿ ರಾಮಾದಿಭಿಃ ಸರ್ವೈಃ ಸ್ತುತೋ ರಾಮೇಶ್ವರಃ ಶಿವಃ ।
ಪ್ರಾಹ ಸರ್ವಾನ್ಸಮಾಹೂಯ ರಾಮಾದೀನ್ದ್ವಿಜಸತ್ತಮಾಃ ॥ ೯೩ ॥

---

ಶುದ್ಧನೂ, ಅನಾದಿಯೂ, ಆಕಾಶಾದಿ ಪ್ರಪಂಚಗಳಿಗೆ ಸಾಕ್ಷಿರೂಪನೂ, ಪ್ರಮಾಣಗಳಿಗೆ ಸಿಲುಕದವನೂ, ಜ್ಞಾನದಾತನೂ, ಯಾವಾಗಲೂ ಉತ್ಪತ್ತಿ, ತಿರೋಭಾವ, ಸಂಕೋಚಗಳಿಲ್ಲದವನೂ, ತನ್ನಲ್ಲಿ ಅಧ್ಯಸ್ತವಾದ ಈ ಪ್ರಪಂಚಕ್ಕೆ ಸಾಕ್ಷಿಭೂತನೂ, ದೋಷಸಂಬಂಧವಿಲ್ಲದವನೂ, ಆನಂದರೂಪನೂ, ಸಮಸ್ತ ಕ್ರಿಯಾರಹಿತನೂ, ಮಹಾತ್ಮನೂ, ಭೋಗರಹಿತನೂ, ಆದ ರಾಮನಾಥನನ್ನು ನಾವೆಲ್ಲರೂ ನಮ್ಮ ಪಾಪಗಳ ಶೋಧನೆಗಾಗಿಯೂ ಬ್ರಹ್ಮಾನಂದದ ಅನುಭೋಗಕ್ಕಾಗಿಯೂ ಮನಸ್ಸಿನಲ್ಲಿಯೆ ಧ್ಯಾನಿಸುತ್ತೇವೆ. ದಯಾಳುವಾದ ಎಲೈ ರಾಮನಾಥನೆ! ನಮ್ಮನ್ನು ರಕ್ಷಿಸು. ನಿನಗೆ ನಮಸ್ಕಾರವು.

೯೧. ಸಂಸಾರನಾಶಕನೂ, ಮಾಯೆಯ ಸಲುವಾಗಿ ಬ್ರಹ್ಮವಿಷ್ಣ್ವಾದಿ ರೂಪದಿಂದ ಭಿನ್ನನೂ ಆದ ಓ ರಾಮನಾಥ ! ನಿನಗೆ ನಮಸ್ಕಾರವು.

೯೨. ವಿಭೀಷಣನ ಮಂತ್ರಿಗಳು ಹೇಳುತ್ತಾರೆ:—ವರವನ್ನು ಕೊಡುವವನೂ, ಶ್ರೇಷ್ಠನೂ, ಮುಕ್ಕಣ್ಣನೂ, ತ್ರಿಶೂಲಧಾರಿಯೂ, ಯೋಗಿಗಳಿಂದ ಧ್ಯಾನಿಸಲು ಯೋಗ್ಯನೂ, ನಿತ್ಯನೂ ಆದ ಎಲೈ ರಾಮನಾಥನೆ! ನಿನಗೆ ನಮಸ್ಕಾರವು.

೯೩. ಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣೋತ್ತಮರೆ ! ಹೀಗೆ ರಾಮನೆ ಮೊದಲಾದ ಎಲ್ಲರೂ ಸ್ತುತಿಸಲು ಶಂಕರನು ಅವರೆಲ್ಲರನ್ನೂ ಕುರಿತು ಇಂತೆಂದನು.

ರಾಮರಾಮ ಮಹಾಭಾಗ ಜಾನಕೀರಮಣ ಪ್ರಭೋ ।
ಸೌಮಿತ್ರೇ ಜಾನಕಿ ಶುಭೇ ಹೇ ಸುಗ್ರೀವಮುಖಾಸ್ತಥಾ ॥ ೯೪ ॥
ಅನ್ಯೇ ಬ್ರಹ್ಮಮುಖಾ ಯೂಯಂ ಶೃಣುಧ್ವಂ ಸುಸಮಾಹಿತಾಃ ।
ಸ್ತೋತ್ರಾಽಧ್ಯಾಯಮಿಮಂ ಪುಣ್ಯಂ ಯುಷ್ಮಾಭಿಃ ಕೃತಮಾದರಾತ್ ॥ ೯೫ ॥
ಯೇ ಪಠಂತಿ ಚ ಶೃಣ್ವಂತಿ ಶ್ರಾವಯಂತಿ ಚ ಮಾನವಾಃ ।
ಮದರ್ಚನಫಲಂ ತೇಷಾಂ ಭವಿಷ್ಯತಿ ನ ಸಂಶಯಃ ॥ ೯೬ ॥
ರಾಮಚಂದ್ರಧನುಷ್ಕೋಟಿಸ್ನಾನಪುಣ್ಯಂ ಚ ವೈ ಭವೇತ್ ।
ವರ್ಷಮೇಕಂ ರಾಮಸೇತೌ ವಾಸಪುಣ್ಯಂ ಭವಿಷ್ಯತಿ ॥ ೯೭ ॥
ಗಂಧಮಾದನಮಧ್ಯಸ್ಥ ಸರ್ವತೀರ್ಥಾಽಭಿಮಜ್ಜನಾತ್ ।
ಯತ್ಪುಣ್ಯಂ ತದ್ಭವೇತ್ತೇನ ನಾಽತ್ರ ಸಂಶಯಕಾರಣಂ ॥ ೯೮ ॥
ಉಕ್ತ್ವೈವಂ ರಾಮನಾಥೋಽಪಿ ಸ್ವಾತ್ಮಲಿಂಗೇ ತಿರೋದಧೇ ।
ಸ್ತೋತ್ರಾಽಧ್ಯಾಯಮಿಮಂ ಪುಣ್ಯಂ ನಿತ್ಯಂ ಸಂಕೀರ್ತಯನ್ನರಃ ॥ ೯೯ ॥
ಜರಾಮರಣನಿರ್ಮುಕ್ತೋ ಜನ್ಮದುಃಖವಿವರ್ಜಿತಃ ।
ರಾಮನಾಥಸ್ಯ ಸಾಯುಜ್ಯಮುಕ್ತಿಂ ಪ್ರಾಪ್ನೋತ್ಯಸಂಶಯಃ ॥ ೧೦೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ರಾಮಾದಿಭೀ ರಾಮನಾಥಸ್ತೋತ್ರಕರಣಂ"ನಾಮ್ನೈಕೋನಪಂಚಾಶತ್ತಮೋಽಧ್ಯಾಯಃ

---

೯೪–೯೬. ಮಹಾಭಾಗ್ಯಶಾಲಿಯೂ, ಜಾನಕೀಪತಿಯೂ ಆದ ಎಲೈ ಶ್ರೀರಾಮನೆ! ಲಕ್ಷ್ಮಣ! ಸೀತೆ! ಸುಗ್ರೀವನೇ ಮೊದಲಾದ ಕಪಿಗಳೆ! ಬ್ರಹ್ಮಾದಿ ದೇವತೆಗಳೆ! ನೀವು ಒಮ್ಮನಸ್ಸಿನಿಂದ ಕೇಳಿರಿ. ನೀವು ಹೇಳಿದ ಸ್ತೋತ್ರವನ್ನೊಳಗೊಂಡ ಈ ಅಧ್ಯಾಯವನ್ನು ಪಠಿಸುವವರೂ, ಕೇಳುವವರೂ, ಹೇಳುವವರೂ ನನ್ನ ಪೂಜೆಯ ಫಲವನ್ನು ಪಡೆಯುವರು.

೯೭–೯೮. ಅವರಿಗೆ ಶ್ರೀರಾಮಚಂದ್ರನ ಧನುಷ್ಕೋಟಿಸ್ನಾನದ ಪುಣ್ಯವೂ, ಒಂದು ವರ್ಷ ರಾಮಸೇತುವೆಯಲ್ಲಿ ವಾಸಿಸಿದ ಫಲವೂ ಗಂಧಮಾದನದಲ್ಲಿರುವ ಸಕಲ ತೀರ್ಥಗಳಲ್ಲಿ ಮಿಂದ ಪುಣ್ಯವೂ ಲಭಿಸುವುದು. ಇದರಲ್ಲಿ ಸಂದೇಹವಿಲ್ಲ.

೯೯–೧೦೦. ರಾಮನಾಥನು ಹೀಗೆಂದು ಹೇಳಿ ಆ ಲಿಂಗದಲ್ಲಿಯೆ ಅಡಗಿ ಹೋದನು. ಈ ಸ್ತೋತ್ರಾಧ್ಯಾಯವನ್ನು ಹೇಳುವ ಮನುಷ್ಯನು ಮುಪ್ಪು, ಮರಣ, ಜನನ ದುಃಖಗಳನ್ನು ತ್ಯಜಿಸಿ ರಾಮನಾಥನ ಸಾಯುಜ್ಯಮುಕ್ತಿಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ರಾಮಾದಿಗಳೆಸಗಿದ ರಾಮನಾಥಸ್ತೋತ್ರಕರಣ"ವೆಂಬ ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಾಶತ್ತಮೋಽಧ್ಯಾಯಃ

## ಸೇತುಮಾಧವಪ್ರಶಂಸನಂ—ಪುಣ್ಯನಿಧಿಚರಿತ್ರಕಥನಂ

ಶ್ರೀ ಸೂತ ಉವಾಚ :—

ಅಥಾತಃ ಸಂಪ್ರವಕ್ಷ್ಯಾಮಿ ಸೇತುಮಾಧವವೈಭವಂ ।
ಶೃಣುಧ್ವಂ ಮುನಯೋ ಭಕ್ತ್ಯಾ ಪುಣ್ಯಂ ಪಾಪಹರಂ ಪರಂ ॥ ೧ ॥
ಪುರಾ ಪುಣ್ಯನಿಧಿರ್ನಾಮ ರಾಜಾ ಸೋಮಕುಲೋದ್ಭವಃ ।
ಮಧುರಾಂ ಪಾಲಯಾಮಾಸ ಹಾಲಾಸ್ಯೇಶ್ವರಭೂಷಿತಾಂ ॥ ೨ ॥
ಕದಾಚಿತ್ಸ ಮಹೀಪಾಲಶ್ಚತುರಂಗಬಲಾನ್ವಿತಃ ।
ಸಾಽಂತಃ ಪುರಪರೀವಾರೋ ಮಧುರಾಯಾಂ ನಿಜಂ ಸುತಂ ॥ ೩ ॥
ಸ್ಥಾಪಯಿತ್ವಾ ರಾಮಸೇತುಂ ಪ್ರಯಯೌ ಸ್ನಾನಕೌತುಕೀ ।
ತತ್ರ ಗತ್ವಾ ಧನುಷ್ಕೋಟೌ ಸ್ನಾತ್ವಾ ಸಂಕಲ್ಪಪೂರ್ವಕಂ ॥ ೪ ॥
ಅನ್ಯೇಷ್ವಪಿ ಚ ತೀರ್ಥೇಷು ತತ್ರತ್ಯೇಷು ನೃಪೋತ್ತಮಃ ।
ಸಸ್ನೌ ರಾಮೇಶ್ವರಂ ದೇವಂ ಸಿಷೇವೇ ಚ ಸಭಕ್ತಿಕಂ ॥ ೫ ॥
ಏವಂ ಸ ಬಹುಕಾಲಂ ವೈ ತತ್ರೈವ ನ್ಯವಸತ್ಸುಖಂ ।
ರಾಮಸೇತೌ ವಸನ್ಸ್ವಸ್ಮಿನ್ ಗಂಧಮಾದನಪರ್ವತೇ ॥ ೬ ॥

---

### ಕನ್ನಡದ ಅನುವಾದ

#### ಸೇತುಮಾಧವ ಪ್ರಶಂಸೆ—ಪುಣ್ಯನಿಧಿಚರಿತ್ರಕಥನ

೧. ಶ್ರೀ ಸೂತನು ಹೇಳುತ್ತಾನೆ:—ಎಲೈ ಮುನಿಗಳೆ! ಬಳಿಕ ಪುಣ್ಯಕರವೂ, ಪಾಪನಾಶಕವೂ ಆದ ಸೇತುಮಾಧವನ ಮಾಹಾತ್ಮ್ಯವನ್ನು ಹೇಳುವೆನು. ಭಕ್ತಿಯಿಂದ ಕೇಳಿರಿ.

೨. ಹಿಂದೆ ಚಂದ್ರವಂಶಸಂಭೂತನಾದ ಪುಣ್ಯನಿಧಿಯೆಂಬ ದೊರೆಯು ಹಾಲಾಸ್ಯೇಶ್ವರನಿಂದ ಅಲಂಕೃತವಾದ ಮಧುರಾನಗರವನ್ನು ಪಾಲಿಸುತ್ತಿದ್ದನು.

೩–೫. ಒಂದಾನೊಂದು ದಿನ ಆ ಅರಸನು ಚತುರಂಗಬಲ, ರಾಣಿಯರು, ಪರಿವಾರದವರು ಇವರೊಡನೆ ಮಧುರೆಯಲ್ಲಿ ತನ್ನ ಮಗನನ್ನು ರಾಜ್ಯಪರಿಪಾಲನೆಗಾಗಿ ಇರಿಸಿ ಸ್ನಾನಮಾಡಲೋಸುಗ ರಾಮಸೇತುವೆಗೆ ಹೋದನು. ಅಲ್ಲಿ ಧನುಷ್ಕೋಟಿಯಲ್ಲಿಯೂ, ಇತರ ತೀರ್ಥಗಳಲ್ಲಿಯೂ ಸಂಕಲ್ಪಪೂರ್ವಕವಾಗಿ ಮಿಂದು ರಾಮೇಶ್ವರನನ್ನು ಭಕ್ತಿಯಿಂದ ಸೇವಿಸಿದನು.

೬–೮. ಹೀಗೆ ಅವನು ಬಹಳಕಾಲ ರಾಮಸೇತುವೆಯಲ್ಲಿರುವ ಗಂಧಮಾದನಪರ್ವತದಲ್ಲಿ ಸುಖವಾಗಿ ವಾಸಿಸುತ್ತ ಒಂದಾನೊಂದು ಸಮಯದಲ್ಲಿ

ವಿಷ್ಣುಪ್ರೀತಿಕರಂ ಯಜ್ಞಂ ಕದಾಚಿದಕರೋನ್ನೃಪಃ ।
ಯಜ್ಞಾಂತಾವಸಾನೇ ರಾಜಾಽಸೌ ಮುದಾಽವಭೃಥಕೌತುಕೀ ॥ ೭ ॥
ಸಸ್ನೌ ರಾಮಧನುಷ್ಕೋಟೌ ಸದಾರಃ ಸಪರಿಚ್ಛದಃ ।
ಸೇವಿತ್ವಾ ರಾಮನಾಥಂ ಚ ಸ ವೇಶ್ಮ ಪ್ರಯಯೌ ದ್ವಿಜಾಃ ॥ ೮ ॥
ಏವಂ ನಿವಸಮಾನೇಽಸ್ಮಿನ್ರಾಜ್ಞಿ ಪುಣ್ಯನಿಧೌ ತದಾ ।
ಕದಾಚಿದ್ಧರಿಣಾ ಲಕ್ಷ್ಮೀರ್ವಿನೋದಕಲಹಾಕುಲಾ ॥ ೯ ॥
ಹರಿಣಾ ಸಮಯಂ ಕೃತ್ವಾ ನೃಪಭಕ್ತಿಂ ಪರೀಕ್ಷಿತುಂ ।
ವಿಷ್ಣುನಾ ಪ್ರೇಷಿತಾ ಲಕ್ಷ್ಮೀರ್ವೈಕುಂಠಾತ್ಕಮಲಾಲಯಾ ॥ ೧೦ ॥
ಅಷ್ಟವರ್ಷವಯೋರೂಪಾ ಪ್ರಯಯೌ ಗಂಧಮಾದನೇ ।
ತತ್ರಾಗತ್ಯ ಧನುಷ್ಕೋಟೌ ತಸ್ಥೌ ಸಾ ಕಮಲಾಲಯಾ ॥ ೧೧ ॥
ತಸ್ಮಿನ್ನವಸರೇ ರಾಜಾ ಯಯೌ ಗುಣನಿಧಿರ್ದ್ವಿಜಾಃ ।
ಸ್ನಾತುಂ ರಾಮಧನುಷ್ಕೋಟೌ ಸದಾರಃ ಸಹಸೈನಿಕಃ ॥ ೧೨ ॥
ತತ್ರ ಗತ್ವಾ ಸ ರಾಜಾಽಯಂ ಸ್ನಾತ್ವಾ ನಿಯಮಪೂರ್ವಕಂ ।
ತುಲಾಪುರುಷಮುಖ್ಯಾನಿ ಕೃತ್ವಾ ದಾನಾನಿ ಕೃತ್ಸ್ನಶಃ ॥ ೧೩ ॥
ಪ್ರಯಾತುಕಾಮೋ ಭವನಂ ಕನ್ಯಾಂ ಕಾಂಚಿದ್ದದರ್ಶ ಸಃ ।
ಅತೀವ ರೂಪಸಂಪನ್ನಾಮಷ್ಟವರ್ಷಾಂ ಶುಚಿಸ್ಮಿತಾಂ ॥ ೧೪ ॥

---

ವಿಷ್ಣುವಿಗೆ ಪ್ರೀತಿಯನ್ನೆಸಗುವ ಯಜ್ಞವನ್ನು ಮಾಡಿದನು. ಯಜ್ಞದ ಕೊನೆಯಲ್ಲಿ ಅವನು ಅವಭೃಥಸ್ನಾನಮಾಡಲು ಕುತೂಹಲವುಳ್ಳವನಾಗಿ ಪತ್ನೀ, ಪರಿವಾರದವರೊಡನೆ ರಾಮಧನುಷ್ಕೋಟಿಯಲ್ಲಿ ಮಿಂದನು. ತರುವಾಯ ರಾಮನಾಥನನ್ನು ಸೇವಿಸಿ ತನ್ನ ಮನೆಗೆ ತೆರಳಿದನು.

೯–೧೧. ಹೀಗೆ ಪುಣ್ಯನಿಧಿಯು ಅಲ್ಲಿ ವಾಸಮಾಡುತ್ತಿರಲು ಲಕ್ಷ್ಮಿಯು ಒಂದುದಿನ ವಿಷ್ಣುವಿನೊಡನೆ ಸರಸವಾಡಲಪೇಕ್ಷೆಯಿಂದ ಪುಣ್ಯನಿಧಿಯ ಭಕ್ತಿಯನ್ನು ಪರೀಕ್ಷಿಸಲೋಸುಗ, ವಿಷ್ಣುವಿನೊಡನೆ ಶಪಥಮಾಡಿ ಕೊಂಡು ವೈಕುಂಠದಿಂದ ಹೊರಟು ಎಂಟುವರ್ಷದ ಕನ್ಯೆಯ ರೂಪತಾಳಿ ಧನುಷ್ಕೋಟಿಯಲ್ಲಿರುವ ಗಂಧಮಾಧನಪರ್ವತಕ್ಕೆ ಬಂದು ಅಲ್ಲಿ ನೆಲಸಿದಳು.

೧೨. ಆ ಸಮಯದಲ್ಲಿ ಗುಣನಿಧಿಯಾದರೊ ರಾಮಧನುಷ್ಕೋಟಿಯಲ್ಲಿ ಸ್ನಾನಮಾಡಲೋಸುಗ ಪತ್ನಿಯೊಡನೆಯೂ, ಸೈನ್ಯಗಳೊಡನೆಯೂ ಹೋದನು.

೧೩–೧೪. ಅವನು ಅಲ್ಲಿ ವಿಧಿಯಂತೆ ಮಿಂದು ತುಲಾಪುರುಷವೇ ಮೊದಲಾದ ದಾನಗಳನ್ನುಮಾಡಿ ಮನೆಗೆ ಹೋಗಲಪೇಕ್ಷೆಯುಳ್ಳವನಾಗಿ ಸೌಂದರ್ಯವತಿಯೂ, ಎಂಟು ವರ್ಷ ವಯಸ್ಸಿನವಳೂ, ಮುಗುಳ್ನಗೆಯುಳ್ಳವಳೂ ಆದ ಓರ್ವ ಕನ್ಯೆಯನ್ನು ಕಂಡನು.

ದೃಷ್ಟ್ವಾ ನೃಪಸ್ತಾಂ ಪಪ್ರಚ್ಛ ಕನ್ಯಾಂ ಚಾರುವಿಲೋಚನಾಂ ।
ಚಾರುಸ್ಮಿತಾಂ ಚಾರುದತೀಂ ಬಿಂಬೋಷ್ಠೀಂ ತನುಮಧ್ಯಮಾಂ ॥ ೧೫ ॥

ಪುಣ್ಯನಿಧಿರುವಾಚ :—

ಕಾ ತ್ವಂ ಕನ್ಯೇ ಸುತಾ ಕಸ್ಯ ಕುತೋ ವಾ ತ್ವಮಿಹಾಗತಾ ।
ಅತ್ರಾಗಮೇನ ಕಿಂ ಕಾರ್ಯಂ ತವ ವತ್ಸೇ ಶುಚಿಸ್ಮಿತೇ ॥ ೧೬ ॥
ಏವಂ ನೃಪಸ್ತಾಂ ಪಪ್ರಚ್ಛ ಕನ್ಯಾಮುತ್ಪಲಲೋಚನಾಂ ।
ಏವಂ ಪೃಷ್ಟಾ ತದಾ ಕನ್ಯಾ ನೃಪಂ ತಮುವದದ್ವಿಜಾಃ ॥ ೧೭ ॥
ನ ಮೇ ಮಾತಾ ಪಿತಾ ನಾಽಸ್ತಿ ನ ಚ ಮೇ ಬಾಂಧವಾಸ್ತಥಾ ।
ಅನಾಥಾಽಹಂ ಮಹಾರಾಜ ಭವಿಷ್ಯಾಮಿ ಚ ತೇ ಸುತಾ ॥ ೧೮ ॥
ತ್ವದ್ಗೃಹೇಽಹಂ ನಿವತ್ಸ್ಯಾಮಿ ತಾತಂ ತ್ವಾಂ ಪಶ್ಯತೀ ಸದಾ ।
ಹಠಾತ್ಕೃಷ್ಯತಿ ಯೋ ವಾ ಮಾಂ ಗೃಹೀಷ್ಯತಿ ಕರೇಣ ತಂ ॥ ೧೯ ॥
ಯದಿ ಶಾಸಿಷ್ಯಸೇ ಭೂಪ ತದಾಽಹಂ ತವ ಮಂದಿರೇ ।
ವತ್ಸ್ಯಾಮಿ ತೇ ಸುತಾ ಭೂತ್ವಾ ಪಿತುರ್ಗುಣನಿಧೇ ಚಿರಂ ॥ ೨೦ ॥
ಏವಮುಕ್ತಸ್ತದಾ ಪ್ರಾಹ ಕನ್ಯಾಂ ಗುಣನಿಧಿರ್ನೃಪಃ ।
ಅಹಂ ಸರ್ವಂ ಕರಿಷ್ಯಾಮಿ ತ್ವದುಕ್ತಂ ಕನ್ಯಕೇ ಶುಭೇ ॥ ೨೧ ॥

---

೧೫. ರಾಜನು ಮನೋಹರವಾದ ಕಣ್ಣು ಮುಗುಳ್ನಗೆಯನ್ನು ಸೂಸುವ ಮುಖವುಳ್ಳವಳಾಗಿ ಸೊಗಸಾದ ಹಲ್ಲುಗಳುಳ್ಳವಳೂ, ತೊಂಡೆಹಣ್ಣಿನಂತೆ ತುಟಿಯುಳ್ಳವಳೂ, ಕೃಶವಾದ ನಡುವುಳ್ಳವಳೂ ಆದ ಅವಳನ್ನು ನೋಡಿ ಇಂತು ಪ್ರಶ್ನಿಸಿದನು.

೧೬. ಪುಣ್ಯನಿಧಿಯು ಹೇಳುತ್ತಾನೆ:—"ಎಲೌ ಕನ್ಯೆಯೆ! ನೀನಾರು? ಯಾರ ಮಗಳು? ಇಲ್ಲಿಗೇಕೆ ಬಂದೆ? ಇಲ್ಲಿ ನಿನಗೇನು ಕೆಲಸ?"

೧೭. ಎಲೈ ಬ್ರಾಹ್ಮಣರೆ! ರಾಜನು ಕನ್ನೈದಿಲೆ ಹೂವಿನಂತೆ ಕಣ್ಣುಗಳುಳ್ಳ ಆ ಕನ್ಯೆಯನ್ನು ಹೀಗೆ ಕೇಳಲು ಅವಳು ಹೇಳುತ್ತಾಳೆ:

೧೮. "ಮಹಾರಾಜ! ನನಗೆ ತಾಯಿತಂದೆಗಳೂ, ಬಂಧುಬಳಗಗಳೂ ಯಾರೂ ಇರುವುದಿಲ್ಲ. ದಿಕ್ಕಿಲ್ಲದ ನಾನು ನಿನ್ನ ಮಗಳಾಗುವೆನು.

೧೯–೨೦. ತಾತ! ನಾನು ನಿನ್ನ ಮನೆಯಲ್ಲಿ ನಿನ್ನನ್ನು ನೋಡುತ್ತ ವಾಸಿಸುವೆನು. ಯಾವನು ಕನ್ಯೆಯಾದ ನನ್ನನ್ನು ಬಲಾತ್ಕಾರವಾಗಿ ಎಳೆಯುವನೊ ಅವನನ್ನು ನೀನು ಶಿಕ್ಷಿಸುವೆಯಾದರೆ ನಾನು ಮಗಳಾಗಿ ನಿನ್ನ ಭವನದಲ್ಲಿ ವಾಸಿಸುವೆನು."

೨೧. ಆ ಕನ್ಯೆಯು ಹೀಗೆನ್ನಲು ಪುಣ್ಯನಿಧಿಯು, "ಎಲೌ ಕನ್ಯೆಯೆ! ನೀನು ಹೇಳಿದ್ದನ್ನೆಲ್ಲವನ್ನೂ ಮಾಡುವೆನು.

ಮಮಾಽಪಿ ದುಹಿತಾ ನಾಽಸ್ತಿ ಪುತ್ರೋಽಸ್ತ್ಯೇಕಃ ಕುಲೋದ್ವಹಃ ।
ತವ ಯಸ್ಮಿನ್ರುಚಿರ್ಭದ್ರೇ ತ್ವಾಂ ತಸ್ಮೈ ಪ್ರದದಾಮ್ಯಹಂ ॥ ೨೨ ॥
ಆಗಚ್ಛ ಮದ್ಗೃಹಂ ಕನ್ಯೇ ಮಮ ಚಾಽಂತಃಪುರೇ ವಸ ।
ಮದ್ಭಾರ್ಯಾಯಾಃ ಸುತಾ ಭೂತ್ವಾ ಯಥಾ ಕಾಮಮನಿಂದಿತೇ ॥ ೨೩ ॥
ಇತ್ಯುಕ್ತಾ ಸಾ ನೃಪೇಣಾಽಥ ಕನ್ಯಾ ಕಮಲಲೋಚನಾ ।
ತಥಾಽಸ್ತ್ವಿತಿ ನೃಪಂ ಪ್ರೋಚ್ಯ ತೇನ ಸಾಕಂ ಗೃಹಂ ಯಯೌ ॥ ೨೪ ॥
ರಾಜಾ ಸ್ವಭಾರ್ಯಾಹಸ್ತೇ ತಾಂ ಪ್ರದದೌ ಕನ್ಯಕಾಂ ಶುಭಾಂ ।
ಅಬ್ರವೀಚ್ಚ ಸ್ವಕಾಂ ಭಾರ್ಯಾಂ ರಾಜಾ ವಿಂಧ್ಯಾವಲಿಂ ತದಾ ॥ ೨೫ ॥
ಆವಯೋಃ ಕನ್ಯಕಾ ಚೇಯಂ ರಾಜ್ಞಿ ವಿಂಧ್ಯಾವಲೇ ಶುಭೇ ।
ರಕ್ಷೇಮಾಂ ಸರ್ವಥಾ ತ್ವಂ ವೈ ಪುರುಷಾಽಂತರತಃ ಪ್ರಿಯೇ ॥ ೨೬ ॥
ಇತೀರಿತಾ ನೃಪೇಣಾಽಸೌ ಭಾರ್ಯಾ ವಿಂಧ್ಯಾವಲಿಸ್ತದಾ ।
ಓಮಿತ್ಯುಕ್ತ್ವಾಽಥ ತಾಂ ಕನ್ಯಾಂ ಪುತ್ರೀಂ ಜಗ್ರಾಹ ಪಾಣಿನಾ ॥ ೨೭ ॥
ಪೋಷಿತಾ ಪಾಲಿತಾ ರಾಜ್ಞಾ ಸುತವತ್ಕನ್ಯಕಾ ಚ ಸಾ ।
ನ್ಯವಾತ್ಸೀತ್ಸುಸುಖಂ ರಾಜ್ಞೋ ಭವನೇ ಲಾಲಿತಾ ಸದಾ ॥ ೨೮ ॥
ಅಥ ವಿಷ್ಣುರ್ಜಗನ್ನಾಥೋ ಲಕ್ಷ್ಮೀಮನ್ವೇಷ್ಟುಮಾದರಾತ್ ।
ಆರೂಢವಿನತಾನಂದೋ ವೈಕುಂಠಾನ್ನಿರ್ಯಯೌ ದ್ವಿಜಾಃ ॥ ೨೯ ॥

---

೨೨. ನನಗೂ ಹೆಣ್ಣುಮಕ್ಕಳಿಲ್ಲ. ಒಬ್ಬನೇ ಒಬ್ಬ ಮಗನಿರುವನು. ನೀನು ಯಾರನ್ನು ಒಪ್ಪುವೆಯೋ ಅವನಿಗೇ ನಿನ್ನನ್ನು ಕೊಟ್ಟು ಮದುವೆಮಾಡುವೆನು.

೨೩. ಎಲೌ ಕನ್ಯೆಯೆ! ಬಾ. ನನ್ನ ಅಂತಃಪುರದಲ್ಲಿ ನನ್ನ ಪತ್ನಿಗೆ ಮಗಳಾಗಿ ವಾಸಮಾಡು.''

೨೪. ರಾಜನು ಹೀಗೆನ್ನಲು ಆ ಕಮಲಾಕ್ಷಿಯು ಹಾಗೆಯೇ ಆಗಲೆಂದು ಅವನೊಡನೆ ಮನೆಗೆ ಹೋದಳು.

೨೫. ದೊರೆಯು ಆ ಕನ್ಯೆಯನ್ನು ತನ್ನ ಹೆಂಡತಿಗೆ ಒಪ್ಪಿಸಿ ವಿಂಧ್ಯಾವಲಿಯೆಂಬ ಅವಳನ್ನು ಕುರಿತು ಇಂತೆಂದನು.

೨೬. "ಪ್ರಿಯಳೆ! ಇವಳು ನಮ್ಮಿಬ್ಬರಿಗೂ ಕನ್ಯೆಯಾಗಿ ದೊರತಿರುವಳು. ಇವಳನ್ನು ಪರಪುರುಷರಿಂದ ಕಾಪಾಡು.''

೨೭. ರಾಜನು ಹೀಗೆ ಹೇಳಲು ವಿಂಧ್ಯಾವಲಿಯು ಹಾಗೆಯೇ ಆಗಲೆಂದು ಆ ಕನ್ಯೆಯನ್ನು ಮಗಳನ್ನಾಗಿ ಸ್ವೀಕರಿಸಿದಳು.

೨೮. ರಾಜನು ಆ ಕನ್ಯೆಯನ್ನು ಮಗಳಂತೆ ಪೋಷಿಸುತ್ತಿರಲು ಅವಳು ಅವನ ಮನೆಯಲ್ಲಿ ಸುಖವಾಗಿ ವಾಸಮಾಡುತ್ತಿದ್ದಳು.

೨೯. ಬಳಿಕ ಜಗದೊಡೆಯನಾದ ವಿಷ್ಣುವು ಆ ಲಕ್ಷ್ಮಿಯನ್ನು ಹುಡುಕುವುದಕ್ಕಾಗಿ ಗರುಡನನ್ನೇರಿ ಅತ್ಯಾದರದಿಂದ ವೈಕುಂಠದಿಂದ ಹೊರಟನು.

ವಿನಿರ್ಗತ್ಯ ಸ ವೈಕುಂಠಾದ್ವಿಲಂಘಿತವಿಯತ್ಪಥಃ ।
ಬಭ್ರಾಮ ಚ ಬಹೂನ್ದೇಶಾಂಲ್ಲಕ್ಷ್ಮೀಂ ತತ್ರ ನ ದೃಷ್ಟವಾನ್ ॥ ೩೦ ॥
ರಾಮಸೇತುಮಥಾಗಚ್ಛದ್ಗಂಧಮಾದನಪರ್ವತೇ ।
ಅನ್ವಿಷ್ಯ ಸರ್ವತೋ ರಾಮಸೇತುಂ ಬಭ್ರಾಮ ಚೇಂದಿರಾಂ ॥ ೩೧ ॥
ಏತಸ್ಮಿನ್ನೇವ ಕಾಲೇ ಸಾ ಪುಷ್ಪಾಽವಚಯಕೌತುಕಾತ್ ।
ಸಖೀಭಿಃ ಕನ್ಯಕಾಯಾಸೀದ್ಭವನೋದ್ಯಾನಪಾದಪಾನ್ ॥ ೩೨ ॥
ಪುಷ್ಪಾಣ್ಯವಚಿನೋತಿ ಸ್ಮ ಸಖೀಭಿಃ ಸಹ ಕಾನನೇ ।
ತತ್ರಾಗತ್ಯ ತತೋ ವಿಷ್ಣುರ್ವಿಪ್ರರೂಪಧರೋ ದ್ವಿಜಾಃ ॥ ೩೩ ॥
ಗಂಗಾಂಭೋವಿದಧತ್ಸ್ಕಂಧೇ ವಹನ್ಛತ್ರಂ ಕರೇಣ ಚ ।
ಗಂಗಾಸ್ನಾಯಿದ್ವಿಜಸ್ಯೇವ ರಚಯನ್ವೇಷಮಾತ್ಮನಃ ॥ ೩೪ ॥
ಧಾರಯನ್ದಕ್ಷಿಣೇ ಪಾಣೌ ಕುಶಗ್ರಂಥಿಪವಿತ್ರಕಂ ।
ಭಸ್ಮೋದ್ಧೂಲಿತ ಸರ್ವಾಂಗಸ್ತ್ರಿಪುಂಡ್ರಾವಲಿಶೋಭಿತಃ ॥ ೩೫ ॥
ಪ್ರಜಪನ್ ಶಿವನಾಮಾನಿ ಧೃತರುದ್ರಾಕ್ಷಮಾಲಿಕಃ ।
ಸೋತ್ತರೀಯಃ ಶುಚಿರ್ವಿಪ್ರಾಃ ಸಮಾಯಾತೋ ಜನಾರ್ದನಃ ॥ ೩೬ ॥
ತಮಾಗತಂ ದ್ವಿಜಂ ದೃಷ್ಟ್ವಾ ಸ್ತಬ್ಧಾಽತಿಷ್ಠತ ಕನ್ಯಕಾ ।
ಅಪಶ್ಯದಷ್ಟವರ್ಷಾಂ ತಾಂ ವಲ್ಲಭಾಂ ಪುಷ್ಪಹಾರಿಣೀಂ ॥ ೩೭ ॥

---

೩೦. ಅವನು ವೈಕುಂಠದಿಂದ ಹೊರಟು ಆಕಾಶಮಾರ್ಗವನ್ನು ದಾಟಿ ಬಹು ದೇಶಗಳಲ್ಲಿ ಸಂಚರಿಸಿದನು. ಎಲ್ಲಿಯೂ ಲಕ್ಷ್ಮಿಯು ಕಾಣಲಿಲ್ಲ.

೩೧. ಬಳಿಕ ರಾಮಸೇತುವೆಗೆ ಹೋಗಿ ಅಲ್ಲಿರುವ ಗಂಧಮಾದನಪರ್ವತದಲ್ಲಿ ಆಕೆಯನ್ನೆ ಹುಡುಕುತ್ತ ಎಲ್ಲೆಡೆಯಲ್ಲಿಯೂ ಸಂಚರಿಸಿದನು.

೩೨. ಈ ಸಮಯದಲ್ಲಿ ಆ ಕನ್ಯೆಯೂ ಅರಮನೆಯ ತೋಟದಲ್ಲಿರುವ ಗಿಡಗಳಲ್ಲಿ ಹೂವುಗಳನ್ನು ಬಿಡಿಸಲು ಕುತೂಹಲದಿಂದ ಸಖಿಯರೊಡನೆ ಬಂದಳು.

೩೩–೩೬. ಅವಳು ಸಖಿಯರೊಡನೆ ಅಲ್ಲಿ ಹೂವುಗಳನ್ನು ಬಿಡಿಸುತ್ತಿರಲು ವಿಷ್ಣುವು ಬ್ರಾಹ್ಮಣರೂಪವನ್ನು ತಾಳಿ ಹೆಗಲಿನಲ್ಲಿ ಗಂಗೆಯ ಬಿಂದಿಗೆಯನ್ನು ಧರಿಸಿ, ಕೈಯಲ್ಲಿ ಕೊಡೆಯನ್ನು ಹಿಡಿದು, ಗಂಗಾಸ್ನಾನ ಮಾಡುವ ಬ್ರಾಹ್ಮಣನಂತೆ ವೇಷವನ್ನು ರಚಿಸಿ ಬಲಗೈಯಲ್ಲಿ ದರ್ಭೆಯ ಪವಿತ್ರವನ್ನೂ ಇಟ್ಟುಕೊಂಡು, ತ್ರಿಪುಂಡ್ರಧಾರಿಯಾಗಿ, ಸರ್ವಾಂಗಗಳಿಗೆ ಭಸ್ಮವನ್ನು ಹಚ್ಚಿಕೊಂಡು ರುದ್ರಾಕ್ಷಮಾಲೆಯನ್ನುಧರಿಸಿ, ಉತ್ತರೀಯಸಹಿತನಾಗಿ ಶಿವನಾಮವನ್ನು ಜಪಿಸುತ್ತ ಅಲ್ಲಿಗೆ ಬಂದನು.

೩೭–೩೮. ಆ ಕನ್ಯೆಯು ಈರೀತಿ ಬಂದಿರುವ ಬ್ರಾಹ್ಮಣನನ್ನು ಕಂಡು ಸ್ತಬ್ಧ

ದೃಷ್ಟ್ವಾ ಸ ತ್ವರಯಾ ವಿಪ್ರಃ ಕನ್ಯಾಂ ಮಧುರಭಾಷಿಣೀಂ ।
ಹಠಾತ್ಕೃತ್ಯ ಕರೇಣಾಽಸೌ ಜಗ್ರಾಹ ಗರುಡಧ್ವಜಃ ॥ ೩೮ ॥
ತದಾ ಚುಕ್ರೋಶ ಸಾ ಕನ್ಯಾ ಸಖೀಭಿಃ ಸಹ ಕಾನನೇ ।
ತಮಾಕ್ರೋಶಂ ಸಮಾಕರ್ಣ್ಯ ರಾಜಾ ಸ ತು ಸಮಾಗತಃ ॥ ೩೯ ॥
ಪ್ರಯಯೌ ಭವನೋದ್ಯಾನಂ ವೃತಃ ಕತಿಪಯೈರ್ಭಟೈಃ ।
ಗತ್ವಾ ಪಪ್ರಚ್ಛ ತಾಂ ಕನ್ಯಾಂ ತತ್ಸಖೀರಪಿ ಭೂಪತಿಃ ॥ ೪೦ ॥
ಕಿಮರ್ಥಮಧುನಾ ಕ್ರುಷ್ಟಂ ಸಖೀಭಿಃ ಸಹ ಕನ್ಯಕೇ ।
ತ್ವಯಾ ತು ಭವನೋದ್ಯಾನೇ ತತ್ರ ಕಾರಣಮುಚ್ಯತಾಂ ॥ ೪೧ ॥
ಕೇನ ತ್ವಂ ಪರಿಭೂತಾಽಸಿ ಹಠಾತ್ಕೃಷ್ಯ ಸುತೇ ಮಮ ।
ಇತಿ ಪೃಷ್ಟಾ ತಮಾಚಷ್ಟ ಕನ್ಯಾ ಗುಣನಿಧಿಂ ನೃಪಂ ।
ಬಾಷ್ಪಪೂರ್ಣಾನನಾ ಖಿನ್ನಾ ರುಷಿತಾ ಭೃಶಕಾತರಾ ॥ ೪೨ ॥

ಕನ್ಯೋವಾಚ :—

ಅಯಂ ವಿಪ್ರೋ ಹಠಾತ್ಕೃತ್ಯ ಜಗೃಹೇ ಪಾಂಡ್ಯನಾಥ ಮಾಂ ॥ ೪೩ ॥
ತಾತಾಽತ್ರ ವೃಕ್ಷಮೂಲೇಽಸೌ ಸತಿಷ್ಠತ್ಯಕುತೋ ಭಯಃ ।
ತದಾಕರ್ಣ್ಯ ವಚಸ್ತಸ್ಯಾ ರಾಜಾ ಗುಣನಿಧಿಃ ಸುಧೀಃ ॥ ೪೪ ॥

---

ಳಾಗಿ ನಿಂತಳು. ಬ್ರಾಹ್ಮಣರೂಪಿಯಾದ ಆ ವಿಷ್ಣುವು, ಎಂಟುವರ್ಷ ವಯಸ್ಸಿನ ಕನ್ಯೆಯಾಗಿ ಹೂವನ್ನು ಬಿಡಿಸುತ್ತಿರುವ ತನ್ನ ಪ್ರಿಯೆಯನ್ನು ಕಂಡು ಅವಳನ್ನು ವೇಗದಿಂದ ಎಳೆದು ಇದ್ದಕ್ಕಿದ್ದಂತೆಯೆ ಕೈ ಹಿಡಿದುಕೊಂಡನು.

೩೯. ಆಗ ಅವಳು ಸಖಿಯರೊಡನೆ ಕೂಗಿಕೊಂಡಳು. ಆ ಕೂಗನ್ನು ಕೇಳಿ ರಾಜನೂ ಅಲ್ಲಿಗೆ ಬಂದನು.

೪೦–೪೨. ದೊರೆಯು ಕೆಲವರು ಯೋಧರೊಡನೆ ಭವನೋದ್ಯಾನಕ್ಕೆ ತೆರಳಿ, "ಮಗು! ಈಗ ನೀನು ಸಖಿಯರೊಡನೆ ಏತಕ್ಕೆ ಕೂಗಿಕೊಂಡೆ? ಅದಕ್ಕೆ ಕಾರಣವನ್ನು ಹೇಳು. ನಿನ್ನನ್ನು ಬಲಾತ್ಕಾರಮಾಡಿ ಎಳೆದು ಅವಮಾನಮಾಡಿದವರು ಯಾರು?" ಎಂದು ಆ ಕನ್ಯೆಯನ್ನೂ, ಅವಳ ಸಖಿಯರನ್ನೂ ಕೇಳಿದನು. ದೊರೆಯು ಹೀಗೆ ಕೇಳಲು ಆ ಕನ್ಯೆಯು ಕೋಪಗೊಂಡು ಕಂಬನಿಯಿಡುತ್ತ ರಾಜನನ್ನು ಕುರಿತು ಅತ್ಯಂತ ಭೀತಿಯಾಗಿ ಹೀಗೆಂದಳು:

೪೩–೪೬. ಕನ್ಯೆಯು ಹೇಳುತ್ತಾಳೆ:—"ಪಾಂಡ್ಯರಾಜ! ಈ ಬ್ರಾಹ್ಮಣನು ನನ್ನನ್ನು ಬಲಾತ್ಕಾರದಿಂದ ಎಳೆದು ಹಿಡಿದುಕೊಂಡಿರುವನು. ಇವನು ಈ ಮರದ ಬುಡದಲ್ಲಿ ಭಯವಿಲ್ಲದೆಯೆ ನಿಂತಿದ್ದಾನೆ." ರಾಜನು ಅವಳ ಮಾತನ್ನು ಕೇಳಿ ಆ ಬ್ರಾಹ್ಮಣನ ಬಲವನ್ನರಿಯದೆ ಬಲಾತ್ಕಾರದಿಂದ ಅವನನ್ನು ಹಿಡಿದು

ಜಗ್ರಾಹ ತರಸಾ ವಿಪ್ರಮವಿದ್ವಾಂಸ್ತದ್ಬಲಂ ಹಠಾತ್ ।
ರಾಮನಾಥಾಲಯಂ ನೀತ್ವಾ ನಿಗೃಹ್ಯ ಚ ಹಠಾತ್ತದಾ ॥ ೪೫ ॥
ಬಧ್ವಾ ನಿಗಡಪಾಶಾಭ್ಯಾಮಾನಯನ್ಮಂಡಪಂ ಚ ತಂ ।
ಆತ್ಮಪುತ್ರೀಂ ಸಮಾಶ್ವಾಸ್ಯ ಶುದ್ಧಾಂ ತಮನಯನ್ನೃಪಃ ॥ ೪೬ ॥
ಸ್ವಯಂ ಚ ಪ್ರಯಯೌ ರಮ್ಯಂ ಭವನಂ ನೃಪಪುಂಗವಃ ।
ತತೋ ರಾತ್ರೌ ಸ್ವಪನ್ರಾಜಾ ಸ್ವಪ್ನೇ ವಿಪ್ರಂ ದದರ್ಶ ತಂ ॥ ೪೭ ॥
ಶಂಖಚಕ್ರಗದಾಪದ್ಮವನಮಾಲಾವಿಭೂಷಿತಂ ।
ಕೌಸ್ತುಭಾಲಂಕೃತೋರಸ್ಕಂ ಪೀತಾಂಬರಧರಂ ಹರಿಂ ॥ ೪೮ ॥
ಕಾಲಮೇಘಚ್ಛವಿಂ ಕಾಂತಂ ಗರುಡೋಪರಿ ಸಂಸ್ಥಿತಂ ।
ಚಾರುಸ್ಮಿತಂ ಚಾರುದಂತಂ ಲಸನ್ಮಕರಕುಂಡಲಂ ॥ ೪೯ ॥
ವಿಷ್ವಕ್ಸೇನಪ್ರಭೃತಿಭಿಃ ಕಿಂಕರೈರುಪಸೇವಿತಂ ।
ಶೇಷಪರ್ಯಂಕಶಯನಂ ನಾರದಾದಿಮುನಿಸ್ತುತಂ ॥ ೫೦ ॥
ದದರ್ಶ ಚ ಸ್ವಕಾಂ ಕನ್ಯಾಂ ವಿಕಾಸಿಕಮಲಸ್ಥಿತಾಂ ।
ಧೃತಪಂಕಜಹಸ್ತಾಂ ತಾಂ ನೀಲಕುಂಚಿತಮೂರ್ಧಜಾಂ ॥ ೫೧ ॥
ವಿಷ್ಣುವಕ್ಷಸ್ಥಲಾವಾಸಾಂ ಸಮುನ್ನತಪಯೋಧರಾಂ ।
ದಿಗ್ಗಜೈರಭಿಷಿಕ್ತಾಂಗೀಂ ಶ್ಯಾಮಾಂ ಪೀತಾಂಬರಾವೃತಾಂ ॥ ೫೨ ॥

---

ಕೊಂಡು ರಾಮನಾಥಾಲಯಕ್ಕೆ ಕರೆದುಕೊಂಡುಹೋಗಿ ನಿಗ್ರಹಿಸಿ, ಬೇಡಿ ಮತ್ತು ಹಗ್ಗಗಳಿಂದ ಕಟ್ಟಿ ಮಂಡಪಕ್ಕೆ ಕರೆತಂದನು. ತನ್ನ ಮಗಳನ್ನು ಸಮಾಧಾನ ಮಾಡಿ ಅಂತಃಪುರಕ್ಕೆ ಕಳುಹಿಸಿದನು.

೪೭. ತರುವಾಯ ಆ ದೊರೆಯು ತನ್ನ ರಮ್ಯಭವನವನ್ನುಸೇರಿ, ಅಲ್ಲಿ ರಾತ್ರಿ ನಿದ್ರಿಸುತ್ತ ಸ್ವಪ್ನದಲ್ಲಿಯೂ ಆ ಬ್ರಾಹ್ಮಣನನ್ನೇ ಕಂಡನು.

೪೮–೫೦. ಶಂಖ, ಚಕ್ರ, ಗದಾ, ಪದ್ಮ, ವನಮಾಲೆಗಳಿಂದ ಅಲಂಕೃತನೂ, ಕೌಸ್ತುಭಮಣಿಯಿಂದ ಭೂಷಿತವಾದ ಎದೆಯುಳ್ಳವನೂ, ಪೀತಾಂಬರವನ್ನುಟ್ಟವನೂ, ನೀಲಮೇಘದಂತೆ ಕಾಂತಿಯುಳ್ಳವನೂ, ಮನೋಹರನೂ, ಗರುಡನ ಮೇಲೆ ಕುಳಿತಿರುವವನೂ, ಮನೋಹರವಾದ ಮುಗುಳ್ನಗೆ ಚೆಲ್ಲುವ ಹಲ್ಲುಗಳುಳ್ಳವನೂ, ಕಂಗೊಳಿಸುತ್ತಿರುವ ಮೊಸಳೆಯ ಆಕಾರವಾದ ಕುಂಡಲಗಳುಳ್ಳವನೂ, ವಿಷ್ವಕ್ಸೇನನೇ ಮೊದಲಾದ ಸೇವಕರಿಂದ ಸೇವಿಸಲ್ಪಟ್ಟವನೂ, ಶೇಷತಲ್ಪದಲ್ಲಿ ಮಲಗಿರುವವನೂ, ನಾರದಾದಿ ಮಹಾ ಮುನಿಗಳಿಂದ ಸ್ತುತಿಸಲ್ಪಟ್ಟವನೂ ಆದ ನಾರಾಯಣನನ್ನೇ ಆ ದೊರೆಯು ಕಂಡನು.

೫೧–೫೯. ಹಾಗೆಯೇ ಅರಳಿದ ಕಮಲದಲ್ಲಿ ಕುಳಿತಿರುವವಳೂ, ತಾವರೆ ಹೂವನ್ನು ಹಿಡಿದವಳೂ, ಕರಿಬಣ್ಣದ ತಲೆಗೂದಲುಳ್ಳವಳೂ, ವಿಷ್ಣುವಿನ

ಸ್ವರ್ಣಪಂಕಜಸಂಕ್ಲೃಪ್ತಮಾಲಾಽಲಂಕೃತಮೂರ್ಧಜಾಂ ।
ದಿವ್ಯಾಭರಣಶೋಭಾಢ್ಯಾಂ ಚಾರುಹಾರವಿಭೂಷಿತಾಂ ॥ ೫೩ ॥
ಅನರ್ಘರತ್ನಸಂಕ್ಲೃಪ್ತನಾಸಾಭರಣಶೋಭಿತಾಂ ।
ಸುವರ್ಣನಿಷ್ಕಾಭರಣಾಂ ಕಾಂಚೀನೂಪುರರಾಜಿತಾಂ ॥ ೫೪ ॥
ಮಹಾಲಕ್ಷ್ಮೀಂ ದದರ್ಶಾಽಸೌ ರಾಜಾ ಧಾತ್ರ್ಯಾಂ ಸ್ವಕಾಂ ಸುತಾಂ ।
ಏವಂ ದೃಷ್ಟ್ವಾ ನೃಪಃ ಸ್ವಪ್ನೇ ವಿಪ್ರಂ ತಂ ಸ್ವಸುತಾಮಪಿ ॥ ೫೫ ॥
ಉತ್ಥಿತಃ ಸಹಸಾ ತಲ್ಪಾತ್ಕನ್ಯಾಗೃಹಮವಾಪ ಚ ।
ತಥೈವ ದೃಷ್ಟವಾನ್ಕನ್ಯಾಂ ಯಥಾ ಸ್ವಪ್ನೇ ದದರ್ಶ ತಾಂ ॥ ೫೬ ॥
ಅಥೋದಿತೇ ಸವಿತರಿ ಕನ್ಯಾಮಾದಾಯ ಭೂಮಿಪಃ ।
ರಾಮನಾಥಾಲಯಂ ಪ್ರಾಪ ಬ್ರಾಹ್ಮಣಂ ನ್ಯಸ್ತವಾನ್ಯತಃ ॥ ೫೭ ॥
ಸಮಂಡಪವರೇ ವಿಪ್ರಂ ದದರ್ಶ ಹರಿರೂಪಿಣಂ ।
ಯಥಾ ದದರ್ಶ ಸ್ವಪ್ನೇ ತಂ ವನಮಾಲಾದಿ ಚಿಹ್ನಿತಂ ।
ವಿಷ್ಣುಂ ವಿಜ್ಞಾಯ ತುಷ್ಟಾವ ನೃಪತಿರ್ಹರಿಮೀಶ್ವರಂ ॥ ೫೮ ॥

ಪುಣ್ಯನಿಧಿರುವಾಚ :—

ನಮಸ್ತೇ ಕಮಲಾಕಾಂತ ಪ್ರಸೀದ ಗರುಡಧ್ವಜ ॥ ೫೯ ॥

---

ವಕ್ಷಸ್ಥಳದಲ್ಲಿ ವಾಸಿಸುವವಳೂ, ಉನ್ನತಕುಚವುಳ್ಳವಳೂ, ದಿಗ್ಗಜಗಳಿಂದ ಅಭಿಷೇಕಮಾಡಲ್ಪಟ್ಟ ಅವಯವವುಳ್ಳವಳೂ, ಶ್ಯಾಮವರ್ಣಳೂ, ಪೀತಾಂಬರವನ್ನುಟ್ಟವಳೂ, ಚಿನ್ನದ ಕಮಲದ ಹೂವಿನಮಾಲೆಯನ್ನು ಮುಡಿದವಳೂ, ದಿವ್ಯಾಭರಣಗಳ ಕಾಂತಿಯುಳ್ಳವಳೂ, ಸುಂದರವಾದ ಹಾರದಿಂದ ಅಲಂಕೃತಳೂ, ಅಮೂಲ್ಯವಾದ ರತ್ನದಿಂದಾದ ಮೂಗುತಿಯಿಂದ ಪ್ರಕಾಶಗೊಂಡವಳೂ, ಚಿನ್ನದ ಹಾರಗಳಿಂದ ಅಲಂಕೃತಳೂ, ಡಾಬು, ಕಾಲ್ಗೆಜ್ಜೆಗಳಿಂದ ವಿರಾಜಿಸುವವಳೂ, ಮಹಾಲಕ್ಷ್ಮೀಸ್ವರೂಪಳೂ ಆದ ತನ್ನ ಮಗಳನ್ನು ಕಂಡನು. ಅರಸನು ಹೀಗೆ ಸ್ವಪ್ನದಲ್ಲಿ ಆ ಬ್ರಾಹ್ಮಣನನ್ನೂ, ತನ್ನ ಮಗಳನ್ನೂ ನೋಡಿ ಹಾಸಿಗೆಯಿಂದ ಕೂಡಲೆ ಎದ್ದು ಕನ್ಯಾಭವನಕ್ಕೆ ಹೋಗಿ ಸ್ವಪ್ನದಲ್ಲಿ ಕಂಡಿದ್ದಂತೆಯೇ ಇರುವ ಆ ಕನ್ಯೆಯನ್ನು ಈಕ್ಷಿಸಿದನು.

೫೭–೫೮. ಬಳಿಕ ಸೂರ್ಯೋದಯವಾಗಲು ದೊರೆಯು ಕನ್ಯೆಯನ್ನು ಕರೆದುಕೊಂಡು ರಾಮನಾಥಾಲಯವನ್ನು ಸೇರಿ ತಾನು ಸ್ವಪ್ನದಲ್ಲಿ ಕಂಡಂತೆ ವನಮಾಲಾದಿಗಳುಳ್ಳ ವಿಷ್ಣುರೂಪಿಯಾದ ಆ ಬ್ರಾಹ್ಮಣನನ್ನು ಅಲ್ಲಿ ಮಂಟಪದಲ್ಲಿ ಕಂಡು ಅವನು ವಿಷ್ಣುವೇ ಎಂದರಿತು ಹೀಗೆ ಸ್ತುತಿಸಿದನು.

೫೯–೬೦. ಪುಣ್ಯನಿಧಿಯು ಹೇಳುತ್ತಾನೆ:—ಕಮಲಾಪತಿಯೂ, ಗರುಡಧ್ವಜನೂ ಆದ ಎಲೈ ನಾರಾಯಣನೆ! ಪ್ರಸನ್ನನಾಗು. ಶಾರ್ಙ್ಗಧಾರಿಯಾದ ನಾರಾ

ಶಾರ್ಙ್ಗಪಾಣೇ ನಮಸ್ತುಭ್ಯಮಪರಾಧಂ ಕ್ಷಮಸ್ವ ಮೇ ।
ನಮಸ್ತೇ ಪುಂಡರೀಕಾಕ್ಷ ಚಕ್ರಪಾಣೇ ಶ್ರಿಯಃಪತೇ ॥ ೬೦ ॥
ಕೌಸ್ತುಭಾಲಂಕೃತಾಂಕಾಯ ನಮಃ ಶ್ರೀವತ್ಸಲಕ್ಷ್ಮಣೇ ।
ನಮಸ್ತೇ ಬ್ರಹ್ಮಪುತ್ರಾಯ ದೈತ್ಯಸಂಘವಿದಾರಿಣೇ ॥ ೬೧ ॥
ಅಶೇಷಭುವನಾವಾಸ ನಾಭಿಪಂಕಜಶಾಲಿನೇ ।
ಮಧುಕೈಟಭಸಂಹರ್ತ್ರೇ ರಾವಣಾಂತಕರಾಯ ತೇ ॥ ೬೨ ॥
ಪ್ರಹ್ಲಾದರಕ್ಷಿಣೇ ತುಭ್ಯಂ ಧರಿತ್ರೀಪತಯೇ ನಮಃ ।
ನಿರ್ಗುಣಾಯಾಪ್ರಮೇಯಾಯ ವಿಷ್ಣವೇ ಬುದ್ಧಿಸಾಕ್ಷಿಣೇ ॥ ೬೩ ॥
ನಮಸ್ತೇ ಶ್ರೀನಿವಾಸಾಯ ಜಗದ್ಧಾತ್ರೇ ಪರಾತ್ಮನೇ ।
ನಾರಾಯಣಾಯ ದೇವಾಯ ಕೃಷ್ಣಾಯ ಮಧುವಿದ್ವಿಷೇ ॥ ೬೪ ॥
ನಮಃ ಪಂಕಜನಾಭಾಯ ನಮಃ ಪಂಕಜಚಕ್ಷುಷೇ ।
ನಮಃ ಪಂಕಜಹಸ್ತಾಯಾಃಪತಯೇ ಪಂಕಜಾಂಘ್ರಯೇ ॥ ೬೫ ॥
ಭೂಯೋ ಭೂಯೋ ಜಗನ್ನಾಥ ನಮಃ ಪಂಕಜಮಾಲಿನೇ ।
ದಯಾಮೂರ್ತೇ ನಮಸ್ತುಭ್ಯಮಪರಾಧಂ ಕ್ಷಮಸ್ವ ಮೇ ॥ ೬೬ ॥

---

ಯಣ! ನನ್ನ ತಪ್ಪನ್ನು ಕ್ಷಮಿಸು, ಚಕ್ರಪಾಣಿಯೂ, ತಾವರೆಹೂವಿನಂತೆ ಕಣ್ಣುಳ್ಳವನೂ, ಲಕ್ಷ್ಮೀಪತಿಯೂ ಆದ ಓ ನಾರಾಯಣನೆ! ನಿನಗೆ ನಮಸ್ಕಾರವು.

೬೧. ಕೌಸ್ತುಭಮಣಿಯಿಂದ ವಿಭೂಷಿತನೂ, ಶ್ರೀವತ್ಸವೆಂಬ ಮಚ್ಚೆಯುಳ್ಳವನೂ, ಬ್ರಹ್ಮನ ತಂದೆಯೂ, ದೈತ್ಯಸಮೂಹವನ್ನು ನಾಶಗೊಳಿಸಿದವನೂ ಆದ ಎಲೈ ನಾರಾಯಣನೆ! ನಿನಗೆ ನಮಸ್ಕಾರವು.

೬೨. ಸಕಲಭುವನಗಳಿಗೂ ಆವಾಸಸ್ಥಾನವಾದ ನಾಭಿಕಮಲದಿಂದ ಪ್ರಕಾಶಿಸುವವನೂ, ಮಧುಕೈಟಭರನ್ನು ಮರ್ದಿಸಿದವನೂ, ರಾವಣನನ್ನು ಕೊಂದವನೂ ಆದ ನಿನಗೆ ನಮಸ್ಕಾರವು.

೬೩. ಪ್ರಹ್ಲಾದನನ್ನು ಪಾಲಿಸಿದವನೂ, ಭೂದೇವಿಯೊಡೆಯನೂ, ನಿರ್ಗುಣನೂ, ಮಿತಿರಹಿತನೂ, ಮನಸ್ಸಾಕ್ಷಿಯೂ ಆದ ನಿನಗೆ ನಮಸ್ಕಾರವು.

೬೪. ಲಕ್ಷ್ಮಿಗೆ ವಾಸಸ್ಥಾನನೂ, ಜಗದ್ರಕ್ಷಕನೂ, ಮಧುದೈತ್ಯನಾಶಕನೂ ಆದ ಓ ಕೃಷ್ಣ! ನಿನಗೆ ವಂದನೆಯು.

೬೫. ಕಮಲನಾಭನೂ, ಕಮಲದಂತೆ ಕಣ್ಣುಗಳುಳ್ಳವನೂ, ತಾವರೆಯನ್ನು ಹಿಡಿದಿರುವ ಲಕ್ಷ್ಮಿಗೆ ಅರಸನೂ, ಕಮಲ ಪಾದನೂ ಆದ ಎಲೈ ನಾರಾಯಣನೆ! ನಿನಗೆ ನಮಸ್ಕಾರವು.

೬೬. ಜಗದೊಡೆಯನೂ, ಕಮಲಮಾಲೆಯನ್ನು ಧರಿಸಿದವನೂ, ದಯಾಳುವೂ ಆದ ಓ ನಾರಾಯಣ! ನಿನಗೆ ವಂದನೆಯು. ನನ್ನ ತಪ್ಪನ್ನು ಕ್ಷಮಿಸು.

ಮಯಾ ನಿಗಡಪಾಶಾಭ್ಯಾಂ ಯಃ ಕೃತೋ ಮಧುಸೂದನ ।
ಅನಯಸ್ತ್ವತ್ಸ್ವರೂಪಮವಿದಿತ್ವಾ ಕೃತಃ ಪ್ರಭೋ ॥ ೬೭ ॥
ಅತೋ ಮದಪರಾಧೋಽಯಂ ಕ್ಷಂತವ್ಯೋ ಮಧುಸೂದನ ।
ಏವಂ ಸ್ತುತ್ವಾ ಮಹಾವಿಷ್ಣುಂ ರಾಜಾ ಪುಣ್ಯನಿಧಿರ್ದ್ವಿಜಾಃ ॥ ೬೮ ॥
ಲಕ್ಷ್ಮೀಂ ತುಷ್ಟಾವ ಜನನೀಂ ಸರ್ವೇಷಾಂ ಪ್ರಾಣಿನಾಂ ಮುದಾ ।
ನಮೋ ದೇವಿ ಜಗದ್ಧಾತ್ರಿ ವಿಷ್ಣುವಕ್ಷಸ್ಥಲಾಲಯೇ ॥ ೬೯ ॥
ನಮೋಽಬ್ಧಿಸಂಭವೇ ತುಭ್ಯಂ ಮಹಾಲಕ್ಷ್ಮಿ ಹರಿಪ್ರಿಯೇ ।
ಸಿದ್ಧ್ಯೈ ಪುಷ್ಟ್ಯೈ ಸ್ವಧಾಯೈ ಚ ಸ್ವಾಹಾಯೈ ಸತತಂ ನಮಃ ॥ ೭೦ ॥
ಸಂಧ್ಯಾಯೈ ಚ ಪ್ರಭಾಯೈ ಚ ಧಾತ್ರ್ಯೈ ಭೂತ್ಯೈ ನಮೋ ನಮಃ ।
ಶ್ರದ್ಧಾಯೈ ಚೈವ ಮೇಧಾಯೈ ಸರಸ್ವತ್ಯೈ ನಮೋನಮಃ ॥ ೭೧ ॥
ಯಜ್ಞವಿದ್ಯೇ ಮಹಾವಿದ್ಯೇ ಗುಹ್ಯವಿದ್ಯೇಽತಿ ಶೋಭನೇ ।
ಆತ್ಮವಿದ್ಯೇ ಚ ದೇವೇಶಿ ಮುಕ್ತಿದೇ ಸರ್ವದೇಹಿನಾಂ ॥ ೭೨ ॥
ತ್ರಯೀರೂಪೇ ಜಗನ್ಮಾತರ್ಜಗದ್ರಕ್ಷಾವಿಧಾಯಿನಿ ।
ರಕ್ಷ ಮಾಂ ತ್ವಂ ಕೃಪಾದೃಷ್ಟ್ಯಾ ಸೃಷ್ಟಿಸ್ಥಿತ್ಯಂತಕಾರಿಣಿ ॥ ೭೩ ॥
ಭೂಯೋ ಭೂಯೋ ನಮಸ್ತುಭ್ಯಂ ಬ್ರಹ್ಮಮಾತ್ರೇ ಮಹೇಶ್ವರಿ ।
ಇತಿ ಸ್ತುತ್ವಾ ಮಹಾಲಕ್ಷ್ಮೀಂ ಪ್ರಾರ್ಥಯಾಮಾಸ ಮಾಧವಂ ॥ ೭೪ ॥

---

೬೭–೬೯. ಮಧುಸೂದನ! ನಾನು ನಿನ್ನ ಸ್ವರೂಪವನ್ನು ಅರಿಯದೆ ನಿನ್ನನ್ನು ಬೇಡಿ ಮತ್ತು ಹಗ್ಗದಿಂದ ಕಟ್ಟಿ ಅಪರಾಧಮಾಡಿರುವೆನು. ಇದನ್ನು ಕ್ಷಮಿಸು.'' ಪುಣ್ಯನಿಧಿಯು ಹೀಗೆ ವಿಷ್ಣುವನ್ನು ಸ್ತುತಿಸಿ ಆ ಬಳಿಕ ಸಕಲಪ್ರಾಣಿಗಳಿಗೂ ಮಾತೆಯಾದ ಲಕ್ಷ್ಮಿಯನ್ನು ಸ್ತೋತ್ರಮಾಡಿದನು. ''ಜಗದ್ಧಾರಕಳೂ, ವಿಷ್ಣುವಕ್ಷಸ್ಥಳದಲ್ಲಿ ನೆಲೆಸಿದವಳೂ ಆದ ಓ ದೇವಿ! ನಿನಗೆ ವಂದನೆಯು.

೭೦. ಸಮುದ್ರದಲ್ಲಿ ಜನಿಸಿದವಳೂ, ವಿಷ್ಣುವಲ್ಲಭಳೂ, ಸಿದ್ಧಿ, ಪುಷ್ಟಿ, ಸ್ವಧಾ, ಸ್ವಾಹಾರೂಪಳೂ ಆದ ಎಲೌ ಮಹಾಲಕ್ಷ್ಮಿಯೆ! ನಿನಗೆ ನಮಸ್ಕಾರವು.

೭೧. ಸಂಧ್ಯಾ, ಪ್ರಭಾರೂಪಳೂ, ಜಗದ್ಧಾರಕಳೂ, ಐಶ್ವರ್ಯರೂಪಳೂ, ಶ್ರದ್ಧಾ, ಮೇಧಾ, ಸರಸ್ವತೀರೂಪಳೂ ಆದ ಎಲೌ ಮಹಾಲಕ್ಷ್ಮಿಯೆ! ನಿನಗೆ ನಮಸ್ಕಾರವು.

೭೨. ಯಜ್ಞವಿದ್ಯೆ, ಮಹಾವಿದ್ಯೆ, ಗುಹ್ಯವಿದ್ಯೆ, ಆತ್ಮವಿದ್ಯೆಗಳ ರೂಪವುಳ್ಳವನೂ, ಅತಿ ಮಂಗಳಕರಳೂ, ಸಕಲಪ್ರಾಣಿಗಳಿಗೂ ಮುಕ್ತಿದಾಯಕಳೂ ಆದ ಓ ಶ್ರೀದೇವಿ! ನಿನಗೆ ನಮಸ್ಕಾರವು.

೭೩. ವೇದರೂಪಳೂ, ಜಗನ್ಮಾತೆಯೂ, ಜಗತ್ತನ್ನು ರಕ್ಷಿಸುವವಳೂ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವವಳೂ ಆದ ಓ ಮಹಾಲಕ್ಷ್ಮಿ! ದಯಾದೃಷ್ಟಿಯಿಂದ ನೋಡಿ ನನ್ನನ್ನು ರಕ್ಷಿಸು.

೭೪. ಚತುರ್ಮುಖಬ್ರಹ್ಮನ ಮಾತೆಯಾದ ಓ ಮಹೇಶ್ವರಿಯೆ! ನಿನಗೆ

ಯದಜ್ಞಾನಾನ್ಮಯಾ ವಿಷ್ಣೋ ತ್ವಯಿ ದೋಷಃ ಕೃತೋಽಧುನಾ ।
ಪಾದೇ ನಿಗಡಬಂಧೇನ ಸ ದ್ರೋಹಃ ಕ್ಷಮ್ಯತಾಂ ತ್ವಯಾ ॥ ೭೫ ॥
ಲೋಕಾಸ್ತೇ ಶಿಶವಃ ಸರ್ವೇ ತ್ವಂ ಪಿತಾ ಜಗತಾಂ ಹರೇ ।
ಸುತಾಽಪರಾಧಃ ಪಿತೃಭಿಃ ಕ್ಷಂತವ್ಯೋ ಮಧುಸೂದನ ॥ ೭೬ ॥
ಅಪರಾಧಿನಾಂ ಚ ದೈತ್ಯಾನಾಂ ಸ್ವರೂಪಮಪಿ ದತ್ತವಾನ್ ।
ಭವಾನ್ವಿಷ್ಣೋ ಮಮಾಪೀಮಮಪರಾಧಂ ಕ್ಷಮಸ್ವ ವೈ ॥ ೭೭ ॥
ಜಿಘಾಂಸಯಾಽಪಿ ಭಗವನ್ನಾಗತಾಂ ಪೂತನಾಂ ಪುರಾ ।
ಅನಯಸ್ತ್ವತ್ಪದಾಽಂಭೋಜಂ ತನ್ಮಾಂ ರಕ್ಷ ಕೃಪಾನಿಧೇ ।
ಲಕ್ಷ್ಮೀಕಾಂತ ಕೃಪಾದೃಷ್ಟಿಂ ಮಯಿ ಪಾತಯ ಕೇಶವ ॥ ೭೮ ॥

ಶ್ರೀ ಸೂತ ಉವಾಚ :—

ಇತಿ ಸಂಪ್ರಾರ್ಥಿತೋ ವಿಷ್ಣೂ ರಾಜ್ಞಾ ತೇನ ದ್ವಿಜೋತ್ತಮಾಃ ।
ಪ್ರಾಹ ಗಂಭೀರಯಾ ವಾಚಾ ನೃಪಂ ಪುಣ್ಯನಿಧಿಂ ತತಃ ॥ ೭೯ ॥

ವಿಷ್ಣುರುವಾಚ :—

ರಾಜನ್ನಭೀಸ್ತ್ವಯಾ ಕಾರ್ಯಾ ಮದ್ಬಂಧನನಿಮಿತ್ತಜಾ ॥ ೮೦ ॥
ಭಕ್ತವಶ್ಯತ್ವಮಧುನಾ ತವ ಪ್ರತಿಹಿತಂ ಮಯಾ ।
ಮಮ ಪ್ರೀತಿಕರಂ ಯಜ್ಞಮಕರೋದ್ಯದ್ಭವಾನಿಹ ॥ ೮೧ ॥

---

ಬಾರಿಗೂ ನಮಸ್ಕಾರವು.'' ಈರೀತಿ ಮಹಾಲಕ್ಷ್ಮಿಯನ್ನು ಸ್ತುತಿಸಿ ಮಾಧವನನ್ನು ಪ್ರಾರ್ಥಿಸಿದನು.

೭೫. "ನಾರಾಯಣ! ನಾನು ಅಜ್ಞಾನದಿಂದ ನಿನ್ನ ಪಾದಗಳಿಗೆ ಸಂಕೋಲೆಯನ್ನು ಹಾಕಿ ಮಹಾಪರಾಧ ಮಾಡಿರುವೆನು. ಅದನ್ನು ನೀನು ಕ್ಷಮಿಸಬೇಕು.

೭೬. ಮಧುಸೂಧನ! ಸಕಲ ಪ್ರಾಣಿಗಳೂ ನಿನ್ನ ಶಿಶುಗಳು. ನೀನು ಜಗತ್ತಿಗೇ ತಂದೆಯು, ತಂದೆಯು ಮಗನ ತಪ್ಪನ್ನು ಕ್ಷಮಿಸಲೇಬೇಕಲ್ಲವೆ.

೭೭. ನೀನು ತಪ್ಪುಮಾಡಿದ ದೈತ್ಯರಿಗೇ ನಿನ್ನ ಸ್ವರೂಪವನ್ನು ಕೊಟ್ಟಿರುವೆ. ಹಾಗೆಯೇ ನೀನು ನನ್ನ ತಪ್ಪನ್ನು ಕ್ಷಮಿಸು.

೭೮. ನೀನು ಹಿಂದೆ ಕೊಲ್ಲಲಪೇಕ್ಷೆಯಿಂದ ಬಂದ ಪೂತನಿಯನ್ನು ಮನ್ನಿಸಿ ನಿನ್ನ ಸ್ಥಾನವನ್ನು ಕೊಟ್ಟು ಅನುಗ್ರಹಿಸಿದೆ. ಲಕ್ಷ್ಮೀರಮಣ! ನನ್ನಲ್ಲಿ ದಯಾದೃಷ್ಟಿಯನ್ನು ಬೀರು.''

೭೯–೮೧. ಶ್ರೀ ಸೂತನು ಹೇಳುತ್ತಾನೆ:—ಎಲೈ ವಿಪ್ರವರ್ಯರೆ! ಆ ಧರ್ಮನಿಧಿರಾಜನು ಹೀಗೆ ಪ್ರಾರ್ಥಿಸಲು ವಿಷ್ಣುವು ಗಂಭೀರವಾಣಿಯಿಂದ ಇಂತೆಂದನು. ವಿಷ್ಣುವು ಹೇಳುತ್ತಾನೆ:—"ದೊರೆಯೆ! ನೀನು ನನ್ನನ್ನು ಕಟ್ಟಿದುದಕ್ಕಾಗಿ ಹೆದರಬೇಕಾಗಿಲ್ಲ, ನಾನೀಗ ಭಕ್ತಾಧೀನತೆಯನ್ನು ಪ್ರಕಟಿಸಿದೆನು. ನೀನು ನನಗೆ

ಅತಸ್ತ್ವಂ ಮಮ ಭಕ್ತೋಽಸಿ ರಾಜನ್ಪುಣ್ಯನಿಧೇಽಧುನಾ ।
ತೇನಾಽಹಂ ತವ ವಶ್ಯೋಽಸ್ಮಿ ಭಕ್ತಿಪಾಶೇನ ಯಂತ್ರಿತಃ ॥ ೮೨ ॥
ಭಕ್ತಾಽಪರಾಧಂ ಸತತಂ ಕ್ಷಮಾಮ್ಯಹಮರಿಂದಮ ।
ತ್ವದ್ಭಕ್ತಿಂ ಜ್ಞಾತುಕಾಮೇನ ಮಯಾ ಸಂಪ್ರೇರಿತಾ ತ್ವಿಯಂ ॥ ೮೩ ॥
ಲಕ್ಷ್ಮೀರ್ಮಮ ಪ್ರಿಯಾ ರಾಜಂಸ್ತ್ವಯಾ ಸಂರಕ್ಷಿತಾಽಧುನಾ ।
ತೇನಾಽಹಂ ತವ ತುಷ್ಟೋಽಸ್ಮಿ ಮತ್ಸ್ವರೂಪಾ ತ್ವಿಯಂ ಸದಾ ॥ ೮೪ ॥
ಅಸ್ಯಾಂ ಯೋ ಭಕ್ತಿಮಾಲ್ಲೋಕೇ ಸಮದ್ಭಕ್ತೋಽಭಿಧೀಯತೇ ।
ಅಸ್ಯಾಂ ಯೋ ವಿಮುಖೋ ರಾಜನ್ಸಮದ್ದ್ವೇಷೀ ಸ್ಮೃತಃ ಸದಾ ॥ ೮೫ ॥
ತ್ವಮಿಮಾಂ ಭಕ್ತಿಸಂಯುಕ್ತೋ ಯಸ್ಮಾತ್ಪೂಜಿತವಾನಸಿ ।
ಮತ್ಪೂಜಾಽಪಿ ಕೃತಾ ತಸ್ಮಾನ್ಮದಭಿನ್ನಾ ತ್ವಿಯಂ ಯತಃ ॥ ೮೬ ॥
ಅತಸ್ತ್ವಯಾ ನಾಽಪರಾಧಃ ಕೃತೋ ಮಯಿ ನರೇಶ್ವರ ।
ಕಿಂತು ಪೂಜೈವ ವಿಹಿತಾ ತಾಂ ತ್ವಯಾಽರ್ಚಯತಾ ಮಮ ॥ ೮೭ ॥
ತ್ವಯಾ ಮದ್ಭಾರ್ಯಯಾ ಸಾಕಂ ಸಂಕೇತೋಽಕಾರಿ ಯತ್ಪುರಾ ।
ತತ್ಸಂಕೇತಾಽಭಿಗುಪ್ತ್ಯರ್ಥಂ ಮಾಂ ಯದ್ಬಂಧಿತವಾನಸಿ ॥ ೮೮ ॥
ತೇನ ಪ್ರೀತೋಽಸ್ಮಿ ತೇ ರಾಜಂಲ್ಲಕ್ಷ್ಮೀಃ ಸಂರಕ್ಷಿತಾಽಧುನಾ ।
ಮತ್ಸ್ವರೂಪಾ ಚ ಸಾ ಲಕ್ಷ್ಮೀರ್ಜಗನ್ಮಾತಾ ತ್ರಯೀ ಮಯಿ ॥ ೮೯ ॥

---

ಪ್ರೀತಿಯೆನ್ನಿಸಗುವ ಯಜ್ಞವನ್ನು ಮಾಡಿದ್ದರಿಂದ ಈಗ ನನ್ನ ಭಕ್ತನಾಗಿರುವೆ. ಆದುದರಿಂದ ನಾನು ನಿನ್ನಭಕ್ತಿಯೆಂಬ ಹಗ್ಗದಿಂದ ಕಟ್ಟಲ್ಪಟ್ಟವನಾಗಿಯೆ ನಿನಗೆ ಅಧೀನನಾಗಿರುವೆನು.

೮೩–೮೫. ನಾನು ಯಾವಾಗಲೂ ಭಕ್ತರ ತಪ್ಪನ್ನು ಕ್ಷಮಿಸುವೆನು. ನಿನ್ನ ಭಕ್ತಿಯನ್ನರಿಯಲಿಚ್ಛೆಯಿಂದ ನಾನು ಕಳುಹಿಸಿದ ನನ್ನ ಪ್ರಿಯೆಯಾದ ಈ ಲಕ್ಷ್ಮಿಯನ್ನು ನೀನು ಕಾಪಾಡಿರುವೆ. ಅದರಿಂದ ನಾನು ಸಂತುಷ್ಟನಾಗಿರುವೆನು. ನನ್ನ ಸ್ವರೂಪಳೇ ಆದ ಇವಳಲ್ಲಿ ಭಕ್ತಿಯನ್ನು ಮಾಡುವವನು ನನ್ನ ಭಕ್ತನೆನಿಸಿ ಕೊಳ್ಳುವನು. ಇವಳಲ್ಲಿ ವಿಮುಖನಾದನು ನನಗೆ ದ್ವೇಷಿಯು.

೮೬–೮೭. ಇವಳು ನನ್ನ ರೂಪಳೇ ಆದ್ದರಿಂದ ನೀನು ಇವಳಿಗೆ ಮಾಡಿದ ಪೂಜೆಯು ನನ್ನ ಪೂಜೆಯೇ ಆಯಿತು. ಅದರಿಂದ ನೀನು ತಪ್ಪುಮಾಡಿದವನಲ್ಲ.

೮೮–೮೯. ನೀನು ಹಿಂದೆ ನನ್ನ ಪತ್ನಿಯೊಡನೆ ಮಾಡಿದ ಸಂಕೇತವನ್ನು ರಕ್ಷಿಸುವುದಕ್ಕಾಗಿ ನನ್ನನ್ನು ಕಟ್ಟಿರುವೆ. ನೀನು ಜಗನ್ಮಾತೆಯೂ, ನನ್ನ ಸ್ವರೂಪಳೂ ಆದ ಈ ಲಕ್ಷ್ಮಿಯನ್ನು ಕಾಪಾಡಿದ್ದರಿಂದ ನಾನು ನಿನಗೆ ಪ್ರಸನ್ನ ನಾಗಿರುವೆನು.

ತದ್ರಕ್ಷಾಂ ಕುರ್ವತಾ ಭೂಪ ತ್ವಯಾ ಯದ್ಬಂಧನಂ ಮಮ ।
ತತ್ಪ್ರಿಯಂ ಮಮ ರಾಜೇಂದ್ರ ಮಾ ಭಯಂ ಕ್ರಿಯತಾಂ ತ್ವಯಾ ॥ ೯೦ ॥
ಇಯಂ ಲಕ್ಷ್ಮೀಸ್ತವ ಸುತಾ ಸತ್ಯಮೇವ ನ ಸಂಶಯಃ ।
ಇತೀರಿತೇಽಥ ಹರಿಣಾ ಲಕ್ಷ್ಮೀಃ ಪ್ರೋವಾಚ ಭೂಪತಿಂ ॥ ೯೧ ॥

ಲಕ್ಷ್ಮೀರುವಾಚ :—

ರಾಜನ್ಪ್ರೀತಾಽಸ್ಮಿ ತೇ ಚಾಽಹಂ ರಕ್ಷಿತಾ ಯದ್ಗೃಹೇ ತ್ವಯಾ ।
ತ್ವದ್ಭಕ್ತಿಶೋಧನಾರ್ಥಂ ವಾ ಅಹಂ ವಿಷ್ಣುರುಭಾವಪಿ ॥ ೯೨ ॥
ವಿನೋದಕಲಹವ್ಯಾಜಾದಾಗತಾವಿಹ ಭೂಪತೇ ।
ತವ ಯೋಗೇನ ಭಕ್ತ್ಯಾ ಚ ತುಷ್ಟಾವಾವಾಂ ಪರಂತಪ ॥ ೯೩ ॥
ಆವಯೋಃ ಕೃಪಯಾ ರಾಜನ್ಸುಖಂ ತೇ ಭವತಾತ್ಸದಾ ।
ಸರ್ವಭೂಮಂಡಲೈಶ್ವರ್ಯಂ ಸದಾ ತೇ ಭವತು ಧ್ರುವಂ ॥ ೯೪ ॥
ಆವಯೋಃ ಪಾದಯುಗಲೇ ಭಕ್ತಿರ್ಭವತು ತೇ ಧ್ರುವಾ ।
ದೇಹಾಂತೇ ಮಮ ಸಾಯುಜ್ಯಂ ಪುನರಾವೃತ್ತಿವರ್ಜಿತಂ ॥ ೯೫ ॥
ನಿತ್ಯಂ ಭವತು ತೇ ರಾಜನ್ಮಾಽಭೂತ್ತೇ ಪಾಪಧೀಸ್ತಥಾ ।
ಸದಾ ಧರ್ಮೇ ಭವತು ಧೀರ್ವಿಷ್ಣುಭಕ್ತಿಯುತಾ ತವ ॥ ೯೬ ॥

---

೯೦. ಅವಳನ್ನು ರಕ್ಷಿಸುವುದಕ್ಕಾಗಿ ನೀನು ನನ್ನನ್ನು ಬಂಧಿಸಿದಕಾರಣ ನನಗೆ ಸಂತೋಷವಾಗಿದೆ. ನೀನು ಹೆದರಬೇಡ.

೯೧. ಈ ಲಕ್ಷ್ಮಿಯು ನಿಜವಾಗಿಯೂ ನಿನ್ನ ಮಗಳು'' ಎಂದು ವಿಷ್ಣುವು ಹೇಳಲು ಲಕ್ಷ್ಮಿಯು ಆ ರಾಜನನ್ನು ಕುರಿತು ಹೀಗೆಂದಳು.

೯೨–೯೩. ಲಕ್ಷ್ಮಿಯು ಹೇಳುತ್ತಾಳೆ :—''ದೊರೆಯೇ! ನೀನು ನಿನ್ನ ಮನೆಯಲ್ಲಿ ನನ್ನನ್ನು ಕಾಪಾಡಿದುದರಿಂದ ಸಂತೋಷಗೊಂಡಿದ್ದೇನೆ. ನಿನ್ನ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ನಾನೂ ನನ್ನ ಒಡೆಯನಾದ ವಿಷ್ಣುವೂ ಇಬ್ಬರೂ, ಈ ವಿನೋದಕಲಹದ ನೆಪದಿಂದ ಇಲ್ಲಿಗೆ ಬಂದಿರುವೆವು. ಈಗ ನಾವಿಬ್ಬರೂ ನಿನ್ನ ಸಂಬಂಧದಿಂದಲೂ, ಭಕ್ತಿಯಿಂದಲೂ ಸಂತುಷ್ಟರಾಗಿದ್ದೇವೆ.

೯೪. ದೊರೆಯೇ! ನಮ್ಮಿಬ್ಬರ ದಯೆಯಿಂದ ನಿನಗೆ ಯಾವಾಗಲೂ ಸುಖವಾಗಲಿ. ಯಾವಾಗಲೂ ನೀನು ಸಾರ್ವಭೌಮನಾಗಿಯೆ ಇರು.

೯೫. ನಿನಗೆ ನಮ್ಮ ಪಾದಗಳಲ್ಲಿ ದೃಢಭಕ್ತಿಯುಂಟಾಗಲಿ. ದೇಹಾವಸಾನದಲ್ಲಿ ಹಿಂದಿರುಗದ ನನ್ನ ಸಾಮುಜ್ಯವೂ ನಿನಗೆ ಲಭಿಸಲಿ.

೯೬. ಅರಸ! ನಿನಗೆ ಪಾಪಬುದ್ಧಿಯುಂಟಾಗದಿರಲಿ. ಯಾವಾಗಲೂ ವಿಷ್ಣುಭಕ್ತಿಸಹಿತವಾಗಿ ನಿನ್ನ ಬುದ್ಧಿಯು ಧರ್ಮನಿರತವಾಗಿರಲಿ.''

ಏವಮುಕ್ತ್ವಾ ನೃಪಂ ಲಕ್ಷ್ಮೀರ್ವಿಷ್ಣೋರ್ವಕ್ಷಸ್ಥಲಂ ಯಯೌ ।
ಅಥ ವಿಷ್ಣುರುವಾಚೇದಂ ರಾಜಾನಂ ದ್ವಿಜಪುಂಗವಾಃ ॥ ೯೭ ॥
ಯಥಾ ತ್ವಯಾಽತ್ರ ಬದ್ಧೋಽಹಂ ನಿಗಡೇನ ನೃಪೋತ್ತಮ ।
ತದ್ರೂಪೇಣೈವ ವತ್ಸ್ಯಾಮಿ ಸೇತುಮಾಧವಸಂಜ್ಞಿತಃ ॥ ೯೮ ॥
ಮಯೈವ ಕಾರಿತಃ ಸೇತುಸ್ತದ್ರಕ್ಷಾರ್ಥಮಹಂ ನೃಪ ।
ಭೂತರಾಕ್ಷಸಸಂಘೇಭ್ಯೋ ಭಯಾನಾಮುಪಶಾಂತಯೇ ॥ ೯೯ ॥
ಬ್ರಹ್ಮಾಽಪಿ ಸೇತುರಕ್ಷಾರ್ಥಂ ವಸತ್ಯತ್ರ ದಿವಾನಿಶಂ ।
ಶಂಕರೋ ರಾಮನಾಥಾಖ್ಯೋ ನಿತ್ಯಂ ಸೇತೌ ವಸತ್ಯಥ ॥ ೧೦೦ ॥
ಇಂದ್ರಾದಿ ಲೋಕಪಾಲಾಶ್ಚ ವಸಂತ್ಯತ್ರ ಮುದಾನ್ವಿತಾಃ ।
ಅತೋಽಹಮತ್ರ ವತ್ಸ್ಯಾಮಿ ಸೇತುಮಾಧವಸಂಜ್ಞಯಾ ॥ ೧೦೧ ॥
ಸೇತುಸಂರಕ್ಷಣಾರ್ಥಂ ವೈ ಸರ್ವೋಪದ್ರವಶಾಂತಯೇ ।
ಸರ್ವೇಷಾಮಿಷ್ಟಸಿಧ್ಯರ್ಥಂ ಸರ್ವಪಾಪೋಪಶಾಂತಯೇ ॥ ೧೦೨ ॥
ತ್ವಯಾ ನಿಗಡಬದ್ಧಂ ಮಾಂ ಸೇವಂತೇ ಯೇಽತ್ರ ಮಾನವಾಃ ।
ತೇ ಯಾಂತಿ ಮಮ ಸಾಯುಜ್ಯಂ ಸರ್ವಾಽಭೀಷ್ಟಂ ತಥಾ ನೃಪ ॥ ೧೦೩ ॥
ಮಮ ಲಕ್ಷ್ಮ್ಯಾಸ್ತ್ವ ತಥಾ ಚರಿತಂ ಯೇ ಪಠಂತಿ ವೈ ।
ನ ತೇ ಯಾಸ್ಯಂತಿ ದಾರಿದ್ರ್ಯಂ ಕಿಂ ತ್ವೈಶ್ವರ್ಯಂ ವ್ರಜಂತಿ ತೇ ॥ ೧೦೪ ॥

---

೯೭. ಮಹಾಲಕ್ಷ್ಮಿಯು ಹೀಗೆಂದು ನುಡಿದು ಆ ಬಳಿಕ ವಿಷ್ಣುವಿನ ವಕ್ಷಸ್ಥಳವನ್ನು ಸೇರಿದಳು. ಬಳಿಕ ನಾರಾಯಣನು ರಾಜನನ್ನು ಕುರಿತು ಹೀಗೆಂದನು.

೯೮–೯೯. "ನಿನ್ನಿಂದ ಬಂಧಿತನಾಗಿರುವ ನಾನು ಇದೇ ರೂಪದಿಂದಲೇ ನಾನು ರಚಿಸಿದ ಸೇತುವೆಯನ್ನು ಭೂತ, ರಾಕ್ಷಸರ ಗುಂಪಿನ ಭಯದಿಂದ ರಕ್ಷಿಸುವುದಕ್ಕಾಗಿ ಸೇತುಮಾಧವನಾಮವುಳ್ಳವನಾಗಿ ಇಲ್ಲಿ ವಾಸಿಸುವೆನು.

೧೦೦. ಇಲ್ಲಿ ಬ್ರಹ್ಮನೂ, ರಾಮನಾಥನೆಂಬ ಹೆಸರಿನಿಂದ ಶಂಕರನೂ ಸೇತುವೆಯ ರಕ್ಷಣೆಗಾಗಿ ವಾಸಮಾಡುತ್ತಾರೆ.

೧೦೧–೧೦೩. ಇಂದ್ರಾದಿ ಲೋಕಪಾಲಕರೂ ಇಲ್ಲಿ ಸಂತೋಷದಿಂದ ವಾಸಿಸುವರು. ಆದುದರಿಂದ ನಾನು ಸೇತುಮಾಧವಸಂಜ್ಞೆಯಿಂದ ಈ ಸೇತುವೆಯ ಪಾಲನೆಗಾಗಿಯೂ, ಸಕಲೋಪದ್ರವಗಳ ಶಾಂತಿಗಾಗಿಯೂ, ಸಮಸ್ತ ಭಕ್ತರ ಇಷ್ಟಸಿದ್ಧಿಗಾಗಿಯೂ, ಸಕಲ ಪಾಪನಿವಾರಣೆಗಾಗಿಯೂ ಇಲ್ಲಿ ವಾಸಮಾಡುತ್ತೇನೆ. ನಿನ್ನಿಂದ ಬದ್ಧನಾದ ನನ್ನನ್ನು ಸೇವಿಸುವ ಮಾನವರು ಸಕಲಾಭೀಷ್ಟಗಳನ್ನೇ ಅಲ್ಲದೆ ನನ್ನ ಸಾಯುಜ್ಯವನ್ನೂ ಪಡೆಯುವರು.

೧೦೪. ನನ್ನ ಮತ್ತು ಲಕ್ಷ್ಮಿಯ ಈ ಚರಿತ್ರೆಯನ್ನು ಪಠಿಸುವ ಮಾನವರು ದಾರಿದ್ರ್ಯವನ್ನು ಹೊಂದದೆ ಸಂಪತ್ತನ್ನು ಪಡೆಯುವರು.

ತ್ವತ್ಕೃತಂ ಯದಿದಂ ಸ್ತೋತ್ರಂ ಮಮ ಲಕ್ಷ್ಮ್ಯಾ ವಿಶಾಂಪತೇ ।
ಯೇ ಪಠಂತಿ ಚ ಶೃಣ್ವಂತಿ ಲಿಖಂತಿ ಚ ಮುದಾನ್ವಿತಾಃ ॥ ೧೦೩ ॥
ನ ತೇಷಾಂ ಪುನರಾವೃತ್ತಿರ್ಮಮ ಲೋಕಾತ್ಕದಾಚನ ।
ಇತ್ಯುಕ್ತ್ವಾ ಸ ಹರಿಸ್ತತ್ರ ನೃಪಂ ಪುಣ್ಯನಿಧಿಂ ತದಾ ॥ ೧೦೬ ॥
ತತ್ರೈವ ಪೂರ್ಣರೂಪೇಣ ಸನ್ನಿಧತ್ತೇ ಸ್ಮ ಸರ್ವದಾ ।
ನೃಪಃ ಪುಣ್ಯನಿಧಿರ್ವಿಪ್ರಾಃ ಸೇತುಮಾಧವರೂಪಿಣಂ ॥ ೧೦೭ ॥
ವಿಷ್ಣುಂ ಪ್ರಣಮ್ಯ ಭಕ್ತ್ಯಾತು ಮಹಾಪೂಜಾಂ ವಿಧಾಯ ಚ ।
ಸೇವಿತ್ವಾ ರಾಮನಾಥಂ ಚ ಸ್ವಮೇವ ಭವನಂ ಯಯೌ ॥ ೧೦೮ ॥
ಯಾವಜ್ಜೀವಮಸೌ ತತ್ರ ಸೇತೌ ನ್ಯವಸದುತ್ತಮೇ ।
ಮಧುರಾಯಾಂ ನಿಜಂ ಪುತ್ರಂ ಸ್ಥಾಪಯಾಮಾಸ ಪಾಲಕಂ ॥ ೧೦೯ ॥
ತತ್ರೈವ ನಿವಸನ್ರಾಜಾ ದೇಹಾಂತೇ ಮುಕ್ತಿಮಾಪ್ತವಾನ್ ।
ವಿಂಧ್ಯಾವಲಿಶ್ಚ ತತ್ಪತ್ನೀ ತಮೇವಾಽನುಮಮಾರ ಸಾ ॥ ೧೧೦ ॥
ಪತಿವ್ರತಾ ಪತಿಪ್ರಾಣಾ ಪ್ರಯಯೌ ಸಾಽಪಿ ಸದ್ಗತಿಂ ।

ಶ್ರೀ ಸೂತ ಉವಾಚ:—

ಯೇಽತ್ರ ಭಕ್ತಿಯುತಾ ನಿತ್ಯಂ ಸೇವಂತೇ ಸೇತುಮಾಧವಂ ॥ ೧೧೧ ॥
ನ ತೇಷಾಂ ಪುನರಾವೃತ್ತಿಃ ಕೈಲಾಸಾಜ್ಜಾತು ಜಾಯತೇ ।
ಸೇತುಮಾಧವಸೇವಾಂ ಯೇ ನ ಕುರ್ವಂತ್ಯತ್ರ ಮಾನವಾಃ ॥ ೧೧೨ ॥

---

೧೦೩–೧೦೮. ನೀನು ಮಾಡಿದ ನನ್ನ ಮತ್ತು ಲಕ್ಷ್ಮಿಯ ಈ ಸ್ತೋತ್ರವನ್ನು ಪಠಿಸುವವರೂ, ಕೇಳುವವರೂ, ಸಂತೋಷದಿಂದ ಬರೆಯುವವರೂ ನನ್ನ ಲೋಕವನ್ನು ಸೇರುತ್ತಾರೆ. ಅವರು ಮತ್ತೆ ಹಿಂದಿರುಗುವುದಿಲ್ಲ.'' ವಿಷ್ಣುವು ಪುಣ್ಯನಿಧಿಯನ್ನು ಕುರಿತು ಇಂತು ನುಡಿದು ಅಲ್ಲಿಯೇ ತನ್ನ ಪೂರ್ಣರೂಪದಿಂದ ಯಾವಾಗಲೂ ಸನ್ನಿಹಿತನಾಗಿ ನೆಲಸಿದ್ದನು. ಆ ದೊರೆಯು ಸೇತುಮಾಧವ ರೂಪಿಯಾದ ವಿಷ್ಣುವನ್ನು ನಮಿಸಿ ಭಕ್ತಿಯಿಂದ ಪೂಜೆಗೈದು, ರಾಮನಾಥನನ್ನೂ ಸೇವಿಸಿ ತನ್ನ ಮನೆಗೆ ತೆರಳಿದನು.

೧೦೯. ಬಳಿಕ ಮಧುರೆಯಲ್ಲಿ ತನ್ನ ಮಗನಾದ ಪಾಲಕನನ್ನು ಸ್ಥಾಪಿಸಿ ತಾನು ಬದುಕಿರುವವರೆಗೂ ಆ ಉತ್ತಮ ಸೇತುವೆಯಲ್ಲಿಯೆ ವಾಸಮಾಡಿದನು.

೧೧೦. ಅಲ್ಲಿಯೇ ವಾಸಮಾಡುತ್ತ ಅವನು ಅವಸಾನದಲ್ಲಿ ಮೋಕ್ಷವನ್ನು ಪಡೆದನು. ಅವನ ಹೆಂಡತಿಯಾದ ವಿಂಧ್ಯಾವಲಿಯೂ ಅವನೊಡನೆಯೆ ಸಹಗಮನ ಮಾಡಿ ಸದ್ಗತಿಯನ್ನು ಹೊಂದಿದಳು.

೧೧೧–೧೧೬. ಶ್ರೀಸೂತನು ಹೇಳುತ್ತಾನೆ:— ಇಲ್ಲಿ ಭಕ್ತಿಯಿಂದ ಸೇತು ಮಾಧವನನ್ನು ಸೇವಿಸುವ ನರರು ಕೈಲಾಸವನ್ನು ಸೇರುತ್ತಾರೆ. ಅವರು ಮತ್ತೆ

ನ ತೇಷಾಂ ರಾಮನಾಥಸ್ಯ ಸೇವಾ ಫಲವತೀ ಭವೇತ್ ।
ಗೃಹೀತ್ವಾ ಸೈಕತಂ ಸೇತೋರ್ಗಂಗಾಯಾಂ ನಿಕ್ಷಿಪೇದ್ಯದಿ ॥ ೧೧೪ ॥
ವಿಭಜ್ಯ ಮಾಧವಪುರೇ ವೈಕುಂಠೇ ಸ ವಸೇನ್ನರಃ ।
ಗಂಗಾಂ ಜಿಗಮಿಷುರ್ವಿಪ್ರಾಃ ಸೇತುಮಾಧವಸನ್ನಿಧೌ ॥ ೧೧೫ ॥
ಸಂಕಲ್ಪ್ಯ ಗಂಗಾಂ ನಿರ್ಗಚ್ಛೇತ್ತಸ್ಯ ಯಾತ್ರಾ ಸಫಲಾ ಭವೇತ್ ।
ಆನೀಯ ಗಂಗಾಸಲಿಲಂ ರಾಮೇಶಮಭಿಷಿಚ್ಯ ಚ ॥ ೧೧೬ ॥
ಸೇತೌ ನಿಕ್ಷಿಪ್ಯ ತದ್ಭಾರಂ ಬ್ರಹ್ಮ ಪ್ರಾಪ್ನೋತ್ಯಸಂಶಯಃ ।
ಇತಿ ವಃ ಕಥಿತಂ ವಿಪ್ರಾಃ ಸೇತುಮಾಧವವೈಭವಂ ॥ ೧೧೭ ॥
ಏತತ್ಪಠನ್ವಾ ಶೃಣ್ವನ್ವಾ ವೈಕುಂಠೇ ಲಭತೇ ಗತಿಂ ॥ ೧೧೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಸೇತುಮಾಧವಪ್ರಶಂಸನಂ—
ಪುಣ್ಯನಿಧಿಚರಿತ್ರಕಥನಂ" ನಾಮ ಪಂಚಾಶತ್ತಮೋಽಧ್ಯಾಯಃ

---

ಈ ಲೋಕಕ್ಕೆ ಹಿಂದಿರುಗುವುದಿಲ್ಲ. ಸೇತುಮಾಧವನನ್ನು ಸೇವಿಸದವರು ರಾಮನಾಥನನ್ನು ಸೇವಿಸಿದರೂ ಅದು ಸಫಲವಾಗುವುದಿಲ್ಲ. ಸೇತುವೆಯ ಮರಳನ್ನು ಗಂಗೆಯಲ್ಲಿ ಎಸೆದ ಮಾನವನು ವೈಕುಂಠದಲ್ಲಿ ವಾಸಿಸುವನು. ಗಂಗಾಯಾತ್ರೆಗೆ ಹೋಗಲಿಚ್ಛಿಸುವ ಮಾನವರು ಸೇತುಮಾಧವನ ಸನ್ನಿಧಿಯಲ್ಲಿ ಸಂಕಲ್ಪಿಸಿ ಗಂಗೆಗೆ ತೆರಳಿದರೆ ಆ ಯಾತ್ರೆಯು ಸಫಲವಾಗುವುದು. ಗಂಗೋದಕವನ್ನು ತಂದು ರಾಮೇಶ್ವರನಿಗೆ ಅಭಿಷೇಕಮಾಡಿ ಆ ಭಾರವನ್ನು ಸೇತುವೆಯಲ್ಲಿಟ್ಟ ನರನು ಪರಬ್ರಹ್ಮನನ್ನು ಸೇರುವನು. ಎಲೈ ಬ್ರಾಹ್ಮಣರೆ! ಹೀಗೆ ನಿಮಗೆ ಸೇತುಮಾಧವನ ಮಹಾತ್ಮ್ಯೆಯನ್ನು ಹೇಳಿರುವೆನು.

೧೧೮. ಇದನ್ನು ಹೇಳುವವನೂ, ಕೇಳುವವನೂ ವೈಕುಂಠಲೋಕವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ
"ಸೇತುಮಾಧವಪ್ರಶಂಸೆ—ಪುಣ್ಯನಿಧಿಚರಿತ್ರಕಥನ" ವೆಂಬ
ಐವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಪಂಚಾಶತ್ತಮೋಽಧ್ಯಾಯಃ

### ಯಾತ್ರಾಕ್ರಮವರ್ಣನಂ

ಶ್ರೀ ಸೂತ ಉವಾಚ :—

ಅಥಾತಃ ಸಂಪ್ರವಕ್ಷ್ಯಾಮಿ ಸೇತುಯಾತ್ರಾಕ್ರಮಂ ದ್ವಿಜಾಃ ।
ಯಂ ಶ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವಃ ಕ್ಷಣಾತ್॥ ೧ ॥
ಸ್ನಾತ್ವಾಚಮ್ಯ ವಿಶುದ್ಧಾತ್ಮಾ ಕೃತನಿತ್ಯವಿಧಿಃ ಸುಧೀಃ ।
ರಾಮನಾಥಸ್ಯ ತುಷ್ಟ್ಯರ್ಥಂ ಪ್ರೀತ್ಯರ್ಥಂ ರಾಘವಸ್ಯ ಚ ॥ ೨ ॥
ಭೋಜಯಿತ್ವಾ ಯಥಾಶಕ್ತಿ ಬ್ರಾಹ್ಮಣಾನ್ವೇದಪಾರಗಾನ್ ।
ಭಸ್ಮೋದ್ಧೂಲಿತ ಸರ್ವಾಂಗಸ್ತ್ರಿಪುಂಡ್ರಾಂಕಿತಮಸ್ತಕಃ ॥ ೩ ॥
ಗೋಪೀಚಂದನಲಿಪ್ತೋ ವಾ ಸ್ವಫಾಲೇಽಪ್ಯೂರ್ಧ್ವಪುಂಡ್ರಕಃ ।
ರುದ್ರಾಕ್ಷಮಾಲಾಭರಣಃ ಸ ಪವಿತ್ರಕರಃ ಶುಚಿಃ ॥ ೪ ॥
ಸೇತುಯಾತ್ರಾಂ ಕರಿಷ್ಯೇಽಹಮಿತಿ ಸಂಕಲ್ಪ್ಯ ಭಕ್ತಿತಃ ।
ಸ್ವಗೃಹಾತ್ಪ್ರವ್ರಜೇನ್ಮೌನೀ ಜಪನ್ನಷ್ಟಾಕ್ಷರಂ ಮನುಂ ॥ ೫ ॥
ಪಂಚಾಽಕ್ಷರಂ ನಾಮಮಂತ್ರಂ ಜಪೇನ್ನಿಯತಮಾನಸಃ ।
ಏಕವಾರಂ ಹವಿಷ್ಯಾಶೀ ಜಿತಕ್ರೋಧೋ ಜಿತೇಂದ್ರಿಯಃ ॥ ೬ ॥

---

### ಕನ್ನಡದ ಅನುವಾದ

#### ಯಾತ್ರಾಕ್ರಮವರ್ಣನ

೧. ಶ್ರೀಸೂತನು ಹೇಳುತ್ತಾನೆ:—ಎಲೈ ದ್ವಿಜರೆ! ಈಗ ನಿಮಗೆ ಸೇತು ಯಾತ್ರೆಯ ಕ್ರಮವನ್ನು ಹೇಳುವೆನು. ಇದನ್ನು ಕೇಳಿದ ಮಾನವನು ಕ್ಷಣ ಕಾಲದಲ್ಲಿಯೇ ಸಕಲ ಪಾಪಗಳಿಂದಲೂ ಮುಕ್ತನಾಗುವನು.

೨–೧೦. ಪ್ರಾಜ್ಞನು ಬೆಳಗ್ಗೆ ಮಿಂದು ಆಚಮನಮಾಡಿ ಪರಿಶುದ್ಧನೂ, ನಿತ್ಯ ವಿಧಿಯನ್ನು ಮಾಡಿದವನೂ ಆಗಿ ರಾಮನಾಥನ ಸಂತೋಷಕ್ಕಾಗಿಯೂ, ರಾಮನ ಪ್ರೀತಿಗಾಗಿಯೂ ವೇದಪಾರಂಗತರಾದ ಬ್ರಾಹ್ಮಣರನ್ನು ಶಕ್ತ್ಯನುಸಾರ ಭೋಜನ ಮಾಡಿಸಿ ಸರ್ವಾಂಗಗಳಲ್ಲಿಯೂ ಭಸ್ಮಲಿಪ್ತನಾಗಿ, ಹಣೆಯಲ್ಲಿ ತ್ರಿಪುಂಡ್ರವನ್ನೊ, ಗೋಪೀಚಂದನದ ಊರ್ಧ್ವಪುಂಡ್ರವನ್ನೊ ಧರಿಸಿ ಕುತ್ತಿಗೆಯಲ್ಲಿ ರುದ್ರಾಕ್ಷಿಮಾಲೆ ಯನ್ನೂ, ಕೈಬೆರಳಲ್ಲಿ ಪವಿತ್ರವನ್ನೂ ಧರಿಸಿ ಭಕ್ತಿಯಿಂದ ಸೇತುಯಾತ್ರೆಯನ್ನು ಮಾಡುವೆನೆಂದು ಸಂಕಲ್ಪಮಾಡಿ ಬೇರೆ ಮಾತಾಡದೆ ಅಷ್ಟಾಕ್ಷರಮಂತ್ರವನ್ನು ಜಪಿಸಿ ಚಿತ್ತೈಕಾಗ್ರ್ಯದಿಂದ ಪಂಚಾಕ್ಷರಮಂತ್ರವನ್ನೂ ಜಪಿಸಿ, ಒಪ್ಪತ್ತುಮಾತ್ರ

ಪಾದುಕಾಛತ್ರರಹಿತಸ್ತಾಂಬೂಲಪರಿವರ್ಜಿತಃ ।
ತೈಲಾಽಭ್ಯಂಗ ವಿಹೀನಶ್ಚ ಸ್ತ್ರೀಸಂಗಾದಿವಿವರ್ಜಿತಃ ॥ ೭ ॥
ಶೌಚಾದ್ಯಾಚಾರಸಂಯುಕ್ತಃ ಸಂಧ್ಯೋಪಾಸ್ತಿಪರಾಯಣಃ ।
ಗಾಯತ್ರ್ಯುಪಾಸ್ತಿಂ ಕುರ್ವಾಣಸ್ತ್ರಿಸಂಧ್ಯಂ ರಾಮಚಿಂತಕಃ ॥ ೮ ॥
ಮಧ್ಯೇಮಾರ್ಗಂ ಪಠನ್ನಿತ್ಯಂ ಸೇತುಮಾಹಾತ್ಮ್ಯಮಾದರಾತ್ ।
ಪಠನ್ರಾಮಾಯಣಂ ವಾಽಪಿ ಪುರಾಣಾಂತರಮೇವ ವಾ ॥ ೯ ॥
ವ್ಯರ್ಥವಾಕ್ಯಾನಿ ಸಂತ್ಯಜ್ಯ ಸೇತುಂ ಗಚ್ಛೇದ್ವಿಶುದ್ಧಯೇ ।
ಪ್ರತಿಗ್ರಹಂ ನ ಗೃಹ್ಣೀಯಾನ್ನಾಚಾರಾಂಶ್ಚ ಪರಿತ್ಯಜೇತ್ ॥ ೧೦ ॥
ಕುರ್ಯಾನ್ಮಾರ್ಗೇ ಯಥಾಶಕ್ತಿ ಶಿವವಿಷ್ಣ್ವಾದಿ ಪೂಜನಂ ।
ವೈಶ್ವದೇವಾದಿ ಕರ್ಮಾಣಿ ಯಥಾಶಕ್ತಿ ಸಮಾಚರೇತ್ ॥ ೧೧ ॥
ಬ್ರಹ್ಮಯಜ್ಞಮುಖಾನ್ಧರ್ಮಾನ್ಪ್ರಕುರ್ಯಾಚ್ಚಾಽಗ್ನಿಪೂಜನಂ ।
ಅತಿಥಿಭ್ಯೋಽನ್ನಪಾನಾದಿ ಸಂಪ್ರದದ್ಯಾದ್ಯಥಾಬಲಂ ॥ ೧೨ ॥
ದದ್ಯಾದ್ಭಿಕ್ಷಾಂ ಯತಿಭ್ಯೋಽಪಿ ವಿತ್ತಶಾಠ್ಯಂ ಪರಿತ್ಯಜನ್ ।
ಶಿವವಿಷ್ಣ್ವಾದಿ ನಾಮಾನಿ ಸ್ತೋತ್ರಾಣಿ ಚ ಪಠೇತ್ಪಥಿ ॥ ೧೩ ॥
ಧರ್ಮಮೇವ ಸದಾ ಕುರ್ಯಾನ್ನಿಷಿದ್ಧಾನಿ ಪರಿತ್ಯಜೇತ್ ।
ಇತ್ಯಾದಿ ನಿಯಮೋಪೇತಃ ಸೇತುಮೂಲಂ ತತೋ ವ್ರಜೇತ್ ॥ ೧೪ ॥

---

ಹವಿಷ್ಯಾನ್ನವನ್ನು ಭುಜಿಸಿ, ಕ್ರೋಧವನ್ನು ಜಯಿಸಿ, ಜಿತೇಂದ್ರಿಯನೂ, ಪಾದ ರಕ್ಷೆ, ಕೊಡೆ, ತಾಂಬೂಲ, ತೈಲಾಭ್ಯಂಗ, ಸ್ತ್ರೀಸಂಗಗಳಿಲ್ಲದವನೂ, ಶೌಚಾದಿ ಆಚಾರನಿರತನೂ, ಸಂಧ್ಯೋಪಾಸನೆಯಲ್ಲಿ ಆಸಕ್ತನೂ, ತ್ರಿಸಂಧ್ಯಾಕಾಲಗಳಲ್ಲಿ ಗಾಯತ್ರಿಯನ್ನು ಜಪಿಸುವವನೂ, ರಾಮನನ್ನು ಧ್ಯಾನಿಸುವವನೂ, ದಾರಿಯ ನಡುವೆ ಸೇತುಮಾಹಾತ್ಮ್ಯವನ್ನು ಆದರದಿಂದ ಪಠಿಸುವವನೂ, ರಾಮಾಯಣ ಅಥವಾ ಇತರ ಪುರಾಣಗಳನ್ನು ಪಠಿಸುವವನೂ ಆಗಿ ವ್ಯರ್ಥವಾದ ಮಾತು ಗಳನ್ನು ತ್ಯಜಿಸಿ ಆತ್ಮಶುದ್ಧಿಗಾಗಿ ಸೇತುವೆಗೆ ಹೊರಡಬೇಕು. ದಾನಗಳನ್ನು ತೆಗೆದುಕೊಳ್ಳಬಾರದು. ಆಚಾರಗಳನ್ನು ಬಿಡಕೂಡದು.

೧೧. ದಾರಿಯಲ್ಲಿ ಶಕ್ತ್ಯನುಸಾರ ಶಿವ, ವಿಷ್ಣು ಮೊದಲಾದ ದೇವತೆಗಳ ಪೂಜೆಯನ್ನೂ, ವೈಶ್ವದೇವ ಮೊದಲಾದವುಗಳನ್ನೂ ಆಚರಿಸಬೇಕು.

೧೨. ಬ್ರಹ್ಮಯಜ್ಞಮೊದಲಾದುವನ್ನೂ, ಹೋಮವನ್ನೂ ಮಾಡಬೇಕು. ಅತಿಥಿಗಳಿಗೆ ಶಕ್ತ್ಯನುಸಾರ ಅನ್ನ ನೀಡಬೇಕು.

೧೩. ಯತಿಗಳಿಗೆ ಭಿಕ್ಷೆಯನ್ನು ಕೊಡಬೇಕು. ದ್ರವ್ಯವಿದ್ದರೂ ಲೋಭ ದಿಂದ ಕೊಡದಿರಬಾರದು.

೧೪. ಧರ್ಮವನ್ನಾಚರಿಸಬೇಕು. ನಿಷಿದ್ಧಕರ್ಮಗಳನ್ನು ತ್ಯಜಿಸಬೇಕು.

ಪಾಷಾಣಂ ಪ್ರಥಮಂ ದದ್ಯಾತ್ತತ್ರ ಗತ್ವಾ ಸಮಾಹಿತಃ ।
ತತ್ರಾವಾಹ್ಯ ಸಮುದ್ರಂ ಚ ಪ್ರಣಮೇತ್ತದನಂತರಂ ॥ ೧೫ ॥
ಅರ್ಘ್ಯಂ ದದ್ಯಾತ್ಸಮುದ್ರಾಯ ಪ್ರಾರ್ಥಯೇತ್ತದನಂತರಂ ।
ಅನುಜ್ಞಾಂ ಚ ತತಃ ಕುರ್ಯಾತ್ತತಃ ಸ್ನಾಯಾನ್ಮಹೋದಧೌ ॥ ೧೬ ॥
ಮುನೀನಾಮಥ ದೇವಾನಾಂ ಕಪೀನಾಂ ಪಿತೃಣಾಂ ತಥಾ ।
ಪ್ರಕುರ್ಯಾತ್ತರ್ಪಣಂ ವಿಪ್ರಾ ಮನಸಾ ಸಂಸ್ಮರನ್ಹರಿಂ ॥ ೧೭ ॥

॥ ಪಾಷಾಣಸಂಖ್ಯಾ ॥

ಪಾಷಾಣಸಪ್ತಕಂ ದದ್ಯಾದೇಕಂ ವಾ ವಿಪ್ರಪುಂಗವಾಃ ।
ಪಾಷಾಣದಾನಾತ್ಸಫಲಂ ಸ್ನಾನಂ ಭವತಿ ನಾಽನ್ಯಥಾ ॥ ೧೮ ॥

॥ ಪಾಷಾಣದಾನಮಂತ್ರಃ ॥

ಪಿಪ್ಪಲಾದಸಮುತ್ಪನ್ನೇ ಕೃತ್ಯೇ ಲೋಕಭಯಂಕರೇ ।
ಪಾಷಾಣಂ ತೇ ಮಯಾ ದತ್ತಮಾಹಾರಾರ್ಥಂ ಪ್ರಕಲ್ಪ್ಯತಾಂ ॥ ೧೯ ॥

॥ ಸಾನ್ನಿಧ್ಯಪ್ರಾರ್ಥನಾಮಂತ್ರಃ ॥

ವಿಶ್ವಾಚಿ ತ್ವಂ ಘೃತಾಚಿ ತ್ವಂ ವಿಶ್ವಯೋನೇ ವಿಶಾಂಪತೇ ।
ಸಾನ್ನಿಧ್ಯಂ ಕುರು ಮೇ ದೇವ ಸಾಗರೇ ಲವಣಾಂಽಭಸಿ ॥ ೨೦ ॥

---

ಇವೇ ಮೊದಲಾದ ನಿಯಮಗಳಿಂದ ಸಹಿತನಾಗಿ ರಾಮಸೇತುವೆಯ ಬುಡಕ್ಕೆ ಹೋಗಬೇಕು.

೧೫–೧೬. ಅಲ್ಲಿ ಹೋಗಿ ಮೊದಲು ಸಮಾಧಾನ ಮನಸ್ಸಿನಿಂದ ಒಂದು ಕಲ್ಲನ್ನಿತ್ತು ಮಿಂದು ಸಮುದ್ರಕ್ಕೆ ನಮಸ್ಕರಿಸಿ ಅರ್ಘ್ಯವನ್ನು ಕೊಟ್ಟು ಪ್ರಾರ್ಥಿಸಿ ಅನುಜ್ಞೆಯನ್ನು ತೆಗೆದುಕೊಂಡು ಬಳಿಕ ಮಹೋದಧಿಯಲ್ಲಿ ಸ್ನಾನಮಾಡಬೇಕು.

೧೭. ಬಳಿಕ ವಿಷ್ಣುವನ್ನು ಮನಸ್ಸಿನಲ್ಲಿ ಸ್ಮರಿಸುತ್ತ ಮುನಿ, ದೇವ, ಕಪಿ, ಪಿತೃಗಳಿಗೆ ತರ್ಪಣಮಾಡಬೇಕು.

೧೮. ಏಳು ಅಥವಾ ಒಂದು ಕಲ್ಲನ್ನು ಸಮುದ್ರದಲ್ಲಿ ಹಾಕಿ ಸ್ನಾನಗೈದರೆ ಆ ಸ್ನಾನವು ಸಫಲವಾಗುವುದು. ಇಲ್ಲದಿದ್ದರೆ ಸಫಲವಾಗಲಾರದು. ಪಾಷಾಣವನ್ನು ಈ ಮಂತ್ರದಿಂದ ಹಾಕಬೇಕು.

೧೯. "ಪಿಪ್ಪಲಾದನಿಂದ ಹುಟ್ಟಿ ಲೋಕಕ್ಕೆ ಭಯವನ್ನುಂಟುಮಾಡುವ ದೇವತೆಯೆ! ನಾನು ಕೊಟ್ಟ ಪಾಷಾಣವನ್ನು ಆಹಾರವಾಗಿ ಮಾಡಿಕೊ."

೨೦. ಸಾನ್ನಿಧ್ಯಪ್ರಾರ್ಥನೆಯ ಮಂತ್ರ:—ನೀನು ವಿಶ್ವಾಚಿಯೂ, ಘೃತಾಚಿಯೂ, ಸಮಸ್ತಕಾರಣನೂ, ದೊರೆಯೂ ಆಗಿರುವೆ. ಸ್ವಾಮಿ! ನೀನು ಈ ಲವಣಸಮುದ್ರದಲ್ಲಿ ಸನ್ನಿಹಿತನಾಗು.

॥ ನಮಸ್ಕಾರಮಂತ್ರಃ ॥

ನಮಸ್ತೇ ವಿಶ್ವಗುಪ್ತಾಯ ನಮೋ ವಿಷ್ಣೋ ಹ್ಯಪಾಂಪತೇ ।
ನಮೋ ಹಿರಣ್ಯಶೃಂಗಾಯ ನದೀನಾಂ ಪತಯೇ ನಮಃ ।
ಸಮುದ್ರಾಯ ವಯೂನಾಯ ಪ್ರೋಚ್ಯಾರ್ಯ ಪ್ರಣಮೇತ್ತಥಾ ॥ ೨೧ ॥

॥ ಅರ್ಘ್ಯಮಂತ್ರಃ ॥

ಸರ್ವರತ್ನಮಯಶ್ರೀಮನ್ಸರ್ವರತ್ನಾಕರಾಕರ ।
ಸರ್ವರತ್ನಪ್ರಧಾನಸ್ತ್ವಂ ಗೃಹಾಣಾಽರ್ಘ್ಯಂ ಮಹೋದಧೇ ॥ ೨೨ ॥

॥ ಅನುಜ್ಞಾಪನ ಮಂತ್ರಃ ॥

ಅಶೇಷ ಜಗದಾಧಾರ ಶಂಖಚಕ್ರಗದಾಧರ ।
ದೇಹಿ ದೇವ ಮಮಾಽನುಜ್ಞಾಂ ಯುಷ್ಮತ್ತೀರ್ಥನಿಷೇವಣೇ ॥ ೨೩ ॥

॥ ಪ್ರಾರ್ಥನಾಮಂತ್ರಃ ॥

ಪ್ರಾಚ್ಯಾಂ ದಿಶಿ ಚ ಸುಗ್ರೀವಂ ದಕ್ಷಿಣಸ್ಯಾಂ ನಲಂ ಸ್ಮರೇತ್ ॥ ೨೪ ॥
ಪ್ರತೀಚ್ಯಾಂ ಮೈಂದನಾಮಾನಮುದೀಚ್ಯಾಂ ದ್ವಿವಿದಂ ತಥಾ ।
ರಾಮಂ ಚ ಲಕ್ಷ್ಮಣಂ ಚೈವ ಸೀತಾಮಪಿ ಯಶಸ್ವಿನೀಂ ॥ ೨೫ ॥
ಅಂಗದಂ ವಾಯುತನಯಂ ಸ್ಮರೇನ್ಮಧ್ಯೇ ವಿಭೀಷಣಂ ।
ಪೃಥಿವ್ಯಾಂ ಯಾನಿ ತೀರ್ಥಾನಿ ಪ್ರಾವಿಶಂಸ್ತ್ವಾಂ ಮಹೋದಧೇ ॥ ೨೬ ॥
ಸ್ನಾನಸ್ಯ ಮೇ ಫಲಂ ದೇಹಿ ಸರ್ವಸ್ಮಾತ್ತ್ರಾಹಿ ಮಾಽಂಹಸಃ ।
ಹಿರಣ್ಯಶೃಂಗಮಿತ್ಯಾಭ್ಯಾಂ ಸಾಭ್ಯಾಂ ನಾರಾಯಣಂ ಸ್ಮರೇತ್ ॥ ೨೭ ॥

---

೨೧. ನಮಸ್ಕಾರ ಮಂತ್ರ :—ಸಕಲರಕ್ಷಕನೂ, ವ್ಯಾಪ್ತನೂ, ಜಲಾಧಿಪತಿಯೂ, ಸುವರ್ಣಶೃಂಗನೂ ಆದ ಎಲೈ ಸಮುದ್ರರಾಜನೇ! ನಿನಗೆ ನಮಸ್ಕಾರವು. ಹೀಗೆ ಮಂತ್ರವನ್ನುಚ್ಚರಿಸಿ ಸಮುದ್ರವನ್ನು ನಮಸ್ಕರಿಸಬೇಕು.

೨೨. ಅರ್ಘ್ಯಮಂತ್ರ :—ಸಕಲರತ್ನರೂಪನೂ, ಸಂಪತ್ತುಳ್ಳವನೂ, ಸಕಲ ರತ್ನಗಳಿಗೆ ಆಶ್ರಯನೂ, ಸಕಲರತ್ನಗಳಲ್ಲುತ್ತಮನೂ ಆದ ಮಹೋದಧಿಯೆ! ಅರ್ಘ್ಯವನ್ನು ಸ್ವೀಕರಿಸು.

೨೩. ಸಮಸ್ತ ಜಗತ್ತುಗಳಿಗೆ ಆಶ್ರಯನೂ, ಶಂಖ, ಚಕ್ರ, ಗದೆಗಳನ್ನು ಹಿಡಿದವನೂ ಆದ ಎಲೈ ನಾರಾಯಣನೆ! ನಿನ್ನ ತೀರ್ಥವನ್ನು ಸೇವಿಸಲು ನನಗೆ ಅನುಮತಿಯನ್ನು ನೀಡು.

೨೪–೨೭. ಪ್ರಾರ್ಥನೆಯ ಮಂತ್ರ :—ಪೂರ್ವದಿಕ್ಕಿನಲ್ಲಿ ಸುಗ್ರೀವನನ್ನೂ, ದಕ್ಷಿಣದಿಕ್ಕಿನಲ್ಲಿ ನಳನನ್ನೂ, ಪಶ್ಚಿಮದಲ್ಲಿ ಮೈಂದನನ್ನೂ, ಉತ್ತರದಲ್ಲಿ ದ್ವಿವಿದ, ರಾಮ, ಲಕ್ಷ್ಮಣ, ಸೀತೆ, ಅಂಗದ, ಆಂಜನೇಯ ಇವರನ್ನೂ, ನಡುವೆ ವಿಭೀಷಣನನ್ನೂ ಸ್ಮರಿಸಬೇಕು. ಮಹೋದಧಿಯೆ! ಭೂಮಿಯಲ್ಲಿರುವ ತೀರ್ಥಗಳೆಲ್ಲವೂ ನಿನ್ನಲ್ಲಿ ಸೇರಿರುವುವು. ಇಂತಹ ನೀನು ನನಗೆ ಸ್ನಾನದ ಫಲವನ್ನು

ಧ್ಯಾಯನ್ನಾರಾಯಣಂ ದೇವಂ ಸ್ನಾನಾದಿಷು ಚ ಕರ್ಮಸು ।
ಬ್ರಹ್ಮಲೋಕಮವಾಪ್ನೋತಿ ಜಾಯತೇ ನೇಹ ವೈ ಪುನಃ ॥ ೨೮ ॥
ಸರ್ವೇಷಾಮಪಿ ಪಾಪಾನಾಂ ಪ್ರಾಯಶ್ಚಿತ್ತಂ ಭವೇತ್ತತಃ ।
ಪ್ರಹ್ಲಾದಂ ನಾರದಂ ವ್ಯಾಸಮಂಬರೀಷಂ ಶುಕಂ ತಥಾ ।
ಅನ್ಯಾಂಶ್ಚ ಭಗವದ್ಭಕ್ತಾಂಶ್ಚಿಂತಯೇದೇಕಮಾನಸಃ ॥ ೨೯ ॥

॥ ಸ್ನಾನ ಮಂತ್ರಃ ॥

ವೇದಾದಿರ್ಗೋ ವೇದ ವಸಿಷ್ಠಯೋನಿಃ
ಸರಿತ್ಪತಿಃ ಸಾಗರ ರತ್ನಯೋನಿಃ ।
ಅಗ್ನಿಶ್ಚ ತೇಜಶ್ಚ ಇಳಾಚ ತೇಜೋ
ರೇತೋಧಾ ವಿಷ್ಣುರಮೃತಸ್ಯನಾಭಿಃ ॥ ೩೦ ॥
ಇದಂ ತೇ ಅನ್ಯಾಭಿರಸಮಾನಮದ್ಭಿ
ರ್ಯಾಃ ಕಾಶ್ಚ ಸಿಂಧುಂ ಪ್ರವಿಶಂತ್ಯಾಪಃ ।
ಸರ್ಪೋ ಜೀರ್ಣಾಮಿವ ತ್ವಚಂ ಜಹಾಮಿ
ಪಾಪಂ ಶರೀರಾತ್ಸಶಿರಸ್ಕೋಽಭ್ಯುಪೇತ್ಯ ॥ ೩೧ ॥
ಸಮುದ್ರಾಯ ವಯೂನಾಯ ನಮಸ್ಕುರ್ಯಾತ್ಪುನರ್ದ್ವಿಜಾಃ ।
ಸರ್ವತೀರ್ಥಮಯಂ ಶುದ್ಧಂ ನದೀನಾಂ ಪತಿಮಂಬುಧಿಂ ॥ ೩೨ ॥
ದ್ವೌ ಸಮುದ್ರಾವಿತಿ ಪುನಃ ಪ್ರೋಚ್ಚಾರ್ಯ ಸ್ನಾನಮಾಚರೇತ್ ।
ಬ್ರಹ್ಮಾಂಡೋದರ ತೀರ್ಥಾನಿ ಕರಸ್ಪೃಷ್ಟಾನಿ ತೇ ರವೇ ॥ ೩೩ ॥

---

ಕೊಡು. ಸಕಲ ಪಾಪಗಳಿಂದಲೂ ಬಿಡಿಸಿ ನನ್ನನ್ನು ರಕ್ಷಿಸು. ಇದಾದ ಬಳಿಕ 'ಹಿರಣ್ಯಶೃಂಗ', 'ನಾಭ್ಯಾಆಸೀತ್' ಇತ್ಯಾದಿ ಮಂತ್ರದಿಂದ ನಾರಾಯಣನನ್ನು ಸ್ಮರಿಸಬೇಕು.

೨೮. ಸ್ನಾನ ಮೊದಲಾದ ಸಕಲ ಕರ್ಮಗಳಲ್ಲಿ ನಾರಾಯಣನನ್ನು ಸ್ಮರಿಸುತ್ತಿರುವ ನರನು ಬ್ರಹ್ಮಲೋಕವನ್ನುಸೇರಿ ಮರಳಿ ಜನಿಸುವುದಿಲ್ಲ.

೨೯. ಅದರಿಂದ ಸಕಲಪಾಪಗಳಿಗೂ ಪ್ರಾಯಶ್ಚಿತ್ತವಾದಂತಾಗುವುದು. ಹಾಗೆಯೇ ಒಮ್ಮನಸ್ಸಿನಿಂದ ಪ್ರಹ್ಲಾದ, ನಾರದ, ವ್ಯಾಸ, ಅಂಬರೀಷ, ಶುಕರನ್ನೂ, ಇನ್ನೂ ಇತರ ಭಗವದ್ಭಕ್ತರನ್ನೂ ಧ್ಯಾನಿಸಬೇಕು.

೩೦-೩೧. (ಈ ಎರಡು ಶ್ಲೋಕಗಳೂ ಸ್ನಾನಮಾಡುವಾಗ ಹೇಳುವ ಮಂತ್ರಗಳು.)

೩೨-೩೩. ದ್ವಿಜರೆ! ಮರಳಿ ನಮಸ್ಕಾರಮಾಡಿ ಸಕಲತೀರ್ಥರೂಪವೂ ಶುದ್ಧವೂ, ನದಿಗಳಿಗೆ ಅಧಿಪತಿಯೂ ಆದ ಸಮುದ್ರದಲ್ಲಿ 'ದ್ವೌಸಮುದ್ರೌ' ಇತ್ಯಾದಿ ಮಂತ್ರವನ್ನುಚ್ಚರಿಸಿ ತಿರುಗಿ ಸ್ನಾನಮಾಡಬೇಕು. "ಎಲೈಸೂರ್ಯನೆ! ಬ್ರಹ್ಮಾಂಡ

ತೇನ ಸತ್ಯೇನ ಮೇ ಸೇತೌ ತೀರ್ಥಂ ದೇಹಿ ದಿವಾಕರ ।
ಪ್ರಾಚ್ಯಾಂ ದಿಶಿ ಚ ಸುಗ್ರೀವಮಿತ್ಯಾದಿಕ್ರಮಯೋಗತಃ ॥ ೩೪ ॥
ಸ್ಮೃತ್ವಾ ಭೂಯೋ ದ್ವಿಜಾಃ ಸೇತೌ ತೃತೀಯಂ ಸ್ನಾನಮಾಚರೇತ್ ।
ದೇವೀಪತ್ತನಮಾರಭ್ಯ ಪ್ರವ್ರಜೇದ್ಯದಿ ಮಾನವಃ ॥ ೩೫ ॥
ತದಾ ತು ನವಪಾಷಾಣಮಧ್ಯೇ ಸೇತೌ ವಿಮುಕ್ತಿದೇ ।
ಸ್ನಾನಮಂಬುನಿಧೌ ಕುರ್ಯಾತ್ಸ್ವಪಾಪೌಘಾಪನುತ್ತಯೇ ॥ ೩೬ ॥
ದರ್ಭಶಯ್ಯಾ ಪದವ್ಯಾ ಚೇದ್ಗಚ್ಛೇತ್ಸೇತುಂ ವಿಮುಕ್ತಿದಂ ।
ತದಾ ತತ್ರೋದಧಾವೇವ ಸ್ನಾನಂ ಕುರ್ಯಾದ್ವಿಮುಕ್ತಯೇ ॥ ೩೭ ॥

॥ ತರ್ಪಣವಿಧಿಃ ॥

ಪಿಪ್ಪಲಾದಂ ಕವಿಂ ಕಣ್ವಂ ಕೃತಾಂತಂ ಜೀವಿತೇಶ್ವರಂ ।
ಮನ್ಯುಂ ಚ ಕಾಲರಾತ್ರಿಂ ಚ ವಿದ್ಯಾಂ ಚಾಹರ್ಗಣೇಶ್ವರಂ ॥ ೩೮ ॥
ವಸಿಷ್ಠಂ ವಾಮದೇವಂ ಚ ಪರಾಶರಮುಮಾಪತಿಂ ।
ವಾಲ್ಮೀಕಿಂ ನಾರದಂ ಚೈವ ವಾಲಖಿಲ್ಯಾನ್ಮುನೀಂಸ್ತಥಾ ॥ ೩೯ ॥
ನಲಂ ನೀಲಂ ಗವಾಕ್ಷಂ ಚ ಗವಯಂ ಗಂಧಮಾದನಂ ।
ಮೈಂದಂ ಚ ದ್ವಿವಿದಂ ಚೈವ ಶರಭಂ ಚರ್ಷಭಂ ತಥಾ ॥ ೪೦ ॥
ಸುಗ್ರೀವಂ ಚ ಹನೂಮಂತಂ ವೇಗದರ್ಶನಮೇವ ಚ ।
ರಾಮಂ ಚ ಲಕ್ಷ್ಮಣಂ ಸೀತಾಂ ಮಹಾಭಾಗಾಂ ಯಶಸ್ವಿನೀಂ ॥ ೪೧ ॥
ತ್ರಿಃಕೃತ್ವಾ ತರ್ಪಯೇದೇತಾನ್ಮಂತ್ರಾನುಕ್ತ್ವಾ ಯಥಾಕ್ರಮಂ ।
ವಿಭೋಃಶ್ಚ ತತ್ತನ್ನಾಮಾನಿ ಚತುರ್ಥ್ಯಂತಾನಿ ವೈ ದ್ವಿಜಾಃ ॥ ೪೨ ॥

---

ದೊಳಗಿನ ಸಕಲತೀರ್ಥಗಳೂ ನಿನ್ನ ಕಿರಣಗಳಿಂದ ಸ್ಪರ್ಶಗೊಂಡಿವೆ. ಆದುದರಿಂದ ನೀನು ನನಗೆ ಈ ಸೇತುವಿನಲ್ಲಿ ನಿಜವಾದ ತೀರ್ಥಸಾನ್ನಿಧ್ಯವನ್ನುಂಟುಮಾಡು" ಈ ಮಂತ್ರವನ್ನುಚ್ಚರಿಸಿ "ಪ್ರಾಚ್ಯಾಂ ದಿಶಿ ಸುಗ್ರೀವಂ" ಇತ್ಯಾದಿ ಕ್ರಮದಿಂದ ಸುಗ್ರೀವಾದಿಗಳನ್ನು ಸ್ಮರಿಸಿ ಮೂರನೆ ಸ್ನಾನಮಾಡಬೇಕು. ದೇವೀಪತ್ತನದಿಂದ ಪ್ರಯಾಣಮಾಡಿದರೆ ಸೇತುವೆಯ ನವಪಾಷಾಣದಲ್ಲಿರುವ ಸಮುದ್ರದಲ್ಲಿ ತನ್ನ ಪಾಪಶಾಂತಿಗಾಗಿ ಸ್ನಾನಮಾಡಬೇಕು. ದರ್ಭಶಯನದ ದಾರಿಯಿಂದ ಸೇತುವೆಗೆ ಹೋದರೆ ಅಲ್ಲಿ ಸಮುದ್ರದಲ್ಲಿಯೇ ಸ್ನಾನಮಾಡಬೇಕು.

೩೮–೪೪. ತರ್ಪಣ ಕ್ರಮ:—ಪಿಪ್ಪಲಾದ, ಕವಿ, ಕಣ್ವ, ಯಮ, ಮನ್ಯು, ಕಾಲರಾತ್ರಿ, ವಿದ್ಯಾ, ಅಹಸ್ಸು, ಗಣೇಶ್ವರ, ವಸಿಷ್ಠ, ವಾಮದೇವ, ಪರಾಶರ, ಮಹೇಶ್ವರ, ವಾಲ್ಮೀಕಿ, ನಾರದ, ವಾಲಖಿಲ್ಯಮುನಿಗಳು, ನಲ, ನೀಲ, ಗವಾಕ್ಷ, ಗವಯ, ಗಂಧಮಾದನ, ಮೈಂದ, ದ್ವಿವಿದ, ಶರಭ, ಋಷಭ, ಸುಗ್ರೀವ, ವೇಗದೃಷ್ಟಿಯುಳ್ಳ ಹನುಮಂತ, ರಾಮ, ಲಕ್ಷ್ಮಣ, ಸೀತೆ,

ದೇವಾನೃಷೀನ್ಪಿತೄಂಶ್ಚೈವ ವಿಧಿವಚ್ಚ ತಿಲೋದಕೈಃ ।
ದ್ವಿತೀಯಾಂತಾನಿ ನಾಮಾನಿ ಚೋಕ್ತ್ವಾ ವಾ ತರ್ಪಯೇದ್ದ್ವಿಜಾಃ ॥ ೪೩ ॥
ತರ್ಪಯೇತ್ಸಪವಿತ್ರಸ್ತು ಜಲೇ ಸ್ಥಿತ್ವಾ ಪ್ರಸನ್ನಧೀಃ ।
ತರ್ಪಣಾತ್ಸರ್ವತೀರ್ಥೇಷು ಸ್ನಾನಸ್ಯ ಫಲಮಾಪ್ನುಯಾತ್ ॥ ೪೪ ॥
ಏವಮೇತಾಂಸ್ತರ್ಪಯಿತ್ವಾ ನಮಸ್ಕೃತ್ಯೋತ್ತರೇಜ್ಜಲಾತ್ ।
ಆರ್ದ್ರವಸ್ತ್ರಂ ಪರಿತ್ಯಜ್ಯ ಶುಷ್ಕವಾಸಸ್ಸಮಾವೃತಃ ॥ ೪೫ ॥
ಆಚಮ್ಯ ಸಪವಿತ್ರಶ್ಚ ವಿಧಿವಚ್ಛ್ರಾದ್ಧಮಾಚರೇತ್ ।
ಪಿಂಡಾನ್ಪಿತೃಭ್ಯೋ ದದ್ಯಾಚ್ಚ ತಿಲತಂಡುಲಕೈಸ್ತಥಾ ॥ ೪೬ ॥
ಏತಚ್ಛ್ರಾದ್ಧಮಶಕ್ತಸ್ಯ ಮಯಾ ಪ್ರೋಕ್ತಂ ದ್ವಿಜೋತ್ತಮಾಃ ।
ಧನಾಢ್ಯೋಽನ್ನೇನ ವೈ ಶ್ರಾದ್ಧಂ ಷಡ್ರಸೇನ ಸಮಾಚರೇತ್ ॥ ೪೭ ॥
ಗೋಭೂತಿಲಹಿರಣ್ಯಾದಿ ದಾನಂ ಕುರ್ಯಾತ್ಸಮೃದ್ಧಿಮಾನ್ ।
ರಾಮಚಂದ್ರ ಧನುಷ್ಕೋಟಾವೇವಮೇವ ಸಮಾಚರೇತ್ ॥ ೪೮ ॥
ಪಾಷಾಣದಾನಪೂರ್ವಾಣಿ ತರ್ಪಣಾಂತಾನಿ ವೈ ದ್ವಿಜಾಃ ।
ಸೇತುಮೂಲೇ ಯಥೈತಾನಿ ವಿಧಿವದ್ವ್ಯತನೋದ್ದ್ವಿಜಾಃ ॥ ೪೯ ॥
ಚಕ್ರತೀರ್ಥಂ ತತೋ ಗತ್ವಾ ತತ್ರಾಽಪಿ ಸ್ನಾನಮಾಚರೇತ್ ।
ಪಶ್ಯೇಚ್ಚ ಸೇತ್ವಧಿಪತಿಂ ದೇವಂ ನಾರಾಯಣಂ ಹರಿಂ ॥ ೫೦ ॥

---

ವಿಷ್ಣು, ದೇವತೆಗಳು, ಇವರನ್ನೂ, ಋಷಿಗಳು ಇವರಿಗೆ ಪಂಚಮ್ಯಂತ ಅಥವಾ ದ್ವಿತೀಯಾಂತಗಳಿಂದ ನೀರಿನಲ್ಲಿ ನಿಂತು ಪ್ರಸನ್ನನಾಗಿಯೂ, ಪವಿತ್ರಹಸ್ತನಾಗಿಯೂ ತರ್ಪಣಮಾಡಬೇಕು. ಪಿತೃಗಳನ್ನು ತಿಲೋದಕದಿಂದ ತರ್ಪಿಸಬೇಕು. ಈ ತರ್ಪಣದಿಂದ ಮಾನವನು ಸಕಲ ತೀರ್ಥಸ್ನಾನದ ಫಲವನ್ನೂ ಹೊಂದುವನು.

೪೫–೪೬. ಹೀಗೆ ಇವರಿಗೆ ತರ್ಪಣಮಾಡಿ ನಮಸ್ಕರಿಸಿ ನೀರಿನಿಂದ ಮೇಲಕ್ಕೆದ್ದು ಒದ್ದೆ ಬಟ್ಟೆಯನ್ನು ತ್ಯಜಿಸಿ ಒಣಗಿದ ಬಟ್ಟೆಯನ್ನುಟ್ಟು ಪವಿತ್ರ ಹಸ್ತನಾಗಿ ಆಚಮನಮಾಡಿ ವಿಧಿಯಂತೆ ಶ್ರಾದ್ಧಗೈದು ಪಿತೃಗಳಿಗೆ ಎಳ್ಳು ಮಿಶ್ರಮಾಡಿದ ಅಕ್ಕಿಯಿಂದ ಪಿಂಡವನ್ನುಮಾಡಿ ಅರ್ಪಿಸಬೇಕು.

೪೭. ಎಲೈ ಬ್ರಾಹ್ಮಣರೆ! ಇದು ಅಶಕ್ತನು ಮಾಡತಕ್ಕ ಶ್ರಾದ್ಧವಾಗಿದೆ. ಹಣಗಾರನು ಷಡ್ರಸಾನ್ನದಿಂದ ಶ್ರಾದ್ಧಮಾಡಬೇಕು.

೪೮–೪೯. ಸೇತುಮೂಲದಲ್ಲಿ ಮಾಡಿದ ಕ್ರಮದಿಂದಲೆ ರಾಮಚಂದ್ರನ ಧನುಷ್ಕೋಟಿಯಲ್ಲಿ ಹಣವಂತನು ಪಾಷಾಣದಾನ ಮೊದಲ್ಗೊಂಡು ತರ್ಪಣಾಂತವಾದ ಕರ್ಮಗಳನ್ನು ಪೂರೈಸಿ ಗೋವು, ಭೂಮಿ, ಎಳ್ಳು, ಚಿನ್ನ ಮೊದಲಾದ ದಾನಗಳನ್ನು ಮಾಡಬೇಕು.

೫೦. ಬಳಿಕ ಚಕ್ರತೀರ್ಥಕ್ಕೆ ತೆರಳಿ ಅಲ್ಲಿ ಮಿಂದು ಸೇತುವಿಗೊಡೆಯನಾದ ನಾರಾಯಣನನ್ನು ಸಂದರ್ಶಿಸಬೇಕು.

ಗಚ್ಛನ್ಪಶ್ಚಿಮಮಾರ್ಗೇಣ ತತ್ರತ್ಯೇ ಚಕ್ರತೀರ್ಥಕೇ ।
ಸ್ನಾತ್ವಾ ದರ್ಭಶಯಂ ದೇವಂ ಪ್ರಪಶ್ಯೇದ್ಭಕ್ತಿಪೂರ್ವಕಂ ॥ ೫೧ ॥
ಕಪಿತೀರ್ಥಂ ತತಃ ಪ್ರಾಪ್ಯ ತತ್ರಾಽಪಿ ಸ್ನಾನಮಾಚರೇತ್ ।
ಸೀತಾಕುಂಡಂ ತತಃ ಪ್ರಾಪ್ಯ ತತ್ರಾಽಪಿ ಸ್ನಾನಮಾಚರೇತ್ ॥ ೫೨ ॥
ಋಣಮೋಚನತೀರ್ಥಂ ತು ತತಃ ಪ್ರಾಪ್ಯ ಮಹಾಫಲಂ ।
ಸ್ನಾತ್ವಾ ಪ್ರಣಮ್ಯ ರಾಮಂ ಚ ಜಾನಕೀರಮಣಂ ಪ್ರಭುಂ ॥ ೫೩ ॥
ಗಚ್ಛೇಲ್ಲಕ್ಷ್ಮಣತೀರ್ಥಂ ತು ಕಂಠಾದುಪರಿ ವಾಪನಂ ।
ಕೃತ್ವಾ ಸ್ನಾಯಾಚ್ಚ ತತ್ರಾಽಪಿ ದುಷ್ಕೃತಾನ್ಯಪಿ ಚಿಂತಯನ್ ॥ ೫೪ ॥
ತತಃ ಸ್ನಾತ್ವಾ ರಾಮತೀರ್ಥೇ ತತೋ ದೇವಾಲಯಂ ವ್ರಜೇತ್ ।
ಸ್ನಾತ್ವಾ ಪಾಪವಿನಾಶೇ ಚ ಗಂಗಾಯಮುನಯೋಸ್ತಥಾ ॥ ೫೫ ॥
ಸಾವಿತ್ರ್ಯಾಂ ಚ ಸರಸ್ವತ್ಯಾಂ ಗಾಯತ್ರ್ಯಾಂ ಚ ದ್ವಿಜೋತ್ತಮಾಃ ।
ಸ್ನಾತ್ವಾ ಚ ಹನುಮತ್ಕುಂಡೇ ತತಃ ಸ್ನಾಯಾನ್ಮಹಾಫಲೇ ।
ಬ್ರಹ್ಮಕುಂಡಂ ತತಃ ಪ್ರಾಪ್ಯ ಸ್ನಾಯಾದ್ವಿಧಿಪುರಸ್ಸರಂ ॥ ೫೬ ॥
ನಾಗಕುಂಡಂ ತತಃ ಪ್ರಾಪ್ಯ ಸರ್ವಪಾಪವಿನಾಶನಂ ।
ಸ್ನಾನಂ ಕುರ್ಯಾನ್ನರೋ ವಿಪ್ರಾ ನರಕಕ್ಲೇಶನಾಶನಂ ।
ಗಂಗಾದ್ಯಾಃ ಸರಿತಃ ಸರ್ವಾಸ್ತೀರ್ಥಾನಿ ಸಕಲಾನ್ಯಪಿ ॥ ೫೭ ॥

---

೫೧. ಹಾಗೆಯೇ ಪಶ್ಚಿಮಮಾರ್ಗದಿಂದ ಪಯಣಮಾಡಿ ಅಲ್ಲಿರುವ ಚಕ್ರತೀರ್ಥದಲ್ಲಿ ಮಿಂದು ಧರ್ಭಶಯನನಾದ ಹರಿಯನ್ನು ಭಕ್ತಿಯಿಂದ ದರ್ಶನ ಮಾಡಬೇಕು.

೫೨. ಅನಂತರ ಕಪಿತೀರ್ಥದಲ್ಲಿಯೂ, ಬಳಿಕ ಸೀತಾಕುಂಡದಲ್ಲಿಯೂ ಸ್ನಾನಮಾಡಬೇಕು.

೫೩–೫೪. ತರುವಾಯ ಅತ್ಯಂತ ಫಲದಾಯಕವಾದ ಋಣಮೋಚನ ತೀರ್ಥವನ್ನು ಹೊಂದಿ ಮಿಂದು ಜಾನಕೀಪತಿಯಾದ ಶ್ರೀರಾಮನನ್ನು ವಂದಿಸಿ ಲಕ್ಷ್ಮಣತೀರ್ಥಕ್ಕೆ ಬಂದು ಅಲ್ಲಿ ಕಂಠದಿಂದ ಮೇಲ್ಭಾಗದಲ್ಲಿ ಮಾತ್ರ ವಪನ ಮಾಡಿಸಿಕೊಂಡು ತಾನು ಮಾಡಿದ ಪಾಪಗಳನ್ನು ಸ್ಮರಿಸುತ್ತ ಸ್ನಾನಮಾಡಬೇಕು.

೫೫–೫೬. ಬಳಿಕ ರಾಮತೀರ್ಥದಲ್ಲಿ ಮಿಂದು ದೇವಾಲಯಕ್ಕೆ ಹೋಗ ಬೇಕು. ಅನಂತರ ಪಾಪವಿನಾಶನ, ಗಂಗಾಯಮುನೆ, ಸಾವಿತ್ರೀ, ಸರಸ್ವತಿ, ಗಾಯತ್ರಿ ತೀರ್ಥಗಳಲ್ಲಿಯೂ, ಹನುಮತ್ಕುಂಡ, ಬ್ರಹ್ಮಕುಂಡಗಳಲ್ಲಿಯೂ ವಿಧಿಯಂತೆ ಸ್ನಾನಮಾಡಬೇಕು.

೫೭–೬೦. ಬಳಿಕ ಸಕಲ ಪಾಪಗಳನ್ನು ನಾಶಗೊಳಿಸುವುದೂ, ನರಕದುಃಖ ಗಳನ್ನು ನೀಗಿಸುವುದೂ ಆದ ನಾಗಕುಂಡಕ್ಕೆ ಬಂದು ಸ್ನಾನಮಾಡಬೇಕು.

ಸರ್ವದಾ ನಾಗಕುಂಡೇ ತು ವಸಂತಿ ಸ್ವಾಘಶಾಂತಯೇ ।
ಅನಂತಾದಿ ಮಹಾನಾಗೈರಕ್ಷ್ಯಾಭಿರಿದಮುತ್ತಮಂ ॥ ೫೮ ॥
ಕಲ್ಪಿತಂ ಮುಕ್ತಿದಂ ತೀರ್ಥಂ ರಾಮಸ್ಕೇತೌ ಶಿವಂಕರಂ ।
ಅಗಸ್ತ್ಯಕುಂಡಂ ಸಂಪ್ರಾಪ್ಯ ತತಃ ಸ್ನಾಯಾದನುತ್ತಮಂ ॥ ೫೯ ॥
ಅಥಾಽಗ್ನಿತೀರ್ಥಮಾಸಾದ್ಯ ಸರ್ವದುಷ್ಕರ್ಮನಾಶನಂ ।
ಸ್ನಾತ್ವಾ ಸಂತರ್ಪ್ಯ ವಿಧಿವಚ್ಛ್ರಾದ್ಧಂ ಕುರ್ಯಾತ್ಪಿತೄನ್ಸ್ಮರನ್ ॥ ೬೦ ॥
ಗೋಭೂಹಿರಣ್ಯಧಾನ್ಯಾದಿ ಬ್ರಾಹ್ಮಣೇಭ್ಯಃ ಸ್ವಶಕ್ತಿತಃ ।
ದತ್ವಾಽಗ್ನಿತೀರ್ಥತೀರೇ ತು ಸರ್ವಪಾಪೈಃ ಪ್ರಮುಚ್ಯತೇ ॥ ೬೧ ॥
ಅಥವಾ ಯಾನಿ ತೀರ್ಥಾನಿ ಚಕ್ರತೀರ್ಥಮುಖಾನಿ ವೈ ।
ಅನುಕ್ರಾಂತಾನಿ ವಿಪ್ರೇಂದ್ರಾಃ ಸರ್ವಪಾಪಹರಾಣಿ ತು ॥ ೬೨ ॥
ಸ್ನಾಯಾತ್ತದನುಪೂರ್ವೇಣ ಸ್ನಾಯಾದ್ವಾಽಪಿ ಯಥಾ ರುಚಿ ।
ಸ್ನಾತ್ವೈವಂ ಸರ್ವತೀರ್ಥೇಷು ಶ್ರಾದ್ಧಾದೀನಿ ಸಮಾಚರೇತ್ ॥ ೬೩ ॥
ಪಶ್ಚಾದ್ರಾಮೇಶ್ವರಂ ಪ್ರಾಪ್ಯ ನಿಷೇವ್ಯ ಪರಮೇಶ್ವರಂ ।
ಸೇತುಮಾಧವಮಾಗತ್ಯ ತಥಾ ರಾಮಂ ಚ ಲಕ್ಷ್ಮಣಂ ॥ ೬೪ ॥
ಸೀತಾಂ ಪ್ರಭಂಜನಸುತಂ ತಥಾಽನ್ಯಾನ್ಕಪಿಸತ್ತಮಾನ್ ।
ತತ್ರತ್ಯ ಸರ್ವತೀರ್ಥೇಷು ಸ್ನಾತ್ವಾ ನಿಯಮಪೂರ್ವಕಂ ॥ ೬೫ ॥
ಪ್ರಣಮ್ಯ ರಾಮನಾಥಂ ಚ ರಾಮಚಂದ್ರಂ ತಥಾಽಪರಾನ್ ।
ನಮಸ್ಕೃತ್ಯ ಧನುಷ್ಕೋಟಿಂ ತತಃ ಸ್ನಾತುಂ ವ್ರಜೇನ್ನರಃ ॥ ೬೬ ॥

---

ಈ ನಾಗಕುಂಡದಲ್ಲಿ ಗಂಗಾದಿನದಿಗಳೂ, ಸಮಸ್ತತೀರ್ಥಗಳೂ ಪಾಪಶಾಂತಿಗಾಗಿ ಯಾವಾಗಲೂ ವಾಸಿಸುವುವು. ಮುಕ್ತಿದಾಯಕವಾದ ಈ ನಾಗಕುಂಡವನ್ನು ಅನಂತಾದಿ ಎಂಟು ಮಹಾನಾಗಗಳು ರಚಿಸಿರುತ್ತವೆ. ಇದರಲ್ಲಿ ಮಿಂದ ಬಳಿಕ ಅತಿ ಶ್ರೇಷ್ಠವಾದ ಅಗಸ್ತ್ಯಕುಂಡದಲ್ಲಿ ಮಿಂದು ಸಕಲಪಾಪಪರಿಹಾರಕವಾದ ಅಗ್ನಿತೀರ್ಥವನ್ನು ಹೊಂದಿ ಅಲ್ಲಿಯೂ ಮಿಂದು ಪಿತೃಗಳನ್ನು ಸ್ಮರಿಸುತ್ತ ವಿಧಿಪೂರ್ವಕವಾಗಿ ಶ್ರಾದ್ಧಗೈದು ತರ್ಪಣ ಕೊಡಬೇಕು.

೬೧–೬೩. ಅಗ್ನಿತೀರ್ಥದ ತೀರದಲ್ಲಿ ತನ್ನ ಶಕ್ತ್ಯನುಸಾರ ಬ್ರಾಹ್ಮಣರಿಗೆ ಗೋ, ಭೂಮಿ, ಚಿನ್ನ, ಧಾನ್ಯ ಮೊದಲಾದುವುಗಳನ್ನು ದಾನಮಾಡಿದ ಮನುಷ್ಯನು ಸಕಲಪಾಪಮುಕ್ತನಾಗುವನು. ಅಥವಾ ಚಕ್ರತೀರ್ಥವೇ ಮೊದಲಾದ ಪಾಪನಾಶಕವಾದ ಸಕಲ ತೀರ್ಥಗಳಲ್ಲಿ ಕ್ರಮವಾಗಿಯೋ ಅಥವಾ ಇಷ್ಟಬಂದಂತೆಯೋ ಸ್ನಾನಮಾಡಿ ಶ್ರಾದ್ಧ ಮೊದಲಾದ ಕರ್ಮಗಳನ್ನಾಚರಿಸಬೇಕು.

೬೪–೬೬. ಬಳಿಕ ರಾಮೇಶ್ವರನನ್ನು ಹೊಂದಿ ಅವನನ್ನು ಸೇವಿಸಿ, ಸೇತುಮಾಧವನೆಡೆಗೆ ಬಂದು ಸಮಸ್ತತೀರ್ಥಗಳಲ್ಲಿಯೂ ವಿಧಿಯಂತೆ ಮಿಂದು ರಾಮ,

ತತ್ರ ಪಾಷಾಣದಾನಾದಿ ಪೂರ್ವೋಕ್ತನಿಯಮಂ ಚರೇತ್ ।
ಧನುಷ್ಕೋಟೌ ಚ ದಾನಾನಿ ದದ್ಯಾದ್ವಿತ್ತಾನುಸಾರತಃ ॥ ೬೭ ॥
ಕ್ಷೇತ್ರಂ ಗಾಶ್ಚ ತಥಾಽನ್ಯಾನಿ ವಸ್ತ್ರಾಣ್ಯನ್ಯಾನಿ ಚಾದರಾತ್ ।
ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ ದದ್ಯಾದ್ವಿತ್ತಾನುಸಾರತಃ ॥ ೬೮ ॥
ಕೋಟಿತೀರ್ಥಂ ತತಃ ಪ್ರಾಪ್ಯ ಸ್ನಾಯಾನ್ನಿಯಮಪೂರ್ವಕಂ ।
ತತೋ ರಾಮೇಶ್ವರಂ ದೇವಂ ಪ್ರಣಮೇದ್ವೃಷಭಧ್ವಜಂ ॥ ೬೯ ॥
ವಿಭವೇ ಸತಿ ವಿಪ್ರೇಭ್ಯೋ ದದ್ಯಾತ್ಸೌವರ್ಣದಕ್ಷಿಣಾಂ ।
ತಿಲಾನ್ಧಾನ್ಯಂ ಚ ಗಾಂ ಕ್ಷೇತ್ರಂ ವಸ್ತ್ರಾಣ್ಯನ್ಯಾನಿ ತಂಡುಲಾನ್ ॥ ೭೦ ॥
ದದ್ಯಾದ್ವಿತ್ತಾನುಸಾರೇಣ ವಿತ್ತಲೋಭವಿವರ್ಜಿತಃ ।
ಧೂಪಂ ದೀಪಂ ಚ ನೈವೇದ್ಯಂ ಪೂಜೋಪಕರಣಾನಿ ಚ ॥ ೭೧ ॥
ರಾಮೇಶ್ವರಾಯ ದೇವಾಯ ದದ್ಯಾದ್ವಿತ್ತಾನುಸಾರತಃ ।
ಸ್ತುತ್ವಾ ರಾಮೇಶ್ವರಂ ದೇವಂ ಪ್ರಣಮ್ಯ ಚ ಸಭಕ್ತಿಕಂ ॥ ೭೨ ॥
ಅನುಜ್ಞಾಪ್ಯ ತತೋ ಗಚ್ಛೇತ್ಸೇತುಮಾಧವಸನ್ನಿಧಿಂ ।
ತಸ್ಮೈ ದತ್ವಾಚ ಧೂಪಾದೀನನುಜ್ಞಾಪ್ಯ ಚ ಮಾಧವಂ ॥ ೭೩ ॥
ಪೂರ್ವೋಕ್ತನಿಯಮೋಪೇತಃ ಪುನರಾಯಾತ್ಸ್ವಕಂ ಗೃಹಂ ।
ಬ್ರಾಹ್ಮಣಾನ್ಭೋಜಯೇದನ್ನೈಃ ಷಡ್ರಸೈಃ ಪರಿಪೂರಿತೈಃ ॥ ೭೪ ॥

---

ಲಕ್ಷ್ಮಣ, ಸೀತೆ, ಆಂಜನೇಯರನ್ನೂ, ಇತರ ಕಪಿಗಳನ್ನೂ, ರಾಮೇಶ್ವರನನ್ನೂ ನಮಸ್ಕರಿಸಿ ಧನುಷ್ಕೋಟಿಗೆ ಸ್ನಾನಕ್ಕಾಗಿ ಹೋಗಬೇಕು.

೬೭–೬೯. ಅಲ್ಲಿ ಪಾಷಾಣದಾನ ಮೊದಲಾದ ಹಿಂದೆ ಹೇಳಿದ ನಿಯಮಗಳನ್ನಾಚರಿಸಿ ತನ್ನಲ್ಲಿರುವ ದ್ರವ್ಯಕ್ಕನುಗುಣವಾಗಿ ಕ್ಷೇತ್ರ, ಗೋವು, ವಸ್ತ್ರ, ಇನ್ನೂ ಇತರ ವಸ್ತುಗಳನ್ನು ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರಿಗೆ ದಾನ ಮಾಡಬೇಕು. ಬಳಿಕ ಕೋಟಿತೀರ್ಥದಲ್ಲಿ ವಿಧಿಯಂತೆ ಮಿಂದು ವೃಷಭಧ್ವಜನಾದ ರಾಮೇಶ್ವರನನ್ನು ವಂದಿಸಬೇಕು.

೭೦. ಶಕ್ತ್ಯನುಸಾರ ಬ್ರಾಹ್ಮಣರಿಗೆ ಎಳ್ಳು, ಧಾನ್ಯ, ಗೋವು, ಕ್ಷೇತ್ರ, ವಸ್ತ್ರ, ಅಕ್ಕಿಗಳನ್ನು ದಾನಮಾಡಿ ಸುವರ್ಣದಕ್ಷಿಣೆಯನ್ನು ಕೊಡಬೇಕು.

೭೧–೭೪. ದ್ರವ್ಯಲೋಭಮಾಡದೆ ರಾಮೇಶ್ವರನಿಗೆ ಧೂಪ, ದೀಪ, ನೈವೇದ್ಯ, ಪೂಜಾಸಾಮಗ್ರಿಗಳನ್ನು ದಾನಮಾಡಿ ಅವನನ್ನು ಸ್ತುತಿಸಿ, ಭಕ್ತಿಯಿಂದ ನಮಸ್ಕರಿಸಿ ಅವನ ಅನುಮತಿಯಿಂದ ಸೇತುಮಾಧವನೆಡೆಗೆ ಹೋಗಿ ಅವನಿಗೆ ಧೂಪಾದಿಗಳನ್ನಿತ್ತು ಅವನ ಅಪ್ಪಣೆಯಿಂದ ಹಿಂದೆ ಹೇಳಿದ ನಿಯಮಗಳೊಡನೆ ತನ್ನ ಮನೆಗೆ ಬಂದು ಬ್ರಾಹ್ಮಣರನ್ನು ಷಡ್ರಸಾನ್ನದಿಂದ ಭೋಜನ ಮಾಡಿಸಬೇಕು.

ತೇನೈವ ರಾಮನಾಥೋಽಸ್ಮೈ ಪ್ರೀತೋಽಭೀಷ್ಟಂ ಪ್ರಯಚ್ಛತಿ ।
ನಾರಕಂ ಚಾಽಸ್ಯ ನಾಸ್ತ್ಯೇವ ದಾರಿದ್ರ್ಯಂ ಚ ವಿನಶ್ಯತಿ ॥ ೭೫ ॥
ಸಂತತಿರ್ವರ್ಧತೇ ತಸ್ಯ ಪುರುಷಸ್ಯ ದ್ವಿಜೋತ್ತಮಾಃ ।
ಸಂಸಾರಮವಧೂಯಾಶು ಸಾಯುಜ್ಯಮಪಿ ಯಾಸ್ಯತಿ ॥ ೭೬ ॥
ಅತ್ರಾಗಂತುಮಶಕ್ತಶ್ಚೇಚ್ಛ್ರುತಿಸ್ಮೃತ್ಯಾಗಮೇಷು ಯತ್ ।
ಗ್ರಂಥಜಾತಂ ಮಹಾಪುಣ್ಯಂ ಸೇತುಮಾಹಾತ್ಮ್ಯಸೂಚಕಂ ॥ ೭೭ ॥
ತಂ ಗ್ರಂಥಂ ಪಾಠಯೇದ್ವಿಪ್ರಾ ಮಹಾಪಾತಕನಾಶನಂ ।
ಇದಂ ವಾ ಸೇತುಮಾಹಾತ್ಮ್ಯಂ ಪಠೇದ್ಭಕ್ತಿಪುರಸ್ಸರಂ ॥ ೭೮ ॥
ಸೇತುಸ್ನಾನಫಲಂ ಪುಣ್ಯಂ ತೇನಾಪ್ನೋತಿ ನ ಸಂಶಯಃ ।
ಅಂಧಪಂಗ್ವಾದಿವಿಷಯಮೇತತ್ಪ್ರೋಕ್ತಂ ಮನೀಷಿಭಿಃ ॥ ೭೯ ॥

ಶ್ರೀಸೂತ ಉವಾಚ:—

ಏವಂ ವಃ ಕಥಿತೋ ವಿಪ್ರಾಃ ಸೇತುಯಾತ್ರಾಕ್ರಮೋ ದ್ವಿಜಾಃ ।
ಏತತ್ಪಠನ್ವಾ ಶೃಣ್ವನ್ವಾ ಸರ್ವದುಃಖಾದ್ವಿಮುಚ್ಯತೇ ॥ ೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಯಾತ್ರಾಕ್ರಮವರ್ಣನಂ" ನಾಮ ಏಕಪಂಚಾಶತ್ತಮೋಽಧ್ಯಾಯಃ

---

೭೫. ಆದರಿಂದಲೇ ರಾಮನಾಥನು ಸಂತುಷ್ಟನಾಗಿ ಇಷ್ಟಾರ್ಥವನ್ನು ಕೊಡುತ್ತಾನೆ. ಇಂಥವನಿಗೆ ನರಕವಾಸವು ತಪ್ಪುವುದು. ಬಡತನವು ನೀಗುವುದು.

೭೬. ಸಂತತಿಯು ವೃದ್ಧಿಗೊಳ್ಳುವುದು. ಇವನು ಸಂಸಾರವನ್ನು ಪರಿಹರಿಸಿ ಕೊಂಡು ಸಾಯುಜ್ಯಮುಕ್ತಿಯನ್ನು ಹೊಂದುವನು.

೭೭–೭೯. ಈ ಸೇತುವೆಗೆ ಬರಲಶಕ್ತನಾದವನು ಶ್ರುತಿ, ಸ್ಮೃತಿ, ಆಗಮ ಗಳಲ್ಲಿರುವ ಸೇತುಮಾಹಾತ್ಮ್ಯೆಯನ್ನು ಸೂಚಿಸುವ ಪಾಪನಾಶಕವಾದ ಪವಿತ್ರ ಗ್ರಂಥಗಳನ್ನು ಪಾರಾಯಣಮಾಡಿಸಬೇಕು. ಅಥವಾ ಈ ಸೇತುಮಾಹಾತ್ಮ್ಯೆ ಯನ್ನು ಭಕ್ತಿಯಿಂದ ಓದಬೇಕು. ಆದರಿಂದ ನಿಶ್ಚಯವಾಗಿಯೂ ಸೇತುಸ್ನಾನದ ಪುಣ್ಯವನ್ನು ಹೊಂದುತ್ತಾನೆ. ಜ್ಞಾನಿಗಳು ಈ ಮೇಲೆ ಹೇಳಿದ ಪಠನಾದಿಗಳನ್ನು ಕುರುಡರು, ಕುಂಟರು ಮಾಡತಕ್ಕುದೆಂದು ಹೇಳಿರುವರು.

೮೦. ಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರೆ! ಈರೀತಿ ನಿಮಗೆ ಸೇತುಯಾತ್ರಾಕ್ರಮವನ್ನು ಹೇಳಿರುವೆನು. ಇದನ್ನು ಕೇಳಿದವನಾಗಲಿ, ಓದಿದವ ನಾಗಲಿ ಸಕಲ ದುಃಖಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಯಾತ್ರಾಕ್ರಮವರ್ಣನ"ವೆಂಬ ಐವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಪಂಚಾಶತ್ತಮೋಽಧ್ಯಾಯಃ

### ಸೇತುಮಾಹಾತ್ಮ್ಯಫಲಶ್ರುತಿವರ್ಣನಂ

ಶ್ರೀಸೂತ ಉವಾಚ:—

ಭೂಯೋಽಪ್ಯಹಂ ಪ್ರವಕ್ಷ್ಯಾಮಿ ಸೇತುಮುದ್ದಿಶ್ಯ ವೈಭವಂ ।
ಯುಷ್ಮಾಕಮಾದರೇಣಾಽಹಂ ಶೃಣುಧ್ವಂ ಮುನಿಪುಂಗವಾಃ ॥ ೧ ॥
ಸ್ಥಾನಾನಾಮಪಿ ಸರ್ವೇಷಾಮೇತತ್ಸ್ಥಾನಂ ಮಹತ್ತರಂ ।
ಅತ್ರ ಜಪ್ತಂ ಹುತಂ ತಪ್ತಂ ದತ್ತಂ ಚಾಽಕ್ಷಯಮುಚ್ಯತೇ ॥ ೨ ॥
ಅಸ್ಮಿನ್ನೇವ ಮಹಾಸ್ಥಾನೇ ಧನುಷ್ಕೋಟೌ ನಿಮಜ್ಜನಾತ್ ।
ವಾರಾಣಸ್ಯಾಂ ದಶಸಮಾವಾಸಪುಣ್ಯಫಲಂ ಭವೇತ್ ॥ ೩ ॥
ತಸ್ಮಿಂಸ್ಥಲೇ ಧನುಷ್ಕೋಟೌ ಸ್ನಾತ್ವಾ ರಾಮೇಶ್ವರಂ ಶಿವಂ ।
ದೃಷ್ಟ್ವಾ ನರೋ ಭಕ್ತಿಯುಕ್ತಸ್ತ್ರಿದಿನಾನಿ ವಸೇದ್ದ್ವಿಜಾಃ ॥ ೪ ॥
ಪುಂಡರೀಕಪುರೇ ತೇನ ದಶವತ್ಸರವಾಸಜಂ ।
ಪುಣ್ಯಂ ಭವತಿ ವಿಪ್ರೇಂದ್ರಾ ಮಹಾಪಾತಕನಾಶನಂ ॥ ೫ ॥
ಅಷ್ಟೋತ್ತರಸಹಸ್ರಂ ತು ಮಂತ್ರಮಾದ್ಯಂ ಷಡಕ್ಷರಂ ।
ಅತ್ರ ಜಪ್ತ್ವಾ ನರೋ ಭಕ್ತ್ಯಾ ಶಿವಸಾಯುಜ್ಯಮಾಪ್ನುಯಾತ್ ॥ ೬ ॥

---

### ಕನ್ನಡದ ಅನುವಾದ

#### ಸೇತುಮಾಹಾತ್ಮ್ಯ ಫಲಶ್ರುತಿವರ್ಣನ

೧. ಶ್ರೀಸೂತನು ಹೇಳುತ್ತಾನೆ:—ಎಲೈ ಮುನಿವರ್ಯರೇ! ನಾನು ಮರಳಿಯೂ ನಿಮಗೆ ಸೇತುಮಾಹಾತ್ಮ್ಯೆಯನ್ನು ಹೇಳುವೆನು. ಪ್ರೀತಿಯಿಂದ ಕೇಳಿರಿ.

೨. ಸಕಲಪ್ರದೇಶಗಳಲ್ಲಿಯೂ ಈ ಸೇತುಪ್ರದೇಶವೇ ಉತ್ತಮವಾದುದು. ಇಲ್ಲಿ ಮಾಡಿದ ಜಪ, ಹೋಮ, ತಪಸ್ಸು, ದಾನ ಇವುಗಳು ಅಕ್ಷಯವಾಗುವುವು.

೩. ಇಲ್ಲಿರುವ ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದ ಕಾಶಿಯಲ್ಲಿ ಹತ್ತುವರ್ಷ ವಾಸಮಾಡಿದ ಪುಣ್ಯವನ್ನು ಮಾನವನು ಪಡೆಯುವನು.

೪. ಧನುಷ್ಕೋಟಿಯಲ್ಲಿ ಮಿಂದು ಭಕ್ತಿಯಿಂದ ರಾಮೇಶ್ವರನನ್ನು ಸಂದರ್ಶಿಸಿ ಮೂರು ದಿನಗಳಕಾಲ ವಾಸಮಾಡಬೇಕು.

೫. ಆದರಿಂದ ಪುಂಡರೀಕಪುರದಲ್ಲಿ ಹತ್ತುವರ್ಷ ವಾಸಮಾಡಿದ ಪುಣ್ಯವು ಲಭಿಸುವುದು.

೬. ಇಲ್ಲಿ ಷಡಕ್ಷರಮಂತ್ರವನ್ನು ಭಕ್ತಿಯಿಂದ ಸಾವಿರದೆಂಟುಸಾರಿ ಜಪಿಸುವ ಮಾನವನು ಶಿವಸಾಯುಜ್ಯವನ್ನು ಪಡೆಯುವನು.

ಮಧ್ಯಾರ್ಜುನೇ ಕುಂಭಕೋಣೇ ಮಾಯೂರೇ ಶ್ವೇತಕಾನನೇ ।
ಹಾಲಾಸ್ಯೇ ಚ ಗಜಾರಣ್ಯೇ ವೇದಾರಣ್ಯೇ ಚ ನೈಮಿಷೇ ॥ ೭ ॥
ಶ್ರೀಪರ್ವತೇ ಚ ಶ್ರೀರಂಗೇ ಶ್ರೀಮದ್ವೃದ್ಧಗಿರೌ ತಥಾ ।
ಚಿದಂಬರೇ ಚ ವಲ್ಮೀಕೇ ಶೇಷಾದ್ರಾವರುಣಾಽಚಲೇ ॥ ೮ ॥
ಶ್ರೀಮದ್ದಕ್ಷಿಣಕೈಲಾಸೇ ವೇಂಕಟಾದ್ರೌ ಹರಿಸ್ಥಲೇ ।
ಕಾಂಚೀಪುರೇ ಬ್ರಹ್ಮಪುರೇ ವೈದ್ಯೇಶ್ವರಪುರೇ ತಥಾ ॥ ೯ ॥
ಅನ್ಯತ್ರಾಽಪಿ ಶಿವಸ್ಥಾನೇ ವಿಷ್ಣುಸ್ಥಾನೇ ಚ ಸತ್ತಮಾಃ ।
ವರ್ಷವಾಸಭವಂ ಪುಣ್ಯಂ ಧನುಷ್ಕೋಟೌ ನರೋ ಮುದಾ ॥ ೧೦ ॥
ಮಾಘಮಾಸೇ ಯದಿ ಸ್ನಾಯಾದಾಪ್ನೋತ್ಯೇವ ನ ಸಂಶಯಃ ।
ಇಮಂ ಸೇತುಂ ಸಮುದ್ದಿಶ್ಯ ದ್ವೌ ಸಮುದ್ರಾವಿತಿ ಶ್ರುತಿಃ ॥ ೧೧ ॥
ವಿದ್ಯತೇ ಬ್ರಾಹ್ಮಣಶ್ರೇಷ್ಠಾ ಮಾತೃಭೂತಾ ಸನಾತನೀ ।
ಅದೋಯದ್ದಾರುರಿತ್ಯನ್ಯಾ ಯತ್ರಾಽಸ್ತಿ ಮುನಿಪುಂಗವಾಃ ॥ ೧೨ ॥
ವಿಷ್ಣೋಃ ಕರ್ಮಾಣಿ ಪಶ್ಯಂತೀ ಸೇತುವೈಭವಶಂಸಿನೀ ।
ಶ್ರುತಿರಸ್ತಿ ತಥಾಽನ್ಯಾಽಪಿ ತದ್ವಿಷ್ಣೋರಿತಿ ಚಾಽಪರಾ ॥ ೧೩ ॥
ಇತಿಹಾಸಪುರಾಣಾನಿ ಸ್ಮೃತಯಶ್ಚ ತಪೋಧನಾಃ ।
ಏಕವಾಕ್ಯತಯಾ ಸೇತುಮಾಹಾತ್ಮ್ಯಂ ಪ್ರಬ್ರುವಂತಿ ಹಿ ॥ ೧೪ ॥
ಚಂದ್ರಸೂರ್ಯೋಪರಾಗೇಷು ಕುರ್ವನ್ಸೇತ್ವವಗಾಹನಂ ।
ಅವಿಮುಕ್ತೇ ದಶಾಬ್ದಂ ತು ಗಂಗಾಸ್ನಾನಫಲಂ ಲಭೇತ್ ॥ ೧೫ ॥

---

೭–೧೩. ಮಾನವನು ಈ ಧನುಷ್ಕೋಟಿಯಲ್ಲಿ ಮಾಘಮಾಸದಲ್ಲಿ ಮಿಂದರೆ ಮಧ್ಯಾರ್ಜುನ, ಕುಂಭಕೋಣ, ಮಾಯೂರ, ಶ್ವೇತಕಾನನ, ಹಾಲಾಸ್ಯ, ಗಜಾರಣ್ಯ, ವೇದಾರಣ್ಯ, ನೈಮಿಷ, ಶ್ರೀಪರ್ವತ, ಶ್ರೀರಂಗ, ವೃದ್ಧಗಿರಿ, ಚಿದಂಬರ, ವಲ್ಮೀಕ, ಶೇಷಾಚಲ, ಅರುಣಾಚಲ, ದಕ್ಷಿಣ ಕೈಲಾಸ, ವೆಂಕಟಾಚಲ, ಕಾಂಚೀಪುರ, ಬ್ರಹ್ಮಪುರ, ವೈದ್ಯೇಶ್ವರಪುರ, ಇತರ ಹರಿಹರಕ್ಷೇತ್ರಗಳು ಇವುಗಳಲ್ಲಿ ಒಂದು ವರ್ಷ ವಾಸಿಸಿದ ಪುಣ್ಯವನ್ನು ಪಡೆಯುವನು. ಈ ಸೇತುವೆಯನ್ನು ಉದ್ದೇಶಿಸಿ "ದ್ವೌಸಮುದ್ರೌ" ಎಂಬ ತಾಯಿಯಂತಿರುವ ಅನಾದಿ ಕಾಲದ ಶ್ರುತಿಯೂ, "ಅದೋಯದ್ದಾರು" ಎಂಬ ಶ್ರುತಿಯೂ, ಸೇತುವೆಯ ಮಾಹಾತ್ಮ್ಯೆಯನ್ನು ಹೇಳುವ "ವಿಷ್ಣೋಃ ಕರ್ಮಾಣಿಪಶ್ಯಂತೀ" ಎಂಬ ಶ್ರುತಿಯೂ, "ತದ್ವಿಷ್ಣೋಃ" ಎಂಬ ಮತ್ತೊಂದು ಶ್ರುತಿಯೂ ಇವೆ.

೧೪. ಇತಿಹಾಸಗಳೂ, ಪುರಾಣಗಳೂ, ಸ್ಮೃತಿಗಳೂ ಒಂದೇ ರೀತಿಯಿಂದ ಸೇತುಮಾಹಾತ್ಮ್ಯವನ್ನು ಹೇಳುವುವು.

೧೫. ಚಂದ್ರಸೂರ್ಯಗ್ರಹಣಗಳಕಾಲದಲ್ಲಿ ಸೇತುಸ್ನಾನಮಾಡಿದರೆ ಹತ್ತು ವರ್ಷಕಾಲ ಗಂಗೆಯಲ್ಲಿಮಿಂದ ಪುಣ್ಯವು ಲಭಿಸುವುದು.

ಕೋಟಿಜನ್ಮಕೃತಂ ಪಾಪಂ ತತ್ಕ್ಷಣೇನೈವ ನಶ್ಯತಿ ।
ಅಶ್ವಮೇಧಸಹಸ್ರಸ್ಯ ಫಲಮಾಪ್ನೋತ್ಯನುತ್ತಮಂ ॥ ೧೬ ॥
ವಿಷುವಾಯನಸಂಕ್ರಾಂತೌ ಶಶಿವಾರೇ ಚ ಪರ್ವಣಿ ।
ಸೇತುದರ್ಶನಮಾತ್ರೇಣ ಸಪ್ತಜನ್ಮಾರ್ಜಿತಾಃ ಶುಭಂ ॥ ೧೭ ॥
ನಶ್ಯತೇ ಸ್ವರ್ಗತಿಂ ಚೈವ ಪ್ರಯಾತಿ ದ್ವಿಜಪುಂಗವಾಃ ।
ಮಕರಸ್ಥೇ ರವೌ ಮಾಘೇ ಕಿಂಚಿದಭ್ಯುದಿತೇ ರವೌ ॥ ೧೮ ॥
ಸ್ನಾತ್ವಾ ದಿನತ್ರಯಂ ಮರ್ತ್ಯೋ ಧನುಷ್ಕೋಟೌ ವಿಪಾತಕಃ ।
ಗಂಗಾದಿಸರ್ವತೀರ್ಥೇಷು ಸ್ನಾನಪುಣ್ಯಮವಾಪ್ನುಯಾತ್ ॥ ೧೯ ॥
ಧನುಷ್ಕೋಟೌ ನರಃ ಕುರ್ಯಾತ್ಸ್ನಾನಂ ಪಂಚದಿನೇಷು ಯಃ ।
ಅಶ್ವಮೇಧಾದಿಪುಣ್ಯಂ ಚ ಪ್ರಾಪ್ನುಯಾದ್ಬ್ರಾಹ್ಮಣೋತ್ತಮಾಃ ॥ ೨೦ ॥
ಚಾಂದ್ರಾಯಣಾದಿ ಕೃಚ್ಛ್ರಾಣಾಮನುಷ್ಠಾನಫಲಂ ಲಭೇತ್ ।
ಚತುರ್ಣಾಮಪಿ ವೇದಾನಾಂ ಪಾರಾಯಣಫಲಂ ತಥಾ ॥ ೨೧ ॥
ಮಾಘಮಾಸೇ ದಶಾಹಃಸು ಧನುಷ್ಕೋಟೌ ನಿಮಜ್ಜನಾತ್ ।
ಬ್ರಹ್ಮಹತ್ಯಾಯುತಂ ನಶ್ಯೇನ್ನಾತ್ರ ಕಾರ್ಯಾ ವಿಚಾರಣಾ ॥ ೨೨ ॥

---

೧೬. ಕೋಟಿ ಜನ್ಮಗಳಲ್ಲೆಸಗಿದ ಪಾಪವು ಕೂಡಲೇ ನಾಶವಾಗುವುದು. ಸಹಸ್ರಾಶ್ವಮೇಧಯಾಗಗಳ ಉತ್ತಮಫಲವು ದೊರೆಯುವುದು.

೧೭–೧೯. ಮೇಷ, ಕರ್ಕಟಕ, ಮಕರಸಂಕ್ರಾಂತಿ ದಿನಗಳಲ್ಲಿಯೂ, ಸೋಮವಾರ, ಪರ್ವಕಾಲಗಳಲ್ಲಿಯೂ ಸೇತುವನ್ನು ದರ್ಶನಮಾಡಿದ ಮಾನವನು ಏಳು ಜನ್ಮಗಳಲ್ಲಿ ಮಾಡಿದ ಪಾಪವು ನಾಶವಾಗಿ ಅವನು ಸ್ವರ್ಗಲೋಕವನ್ನು ಹೊಂದುವನು. ಸೂರ್ಯನು ಮಕರರಾಶಿಯಲ್ಲಿರಲು ಮಾಘಮಾಸದ ಸೂರ್ಯೋದಯಕಾಲಗಳಲ್ಲಿ ಮೂರು ದಿನ ಧನುಷ್ಕೋಟಿಯಲ್ಲಿ ಮಿಂದ ನರನು ಗಂಗಾದಿ ಸಕಲ ತೀರ್ಥಗಳಲ್ಲಿಯೂ ಮಿಂದ ಪುಣ್ಯವನ್ನು ಪಡೆಯುವನು.

೨೦. ಬ್ರಾಹ್ಮಣವರ್ಯರೆ! ಧನುಷ್ಕೋಟಿಯಲ್ಲಿ ಮಾನವನು ಐದು ದಿನ ಸ್ನಾನಮಾಡಿದರೆ ಅವನು ಅಶ್ವಮೇಧವೇ ಮೊದಲಾದ ಯಾಗಗಳನ್ನು ಮಾಡಿದ ಪುಣ್ಯವನ್ನು ಪಡೆಯುವನು.

೨೧. ಚಾಂದ್ರಾಯಣವೆ ಮೊದಲಾದ ಕೃಚ್ಛ್ರಗಳನ್ನು ಅನುಷ್ಠಾನ ಮಾಡಿದ ಫಲವನ್ನೂ, ನಾಲ್ಕು ವೇದಗಳನ್ನು ಪಾರಾಯಣಮಾಡಿದ ಫಲವನ್ನೂ ಹೊಂದುವನು.

೨೨. ಮಾಘಮಾಸದಲ್ಲಿ ಹತ್ತುದಿನ ಧನುಷ್ಕೋಟಿಯಲ್ಲಿ ಮಿಂದವನ ಹತ್ತುಸಾವಿರ ಬ್ರಹ್ಮಹತ್ಯಾದೋಷಗಳು ಶಾಂತವಾಗುವುವು. ಈ ವಿಷಯದಲ್ಲಿ ವಿಚಾರಮಾಡತಕ್ಕದ್ದಿಲ್ಲ.

ಮಾಘಮಾಸೇ ಧನುಷ್ಕೋಟೌ ದಶಪಂಚದಿನಾನಿ ಯಃ ।
ಸ್ನಾನಂ ಕರೋತಿ ಮನುಜಃ ಸ ವೈಕುಂಠಮವಾಪ್ನುಯಾತ್ ॥ ೨೩ ॥
ಮಾಘಮಾಸೇ ರಾಮಸೇತೌ ಸ್ನಾನಂ ವಿಂಶದ್ದಿನಂ ಚರನ್ ।
ಶಿವಸಾಮೀಪ್ಯಮಾಪ್ನೋತಿ ಶಿವೇನ ಸಹ ಮೋದತೇ ॥ ೨೪ ॥
ಪಂಚವಿಂಶದ್ದಿನಂ ಸ್ನಾನಂ ಕುರ್ವನ್ಸಾರೂಪ್ಯಮಾಪ್ನುಯಾತ್ ।
ಸ್ನಾನಂ ತ್ರಿಂಶದ್ದಿನಂ ಕುರ್ವನ್ಸಾಯುಜ್ಯಂ ಲಭತೇ ಧ್ರುವಂ ॥ ೨೫ ॥
ಅತೋಽವಶ್ಯಂ ರಾಮಸೇತೌ ಮಾಘಮಾಸೇ ದ್ವಿಜೋತ್ತಮಾಃ ।
ಸ್ನಾನಂ ಸಮಾಚರೇದ್ವಿದ್ವಾನ್ಕಿಂಚಿದಭ್ಯುದಿತೇ ರವೌ ॥ ೨೬ ॥
ಚಂದ್ರಸೂರ್ಯೋಪರಾಗೇ ಚ ತಥೈವಾಽರ್ಧೋದಯೇ ದ್ವಿಜಾಃ ।
ಮಹೋದಯೇ ರಾಮಸೇತೌ ಸ್ನಾನಂ ಕುರ್ವನ್ದ್ವಿಜೋತ್ತಮಾಃ ॥ ೨೭ ॥
ಅನೇಕಕ್ಲೇಶಸಂಯುಕ್ತಂ ಗರ್ಭವಾಸಂ ನ ಪಶ್ಯತಿ ।
ಬ್ರಹ್ಮಹತ್ಯಾದಿ ಪಾಪಾನಾಂ ನಾಶಕಂ ಚ ಪ್ರಕೀರ್ತಿತಂ ॥ ೨೮ ॥
ಸರ್ವೇಷಾಂ ನರಕಾಣಾಂ ಚ ಬಾಧಕಂ ಪರಿಕೀರ್ತಿತಂ ।
ಸಂಪದಾಮಪಿ ಸರ್ವಾಸಾಂ ನಿದಾನಂ ಪರಿಕೀರ್ತಿತಂ ॥ ೨೯ ॥
ಇಂದ್ರಾದಿ ಸರ್ವಲೋಕಾನಾಂ ಸಾಲೋಕ್ಯಾದಿಪ್ರದಂ ತಥಾ ।
ಚಂದ್ರಸೂರ್ಯೋಪರಾಗೇ ಚ ತಥೈವಾರ್ಧೋದಯೇ ದ್ವಿಜಾಃ ॥ ೩೦ ॥

---

೨೩. ಮಾಘಮಾಸದಲ್ಲಿ ಧನುಷ್ಕೋಟಿಯಲ್ಲಿ ಹದಿನೈದುದಿನ ಮಿಂದ ಮಾನವನು ವೈಕುಂಠಲೋಕಕ್ಕೆ ತೆರಳುವನು.

೨೪. ಮಾಘಮಾಸದಲ್ಲಿ ರಾಮಸೇತುವೆಯಲ್ಲಿ ಇಪ್ಪತ್ತುದಿನ ಮಿಂದವನು ಶಿವನ ಸಾಮೀಪ್ಯವನ್ನು ಹೊಂದಿ ಅವನೊಡನೆ ಆನಂದ ಪಡುವನು.

೨೫. ಇಪ್ಪತ್ತೈದು ದಿನ ಮಿಂದವನು ಶಿವಸಾರೂಪ್ಯವನ್ನು ಪಡೆಯುವನು. ಒಂದು ತಿಂಗಳು ಮಿಂದವನು ಶಿವಸಾಯುಜ್ಯವನ್ನು ಹೊಂದುವನು.

೨೬. ಎಲೈ ಬ್ರಾಹ್ಮಣರೆ! ಆದ್ದರಿಂದ ಮಾಘಮಾಸದಲ್ಲಿ ಸೂರ್ಯನು ಸ್ವಲ್ಪ ಉದಯಿಸಿದಕೂಡಲೆ ವಿದ್ವಾಂಸನು ಇಲ್ಲಿ ಸ್ನಾನಮಾಡಬೇಕು.

೨೭-೨೮. ಚಂದ್ರಸೂರ್ಯಗ್ರಹಣಗಳ ಕಾಲದಲ್ಲಿಯೂ, ಅರ್ಧೋದಯ ಮಹೋದಯಕಾಲಗಳಲ್ಲಿಯೂ ರಾಮಸೇತುವೆಯಲ್ಲಿ ಸ್ನಾನಮಾಡುವವನು ಅನೇಕದುಃಖಗಳಿಂದ ಕೂಡಿದ ಗರ್ಭವಾಸವನ್ನು ನೋಡುವುದಿಲ್ಲ. ಬ್ರಹ್ಮಹತ್ಯೆ ಮೊದಲಾದ ಅವನ ಪಾಪಗಳೂ ನಾಶವಾಗುವುವು.

೨೯. ಅವನ ಸಕಲ ನರಕಗಳೂ ಪರಿಹಾರವಾಗಿ ಅವನಿಗೆ ಸಕಲ ಸಂಪತ್ತುಗಳೂ ಉಂಟಾಗುವುವು.

೩೦-೩೪. ಅವನು ಇಂದ್ರಾದಿ ಸಮಸ್ತಲೋಕಗಳಲ್ಲಿಯೂ ವಾಸಿಸುವನು.

ಮಹೋದಯೇ ಧನುಷ್ಕೋಟೌ ಮಜ್ಜನಂ ತ್ವತಿ ನಿಶ್ಚಿತಂ ।
ರಾವಣಸ್ಯ ವಿನಾಶಾರ್ಥಂ ಪುರಾ ರಾಮೇಣ ನಿರ್ಮಿತಂ ॥ ೩೧ ॥
ಸಿದ್ಧಚಾರಣಗಂಧರ್ವಕಿನ್ನರೋರಗಸೇವಿತಂ ।
ಬ್ರಹ್ಮದೇವರ್ಷಿರಾಜರ್ಷಿಪಿತೃಸಂಘನಿಷೇವಿತಂ ॥ ೩೨ ॥
ಬ್ರಹ್ಮಾದಿ ದೇವತಾವೃಂದೈಸ್ಸೇವಿತಂ ಭಕ್ತಿಪೂರ್ವಕಂ ।
ಪುಣ್ಯಂ ಯೋ ರಾಮಸೇತುಂ ವೈ ಸಂಸ್ಮರನ್ಪುರುಷೋ ದ್ವಿಜಾಃ ॥ ೩೩ ॥
ಸ್ನಾಯಾಚ್ಚ ಯತ್ರ ಕುತ್ರಾಽಪಿ ತಟಾಕಾದೌ ಜಲಾಶಯೇ ।
ನ ತಸ್ಯ ದುಷ್ಕೃತಂ ಕಿಂಚಿದ್ಭವಿಷ್ಯತಿ ಕದಾಚನ ॥ ೩೪ ॥
ಸೇತುಮಧ್ಯಸ್ಥತೀರ್ಥೇಷು ಮುಷ್ಟಿಮಾತ್ರಪ್ರದಾನತಃ ।
ನಶ್ಯಂತಿ ಸಕಲಾ ರೋಗಾ ಭ್ರೂಣಹತ್ಯಾದಯಸ್ತಥಾ ॥ ೩೫ ॥
ರಾಮೇಣ ಧನುಷಃ ಪುಣ್ಯಾಂ ಯೋ ರೇಖಾಂ ಪಶ್ಯತೇ ಕೃತಾಂ ।
ನ ತಸ್ಯ ಪುನರಾವೃತ್ತಿರ್ವೈಕುಂಠಾತ್ಸ್ಯಾತ್ಕದಾಚನ ॥ ೩೬ ॥
ಧನುಷ್ಕೋಟಿರಿತಿ ಖ್ಯಾತಾ ಯಾ ಲೋಕೇ ಪಾಪನಾಶಿನೀ ।
ವಿಭೀಷಣಪ್ರಾರ್ಥನಯಾ ಕೃತಾ ರಾಮೇಣ ಧೀಮತಾ ॥ ೩೭ ॥
ಧನುಷ್ಕೋಟಿರ್ಮಹಾಪುಣ್ಯಾ ತಸ್ಯಾಂ ಸ್ನಾತ್ವಾ ಸಭಕ್ತಿಕಂ ।
ದದ್ಯಾದ್ದಾನಾನಿ ವಿತ್ತಾನಾಂ ಕ್ಷೇತ್ರಾಣಾಂ ಚ ಗವಾಂ ತಥಾ ॥ ೩೮ ॥

---

ಚಂದ್ರಸೂರ್ಯ ಗ್ರಹಣಕಾಲಗಳಲ್ಲಿಯೂ, ಅರ್ಧೋದಯ ಮಹೋದಯಕಾಲಗಳಲ್ಲಿಯೂ ಧನುಷ್ಕೋಟಿಯಲ್ಲಿ ನಿಶ್ಚಯವಾಗಿಯೂ ಸ್ನಾನಮಾಡಬೇಕು. ರಾವಣನ ವಧೆಗಾಗಿ ರಾಮನು ನಿರ್ಮಿಸಿದುದೂ, ಸಿದ್ಧ, ಚಾರಣ, ಗಂಧರ್ವ, ಕಿನ್ನರ, ಉರಗರಿಂದಲೂ, ಬ್ರಹ್ಮರ್ಷಿ, ದೇವರ್ಷಿ, ರಾಜರ್ಷಿ, ಪಿತೃಗಳಿಂದಲೂ, ಬ್ರಹ್ಮಾದಿದೇವತೆಗಳಿಂದಲೂ ಭಕ್ತಿಯಿಂದ ಸೇವಿಸಲ್ಪಟ್ಟುದೂ, ಪವಿತ್ರವೂ ಆದ ರಾಮಸೇತುವೆಯನ್ನು ಸ್ಮರಿಸುತ್ತ ಮಾನವನು ಯಾವುದಾದರೊಂದು ಕೆರೆಯಲ್ಲಿ ಮಿಂದರೆ ಅವನ ಪಾಪವು ನಾಶವಾಗುವುದು.

೩೫. ಸೇತುಮಧ್ಯದಲ್ಲಿರುವ ತೀರ್ಥಗಳಲ್ಲಿ ಮುಷ್ಟಿಮಾತ್ರ ಪದಾರ್ಥವನ್ನು ದಾನಮಾಡಿದವನ ಸಕಲ ರೋಗಗಳೂ, ಶಿಶುಹತ್ಯೆ ಮೊದಲಾದುವುಗಳೂ ನಾಶವಾಗುವುವು.

೩೬. ರಾಮನು ಧನುಸ್ಸಿನಿಂದ ಮಾಡಿದ ಪವಿತ್ರವಾದ ರೇಖೆಯನ್ನು ನೋಡಿದವನು ವೈಕುಂಠವನ್ನು ಸೇರಿ ಮತ್ತೆ ಈ ಲೋಕಕ್ಕೆ ಹಿಂದಿರುಗುವುದಿಲ್ಲ.

೩೭. ರಾಮನು ವಿಭೀಷಣನ ಪ್ರಾರ್ಥನೆಯಿಂದ ಪಾಪನಾಶಕವೂ ಪ್ರಸಿದ್ಧವೂ ಆದ ಈ ಧನುಷ್ಕೋಟಿಯನ್ನು ರಚಿಸಿರುವನು.

೩೮–೪೧. ಅತಿ ಪುಣ್ಯಕರವಾದ ಈ ಧನುಷ್ಕೋಟಿಯಲ್ಲಿ ಭಕ್ತಿಯಿಂದ

ತಿಲಾನಾಂ ತಂಡುಲಾನಾಂ ಚ ಧಾನ್ಯಾನಾಂ ಪಯಸಾಂ ತಥಾ ।
ವಸ್ತ್ರಾಣಾಂ ಭೂಷಣಾನಾಂ ಚ ಮಾಷಾಣಾಮೋದನಸ್ಯ ಚ ॥ ೩೯ ॥
ದಧ್ನಾಂ ಘೃತಾನಾಂ ವಾರೀಣಾಂ ಶಾಕಾನಾಮುಪ್ಯುದಶ್ವಿತಾಂ ।
ಶುದ್ಧಾನಾಂ ಶರ್ಕರಾಣಾಂ ಚ ಸಸ್ಯಾನಾಂ ಮಧುನಾಂ ತಥಾ ॥ ೪೦ ॥
ಮೋದಕಾನಾಮಪೂಪಾನಾಮನ್ಯೇಷಾಂ ದಾನಮೇವ ಚ ।
ರಾಮಸೇತೌ ದ್ವಿಜಾಃ ಪ್ರೋಕ್ತಂ ಸರ್ವಾಽಭೀಷ್ಟಪ್ರದಾಯಕಂ ॥ ೪೧ ॥
ಅತೋ ದದ್ಯಾದ್ರಾಮಸೇತೌ ವಿತ್ತಲೋಭವಿವರ್ಜಿತಃ ।
ದತ್ತಂ ಹುತಂ ಚ ತಪ್ತಂ ಚ ಜಪಶ್ಚ ನಿಯಮಾದಿಕಂ ॥ ೪೨ ॥
ಶ್ರೀರಾಮಧನುಷಃ ಕೋಟಾವನಂತಫಲದಂ ಭವೇತ್ ।
ತೇನ ವೇದಾಶ್ಚ ತುಷ್ಯಂತಿ ತುಷ್ಯಂತಿ ಪಿತರಸ್ತಥಾ ॥ ೪೩ ॥
ತುಷ್ಯಂತಿ ಮುನಯಃ ಸರ್ವೇ ಬ್ರಹ್ಮಾ ವಿಷ್ಣುಃಶಿವಸ್ತಥಾ ।
ನಾಗಾಃ ಕಿಂಪುರುಷಾ ಯಕ್ಷಾಃ ಸರ್ವೇ ತುಷ್ಯಂತಿ ನಿಶ್ಚಿತಂ ॥ ೪೪ ॥
ಸ್ವಯಂ ಚ ಪೂತೋ ಭವತಿ ಧನುಷ್ಕೋಟ್ಯವಲೋಕನಾತ್ ।
ಸ್ವವಂಶಜಾನ್ನರಾನ್ಸರ್ವಾನ್ಪಾವಯೇಚ್ಚ ಪಿತಾಮಹಾನ್ ॥ ೪೫ ॥
ತಾರಯೇಚ್ಚ ಕುಲಂ ಸರ್ವಂ ಧನುಷ್ಕೋಟ್ಯವಲೋಕನಾತ್ ।
ರಾಮಸ್ಯ ಧನುಷಃ ಕೋಟ್ಯಾ ಕೃತರೇಖಾವಗಾಹನಾತ್ ॥ ೪೬ ॥
ಪಂಚಪಾತಕಕೋಟೀನಾಂ ನಾಶಃ ಸ್ಯಾತ್ತತ್ಕ್ಷಣೇ ಧ್ರುವಂ ।
ಶ್ರೀರಾಮಧನುಷಃ ಕೋಟ್ಯಾ ರೇಖಾಂ ಯಃ ಪಶ್ಯತೇ ಕೃತಾಂ ॥ ೪೭ ॥

---

ಮಿಂದು ದ್ರವ್ಯ, ಕ್ಷೇತ್ರ, ಗೋವು, ಎಳ್ಳು, ಅಕ್ಕಿ, ಧಾನ್ಯಗಳು, ಹಾಲು, ವಸ್ತ್ರ, ಒಡವೆ, ಉದ್ದು, ಅನ್ನ, ಮೊಸರು, ತುಪ್ಪ, ನೀರು, ತರಕಾರಿ, ಮಜ್ಜಿಗೆ, ಸಕ್ಕರೆ, ಸಸ್ಯಗಳು, ಕಡುಬು, ಅಪೂಪ ಇವೇ ಮೊದಲಾದುವು ಗಳನ್ನು ದಾನಮಾಡಿದರೆ, ಸಕಲೇಷ್ಟಾರ್ಥಗಳೂ ಲಭಿಸುವುವು.

೪೨–೪೪. ಆದುದರಿಂದ ರಾಮಸೇತುವೆಯಲ್ಲಿ ವಿತ್ತಲೋಭವಿಲ್ಲದೆ ದಾನ ಮಾಡಬೇಕು. ಶ್ರೀ ರಾಮಧನುಷ್ಕೋಟಿಯಲ್ಲಿ ಮಾಡಿದ ದಾನ, ಹೋಮ, ತಪಸ್ಸು, ಜಪ, ನಿಯಮಾದಿಗಳು ಅನಂತಫಲವನ್ನೀಯುವುವು. ಆದರಿಂದ ವೇದಗಳೂ, ಪಿತೃಗಳೂ, ಮುನಿಗಳೂ, ಬ್ರಹ್ಮ, ವಿಷ್ಣು, ಮಹೇಶ್ವರರೂ, ನಾಗ, ಕಿಂಪುರುಷ, ಯಕ್ಷರೂ ನಿಶ್ಚಯವಾಗಿಯೂ ಸಂತುಷ್ಟರಾಗುತ್ತಾರೆ.

೪೫–೪೯. ಧನುಷ್ಕೋಟಿದರ್ಶನದಿಂದ ತಾನು ಪವಿತ್ರನಾಗಿ ತನ್ನ ವಂಶದ ಪಿತೃಗಳನ್ನೆಲ್ಲ ಪವಿತ್ರಗೊಳಿಸುವನು. ಸಕಲವಂಶವನ್ನೂ ಉದ್ಧಾರಮಾಡುವನು. ಇಲ್ಲಿ ಸ್ನಾನಮಾಡುವುದರಿಂದ ಕೋಟಿಪಂಚಮಹಾಪಾತಕಗಳು ಕೂಡಲೆ ನಶಿಸು ವುವು. ಈ ಧನುಷ್ಕೋಟಿರೇಖೆಯನ್ನು ನೋಡಿದವನು ಅನೇಕ ದುಃಖಗಳಿಂದ

ಅನೇಕಕ್ಲೇಶಸಂಪೂರ್ಣಂ ಗರ್ಭವಾಸಂ ನ ಪಶ್ಯತಿ ।
ಯತ್ರ ಸೀತಾಽನಲಂ ಪ್ರಾಪ್ತಾ ತಸ್ಮಿನ್ಕುಂಡೇ ನಿಮಜ್ಜನಾತ್ ॥ ೪೮ ॥
ಭ್ರೂಣಹತ್ಯಾಶತಂ ವಿಪ್ರಾ ನಶ್ಯತಿ ಕ್ಷಣಮಾತ್ರತಃ ।
ಯಥಾ ರಾಮಸ್ತಥಾ ಸೇತುರ್ಯಥಾ ಗಂಗಾ ತಥಾ ಹರಿಃ ॥ ೪೯ ॥
ಗಂಗೇ ಹರೇ ರಾಮಸೇತೋಽತ್ಯಿತಿ ಸಂಕೀರ್ತಯನ್ನರಃ ।
ಯತ್ರ ಕ್ವಾಪಿ ಬಹಿಃ ಸ್ನಾಯಾತ್ತೇನ ಯಾತಿ ಪರಾಂ ಗತಿಂ ॥ ೫೦ ॥
ಸೇತಾವರ್ಧೋದಯೇ ಸ್ನಾತ್ವಾ ಗಂಧಮಾದನಪರ್ವತೇ ।
ಪಿತ್ರೂನುದ್ದಿಶ್ಯ ಯಃ ಪಿಂಡಾನ್ದದ್ಯಾತ್ಸರ್ಷಪಮಾತ್ರಕಾನ್ ॥ ೫೧ ॥
ಪಿತರಸ್ತೃಪ್ತಿಮಾಯಾಂತಿ ಯಾವಚ್ಚಂದ್ರದಿವಾಕರೌ ।
ಶಮೀಪತ್ರಪ್ರಮಾಣಂ ತು ಪಿತ್ರೂನುದ್ದಿಶ್ಯ ಭಕ್ತಿತಃ ॥ ೫೨ ॥
ದ್ವಿಜೇನ ಪಿಂಡಂ ದತ್ತಂ ಚೇತ್ಸರ್ವಪಾಪವಿನೋಚಿತಃ ।
ಸ್ವರ್ಗಸ್ಥೋ ಮುಕ್ತಿಮಾಯಾತಿ ನರಕಸ್ಥೋ ದಿವಂ ವ್ರಜೇತ್ ॥ ೫೩ ॥
ಸೇತೌ ಚ ಪದ್ಮನಾಭೇ ಚ ಗೋಕರ್ಣೇ ಪುರುಷೋತ್ತಮೇ ।
ಉದನ್ವದಂಭಸಿ ಸ್ನಾನಂ ಸಾರ್ವಕಾಲಿಕಮಿಷ್ಯತೇ ॥ ೫೪ ॥
ಶುಕ್ರಾಂಗಾರಕ ಸೌರೀಣಾಂ ವಾರೇಷು ಲವಣಾಂಭಸಿ ।
ಸಂತಾನಕಾಮೀ ನ ಸ್ನಾಯಾತ್ಸೇತೋರನ್ಯತ್ರ ಕರ್ಹಿಚಿತ್ ॥ ೫೫ ॥

---

ತುಂಬಿದ ಗರ್ಭವಾಸವನ್ನು ನೋಡುವುದಿಲ್ಲ. ಸೀತೆಯು ಪ್ರವೇಶಿಸಿದ ಅಗ್ನಿ ಕುಂಡದಲ್ಲಿ ಸ್ನಾನಮಾಡುವುದರಿಂದ ನೂರು ಶಿಶುಹತ್ಯಾದೋಷಗಳು ಕೂಡಲೆ ನಾಶವಾಗುವುವು. ರಾಮನು ಹೇಗೊ ಸೇತುವೆಯೂ ಹಾಗೆಯೇ. ಗಂಗೆಯು ಹೇಗೋ ವಿಷ್ಣುವೂ ಹಾಗೆಯೇ.

೫೦. "ಗಂಗೇ, ವಿಷ್ಣು, ರಾಮ, ಸೇತು!" ಎಂದು ಉಚ್ಚರಿಸುತ್ತ ಮನುಷ್ಯನು ಎಲ್ಲಿಯಾದರೂ ಮಿಂದರೆ ಉತ್ತಮಗತಿಯನ್ನು ಪಡೆಯುವನು.

೫೧–೫೩. ಅರ್ಧೋದಯದಲ್ಲಿ ಸೇತುವೆಯಲ್ಲಿರುವ ಗಂಧಮಾದನ ಪರ್ವತದಲ್ಲಿ ಪಿತೃಗಳನ್ನು ಉದ್ದೇಶಿಸಿ ಸಾಸಿವೆಯಷ್ಟು ಗಾತ್ರದ ಪಿಂಡಗಳನ್ನು ಕೊಟ್ಟರೂ ಅವನ ಪಿತೃಗಳು ಸೂರ್ಯಚಂದ್ರರಿರುವವರೆಗೆ ತೃಪ್ತರಾಗುವರು. ಬ್ರಾಹ್ಮಣನು ಶಮೀಪತ್ರದಷ್ಟು ಇರುವ ಪಿಂಡವನ್ನು ಪಿತೃಗಳನ್ನು ಉದ್ದೇಶಿಸಿ ಭಕ್ತಿಯಿಂದ ಇತ್ತರೆ ಸ್ವರ್ಗವಾಸಿಯಾದ ಅವನ ಪಿತೃಗಳು ಮೋಕ್ಷವನ್ನೂ, ನರಕವಾಸಿಗಳಾದವರು ಸ್ವರ್ಗವನ್ನೂ ಹೊಂದುವರು.

೫೪. ಸೇತು, ಪದ್ಮನಾಭ, ಗೋಕರ್ಣ, ಪುರುಷೋತ್ತಮ ಕ್ಷೇತ್ರಗಳಲ್ಲಿಯೂ, ಸಮುದ್ರದ ನೀರಿನಲ್ಲಿಯೂ ಎಲ್ಲಾ ಕಾಲದಲ್ಲಿ ಸ್ನಾನಮಾಡಬಹುದು.

೫೫. ಸಂತತಿಯನ್ನು ಬಯಸುವವನು ಸೇತುವೆಯನ್ನು ಬಿಟ್ಟು ಇತರ ಕಡೆ ಸಮುದ್ರದ ನೀರಿನಲ್ಲಿ ಶುಕ್ರ, ಮಂಗಳ, ಶನಿವಾರಗಳಲ್ಲಿ ಸ್ನಾನಮಾಡಬಾರದು.

ಅಕೃತಪ್ರೇತಕಾರ್ಯೋ ವಾ ಗರ್ಭಿಣೀಪತಿರೇವ ವಾ ।
ನ ಸ್ನಾಯಾದುದಧೌ ವಿದ್ವಾನ್ಸೇತೋರನ್ಯತ್ರ ಕರ್ಹಿಚಿತ್ ॥ ೫೬ ॥
ನ ಕಾಲಾಪೇಕ್ಷಣಂ ಸೇತೋರ್ನಿತ್ಯಸ್ನಾನಂ ಪ್ರಶಸ್ಯತೇ ।
ವಾರತಿಥ್ಯೃಕ್ಷನಿಯಮಾಃ ಸೇತೋರನ್ಯತ್ರ ಹಿ ದ್ವಿಜಾಃ ॥ ೫೭ ॥
ಉದ್ದಿಶ್ಯ ಜೀವತಃ ಸ್ನಾಯಾನ್ನತು ಸ್ನಾಯಾನ್ಮೃತಾನ್ಪ್ರತಿ ।
ಕುಶೈಃ ಪ್ರತಿಕೃತಿಂ ಕೃತ್ವಾ ಸ್ನಾಪಯೇತ್ತೀರ್ಥವಾರಿಭಿಃ ॥ ೫೮ ॥
ಇಮಂ ಮಂತ್ರಂ ಸಮುಚ್ಚಾರ್ಯ ಪ್ರಸನ್ನೇಂದ್ರಿಯಮಾನಸಃ ।
ಕುಶೋಽಸಿ ತ್ವಂ ಪವಿತ್ರೋಽಸಿ ವಿಷ್ಣುನಾ ವಿಧೃತಃ ಪುರಾ ॥ ೫೯ ॥
ತ್ವಯಿ ಸ್ನಾತೇ ಸ ಚ ಸ್ನಾತೋ ಯಸ್ಯೈತದ್ಗ್ರಂಥಿಬಂಧನಂ ।
ಸರ್ವತ್ರ ಸಾಗರಃ ಪುಣ್ಯಃ ಸದಾ ಪರ್ವಣಿ ಪರ್ವಣಿ ॥ ೬೦ ॥
ಸೇತೌ ಸಿಂಧ್ವಬ್ಧಿಸಂಯೋಗೇ ಗಂಗಾಸಾಗರಸಂಗಮೇ ।
ನಿತ್ಯಸ್ನಾನಂ ಹಿ ನಿರ್ದಿಷ್ಟಂ ಗೋಕರ್ಣೇ ಪುರುಷೋತ್ತಮೇ ॥ ೬೧ ॥
ನಾಽಪರ್ವಣಿ ಸರಿನ್ನಾಥಂ ಸ್ಪೃಶೇದನ್ಯತ್ರ ಕರ್ಹಿಚಿತ್ ।
ಪಿತೄಣಾಂ ಸರ್ವದೇವಾನಾಂ ಮುನೀನಾಮಪಿ ಶೃಣ್ವತಾಂ ॥ ೬೨ ॥

---

೫೬. ಪಿತ್ರಾದಿಗಳ ಉತ್ತರಕ್ರಿಯೆಗಳನ್ನು ಮಾಡದವನಾಗಲಿ, ಗರ್ಭಿಣೀ ಪತಿಯಾಗಲಿ ಸೇತುವೆಗಿಂತ ಬೇರೆ ಕಡೆ ಸಮುದ್ರದಲ್ಲಿ ಸ್ನಾನಮಾಡಕೂಡದು.

೫೭. ಎಲೈ ಬ್ರಾಹ್ಮಣರೆ! ನಿತ್ಯವೂ ಸೇತುವೆಯಲ್ಲಿ ಸ್ನಾನಮಾಡಲು ಕಾಲವನ್ನು ನಿರೀಕ್ಷಿಸಬೇಕಾಗಿರುವುದಿಲ್ಲ. ವಾರ, ತಿಥಿ, ನಕ್ಷತ್ರನಿಯಮಗಳು ಸೇತುವೆಗಿಂತ ಬೇರೆಕಡೆಯಲ್ಲಿ ಸ್ನಾನಮಾಡುವುದಕ್ಕಾಗಿರುತ್ತವೆ.

೫೮–೬೦. ಬದುಕಿರುವವರನ್ನು ಉದ್ದೇಶಿಸಿ ಸ್ನಾನಮಾಡಬಹುದು. ಮೃತರನ್ನುದ್ದೇಶಿಸಿ ಸ್ನಾನಮಾಡಬಾರದು. ಮೃತರಾಗದವರಿಗೋಸ್ಕರ ದರ್ಭೆಯಿಂದ ಪ್ರತಿಕೃತಿಯನ್ನು ಮಾಡಿ, "ಕುಶವೇ! ನೀನು ಪವಿತ್ರನಾಗಿದ್ದೀಯೆ. ನಿನ್ನನ್ನು ಹಿಂದೆ ವಿಷ್ಣುವು ಧರಿಸಿರುವನು. ನೀನು ಮಿಂದರೆ ನೀನು ಯಾವನ ಪ್ರತಿಕೃತಿಯಾಗಿರುವೆಯೊ ಅವನೂ ಮಿಂದಂತಾಗುವುದು" ಎಂಬ ಮಂತ್ರವನ್ನು ಹೇಳಿಕೊಂಡು ಸ್ನಾನಮಾಡಬೇಕು. ಪ್ರತಿಪರ್ವಕಾಲದಲ್ಲಿ ಸಾಗರವು ಎಲ್ಲೆಡೆಯಲ್ಲಿಯೂ ಪವಿತ್ರವಾಗಿರುವುದು.

೬೧. ಸೇತು, ಸಮುದ್ರಸಂಗಮಸ್ಥಳ, ಗಂಗಾಸಮುದ್ರಸಂಗಮಸ್ಥಳ, ಗೋಕರ್ಣ ಪುರುಷೋತ್ತಮಕ್ಷೇತ್ರಗಳಲ್ಲಿ ನಿತ್ಯವೂ ಸ್ನಾನವು ವಿಹಿತವಾಗಿರುವುದು.

೬೨–೬೪. ಪರ್ವಭಿನ್ನಸಮಯದಲ್ಲಿ ಸಮುದ್ರವನ್ನು ಯಾವಕಡೆಯಲ್ಲಿಯೂ ಮುಟ್ಟಬಾರದು. ಶ್ರೀರಾಮನು ಸೀತಾಲಕ್ಷ್ಮಣರೊಡನೆ ಪಿತೃಗಳು, ಸಮಸ್ತ

ಪ್ರತಿಜ್ಞಾಮಕರೋದ್ರಾಮಃ ಸೀತಾಲಕ್ಷ್ಮಣಸಂಯುತಃ ।
ಮಯಾ ಹ್ಯತ್ರ ಕೃತೇ ಸೇತೌ ಸ್ನಾನಂ ಕುರ್ವಂತಿ ಯೇ ನರಾಃ ॥ ೩೩ ॥
ಮತ್ಪ್ರಸಾದೇನ ತೇ ಸರ್ವೇ ಯಾಸ್ಯಂತಿ ನ ಪುನರ್ಭವಂ ।
ನಶ್ಯಂತಿ ಸರ್ವಪಾಪಾನಿ ಮತ್ಸೇತೋರವಲೋಕನಾತ್ ॥ ೩೪ ॥
ರಾಮನಾಥಸ್ಯ ಮಾಹಾತ್ಮ್ಯಂ ಮತ್ಸೇತೋರಪಿ ವೈಭವಂ ।
ನಾಽಹಂ ವರ್ಣಯಿತುಂ ಶಕ್ತೋ ವರ್ಷಕೋಟಿಶತೈರಪಿ ॥ ೩೫ ॥
ಇತಿ ರಾಮಸ್ಯ ವಚನಂ ಶ್ರುತ್ವಾ ದೇವಾ ಮಹರ್ಷಯಃ ।
ಸಾಧು ಸಾಧ್ವಿತಿ ಸಂತುಷ್ಟಾಃ ಪ್ರಶಶಂಸುಶ್ಚ ತದ್ವಚಃ ॥ ೩೬ ॥
ಸೇತುಮಧ್ಯೇ ಚತುರ್ವಕ್ತ್ರಃ ಸರ್ವದೇವಸಮನ್ವಿತಃ ।
ಅಧ್ಯಾಸ್ತೇ ತಸ್ಯ ರಕ್ಷಾರ್ಥಮೀಶ್ವರಸ್ಯಾಜ್ಞಯಾ ಸದಾ ॥ ೩೭ ॥
ರಕ್ಷಾರ್ಥಂ ರಾಮಸೇತೌ ಹಿ ಸೇತುಮಾಧವಸಂಜ್ಞಯಾ ।
ಮಹಾವಿಷ್ಣುಃ ಸಮಧ್ಯಾಸ್ತೇ ನಿಬದ್ಧೋ ನಿಗಡೇನ ವೈ ॥ ೩೮ ॥
ಮಹರ್ಷಯಶ್ಚ ಪಿತರೋ ಧರ್ಮಶಾಸ್ತ್ರಪ್ರವರ್ತಕಾಃ ।
ದೇವಾಶ್ಚ ಸಹಗಂಧರ್ವಾಃ ಸಕಿನ್ನರಮಹೋರಗಾಃ ॥ ೩೯ ॥
ವಿದ್ಯಾಧರಾಶ್ಚಾರಣಾಶ್ಚ ಯಕ್ಷಾಃ ಕಿಂಪುರುಷಾಸ್ತಥಾ ।
ಅನ್ಯಾನಿ ಸರ್ವಭೂತಾನಿ ವಸಂತ್ಯಸ್ಮಿನ್ನಹರ್ನಿಶಂ ॥ ೪೦ ॥

---

ದೇವತೆಗಳು, ಮುನಿಗಳು ಇವರು ಕೇಳುತ್ತಿರುವಂತೆಯೆ ಹೀಗೆ ಪ್ರತಿಜ್ಞೆಮಾಡಿದನು. "ನಾನು ನಿರ್ಮಿಸಿದ ಸೇತುವೆಯಲ್ಲಿ ಮಿಂದ ಮಾನವರು ನನ್ನ ಅನುಗ್ರಹದಿಂದ ಮೋಕ್ಷವನ್ನು ಪಡೆಯುತ್ತಾರೆ. ಮತ್ತೆ ಈ ಭೂಲೋಕದಲ್ಲಿ ಜನಿಸುವುದಿಲ್ಲ. ನನ್ನ ಸೇತುವೆಯನ್ನು ಕಾಣುವುದರಿಂದ ಸಕಲಪಾಪಗಳೂ ನಶಿಸುವುವು.

೩೫. ರಾಮೇಶ್ವರನ ಮಾಹಾತ್ಮ್ಯವನ್ನೂ, ನನ್ನ ಸೇತುವೆಯ ವೈಭವವನ್ನೂ, ನೂರುಕೋಟಿ ವರ್ಷಗಳಾದರೂ ನಾನೇ ವರ್ಣಿಸಲು ಸಮರ್ಥನಲ್ಲ."

೩೬. ರಾಮನ ಈ ಮಾತನ್ನು ಕೇಳಿ ದೇವತೆಗಳೂ, ಋಷಿಗಳೂ ಸಂತುಷ್ಟರಾಗಿ ಒಳ್ಳೆಯದೆಂದು ಹೊಗಳಿದರು.

೩೭–೩೮. ಸೇತುವೆಯನಡುವೆ ಚತುರ್ಮುಖಬ್ರಹ್ಮನು ರಾಮೇಶ್ವರನ ಆಜ್ಞೆಯಿಂದ ಸಕಲದೇವತೆಗಳೊಡನೆಯೂ ಆ ಸೇತುವೆಯ ರಕ್ಷಣೆಗಾಗಿ ವಾಸಿಸುತ್ತಾನೆ. ರಾಮಸೇತುವೆಯಲ್ಲಿ ರಕ್ಷಣೆಗಾಗಿ ಮಹಾವಿಷ್ಣುವು ಸರಪಣಿಯಿಂದ ಕಟ್ಟಲ್ಪಟ್ಟವನಾಗಿ ಸೇತುಮಾಧವನೆಂಬ ಹೆಸರಿನಿಂದ ವಾಸಮಾಡುತ್ತಾನೆ.

೩೯–೪೦. ಇಲ್ಲಿ ಮಹರ್ಷಿಗಳು, ಪಿತೃಗಳು, ಧರ್ಮಶಾಸ್ತ್ರನಿರ್ಮಾಪಕರು, ದೇವತೆಗಳು, ಗಂಧರ್ವರು, ಕಿನ್ನರರು, ನಾಗರು, ವಿದ್ಯಾಧರರು, ಚಾರಣರು, ಯಕ್ಷರು, ಕಿಂಪುರುಷರು, ಇತರರೂ ಯಾವಾಗಲೂ ವಾಸಮಾಡುತ್ತಾರೆ.

ಸೋಽಹಂ ದೃಷ್ಟಃ ಶ್ರುತೋವಾಽಪಿ ಸ್ಮೃತಃ ಸ್ಪೃಷ್ಟೋಽವಗಾಹಿತಃ ।
ಸರ್ವಸ್ಮಾದ್ದುರಿತಾತ್ಪಾತಿ ರಾಮಸೇತುರ್ದ್ವಿಜೋತ್ತಮಾಃ ॥ ೭೧ ॥
ಸೇತಾವರ್ಧೋದಯೇ ಸ್ನಾನಮಾನಂದಪ್ರಾಪ್ತಿಕಾರಣಂ ।
ಮುಕ್ತಿಪ್ರದಂ ಮಹಾಪುಣ್ಯಂ ಮಹಾನರಕನಾಶನಂ ॥ ೭೨ ॥

ಪೌಷೇ ಮಾಸೇ ವಿಷ್ಣುಭಸ್ಥೇ ದಿನೇಶೇ
ಭಾನೋರ್ವಾರೇ ಕಿಂಚಿದುದ್ಯದ್ದಿನೇಶೇ ।
ಯುಕ್ತಾಮಾಚೇನ್ನಾಗಹೀನಾ ತು ಪಾತೇ
ವಿಷ್ಣೋರ್ಋಕ್ಷೇ ಪುಣ್ಯಮರ್ಧೋದಯಂ ಸ್ಯಾತ್ ॥ ೭೩॥

ತಸ್ಮಿನ್ನರ್ಧೋದಯೇ ಸೇತೌ ಸ್ನಾನಂ ಸಾಯುಜ್ಯಕಾರಣಂ ।
ವ್ಯತೀಪಾತಸಹಸ್ರೇಣ ದರ್ಶಮೇಕಂ ಸಮಂ ಸ್ಮೃತಂ ॥ ೭೪ ॥
ದರ್ಶಾಽಯುತಸಮಂ ಪುಣ್ಯಂ ಭಾನುವಾರೋ ಭವೇದ್ಯದಿ ।
ಶ್ರವಣರ್ಕ್ಷಂ ಯದಿ ಭವೇದ್ಭಾನುವಾರೇಣ ಸಂಯುತಂ ॥ ೭೫ ॥
ಪುಣ್ಯಮೇವ ತು ವಿಜ್ಞೇಯಮನ್ಯೋಽನ್ಯಸ್ಯೈವ ಯೋಗತಃ ।
ಏಕೈಕಮಪ್ಯಮೃತದಂ ಸ್ನಾನದಾನಜಪಾರ್ಚನಾತ್ ॥ ೭೬ ॥
ಪಂಚಸ್ವಪಿ ಚ ಯುಕ್ತೇಷು ಕಿಮು ವಕ್ತವ್ಯಮತ್ರಹಿ ।
ಶ್ರವಣಂ ಜ್ಯೋತಿಷಾಂ ಶ್ರೇಷ್ಠಮಮಾಶ್ರೇಷ್ಠಾ ತಿಥಿಷ್ವಪಿ ॥ ೭೭ ॥

---

೭೧. ಎಲೈ ಬ್ರಾಹ್ಮಣವರ್ಯರೆ! ರಾಮಸೇತುವೆಯ ದರ್ಶನ, ಶ್ರವಣ, ಸ್ಮರಣ, ಸ್ಪರ್ಶ, ಅವಗಾಹನೆಗಳಿಂದ ಸಕಲದುರಿತಗಳೂ ನೀಗುವುದು.

೭೨. ಸೇತುವೆಯಲ್ಲಿ ಅರ್ಧೋದಯಕಾಲದಲ್ಲಿ ಮಿಂದರೆ ಆನಂದವೂ, ಮುಕ್ತಿಯೂ, ಮಹಾಪುಣ್ಯವೂ ಲಭಿಸುವುದು. ನರಕವೂ ಪರಿಹಾರವಾಗುವುದು.

೭೩. ಪುಷ್ಯ ಬಹುಳ ಅಮಾವಾಸ್ಯೆಯ ದಿನದ ಶ್ರವಣ ನಕ್ಷತ್ರ, ಭಾನುವಾರ, ವ್ಯತೀಪಾತಗಳು ಸೇರಿ ಸೂರ್ಯನು ಸ್ವಲ್ಪ ಉದಯಿಸಿರುವ ವೇಳೆಗೆ ಅರ್ಧೋದಯ ಪುಣ್ಯಕಾಲವೆಂದು ಹೆಸರು.

೭೪–೭೬. ಈ ಅರ್ಧೋದಯ ಪುಣ್ಯಕಾಲದಲ್ಲಿ ಸೇತುವೆಯಲ್ಲಿ ಮಿಂದರೆ ಸಾಯುಜ್ಯಮುಕ್ತಿಯು ಲಭಿಸುವುದು. ಒಂದು ಅಮಾವಾಸ್ಯೆಯು ಸಾವಿರ ವ್ಯತೀಪಾತಕ್ಕೆ ಸಮಾನವಾದುದು. ಭಾನುವಾರವು ಹತ್ತುಸಾವಿರ ದರ್ಶಗಳಿಗೆ ಸಮಾನವು. ಈ ಭಾನುವಾರವು ಶ್ರವಣನಕ್ಷತ್ರದಿಂದ ಸೇರಿದರೆ ಪರಸ್ಪರ ಸಂಬಂಧದಿಂದ ಅತ್ಯಂತ ಪುಣ್ಯಕಾಲವಾಗುವುದು. ಇವುಗಳಲ್ಲೊಂದೊಂದೂ ಸ್ನಾನ, ದಾನ, ಜಪ, ಅರ್ಚನೆಗಳಿಂದ ಮೋಕ್ಷವನ್ನೀಯುವುವು.

೭೭–೭೮. ಈ ಐದೂ ಸೇರಿದರೆ ಇನ್ನೇನು ಹೇಳತಕ್ಕುದು. ಶ್ರವಣ

ವ್ಯತೀಪಾತಂ ತು ಯೋಗಾನಾಂ ವಾರಂ ವಾರೇಷು ವೈ ರವೇಃ ।
ಚತುರ್ಣಾಮಪಿ ಯೋ ಯೋಗೋ ಮಕರಸ್ಥೇ ರವೌ ಭವೇತ್ ॥ ೭೮ ॥
ತಸ್ಮಿನ್ಕಾಲೇ ರಾಮಸೇತೌ ಯದಿ ಸ್ನಾಯಾತ್ತು ಮಾನವಃ ।
ಗರ್ಭಂ ನ ಮಾತುರಾಪ್ನೋತಿ ಕಿಂ ತು ಸಾಯುಜ್ಯಮಾಪ್ನುಯಾತ್ ॥ ೭೯ ॥
ಅರ್ಧೋದಯಸಮಃ ಕಾಲೋ ನ ಭೂತೋ ನ ಭವಿಷ್ಯತಿ ।
ಏವಂ ಮಹೋದಯಃ ಕಾಲೋ ಧರ್ಮಕಾಲಃ ಪ್ರಕೀರ್ತಿತಃ ॥ ೮೦ ॥
ಏತೇಷು ಪುಣ್ಯಕಾಲೇಷು ಸೇತೌ ದಾನಂ ಪ್ರಕೀರ್ತಿತಂ ।
ಆಚಾರಶ್ಚ ತಪೋ ವೇದೋ ವೇದಾಂತಶ್ರವಣಂ ತಥಾ ॥ ೮೧ ॥
ಶಿವವಿಷ್ಣ್ವಾದಿ ಪೂಜಾಽಪಿ ಪುರಾಣಾರ್ಥಪ್ರವಕ್ತೃತಾ ।
ಯಸ್ಮಿನ್ವಿಪ್ರೇ ತು ವಿದ್ಯಂತೇ ದಾನಪಾತ್ರಂ ತದುಚ್ಯತೇ ॥ ೮೨ ॥
ಪಾತ್ರಾಯ ತಸ್ಮೈ ದಾನಾನಿ ಸೇತೌ ದದ್ಯಾದ್ವಿಜಾತಯೇ ।
ಯದಿ ಪಾತ್ರಂ ನ ಲಭ್ಯೇತ ಸೇತಾವಾಚಾರಸಂಯುತಂ ॥ ೮೩ ॥
ಸಂಕಲ್ಪ್ಯೋದ್ದಿಶ್ಯ ಸತ್ಪಾತ್ರಂ ಪ್ರದದ್ಯಾದ್ಗ್ರಾಮಮಾಗತಃ ।
ಅತೋ ನಾಽಧಮಪಾತ್ರಾಯ ದಾತವ್ಯಂ ಫಲಕಾಂಕ್ಷಿಭಿಃ ।
ಉತ್ತಮಂ ಸೇತುಮಾಹಾತ್ಮ್ಯಂ ವಕ್ತುರ್ದೇಯಂ ನ ಚಾಽನ್ಯತಃ ॥ ೮೪ ॥

---

ನಕ್ಷತ್ರವು ನಕ್ಷತ್ರಗಳಲ್ಲಿಯೂ, ಅಮಾವಾಸ್ಯೆಯು ತಿಥಿಗಳಲ್ಲಿಯೂ, ವ್ಯತೀಪಾತವು ಯೋಗಗಳಲ್ಲಿಯೂ, ಭಾನುವಾರವು ವಾರಗಳಲ್ಲಿಯೂ ಉತ್ತಮವಾದುದು. ಈ ನಾಲ್ಕರ ಸಂಬಂಧವು ಸೂರ್ಯನು ಮಕರರಾಶಿಯಲ್ಲಿರುವಾಗ ಸಂಭವಿಸುವುದು.

೭೯. ಆ ಸಮಯದಲ್ಲಿ ರಾಮಸೇತುವೆಯಲ್ಲಿ ಮಾನವನು ಮಿಂದರೆ ಮತ್ತೆ ತಾಯಿಯ ಗರ್ಭದಲ್ಲಿ ವಾಸಿಸದೆ ಸಾಯುಜ್ಯಮೋಕ್ಷವನ್ನೈದುವನು.

೮೦. ಅರ್ಧೋದಯಕ್ಕೆ ಸಮಾನವಾದ ಪುಣ್ಯಕಾಲವು ಹಿಂದೆ ಸಂಭವಿಸಲಿಲ್ಲ. ಮುಂದೆ ಉಂಟಾಗುವುದಿಲ್ಲ. ಹೀಗೆ ಮಹೋದಯಕಾಲವು ಪುಣ್ಯಕಾಲವೆನ್ನಿಸಿಕೊಳ್ಳುವುದು.

೮೧–೮೨. ಈ ಪುಣ್ಯಕಾಲಗಳಲ್ಲಿ ಸೇತುವೆಯಲ್ಲಿ ದಾನಮಾಡಬೇಕು. ಆಚಾರ, ತಪಸ್ಸು, ವೇದ, ವೇದಾನ್ತಶ್ರವಣ, ಶಿವವಿಷ್ಣುಪೂಜೆ, ಪುರಾಣಪ್ರವಚನ ಇವುಗಳಿರುವ ಬ್ರಾಹ್ಮಣನು ದಾನಪಾತ್ರನು.

೮೩–೮೪. ಅಂತಹ ಸತ್ಪಾತ್ರನಾದ ಬ್ರಾಹ್ಮಣನಿಗೆ ದಾನವನ್ನು ಕೊಡಬೇಕು. ಸೇತುವೆಯಲ್ಲಿ ಆಚಾರಸಂಪನ್ನನಾದ ಪಾತ್ರನು ದೊರೆಯದಿದ್ದರೆ ಸತ್ಪಾತ್ರನನ್ನುದ್ದೇಶಿಸಿ ಸಂಕಲ್ಪಮಾಡಿ ತನ್ನ ಗ್ರಾಮಕ್ಕೆ ಬಂದು ದಾನಮಾಡಬೇಕು. ಆದುದರಿಂದ ಫಲಾಪೇಕ್ಷಿಗಳು ಅಧಮಪಾತ್ರನಿಗೆ ದಾನಮಾಡ

ಅತ್ರೇತಿಹಾಸಂ ವಕ್ಷ್ಯಾಮಿ ವಸಿಷ್ಠೋಕ್ತಮನುತ್ತಮಂ ।
ದಿಲೀಪಾಯ ಮಹಾರಾಜ್ಞೇ ದಾನಪಾತ್ರವಿವಿತ್ಸವೇ ॥ ೮೫ ॥
ದಿಲೀಪ ಉವಾಚ :—
ದಾನಾನಿ ಕಸ್ಮೈ ದೇಯಾನಿ ಬ್ರಹ್ಮಪುತ್ರ ಪುರೋಹಿತ ।
ಏತನ್ಮೇ ತತ್ವತೋ ಬ್ರೂಹಿ ತ್ವಚ್ಛಿಷ್ಯಸ್ಯ ಮಹಾಮುನೇ ॥ ೮೬ ॥
ವಸಿಷ್ಠ ಉವಾಚ :—
ಪಾತ್ರಾಣಾಮುತ್ತಮಂ ಪಾತ್ರಂ ವೇದಾಚಾರಪರಾಯಣಂ ।
ತಸ್ಮಾದಪ್ಯಧಿಕಂ ಪಾತ್ರಂ ಶೂದ್ರಾನ್ನಂ ಯಸ್ಯ ನೋದರೇ ॥ ೮೭ ॥
ವೇದಾಃ ಪುರಾಣಮಂತ್ರಾಶ್ಚ ಶಿವವಿಷ್ಣ್ವಾದಿಪೂಜನಂ ।
ವರ್ಣಾಶ್ರಮಾದ್ಯನುಷ್ಠಾನಂ ವರ್ತತೇ ಯಸ್ಯ ಸಂತತಂ ॥ ೮೮ ॥
ದರಿದ್ರಶ್ಚ ಕುಟುಂಬೀ ಚ ತತ್ಪಾತ್ರಂ ಶ್ರೇಷ್ಠಮುಚ್ಯತೇ ।
ತಸ್ಮಿನ್ಪಾತ್ರೇ ಪ್ರದತ್ತಂ ವೈ ಧರ್ಮಕಾಮಾರ್ಥಮೋಕ್ಷದಂ ॥ ೮೯ ॥
ಪುಣ್ಯಸ್ಥಲೇ ವಿಶೇಷೇಣ ದಾನಂ ಸತ್ಪಾತ್ರಗರ್ಹಿತಂ ।
ಅನ್ಯಥಾ ದಶಜನ್ಮಾನಿ ಕೃಕಲಾಸೋ ಭವಿಷ್ಯತಿ ॥ ೯೦ ॥
ಜನ್ಮತ್ರಯಂ ರಾಸಭಃ ಸ್ಯಾನ್ಮಂಡೂಕಶ್ಚ ದ್ವಿಜನ್ಮನಿ ।
ಏಕ ಜನ್ಮನಿ ಚಾಂಡಾಲಸ್ತತಃ ಶೂದ್ರೋ ಭವಿಷ್ಯತಿ ॥ ೯೧ ॥

---

ಬಾರದು. ಸೇತುಮಾಹಾತ್ಮ್ಯವನ್ನು ಹೇಳುವವನಿಗೆ ದಾನಮಾಡುವುದು ಉತ್ತಮವಾದುದು.

೮೫. ಈ ವಿಷಯದಲ್ಲಿ ವಸಿಷ್ಠಮುನಿಯು ದಾನಪಾತ್ರನನ್ನು ತಿಳಿಯಲಪೇಕ್ಷಿಸುವ ದಿಲೀಪನಿಗೆ ಹೇಳಿದ ಇತಿಹಾಸವನ್ನು ನಿಮಗೆ ಹೇಳುವೆನು.

೮೬. ದಿಲೀಪನು ಹೇಳುತ್ತಾನೆ:—ಬ್ರಹ್ಮತನಯನಾದ ವಸಿಷ್ಠನೆ! ದಾನವನ್ನು ಯಾರಿಗೆ ಕೊಡಬೇಕು. ತತ್ವವಿಷಯವನ್ನು ನಿನ್ನ ಶಿಷ್ಯನಾದ ನನಗೆ ತಿಳಿಸು.

೮೭. ವಸಿಷ್ಠನು ಹೇಳುತ್ತಾನೆ:—ವೇದಾಚಾರನಿರತನು ಉತ್ತಮ ಪಾತ್ರನು. ಅವನಿಗಿಂತ ಶೂದ್ರಾನ್ನವನ್ನು ಭುಂಜಿಸದವನು ಉತ್ತಮನು.

೮೮–೮೯. ವೇದ, ಪುರಾಣಮಂತ್ರಗಳು, ಶಿವ, ವಿಷ್ಣು ಮೊದಲಾದ ದೇವತಾಪೂಜೆ, ವರ್ಣಾಶ್ರಮಧರ್ಮಾನುಷ್ಠಾನ ಇವುಗಳಲ್ಲಿ ನಿರತನಾಗಿ ಬಡವನೂ, ಕುಟುಂಬಿಯೂ ಆದ ಬ್ರಾಹ್ಮಣನು ಉತ್ತಮಪಾತ್ರನೆನ್ನಿಸಿಕೊಳ್ಳುವನು. ಅವನಲ್ಲಿ ದಾನಮಾಡಿದುದು ಧರ್ಮ, ಕಾಮ, ಅರ್ಥ, ಮೋಕ್ಷಗಳನ್ನೀಯುವುದು.

೯೦–೯೩. ಪುಣ್ಯಸ್ಥಳದಲ್ಲಿ ದಾನವು ಸತ್ಪಾತ್ರನಿಲ್ಲದೆ ನಿಂದ್ಯವಾದರೆ (ಅಸತ್ಪಾತ್ರನಿಗೆ ಕೊಟ್ಟರೆ) ದಾನಕೊಟ್ಟವನು ಹತ್ತುಜನ್ಮಗಳಲ್ಲಿ ತೊಂಡೆ

ತತಶ್ಚ ಕ್ಷತ್ರಿಯೋ ವೈಶ್ಯಃ ಕ್ರಮಾದ್ವಿಪ್ರಶ್ಚ ಜಾಯತೇ ।
ದರಿದ್ರಶ್ಚ ಭವೇತ್ತತ್ರ ಬಹುರೋಗಸಮನ್ವಿತಃ ॥ ೯೨ ॥
ಏವಂ ಬಹುವಿಧಾ ದೋಷಾ ದುಷ್ಟಪಾತ್ರಪ್ರದಾನತಃ ।
ತಸ್ಮಾತ್ಸರ್ವಪ್ರಯತ್ನೇನ ಸತ್ಪಾತ್ರೇಷು ಪ್ರದಾಪಯೇತ್ ॥ ೯೩ ॥
ನ ಲಭ್ಯತೇ ಚೇತ್ತತ್ಪಾತ್ರಂ ತದಾ ಸಂಕಲ್ಪಪೂರ್ವಕಂ ।
ಏಕಂ ಸತ್ಪಾತ್ರಮುದ್ದಿಶ್ಯ ಪ್ರಕ್ಷಿಪೇದುದಕಂ ಭುವಿ ॥ ೯೪ ॥
ಉದ್ದಿಷ್ಟಪಾತ್ರಸ್ಯ ಮೃತೌ ತತ್ಪುತ್ರಾಯ ಸಮರ್ಪಯೇತ್ ।
ತಸ್ಯಾಽಪಿ ಮರಣೇ ಪ್ರಾಪ್ತೇ ಮಹಾದೇವೇ ಸಮರ್ಪಯೇತ್ ।
ಅತೋ ನಾಽಧಮಪಾತ್ರಾಯ ದದ್ಯಾತ್ತೀರ್ಥೇ ವಿಶೇಷತಃ ॥ ೯೫ ॥

ಶ್ರೀ ಸೂತ ಉವಾಚ:—

ಏವಮುಕ್ತೋ ವಸಿಷ್ಠೇನ ದಿಲೀಪಃ ಸ ದ್ವಿಜೋತ್ತಮಾಃ ॥ ೯೬ ॥
ತದಾ ಪ್ರಭೃತಿ ಸತ್ಪಾತ್ರೇ ಪ್ರಾಯಚ್ಛದ್ದಾನಮುತ್ತಮಂ ।
ಅತಃ ಪುಣ್ಯಸ್ಥಲೇ ಸೇತಾವತ್ರಾಽಪಿ ಮುನಿಪುಂಗವಾಃ ॥ ೯೭ ॥
ಯದಿ ಲಭ್ಯೇತ ಸತ್ಪಾತ್ರಂ ತದಾ ದದ್ಯಾದ್ಧನಾದಿಕಂ ।
ನೋಚೇತ್ಸಂಕಲ್ಪಪೂರ್ವಂ ತು ವಿಶಿಷ್ಟಂ ಪಾತ್ರಮುತ್ತಮಂ ॥ ೯೮ ॥
ಸಮುದ್ದಿಶ್ಯ ಜಲಂ ಭೂಮೌ ಪ್ರಕ್ಷಿಪೇದ್ಭಕ್ತಿಸಂಯುತಃ ।
ಸ್ವಗ್ರಾಮಮಾಗತಃ ಪಶ್ಚಾತ್ತಸ್ಮಿನ್ಪಾತ್ರೇ ಸಮರ್ಪಯೇತ್ ॥ ೯೯ ॥

---

ಕೇತನೂ, ಮೂರುಜನ್ಮಗಳಲ್ಲಿ ಕತ್ತೆಯೂ, ಎರಡುಜನ್ಮಗಳಲ್ಲಿ ಕಪ್ಪೆಯೂ, ಒಂದು ಜನ್ಮದಲ್ಲಿ ಚಂಡಾಲನೂ, ಬಳಿಕ ಕ್ರಮವಾಗಿ ಶೂದ್ರ, ಕ್ಷತ್ರಿಯ, ವೈಶ್ಯ, ಬ್ರಾಹ್ಮಣನೂ ಆಗಿ ಬಡತನದಿಂದ ಬಹುರೋಗಿಯಾಗುವನು.

೯೩. ದುಷ್ಟಪಾತ್ರನಲ್ಲಿ ದಾನಮಾಡುವುದರಿಂದ ಬಹಳ ದೋಷಗಳು ಸಂಭವಿಸುವುವು. ಆದ್ದರಿಂದ ಸರ್ವಪ್ರಯತ್ನದಿಂದಲೂ ಸತ್ಪಾತ್ರನಲ್ಲಿ ದಾನ ಮಾಡಬೇಕು.

೯೪. ಸತ್ಪಾತ್ರನು ಲಭಿಸದಿದ್ದರೆ ಒಬ್ಬ ಸತ್ಪಾತ್ರನನ್ನು ಉದ್ದೇಶಿಸಿ ಸಂಕಲ್ಪಮಾಡಿ ನೆಲದಲ್ಲಿ ನೀರನ್ನು ಬಿಡಬೇಕು.

೯೫. ಆ ಉದ್ದಿಷ್ಟಪಾತ್ರನು ಮೃತನಾದರೆ ಆ ದಾನವನ್ನು ಅವನ ಮಗನಿಗೂ, ಅವನೂ ಮಡಿದರೆ ಮಹಾದೇವನಿಗೂ ಸಮರ್ಪಿಸಬೇಕು. ಅಧಮ ಪಾತ್ರನಿಗೆ ಮಾತ್ರ ತೀರ್ಥದಲ್ಲಿ ದಾನವೀಯಬಾರದು.

೯೬–೧೦೦. ಶ್ರೀಸೂತನು ಹೇಳುತ್ತಾನೆ:—ವಸಿಷ್ಠನು ಹೀಗೆ ಹೇಳಲು ಆ ದಿಲೀಪನು ಅದು ಮೊದಲ್ಗೊಂಡು ಸತ್ಪಾತ್ರದಲ್ಲಿ ದಾನಕೊಟ್ಟನು. ಆದ್ದರಿಂದ ಎಲೈ ಮುನಿವರ್ಯರೆ! ಪುಣ್ಯಕರವಾದ ಈ ಸೇತುವೆಯಲ್ಲಿ ಸತ್ಪಾತ್ರನು

ಪೂರ್ವಂ ಸಂಕಲ್ಪಿತಂ ವಿತ್ತಂ ಧರ್ಮಲೋಪೋಽನ್ಯಥಾ ಭವೇತ್ ।
ನ ದುಃಖಂ ಪುನರಾಪ್ನೋತಿ ಕಿಂತು ಸಾಯುಜ್ಯಮಾಪ್ನುಯಾತ್ ॥೧೦೦॥
ಅರ್ಧೋದಯಸಮಃ ಕಾಲೋ ನ ಭೂತೋ ನ ಭವಿಷ್ಯತಿ ।
ಕುಂಭಕೋಣಂ ಸೇತುಮೂಲಂ ಗೋಕರ್ಣಂ ನೈಮಿಷಂ ತಥಾ ॥ ೧೦೧ ॥
ಅಯೋಧ್ಯಾ ದಂಡಕಾರಣ್ಯಂ ವಿರೂಪಾಕ್ಷಂ ಚ ವೇಂಕಟಂ ।
ಶಾಲಿಗ್ರಾಮಂ ಪ್ರಯಾಗಂ ಚ ಕಾಂಚೀ ದ್ವಾರಾವತೀ ತಥಾ ॥ ೧೦೨ ॥
ಮಥುರಾ ಪದ್ಮನಾಭಂ ಚ ಕಾಶೀ ವಿಶ್ವೇಶ್ವರಾಲಯಾ ।
ನದ್ಯಃ ಸರ್ವಾಃ ಸಮುದ್ರಾಶ್ಚ ಪರ್ವತಂ ಭಾಸ್ಕರಂ ಸ್ಮೃತಂ ॥ ೧೦೩ ॥
ಮುಂಡನಂ ಚೋಪವಾಸಶ್ಚ ಕ್ಷೇತ್ರೇಷ್ವೇಷು ಪ್ರಕೀರ್ತಿತಂ ।
ಲೋಭಾನ್ಮೋಹಾದಕೃತ್ವಾ ಯಃ ಸ್ವಗೃಹಂ ಯಾತಿ ಮಾನವಃ ॥ ೧೦೪ ॥
ಸಹೈವ ಯಾಂತಿ ತದ್ಗೇಹೇ ಪಾತಕಾನಿ ಚ ತೇನ ವೈ ।
ಚತುರ್ವಿಂಶತಿ ತೀರ್ಥಾನಿ ಪರ್ವತೇ ಗಂಧಮಾದನೇ ॥ ೧೦೫ ॥
ತತ್ರ ಲಕ್ಷ್ಮಣತೀರ್ಥೇತು ವಪನಂ ಮುನಿಭಿಃ ಸ್ಮೃತಂ ।
ತೀರೇ ಲಕ್ಷ್ಮಣತೀರ್ಥಸ್ಯ ಲೋಮವರ್ಜ್ಯಂ ಶಿವಾಜ್ಞಯಾ ॥ ೧೦೬ ॥

---

ಸಿಕ್ಕಿದರೆ ಅವನಿಗೆ ಧನಾದಿಗಳನ್ನು ಕೊಡಬೇಕು. ಇಲ್ಲದಿದ್ದರೆ ಉತ್ತಮ ಪಾತ್ರನನ್ನು ಉದ್ದೇಶಿಸಿ ಸಂಕಲ್ಪಿಸಿ ಭಕ್ತಿಯಿಂದ ಭೂಮಿಯಲ್ಲಿ ನೀರನ್ನು ಹಾಕಬೇಕು. ತನ್ನ ಗ್ರಾಮಕ್ಕೆ ಬಂದು ಆ ಉದ್ದಿಷ್ಟಪಾತ್ರನಿಗೆ ಸಂಕಲ್ಪಿಸಿದ ಆ ದಾನವನ್ನು ಕೊಡಬೇಕು. ಇದರಿಂದ ಮರಳಿ ದುಃಖವನ್ನು ಹೊಂದದೆ ಸಾಯುಜ್ಯಮೋಕ್ಷವನ್ನು ಪಡೆಯುವನು. ಇಲ್ಲದಿದ್ದರೆ ಧರ್ಮವು ಕೆಡುವುದು.

೧೦೧–೧೦೫. ಅರ್ಧೋದಯಕ್ಕೆ ಸಮವಾದ ಕಾಲವು ಹಿಂದೆ ಇರಲಿಲ್ಲ. ಮುಂದೆ ಬರುವುದಿಲ್ಲ. ಈ ಕಾಲದಲ್ಲಿ ಕುಂಭಕೋಣ, ಸೇತು, ಗೋಕರ್ಣ, ನೈಮಿಷಾರಣ್ಯ, ಅಯೋಧ್ಯಾ, ದಂಡಕಾರಣ್ಯ, ವಿರೂಪಾಕ್ಷ, ವೆಂಕಟಾಚಲ, ಶಾಲಿಗ್ರಾಮ, ಪ್ರಯಾಗ, ಕಾಂಚೀ, ದ್ವಾರಾವತೀ, ಮಥುರೆ, ಪದ್ಮನಾಭ, ವಿಶ್ವೇಶ್ವರನಿರುವ ಕಾಶಿ, ಸಕಲನದಿಗಳು, ಸಮುದ್ರಗಳು, ಪರ್ವತಗಳು, ಭಾಸ್ಕರ ಕ್ಷೇತ್ರ ಇವುಗಳಲ್ಲಿ ವಪನ, ಉಪವಾಸಗಳನ್ನು ಆಚರಿಸಬೇಕು. ಅತ್ಯಾಶೆಯಿಂದಲೂ, ಅಜ್ಞಾನದಿಂದಲೂ ಇವುಗಳನ್ನು ಮಾಡದೆ ತನ್ನ ಮನೆಗೆ ತೆರಳಿದರೆ ಅವನೊಡನೆ ಪಾತಕಗಳು ಹಿಂಬಾಲಿಸಿ ಹೋಗುವುವು. ಗಂಧಮಾದನಪರ್ವತದಲ್ಲಿ ಇಪ್ಪತ್ತನಾಲ್ಕು ತೀರ್ಥಗಳಿರುವುವು.

೧೦೬–೧೦೮. ಅವುಗಳಲ್ಲಿ ಲಕ್ಷ್ಮಣತೀರ್ಥದಲ್ಲಿ ವಪನಮಾಡಿಸಿಕೊಳ್ಳಬೇಕೆಂದು ಮುನಿಗಳು ಹೇಳಿರುತ್ತಾರೆ. ಲಕ್ಷ್ಮಣತೀರ್ಥದ ತೀರದಲ್ಲಿ ಶಿವನ ಅಪ್ಪಣೆಯಿಂದ ಮೈಗೂದಲುಗಳನ್ನು ಬಿಟ್ಟು ತಲೆ ಮಾತ್ರ ಕ್ಷೌರಮಾಡಿಸಿಕೊಂಡು

ಶಿರೋಮಾತ್ರಸ್ಯ ವಪನಂ ಕೃತ್ವಾ ದತ್ವಾ ಚ ದಕ್ಷಿಣಾಂ ।
ಸ್ನಾತ್ವಾ ಲಕ್ಷ್ಮಣತೀರ್ಥೇ ಚ ದೃಷ್ಟ್ವಾ ಲಕ್ಷ್ಮಣಶಂಕರಂ ॥ ೧೦೭ ॥
ಸರ್ವಪಾಪವಿನಿರ್ಮುಕ್ತಃ ಶಂಕರಂ ಯಾತಿ ಮಾನವಃ ।
ಅರ್ಧೋದಯೇ ಸದಾ ಸ್ನಾನಂ ಸೇತಾವೇವಂ ಸಮಾಚರೇತ್ ॥ ೧೦೮ ॥
ನಾಽಸ್ತಿ ಸೇತುಸಮಂ ತೀರ್ಥಂ ನಾಽಸ್ತಿ ಸೇತುಸಮಂ ತಪಃ ।
ನಾಽಸ್ತಿ ಸೇತುಸಮಂ ಪುಣ್ಯಂ ನಾಽಸ್ತಿ ಸೇತುಸಮಾ ಗತಿಃ ॥ ೧೦೯ ॥
ಉಪರಾಗಸಹಸ್ರೇಣ ಸಮಮರ್ಧೋದಯಂ ಸ್ಮೃತಂ ।
ಅರ್ಧೋದಯ ಸಮಃ ಕಾಲೋ ನಾಽಸ್ತಿ ಸಂಸಾರಮೋಚಕಃ ॥ ೧೧೦ ॥
ತಸ್ಮಿನ್ನರ್ಧೋದಯೇ ರಾಮಸೇತೌ ಸ್ನಾನಂ ತು ಯದ್ಭವೇತ್ ।
ನ ತತ್ತುಲ್ಯಂ ಭವೇತ್ಪುಣ್ಯಂ ಸರ್ವಶಾಸ್ತ್ರೇಷು ಸರ್ವದಾ ॥ ೧೧೧ ॥
ಷಷ್ಟಿವರ್ಷಸಹಸ್ರಾಣಿ ಭಾಗೀರಥ್ಯವಗಾಹನಾತ್ ।
ಯತ್ಪುಣ್ಯಮೃಷಿನಿರ್ದಿಷ್ಟಂ ತತ್ಪುಣ್ಯಂ ಮುನಿಪುಂಗವಾಃ ॥ ೧೧೨ ॥
ಏಕವಾರಂ ರಾಮಸೇತೌ ಸ್ನಾನಾತ್ಸಿಧ್ಯತಿ ನಿಶ್ಚಿತಂ ।
ಅರ್ಧೋದಯೇ ವಿಶೇಷೇಣ ತಥೈವ ಚ ಮಹೋದಯೇ ॥ ೧೧೩ ॥
ಮಕರಸ್ಥೇ ರವೌ ಮಾಘೇ ಪ್ರಯಾಗೇ ಪಾಪಮೋಚನೇ ।
ಮಾಘಸ್ನಾನಸಹಸ್ರೇಣ ಯತ್ಪುಣ್ಯಂ ಲಭತೇ ನರಃ ॥ ೧೧೪ ॥
ತಸ್ಮಿನ್ನರ್ಧೋದಯೇ ವಿಪ್ರಾ ರಾಮಸೇತೌ ನಿಮಜ್ಜನಾತ್ ।
ಏಕವಾರೇಣ ತತ್ಪುಣ್ಯಂ ಲಭತೇ ನಾಽತ್ರ ಸಂಶಯಃ ॥ ೧೧೫ ॥

---

ದಕ್ಷಿಣೆಯನ್ನಿತ್ತು ಆ ತೀರ್ಥದಲ್ಲಿ ಮಿಂದು ಲಕ್ಷ್ಮಣೇಶ್ವರನ ದರ್ಶನಗೈದರೆ ಮಾನವನು ಸಕಲಪಾಪಮುಕ್ತನಾಗಿ ಶಿವನನ್ನು ಸೇರುವನು. ಅರ್ಧೋದಯ ಕಾಲದಲ್ಲಿ ಯಾವಾಗಲೂ ಸೇತುವೆಯಲ್ಲಿ ಹೀಗೆ ಸ್ನಾನಮಾಡಬೇಕು.

೧೦೯. ಸೇತುವೆಗೆ ಸಮಾನವಾದ ತೀರ್ಥವೂ, ತಪಸ್ಸೂ, ಪುಣ್ಯವೂ, ಸದ್ಗತಿಯೂ ಇರುವುದಿಲ್ಲ.

೧೧೦–೧೧೧. ಸಾವಿರ ಗ್ರಹಣಗಳಿಗೆ ಅರ್ಧೋದಯವು ಸಮಾನವಾದುದು. ಸಂಸಾರವನ್ನು ಬಿಡಿಸುವ ಅರ್ಧೋದಯದಂತಿರುವ ಕಾಲವು ಮತ್ತೊಂದಿಲ್ಲ. ಈ ಅರ್ಧೋದಯದಲ್ಲಿ ರಾಮಸೇತುವೆಯಲ್ಲಿ ಸ್ನಾನಮಾಡುವುದರಿಂದ ಉಂಟಾದ ಪುಣ್ಯಕ್ಕೆ ಸಮಾನವಾದ ಪುಣ್ಯವು ಸಕಲ ಶಾಸ್ತ್ರಗಳಲ್ಲಿಯೂ ಸಿದ್ಧಿಸಲಾರದು.

೧೧೨–೧೧೫. ಭಾಗೀರಥಿಯಲ್ಲಿ ಅರುವತ್ತುಸಾವಿರ ವರ್ಷಗಳಕಾಲ ಸ್ನಾನ ಮಾಡಿದುದರಿಂದುಂಟಾದ ಪುಣ್ಯವು, ಒಂದುಸಲ ರಾಮಸೇತುವೆಯಲ್ಲಿ ಸ್ನಾನ ಮಾಡಿದ್ದರಿಂದ ಸಿದ್ಧಿಸುವುದು. ವಿಶೇಷವಾಗಿ ಅರ್ಧೋದಯದಲ್ಲಿಯೂ, ಮಹೋದಯದಲ್ಲಿಯೂ, ಮಾಘಮಾಸದಲ್ಲಿ ರವಿಯು ಮಕರರಾಶಿಯಲ್ಲಿರು

ತ್ರೈಲೋಕ್ಯಸ್ಥೇಷು ತೀರ್ಥೇಷು ಸ್ನಾತಾನಾಂ ಯತ್ಫಲಂ ಭವೇತ್ ।
ಸಕೃದರ್ಧೋದಯೇ ಸೇತೌ ಸ್ನಾತ್ವಾ ತತ್ಪುಣ್ಯಭಾಗ್ಭವೇತ್ ॥ ೧೧೬ ॥
ಬ್ರಹ್ಮಜ್ಞಾನವಿಹೀನಾನಾಂ ಕೃತಘ್ನಾನಾಂ ದುರಾತ್ಮನಾಂ ।
ಪಾಪಿನಾಮಿತರೇಷಾಂ ಚ ಮಹಾಪಾತಕಿನಾಂ ತಥಾ ॥ ೧೧೭ ॥
ಸೇತಾವರ್ಧೋದಯೇ ಸ್ನಾನಾದ್ವಿಶುದ್ಧಿರಿತಿ ನಿಶ್ಚಿತಾ ।
ಸ್ಥಲಾಂತರೇ ಕೃತಘ್ನಾನಾಂ ನಿಷ್ಕೃತಿರ್ನಾಸ್ತಿ ಕರ್ಹಿಚಿತ್ ॥ ೧೧೮ ॥
ಸೇತಾವರ್ಧೋದಯೇ ಸ್ನಾನಾತ್ತೇಷಾಮಪಿ ಹಿ ನಿಷ್ಕೃತಿಃ ।
ಸೇತಾವರ್ಧೋದಯೇ ಸ್ನಾನಂ ಯೇ ನ ಕುರ್ವಂತಿ ಮೋಹಿತಾಃ ॥ ೧೧೯ ॥
ಸಂಸಾರೇಷು ನಿಮಜ್ಜಂತಿ ತೇ ಯಥಾಂಧಾಃ ಪತಂತ್ಯಧಃ ।
ಸೇತಾವರ್ಧೋದಯೇ ಸ್ನಾತ್ವಾ ಭಿತ್ವಾ ಭಾಸ್ಕರಮಂಡಲಂ ॥ ೧೨೦ ॥
ಬ್ರಹ್ಮಲೋಕಂ ಪ್ರಯಾಸ್ಯಂತಿ ನಾಽತ್ರ ಕಾರ್ಯಾ ವಿಚಾರಣಾ ।
ಅರ್ಧೋದಯೇತು ಸಂಪ್ರಾಪ್ತೇ ಸ್ನಾತ್ವಾ ಸೇತೌ ವಿಮುಕ್ತಿದೇ ॥ ೧೨೧ ॥
ಸ್ನಾತ್ವಾ ಸಮ್ಯಗ್ಜಗನ್ನಾಥಂ ರಾಘವಂ ಸೀತಯಾ ಸಹ ।
ರಾಮೇಶ್ವರಂ ಮಹಾದೇವಂ ಸುಗ್ರೀವಾದಿಮುಖಾನ್ಕಪೀನ್ ॥ ೧೨೨ ॥
ಧ್ಯಾತ್ವಾ ದೇವಾನೃಷೀಂಶ್ಚಾಽಪಿ ತಥಾ ಪಿತೃಗಣಾನಪಿ ।
ತರ್ಪಯೇದಪಿ ತಾನ್ಸರ್ವಾನ್ಸ್ವದಾರಿದ್ರ್ಯವಿಮುಕ್ತಯೇ ॥ ೧೨೩ ॥

---

ವಾಗ ಪಾಪನಾಶಕವಾದ ಪ್ರಯಾಗದಲ್ಲಿ ಸಾವಿರಮಾಘಸ್ನಾನಗಳಿಂದುಂಟಾದ ಪುಣ್ಯವು ಅದೇ ಅರ್ಧೋದಯಕಾಲದಲ್ಲಿ ರಾಮಸೇತುವೆಯಲ್ಲಿ ಒಂದುಸಾರಿ ಸ್ನಾನಮಾಡುವುದರಿಂದುಂಟಾಗುವುದು.

೧೧೬–೧೧೮. ಮೂರು ಲೋಕಗಳ ಸಕಲ ತೀರ್ಥಗಳಲ್ಲಿಯೂ ಮಿಂದವರಿಗೆ ಲಭಿಸುವ ಪುಣ್ಯವು ಸೇತುವೆಯಲ್ಲಿ ಒಂದು ಸಾರಿ ಅರ್ಧೋದಯಕಾಲದಲ್ಲಿ ಮಿಂದರೆ ಉಂಟಾಗುವುದು. ಬ್ರಹ್ಮಜ್ಞಾನವಿಲ್ಲದವರು, ಕೃತಘ್ನರು, ದುಷ್ಟರು, ಪಾಪಿಗಳು, ಮಹಾಪಾತಕಿಗಳು, ಇತರರು ಇವರು ಸೇತುವಿನಲ್ಲಿ ಅರ್ಧೋದಯಕಾಲದಲ್ಲಿ ಮಿಂದರೆ ಶುದ್ಧರಾಗುವರು. ಬೇರೆಸ್ಥಳದಲ್ಲಿ ಕೃತಘ್ನರಿಗೆ ಪ್ರಾಯಶ್ಚಿತ್ತವಿಲ್ಲ.

೧೧೯–೧೨೩. ಸೇತುವೆಯಲ್ಲಿ ಅರ್ಧೋದಯಕಾಲದಲ್ಲಿ ಸ್ನಾನಮಾಡುವುದರಿಂದ ಕೃತಘ್ನರು ಪರಿಶುದ್ಧರಾಗುವರು. ಸ್ನಾನಮಾಡದವರು ಸಂಸಾರಮಗ್ನರಾಗಿ ಕುರುಡರಂತೆ ನರಕವನ್ನೈದುವರು. ಸ್ನಾನಮಾಡಿದವನು ಸೂರ್ಯಮಂಡಲವನ್ನು ಭೇದಿಸಿಕೊಂಡು ಬ್ರಹ್ಮಲೋಕಕ್ಕೆ ತೆರಳುವನು. ಈ ಅರ್ಧೋದಯದಲ್ಲಿ ಮೋಕ್ಷದಾಯಕವಾದ ಸೇತುವೆಯಲ್ಲಿ ಮಿಂದು ಜಗನ್ನಾಥ, ಸೀತಾರಾಮ, ರಾಮೇಶ್ವರ, ಸುಗ್ರೀವಾದಿ ಕಪಿಗಳು ಇವರನ್ನು ಧ್ಯಾನಿಸಿ ತನ್ನ ಬಡತನವು ನೀಗುವುದಕ್ಕಾಗಿ ದೇವರ್ಷಿಪಿತೃಗಳಿಗೆ ತರ್ಪಣಮಾಡಬೇಕು.

ಅರ್ಘೋದಯಾಖ್ಯಮಮಲಂ ಜಗನ್ನಾಥಂ ಸಮರ್ಚಯೇತ್ ।
ಸೇತಾವರ್ಘೋದಯೇ ಕಾಲೇ ತೇನ ಪ್ರೀಣಾತಿ ಕೇಶವಃ ॥ ೧೨೪ ॥
ದಿವಾಕರ ನಮಸ್ತೇಽಸ್ತು ತೇಜೋರಾಶೇ ಜಗತ್ಪತೇ ।
ಅತ್ರಿಗೋತ್ರಸಮುತ್ಪನ್ನ ಲಕ್ಷ್ಮೀದೇವ್ಯಾಃ ಸಹೋದರ ॥ ೧೨೫ ॥
ಅರ್ಘ್ಯಂ ಗೃಹಾಣ ಭಗವನ್ಸುಧಾಕುಂಭ ನಮೋಽಸ್ತು ತೇ ।
ವ್ಯತೀಪಾತ ಮಹಾಯೋಗಿನ್ಮಹಾಪಾತಕನಾಶನ ॥ ೧೨೬ ॥
ಸಹಸ್ರಬಾಹೋ ಸರ್ವಾತ್ಮನ್ಗೃಹಾಣಾರ್ಘ್ಯಂ ನಮೋಽಸ್ತುತೇ ।
ತಿಥಿನಕ್ಷತ್ರವಾರಾಣಾಮಧೀಶ ಪರಮೇಶ್ವರ ॥ ೧೨೭ ॥
ಮಾಸರೂಪ ಗೃಹಾಣಾಽರ್ಘ್ಯಂ ಕಾಲರೂಪ ನಮೋಽಸ್ತು ತೇ ।
ಇತಿ ದತ್ವಾ ಪೃಥಙ್ಮಂತ್ರೈರರ್ಘ್ಯಮರ್ಘೋದಯೇ ನರಃ ॥ ೧೨೮ ॥
ಉಪಾಯನಾನಿ ವಿಪ್ರೇಭ್ಯೋ ದದ್ಯಾದ್ವಿತ್ತಾನುಸಾರತಃ ।
ಚತುರ್ದಶ ದ್ವಾದಶಾಽಷ್ಟೌ ಸಪ್ತ ಷಟ್ ಪಂಚ ವಾ ದ್ವಿಜಾನ್ ॥ ೧೨೯ ॥
ಯಥಾಶಕ್ತ್ಯನ್ನಪಾನಾದ್ಯೈಃ ಪೃಥಙ್ಮಂತ್ರೈಃ ಸಮರ್ಚಯೇತ್ ।
ಕಾಂಸ್ಯಪಾತ್ರಂ ಸಮಾದಾಯ ನೂತನಂ ದಾರವಂ ತು ವಾ ॥ ೧೩೦ ॥
ವಿಪ್ರಾಣಾಂ ಪುರತಃ ಸ್ಥಾಪ್ಯ ಪಯಸಾ ಪರಿಪೂರಿತಂ ।
ಸಫಲಂ ಸಗುಡಂ ಸಾಜ್ಯಂ ಸತಾಂಬೂಲಂ ಸ ದಕ್ಷಿಣಂ ॥ ೧೩೧ ॥
ದದ್ಯಾದ್ಯಜ್ಞೋಪವೀತಂ ಚ ಗಾಂ ಸವತ್ಸಾಂ ಪಯಸ್ವಿನೀಂ ।
ಅಲಂಕೃತೇಭ್ಯೋ ವಿಪ್ರೇಭ್ಯೋ ಯಥಾಶಕ್ತಿ ವದೇದಿದಂ ॥ ೧೩೨ ॥

---

೧೨೪. ಈ ಅರ್ಘೋದಯದಲ್ಲಿ ಅರ್ಘೋದಯನೆಂಬ ಜಗನ್ನಾಥನನ್ನು ಪೂಜಿಸಬೇಕು. ಅದರಿಂದ ವಿಷ್ಣುವು ಸಂತುಷ್ಟನಾಗುತ್ತಾನೆ.

೧೨೫–೧೨೭. "ತೇಜಸ್ಸಿನರಾಶಿಯೂ, ಜಗದೊಡೆಯನೂ ಆದ ಓ ಸೂರ್ಯ ದೇವ! ನಿನಗೆ ನಮಸ್ಕಾರವು. ಅತ್ರಿಗೋತ್ರದಲ್ಲಿ ಜನಿಸಿದವನೂ, ಲಕ್ಷ್ಮೀ ದೇವಿಯ ಸಹೋದರನೂ, ಅಮೃತಕುಂಭರೂಪನೂ ಆದ ಚಂದ್ರದೇವ! ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರವು. ಮಹಾಯೋಗಿಯೂ, ಮಹಾಪಾತಕನಾಶಕನೂ, ಸಾವಿರ ತೋಳುಗಳುಳ್ಳವನೂ, ಸರ್ವಸ್ವರೂಪನೂ ಆದ ಎಲೈ ವ್ಯತೀಪಾತನೆ! ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರವು. ತಿಥಿ, ನಕ್ಷತ್ರ ವಾರಗಳಿಗೆ ಒಡೆಯನೂ, ಮಾಸ ಕಾಲಗಳ ಸ್ವರೂಪನೂ ಆದ ಎಲೈ ಪರಮೇಶ್ವರನೆ! ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರವು." ಅರ್ಘೋದಯಕಾಲದಲ್ಲಿ ಮಾನವನು ಹೀಗೆ ಬೇರೆ ಬೇರೆ ಮಂತ್ರಗಳಿಂದ ಅರ್ಘ್ಯ ವನ್ನಿತ್ತು, ಬ್ರಾಹ್ಮಣರಿಗೆ ತನ್ನಲ್ಲಿರುವ ದ್ರವ್ಯವನ್ನನುಸರಿಸಿ ಉಪಾಯನಗಳನ್ನು ಕೊಟ್ಟು ಹದಿನಾಲ್ಕು, ಹನ್ನೆರಡು, ಎಂಟು, ಏಳು, ಆರು, ಅಥವಾ ಐದು

ಶ್ರವಣರ್ಕ್ಷೇ ಜಗನ್ನಾಥ ಜನ್ಮರ್ಕ್ಷೇ ತವ ಕೇಶವ ।
ಯನ್ಮಯಾ ದತ್ತಮರ್ಥಿಭ್ಯಸ್ತದಕ್ಷಯಮಿಹಾಸ್ತು ಮೇ ॥ ೧೩೩ ॥
ನಕ್ಷತ್ರಾಣಾಮಧಿಪತೇ ದೇವಾನಾಮಮೃತಪ್ರದ ।
ತ್ರಾಹಿ ಮಾಂ ರೋಹಿಣೀಕಾಂತ ಕಲಾಶೇಷ ನಮೋಽಸ್ತು ತೇ ॥ ೧೩೪ ॥
ದೀನನಾಥ ಜಗನ್ನಾಥ ಕಲಾನಾಥ ಕೃಪಾಕರ ।
ತ್ವತ್ಪಾದಪದ್ಮಯುಗಲೇ ಭಕ್ತಿರಸ್ತ್ವಚಲಾ ಮಮ ॥ ೧೩೫ ॥
ವ್ಯತೀಪಾತ ನಮಸ್ತೇಽಸ್ತು ಸೋಮ ಸೂರ್ಯಾಗ್ನಿಸನ್ನಿಭ ।
ಯದ್ದಾನಾನಿ ಕೃತಂ ಕಿಂಚಿತ್ತದಕ್ಷಯಮಿಹಾಽಸ್ತು ಮೇ ॥ ೧೩೬ ॥
ಅರ್ಥಿನಾಂ ಕಲ್ಪವೃಕ್ಷೋಽಸಿ ವಾಸುದೇವ ಜನಾರ್ದನ ।
ಮಾಸರ್ತ್ವಯನಕಾಲೇಶ ಪಾಪಂ ಶಮಯ ಮೇ ಹರೇ ॥ ೧೩೭ ॥
ಇತ್ಯರ್ಚಯಿತ್ವಾ ವಿಪ್ರೇಂದ್ರಾಸ್ತತಃ ಶ್ರಾದ್ಧಂ ಸಮಾಚರೇತ್ ।
ಹಿರಣ್ಯಶ್ರಾದ್ಧಮಾಮಂ ವಾ ಪಾಕಶ್ರಾದ್ಧಮಥಾಽಪಿ ವಾ ॥ ೧೩೮ ॥

---

ಮಂದಿ ಬ್ರಾಹ್ಮಣರನ್ನು ಶಕ್ತ್ಯನುಸಾರ ಅನ್ನಪಾನ ಮೊದಲಾದವುಗಳಿಂದಲೂ ಬೇರೆ ಬೇರೆ ಮಂತ್ರಗಳಿಂದಲೂ ಪೂಜಿಸಬೇಕು. ಹೊಸ ಕಂಚಿನ ಪಾತ್ರೆಯನ್ನಾಗಲಿ, ಮರದಪಾತ್ರೆಯನ್ನಾಗಲಿ ಹಾಲನ್ನು ತುಂಬಿ ಬ್ರಾಹ್ಮಣರ ಮುಂದಿರಿಸಿ ಅಲಂಕಾರಮಾಡಲ್ಪಟ್ಟ ಅವರಿಗೆ ಹಣ್ಣು, ಬೆಲ್ಲ, ತುಪ್ಪ, ತಾಂಬೂಲ, ದಕ್ಷಿಣೆಗಳಿಂದ ಸಹಿತವಾಗಿ ಯಜ್ಞೋಪವೀತವನ್ನೂ, ಹಾಲುಕರೆಯುತ್ತಿರುವ ಸವತ್ಸವಾದ ಗೋವನ್ನೂ ದಾನಮಾಡಿ ಹೀಗೆ ಹೇಳಬೇಕು.

೧೩೩. "ಜಗನ್ನಾಥ! ನಿನ್ನ ಜನ್ಮನಕ್ಷತ್ರವಾದ ಶ್ರವಣನಕ್ಷತ್ರದಲ್ಲಿ ಅರ್ಥಿಗಳಿಗೆ ನಾನು ಕೊಟ್ಟುದು ಅಕ್ಷಯವಾಗಲಿ.

೧೩೪–೧೩೫. ನಕ್ಷತ್ರಗಳಿಗೆ ಒಡೆಯನೂ, ದೇವತೆಗಳಿಗೆ ಅಮೃತವನ್ನಿತ್ತವನೂ, ಕಲೆಮಾತ್ರ ಉಳಿದವನೂ, ರೋಹಿಣೀಕಾಂತನೂ ಆದ ಎಲೈ ಚಂದ್ರನೆ! ನಿನಗೆ ನಮಸ್ಕಾರವು. ದೀನರೊಡೆಯನೂ, ಜಗನ್ನಾಯಕನೂ, ಕಲಾಧಿಪತಿಯೂ, ದಯಾಳುವೂ ಆದ ಓ ಚಂದ್ರ! ನಿನ್ನ ಪಾದಯುಗ್ಮದಲ್ಲಿ ನನಗೆ ದೃಢಭಕ್ತಿಯುಂಟಾಗಲಿ.

೧೩೬. ಚಂದ್ರ, ಸೂರ್ಯ, ಅಗ್ನಿಗಳಿಗೆ ಸಮಾನನಾದ ಎಲೈ ವ್ಯತೀಪಾತನೆ! ನಾನು ಇಲ್ಲಿ ಮಾಡಿದ ಅಲ್ಪದಾನವೂ ಅಕ್ಷಯವಾಗಲಿ.

೧೩೭. ಮಾಸ, ಋತು, ಅಯನ, ಕಾಲಗಳಿಗೆ ಒಡೆಯನಾದ ಓ ಜನಾರ್ದನ! ಅರ್ಥಿಗಳಿಗೆ ನೀನು ಕಲ್ಪವೃಕ್ಷವಾಗಿರುವೆ. ನನ್ನ ಪಾಪವನ್ನು ಶಾಂತಿಗೊಳಿಸು."

೧೩೮–೧೪೦. ಎಲೈ ಬ್ರಾಹ್ಮಣೋತ್ತಮರೆ! ಹೀಗೆ ಪೂಜಿಸಿ ಹಿರಣ್ಯಶ್ರಾದ್ಧ,

ಪಾರ್ವಣಂ ಚ ತತಃ ಕುರ್ಯಾದ್ವಿತ್ತಶಾಠ್ಯಂ ನ ಕಾರಯೇತ್ ।
ಆಚಾರ್ಯಂ ಪೂಜಯೇತ್ಪಶ್ಚಾದ್ವಸ್ತ್ರಭೂಷಣಕುಂಡಲೈಃ ॥ ೧೪೯ ॥
ಪ್ರತಿಮಾಮರ್ಪಯೇತ್ತಸ್ಮೈ ಗಾಂಚ ಛತ್ರಮುಪಾನಹಂ ।
ಏವಮರ್ಧೋದಯೇ ಸೇತೌ ವ್ರತಂ ಕುರ್ಯಾದ್ದ್ವಿಜೋತ್ತಮಾಃ ॥೧೫೦॥
ತೇನೈವ ಕೃತಕೃತ್ಯಃ ಸ್ಯಾತ್ಕರ್ತವ್ಯಂ ನಾಽಸ್ತಿ ಕಿಂಚನ ।
ಸ್ಥಲಾಂತರೇಽಪ್ಯೇವಮೇತದ್ವ್ರತಮರ್ಧೋದಯೇ ಚರೇತ್ ॥ ೧೫೧ ॥
ಸೇತುಃ ಸಮುದ್ರೇ ರಾಮೇಣ ನಿರ್ಮಿತೋ ಗಂಧಮಾದನೇ ।
ಸೇತುಃ ಸೇತುರಿತಿ ಪ್ರಾಜ್ಞಾಸ್ತಸ್ಯ ನಾಮ್ನಃ ಪ್ರಕೀರ್ತನಾತ್ ॥ ೧೫೨ ॥
ಸ್ನಾನಕಾಲೇ ಮನುಷ್ಯಾಣಾಂ ಪಾತಕಾನಾಂ ತು ಕೋಟಯಃ ।
ತತ್ಕ್ಷಣಾದೇವ ನಶ್ಯಂತಿ ಯಾಸ್ಯಂತ್ಯಪ್ಯಚ್ಯುತಂ ಪದಂ ॥ ೧೫೩ ॥
ನಿಮಿಷಂ ನಿಮಿಷಾರ್ಧಂ ವಾ ಸೇತೌ ತಿಷ್ಠತಿ ಯೋ ನರಃ ।
ತದ್ದೃಷ್ಟಿಗೋಚರಂ ಗಂತುಂ ನ ಶಕ್ತಾ ಯಮಕಿಂಕರಾಃ ॥ ೧೫೪ ॥
ರಾಮಸೇತುಂ ಧನುಷ್ಕೋಟಿಂ ರಾಮಂ ಸೀತಾಂ ಚ ಲಕ್ಷ್ಮಣಂ ।
ರಾಮನಾಥಂ ಹನೂಮಂತಂ ಸುಗ್ರೀವಾದಿ ಮುಖಾನ್ಕಪೀನ್ ॥ ೧೫೫ ॥
ವಿಭೀಷಣಂ ನಾರದಂ ಚ ವಿಶ್ವಾಮಿತ್ರಂ ಘಟೋದ್ಭವಂ ।
ವಸಿಷ್ಠಂ ವಾಮದೇವಂ ಚ ಜಾಬಾಲಿಮಥ ಕಾಶ್ಯಪಂ ॥ ೧೫೬ ॥

---

ಆಮಶ್ರಾದ್ಧ, ಅಥವಾ ಪಾರ್ವಣಶ್ರಾದ್ಧವನ್ನೂ ದ್ರವ್ಯದಲ್ಲಿ ಆಶೆಯಿಲ್ಲದೆ ಮಾಡಬೇಕು. ಬಳಿಕ ವಸ್ತ್ರ, ಒಡವೆಗಳಿಂದ ಆಚಾರ್ಯನನ್ನು ಪೂಜಿಸಿ ಅವನಿಗೆ ಪ್ರತಿಮೆ, ಛತ್ರ, ಪಾದರಕ್ಷೆಗಳನ್ನು ಸಮರ್ಪಿಸಬೇಕು. ಹೀಗೆ ಅರ್ಧೋದಯ ಕಾಲದಲ್ಲಿ ಸೇತುವೆಯಲ್ಲಿ ವ್ರತವನ್ನಾಚರಿಸಬೇಕು.

೧೫೧. ಅದರಿಂದಲೇ ಮಾನವನು ಧನ್ಯನಾಗುವನು. ಬೇರೆ ಏನೂ ಮಾಡಬೇಕಾಗಿರುವುದಿಲ್ಲ. ಅರ್ಧೋದಯಪುಣ್ಯಕಾಲದಲ್ಲಿ ಇತರ ಸ್ಥಳದಲ್ಲಿಯೂ ಹೀಗೆಯೆ ವ್ರತವನ್ನಾಚರಿಸಬೇಕು.

೧೫೨–೧೫೩. ರಾಮನು ಸಮುದ್ರದಲ್ಲಿ ನಿರ್ಮಿಸಿರುವ ಸೇತುವೆಯನ್ನು ಮನುಷ್ಯರು ಬೇರೆ ಸ್ಥಳದಲ್ಲಿ ಸ್ನಾನಮಾಡುವಾಗ 'ಸೇತು ಸೇತು' ಎಂದು ಸ್ಮರಿಸಿದರೆ ಅವರ ಕೋಟಿಪಾಪಗಳು ನಾಶವಾಗುವುವು. ಅವರು ಶಾಶ್ವತ ಸ್ಥಾನಕ್ಕೆ ತೆರಳುವರು.

೧೫೪. ಒಂದುನಿಮಿಷ ಅಥವಾ ಅರ್ಧನಿಮಿಷಕಾಲ ನರನು ಸೇತುವೆಯಲ್ಲಿ ನಿಂತರೆ ಅವನಿಗೆ ಯಮಕಿಂಕರರು ಗೋಚರರಾಗುವುದಿಲ್ಲ.

೧೫೫–೧೫೬. ರಾಮಸೇತು, ಧನುಷ್ಕೋಟಿ, ರಾಮ, ಸೀತೆ, ಲಕ್ಷ್ಮಣ, ರಾಮನಾಥ, ಹನುಮಂತ, ಸುಗ್ರೀವ ಮೊದಲಾದ ಕಪಿಗಳು, ವಿಭೀಷಣ,

ರಾಮಭಕ್ತಾಂಸ್ತಥಾ ಚಾಽನ್ಯಾಂಶ್ಚಿಂತಯನ್ಮನಸಾ ತದಾ ।
ಸರ್ವದುಃಖಾದ್ವಿಮುಚ್ಯೇತ ಪ್ರಯಾತಿ ಪರಮಂ ಪದಂ ॥ ೧೪೭ ॥
ಸತ್ಯಕ್ಷೇತ್ರೇ ಹರಿಕ್ಷೇತ್ರೇ ಕೃಷ್ಣಕ್ಷೇತ್ರೇ ಚ ನೈಮಿಷೇ ।
ಶಾಲಗ್ರಾಮೇ ಬದರ್ಯಾಂ ಚ ಹಸ್ತಿಶೈಲೇ ವೃಷಾಚಲೇ ॥ ೧೪೮ ॥
ಶೇಷಾದ್ರೌ ಚಿತ್ರಕೂಟೇ ಚ ಲಕ್ಷ್ಮೀಕ್ಷೇತ್ರೇ ಕುರಂಗಕೇ ।
ಕಾಂಚಿಕೇ ಕುಂಭಕೋಣೇ ಚ ಮೋಹಿನೀಪುರ ಏವ ಚ ॥ ೧೪೯ ॥
ಐಂದ್ರೇ ಶ್ವೇತಾಚಲೇ ಪುಣ್ಯೇ ಪದ್ಮನಾಭೇ ಮಹಾಸ್ಥಲೇ ।
ಫುಲ್ಲಾಖ್ಯೇ ಘಟಿಕಾದ್ರೌ ಚ ಸಾರಕ್ಷೇತ್ರೇ ಹರಿಸ್ಥಲೇ ॥ ೧೫೦ ॥
ಶ್ರೀನಿವಾಸೇ ಮಹಾಕ್ಷೇತ್ರೇ ಭಕ್ತನಾಥಮಹಾಸ್ಥಲೇ ।
ಅಲಿಂದಾಖ್ಯೇ ಮಹಾಕ್ಷೇತ್ರೇ ಶುಕಕ್ಷೇತ್ರೇ ಚ ವಾರುಣೇ ॥ ೧೫೧ ॥
ಮಧುರಾಯಾಂ ಹರಿಕ್ಷೇತ್ರೇ ಶ್ರೀಗೋಷ್ಠ್ಯಾಂ ಪುರುಷೋತ್ತಮೇ ।
ಶ್ರೀರಂಗೇ ಪುಂಡರೀಕಾಕ್ಷೇ ತಥಾಽನ್ಯತ್ರ ಹರಿಸ್ಥಲೇ ॥ ೧೫೨ ॥
ಸ್ನಾನೇನ ಯಾನಿ ಪಾಪಾನಿ ವಿನಶ್ಯಂತಿ ದ್ವಿಜೋತ್ತಮಾಃ ।
ತಾನಿ ಸರ್ವಾಣಿ ನಶ್ಯಂತಿ ಸೇತುಸ್ನಾನೇನ ನಿಶ್ಚಿತಂ ॥ ೧೫೩ ॥
ರಘುನಾಥಕೃತೇ ಸೇತೌ ಮಹಾಮುನಿನಿಷೇವಿತೇ ।
ನ ಸ್ನಾಂತಿ ಯೇ ನರಾಸ್ತೇಷಾಂ ನ ಸಂಸಾರನಿವರ್ತನಂ ॥ ೧೫೪ ॥

---

ನಾರದ, ವಿಶ್ವಾಮಿತ್ರ, ಅಗಸ್ತ್ಯ, ವಸಿಷ್ಠ, ವಾಮದೇವ, ಜಾಬಾಲಿ, ಕಾಶ್ಯಪ, ಇತರ ರಾಮಭಕ್ತರು ಇವರನ್ನು ಧ್ಯಾನಿಸುತ್ತಿರುವ ಮಾನವನು ಸಕಲದುಃಖ ಮುಕ್ತನಾಗಿ ಉತ್ತಮಸ್ಥಾನವನ್ನು ಪಡೆಯುವನು.

೧೪೮-೧೫೩. ಸತ್ಯಕ್ಷೇತ್ರ, ಹರಿಕ್ಷೇತ್ರ, ಕೃಷ್ಣಕ್ಷೇತ್ರ, ನೈಮಿಷಾರಣ್ಯ, ಶಾಲಗ್ರಾಮ, ಬದರೀ, ಹಸ್ತಿಶೈಲ, ವೃಷಭಾಚಲ, ಶೇಷಾಚಲ, ಚಿತ್ರಕೂಟ, ಲಕ್ಷ್ಮೀಕ್ಷೇತ್ರ, ಕುರಂಗಕ, ಕಾಂಚಿ, ಕಂಭಕೋಣ, ಮೋಹಿನೀಪುರ, ಐಂದ್ರ, ಶ್ವೇತಾಚಲ, ಪದ್ಮನಾಭ, ಫುಲ್ಲ, ಘಟಕಾಚಲ, ಸಾರಕ್ಷೇತ್ರ, ಹರಿಸ್ಥಲ, ವೇಂಕಟಾಚಲ, ಭಕ್ತನಾಥ, ಅಲಿಂದ, ಶುಕಕ್ಷೇತ್ರ, ವರುಣಕ್ಷೇತ್ರ, ಮಧುರೆ, ಶ್ರೀಗೋಷ್ಠೀ, ಪುರುಷೋತ್ತಮ, ಶ್ರೀರಂಗ, ಪುಂಡರೀಕಾಕ್ಷ ಇವುಗಳಲ್ಲಿಯೂ, ಹಾಗೆಯೇ ಇತರ ವಿಷ್ಣುಕ್ಷೇತ್ರಗಳಲ್ಲಿಯೂ, ಸ್ನಾನಮಾಡುವುದರಿಂದ ನಾಶವಾಗುವ ಪಾಪವು ಈ ಸೇತುವೊಂದರಲ್ಲಿ ಸ್ನಾನಮಾಡುವುದರಿಂದ ನಿಶ್ಚಯವಾಗಿಯೂ ಪರಿಹಾರವಾಗುವುದು.

೧೫೪. ಉತ್ತಮಮುನಿಗಳು ಸೇವಿಸಿದ ಈ ರಾಮಸೇತುವೆಯಲ್ಲಿ ಸ್ನಾನ ಮಾಡದ ನರರು ಸಂಸಾರಬಂಧಮುಕ್ತರಾಗುವುದಿಲ್ಲ.

ಯೋ ವಾ ನಮಃ ಶಿವಾಯೇತಿ ಮಂತ್ರಂ ಪಂಚಾಕ್ಷರಂ ಶುಭಂ ।
ನ ವದಂತಿ ನ ಶೃಣ್ವಂತಿ ನ ಸ್ಮರಂತಿ ಮುನೀಶ್ವರಾಃ ॥ ೧೫೫ ॥
ನಮೋ ನಾರಾಯಣಾಯೇತಿ ಪ್ರಣವೇನ ಸಮನ್ವಿತಂ ।
ಮಂತ್ರಮಷ್ಟಾಕ್ಷರಂ ವಾಽಪಿ ನ ಜಪಂತಿ ಸ್ಮರಂತಿ ವಾ ॥ ೧೫೬ ॥
ಏವಂ ಶ್ರೀರಾಮಚಂದ್ರಸ್ಯ ಷಡಕ್ಷರಮನುಂ ತಥಾ ।
ನ ಜಪಂತಿ ನ ಶೃಣ್ವಂತಿ ನ ಸ್ಮರಂತಿ ಚ ಸತ್ತಮಾಃ ॥ ೧೫೭ ॥
ತೇಷಾಂ ಪಾಪಾನಿ ನಶ್ಯಂತಿ ರಾಮಸೇತೌ ನಿಮಜ್ಜನಾತ್ ।
ಉಪೋಷಣಂ ನ ಕುರ್ವಂತಿ ಯೇ ವಾ ಹರಿದಿನೇ ಶುಭೇ ॥ ೧೫೮ ॥
ನ ಧಾರಯಂತಿ ಯೇ ಭಸ್ಮ ತ್ರಿಪುಂಡ್ರೋದ್ಧೂಲನಾದಿನಾ ।
ಜಾಬಾಲೋಪನಿಷನ್ಮಂತ್ರೈಸ್ಸಪ್ತಭಿರ್ಮಸ್ತಕಾದಿಕೇ ॥ ೧೫೯ ॥
ಶಿವಂ ವಾ ಕೇಶವಂ ವಾಽಪಿ ತಥಾಽನ್ಯಾನಪಿ ವೈ ಸುರಾನ್ ।
ನ ಪೂಜಯಂತಿ ವೇದೋಕ್ತಮಾರ್ಗೇಣ ದ್ವಿಜಪುಂಗವಾಃ ॥ ೧೬೦ ॥
ತೇಷಾಂ ಪಾಪಾನಿ ನಶ್ಯಂತಿ ರಾಮಸೇತೌ ನಿಮಜ್ಜನಾತ್ ।
ಶಿವವಿಷ್ಣ್ವಾದಿ ದೇವೇಭ್ಯೋ ಧೂಪಂ ದೀಪಂ ಚ ಚಂದನಂ ॥ ೧೬೧ ॥
ಪುಷ್ಪಾಣಿ ನ ಪ್ರಯಚ್ಛಂತಿ ಭಕ್ತಿಪೂರ್ವಂ ದ್ವಿಜೋತ್ತಮಾಃ ।
ಶಿವವಿಷ್ಣ್ವಾದಿ ದೇವಾನಾಂ ಶ್ರೀರುದ್ರೈಶ್ಚಮಕೈಸ್ತಥಾ ॥ ೧೬೨ ॥
ಶ್ರೀಮತ್ಪುರುಷಸೂಕ್ತೇನ ಪಾವಮಾನ್ಯಾದಿ ಸೂಕ್ತಕೈಃ ।
ತ್ರಿಮಧು ತ್ರಿಸುಪರ್ಣೈಶ್ಚ ಪಂಚಶಾಂತ್ಯಾದಿನಾ ತಥಾ ॥ ೧೬೩ ॥
ನಾಽಭಿಷೇಕಂ ಪ್ರಕುರ್ವಂತಿ ಯೇ ನರಾಃ ಪಾಪಚೇತಸಃ ।
ತೇಷಾಂ ಪಾಪಾನಿ ನಶ್ಯಂತಿ ಧನುಷ್ಕೋಟೌ ನಿಮಜ್ಜನಾತ್ ॥ ೧೬೪ ॥

---

೧೫೫–೧೬೪. ಯಾರು ಶಿವಪಂಚಾಕ್ಷರಿಯ ಜಪ, ಶ್ರವಣ, ಸ್ಮರಣೆಗಳನ್ನು ಮಾಡುವುದಿಲ್ಲವೊ; ಅಥವಾ ನಾರಾಯಣ ಅಷ್ಟಾಕ್ಷರಮಂತ್ರವನ್ನು ಪ್ರಣವ ಸಹಿತವಾಗಿ ಜಪಿಸುವುದು ಅಥವಾ ಸ್ಮರಿಸುವುದೂ ಇಲ್ಲವೊ, ಹೀಗೆಯೇ ಶ್ರೀರಾಮಷಡಕ್ಷರಿಯ ಜಪ, ಶ್ರವಣ, ಸ್ಮರಣೆಗಳನ್ನು ಮಾಡುವುದಿಲ್ಲವೊ; ಅವರ ಪಾಪಗಳು ರಾಮಸೇತುವೆಯಲ್ಲಿ ಸ್ನಾನಮಾಡುವುದರಿಂದ ನಾಶವಾಗುವುವು. ಯಾರು ಏಕಾದಶೀದಿನ ಉಪವಾಸಮಾಡುವುದಿಲ್ಲವೊ; ಜಾಬಾಲೋಪನಿಷತ್ತಿನ ಏಳು ಮಂತ್ರಗಳಿಂದ ತಲೆ ಮೊದಲಾದವುಗಳಲ್ಲಿ ಭಸ್ಮದ ತ್ರಿಪುಂಡ್ರವನ್ನು ಧರಿಸುವುದಿಲ್ಲವೊ; ವೇದೋಕ್ತಮಾರ್ಗದಿಂದ ಶಿವ, ವಿಷ್ಣು, ಅಥವಾ ಇತರ ದೇವತೆಗಳನ್ನು ಪೂಜಿಸುವುದಿಲ್ಲವೊ; ಅವರ ಪಾಪಗಳು ರಾಮಸೇತುವೆಯಲ್ಲಿ ಸ್ನಾನಮಾಡುವುದರಿಂದ ನಶಿಸುವುವು. ಎಲೈ ಬ್ರಾಹ್ಮಣರೆ! ಯಾರು ಶಿವ, ವಿಷ್ಣು ಮೊದಲಾದ ದೇವತೆಗಳಿಗೆ ಧೂಪ, ದೀಪ, ಚಂದನ, ಹೂವುಗಳನ್ನು

ಶಿವವಿಷ್ಣ್ವಾದಿದೇವಾನಾಂ ನಮಸ್ಕಾರಪ್ರದಕ್ಷಿಣೇ ।
ನ ಪ್ರಕುರ್ವಂತಿ ಭಕ್ತ್ಯಾ ಯೇ ಪಾಪೋಪಹತಬುದ್ಧಯಃ ॥ ೧೬೫ ॥
ಧನುರ್ಮಾಸೇಽಪ್ಯುಷಃಕಾಲೇ ನ ಪೂಜಾಂ ಚ ಪ್ರಕುರ್ವತೇ ।
ಶಿವವಿಷ್ಣ್ವಾದಿ ದೇವಾನಾಂ ಮಹಾನ್ನೈವೇದ್ಯಪೂರ್ವಕಂ ॥ ೧೬೬ ॥
ತೇಷಾಂ ಪಾಪಾನಿ ನಶ್ಯಂತಿ ರಾಮಸೇತೌ ನಿಮಜ್ಜನಾತ್ ।
ಕೀರ್ತಯಂತಿ ನ ಯೇ ವಿಷ್ಣೋರ್ನಾಮಾನಿತು ಹರಸ್ಯವಾ ॥ ೧೬೭ ॥
ಶಾಲಿಗ್ರಾಮಶಿಲಾಚಕ್ರಂ ಶಿವನಾಭಂ ಚ ಯೇ ನರಾಃ ।
ನ ಪೂಜಯಂತಿ ಮೋಹೇನ ದ್ವಾರಕಾಚಕ್ರಮೇವ ವಾ ॥ ೧೬೮ ॥
ಗಂಗಾಮೃದಂ ಚ ತುಲಸೀಮೃತ್ತಿಕಾಂ ಗೋಪಿಚಂದನಂ ।
ನ ಧಾರಯಂತಿ ಯೇ ಮೂಢಾ ಲಲಾಟೇ ಚೋರಸಿ ದ್ವಿಜಾಃ ॥ ೧೬೯ ॥
ದೋರ್ದ್ವಂದ್ವೇ ಚ ಗಲೇ ಸಮ್ಯಕ್ಸರ್ವಪಾಪೌಘಶಾಂತಯೇ ।
ರುದ್ರಾಕ್ಷಂ ತುಲಸೀಕಾಷ್ಠಂ ಯೋ ನ ಧಾರಯತೇ ನರಃ ॥ ೧೭೦ ॥
ತಸ್ಯ ಪಾಪಾನಿ ನಶ್ಯಂತಿ ಧನುಷ್ಕೋಟೌ ನಿಮಜ್ಜನಾತ್ ।
ಬ್ರಾಹ್ಮೇ ಮುಹೂರ್ತೇ ಸಂಪ್ರಾಪ್ತೇ ನಿದ್ರಾಂ ತ್ಯಕ್ತ್ವಾ ಪ್ರಸನ್ನಧೀಃ ॥ ೧೭೧ ॥
ಹರಿಶಂಕರನಾಮಾನಿ ತತ್ಸ್ತೋತ್ರಾಣ್ಯಥವಾ ದ್ವಿಜಾಃ ।
ಯೋ ಹಿ ಚಿಂತಯತೇ ನಿತ್ಯಂ ವಿಶಿಷ್ಟಂ ಮಂತ್ರಮೇವ ವಾ ॥ ೧೭೨ ॥
ತಸ್ಯ ಪಾಪಾನಿ ನಶ್ಯಂತಿ ಧನುಷ್ಕೋಟೌ ನಿಮಜ್ಜನಾತ್ ।
ಪ್ರಾತರ್ಜಲಾಶಯಂ ಗತ್ವಾ ಸ್ನಾತ್ವಾಚಮ್ಯ ವಿಶುದ್ಧಧೀಃ ॥ ೧೭೩ ॥

---

ಭಕ್ತಿಯಿಂದ ಸಮರ್ಪಿಸುವುದಿಲ್ಲವೊ; ಶಿವ, ವಿಷ್ಣು ಮೊದಲಾದ ದೇವತೆಗಳಿಗೆ ಶ್ರೀರುದ್ರ, ಚಮಕಗಳಿಂದಲೂ, ಶ್ರೀಮತ್ಪುರುಷಸೂಕ್ತ, ಪವಮಾನಸೂಕ್ತ, ತ್ರಿಮಧು ತ್ರಿಸುಪರ್ಣ, ಪಂಚಶಾಂತ್ಯಾದಿ ಮಂತ್ರಗಳಿಂದಲೂ ಯಾವ ಪಾಪಿಗಳು ಅಭಿಷೇಕಮಾಡುವುದಿಲ್ಲವೊ; ಅವರ ಪಾಪಗಳು ಧನುಷ್ಕೋಟಿಸ್ನಾನದಿಂದ ಪರಿಹಾರವಾಗುವುವು.

೧೬೫–೧೭೩. ಶಿವ, ವಿಷ್ಣ್ವಾದಿ ದೇವತೆಗಳಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಯಾವ ಪಾಪಿಗಳು ಮಾಡುವುದಿಲ್ಲವೊ, ಧನುರ್ಮಾಸದಲ್ಲಿ ಬೆಳಗ್ಗೆ ಶಿವ ವಿಷ್ಣು ಮೊದಲಾದ ದೇವತೆಗಳಿಗೆ ಮಹಾನ್ನೈವೇದ್ಯವನ್ನು ಸಮರ್ಪಿಸಿ ಪೂಜೆ ಮಾಡುವುದಿಲ್ಲವೊ ಅವರ ಪಾಪಗಳು ರಾಮಸೇತುಸ್ನಾನದಿಂದ ನಾಶವಾಗುವುವು. ಯಾರು ಹರಿಹರರ ನಾಮವನ್ನು ಸಂಕೀರ್ತನೆಮಾಡುವುದಿಲ್ಲವೊ; ಶಾಲಿಗ್ರಾಮಶಿಲೆ, ಶಿವನಾಭ, ದ್ವಾರಕಾಚಕ್ರ ಇವುಗಳನ್ನು ಅಜ್ಞಾನದಿಂದ ಪೂಜಿಸುವುದಿಲ್ಲವೊ; ಗಂಗಾಮೃತ್ತಿಕೆ, ತುಲಸೀಮೃತ್ತಿಕೆ, ಗೋಪೀಚಂದನ ಇವುಗಳನ್ನು ಹಣೆ, ಎದೆಗಳಲ್ಲಿ ಧರಿಸುವುದಿಲ್ಲವೊ, ತೋಳು, ಕಂಠಗಳಲ್ಲಿ ಸಕಲ

ಪ್ರಸನ್ನಾತ್ಮಾ ಮುನಿಶ್ರೇಷ್ಠಾಃ ಸಂಧ್ಯೋಪಾಸನಪೂರ್ವಕಂ ।
ನೋಪಾಸ್ತೇ ಚ ನರೋ ಯಸ್ತು ಗಾಯತ್ರೀಂ ವೇದಮಾತರಂ ॥ ೧೭೪ ॥
ನೋಪಾಸನಂ ವಾ ಕುರ್ವಂತಿ ಸಾಯಂಪ್ರಾತರತಂದ್ರಿತಾಃ ।
ಮಾಧ್ಯಾಹ್ನಿಕಂ ನ ಕುರ್ವಂತಿ ಯೇ ವಾ ಪಾಪಹತಾಶಯಾಃ ॥ ೧೭೫ ॥
ಬ್ರಹ್ಮಯಜ್ಞಂ ವೈಶ್ವದೇವಂ ಮಧ್ಯಾಹ್ನೇಽತಿಥಿಪೂಜನಂ ।
ನಾಚರಂತಿ ಚ ಸಾಯಂ ಯೇ ಪೂಜಾಮತಿಥಿಸಮ್ಮತಾಂ ॥ ೧೭೬ ॥
ತೇಷಾಂ ಪಾಪಾನಿ ನಶ್ಯಂತಿ ಧನುಷ್ಕೋಟೌ ನಿಮಜ್ಜನಾತ್ ।
ಭಿಕ್ಷಾಂ ಯತೀನಾಂ ಮಧ್ಯಾಹ್ನೇ ನ ಪ್ರಯಚ್ಛಂತಿ ಯೇ ನರಾಃ ॥ ೧೭೭ ॥
ಯೇಽಪ್ಯಧೀತಾಂ ತ್ರಯೀಂ ವಿಪ್ರಾ ವಿಸ್ಮರಂತಿ ಕುಬುದ್ಧಯಃ ।
ನಾಽಧೀಯತೇ ತ್ರಯೀಂ ವಾಽಪಿ ವೇದಾಂಗಾನಿ ತಥಾ ಪುನಃ ॥ ೧೭೮ ॥
ಪ್ರತ್ಯಾಬ್ದಿಕಂ ಮಾತೃಪಿತ್ರೋಃ ಶ್ರಾದ್ಧಂ ಯೇ ನಾಚರಂತಿ ವೈ ।
ಶ್ರಾದ್ಧಂ ಮಹಾಲಯಂ ನಿತ್ಯಮಷ್ಟಕಾಶ್ರಾದ್ಧಮೇವ ವಾ ॥ ೧೭೯ ॥
ಅನ್ಯಂ ನೈಮಿತ್ತಿಕಂ ಶ್ರಾದ್ಧಂ ಯೇ ನ ಕುರ್ವಂತಿ ಲೋಭತಃ ।
ಯೇ ಚೈತ್ರೇ ಪೌರ್ಣಮಾಸ್ಯಾಂ ತು ಚಿತ್ರಗುಪ್ತಸ್ಯ ತುಷ್ಟಯೇ ॥ ೧೮೦ ॥
ಪಾನಕಂ ಕದಲೀಪಕ್ವಂ ಪಾಯಸಾನ್ನಂ ಸಶರ್ಕರಂ ।
ಸಗುಡಂ ಸಾಽಮ್ರಫಲಕಂ ಪನಸಾದಿಫಲೈರ್ಯುತಂ ॥ ೧೮೧ ॥
ತಾಂಬೂಲಂ ಪಾದುಕೇ ಛತ್ರಂ ವಸ್ತ್ರಪುಷ್ಪಾಣಿ ಚಂದನಂ ।
ವಿಪ್ರೇಭ್ಯೋ ನ ಪ್ರಯಚ್ಛಂತಿ ಲೋಭೋಪಹತಬುದ್ಧಯಃ ॥ ೧೮೨ ॥

---

ಪಾಪಶಾಂತಿಗಾಗಿ ರುದ್ರಾಕ್ಷ, ತುಲಸೀಕಾಷ್ಠಗಳನ್ನು ಧರಿಸುವುದಿಲ್ಲವೊ ಅವರ ಪಾಪಗಳು ಧನುಷ್ಕೋಟಿ ಸ್ನಾನದಿಂದ ನಾಶವಾಗುವುವು. ಬ್ರಾಹ್ಮಮುಹೂರ್ತದಲ್ಲಿ ಎದ್ದು ಹರಿಹರರ ನಾಮಗಳನ್ನೂ, ಅವರ ಸ್ತೋತ್ರಗಳನ್ನೂ, ಮಂತ್ರಗಳನ್ನೂ, ಯಾವನು ಚಿಂತಿಸುವುದಿಲ್ಲವೊ, ಅವರೆಲ್ಲರ ಪಾಪಗಳೂ ಧನುಷ್ಕೋಟಿ ಸ್ನಾನದಿಂದ ನಾಶವಾಗುವುವು. ಬೆಳಿಗ್ಗೆ ಕೊಳದಲ್ಲಿ ಮಿಂದು, ಆಚಮನಮಾಡಿ ಶುದ್ಧನೂ, ಪ್ರಸನ್ನವಾದ ಮನಸ್ಸುಳ್ಳವನೂ ಆಗಿ ಸಂಧ್ಯಾವಂದನೆಮಾಡಿ ವೇದ ಮಾತೆಯಾದ ಗ್ಫಾಯತ್ರಿಯನ್ನು ಯಾವನು ಜಪಿಸುವುದಿಲ್ಲವೊ, ಸಾಯಂಪ್ರಾತಃಕಾಲಗಳಲ್ಲಿ ಔಪಾಸನವನ್ನೂ, ಮಾಧ್ಯಾಹ್ನಿಕ, ಬ್ರಹ್ಮಯಜ್ಞ, ವೈಶ್ವದೇವಗಳನ್ನೂ, ಮಧ್ಯಾಹ್ನಸಾಯಂಕಾಲಗಳಲ್ಲಿ ಅತಿಥಿಪೂಜೆಯನ್ನೂ ಮಾಡುವುದಿಲ್ಲವೊ, ಅವನ ಪಾಪಗಳು ಧನುಷ್ಕೋಟಿಯಲ್ಲಿ ಸ್ನಾನಮಾಡುವುದರಿಂದ ಪರಿಹಾರವಾಗುವುವು. ಯಾರು ಮಧ್ಯಾಹ್ನದಲ್ಲಿ ಯತಿಗಳಿಗೆ ಭಿಕ್ಷೆಯನ್ನು ನೀಡುವುದಿಲ್ಲವೊ, ದುರ್ಬುದ್ಧಿಯುಳ್ಳವರಾಗಿ ತಾವು ಅಧ್ಯಯನಮಾಡಿದ ವೇದಗಳನ್ನು ಮರೆಯುವರೇ, ವೇದವೇದಾಂಗಗಳನ್ನು ಅಧ್ಯಯನಮಾಡುವುದಿಲ್ಲವೊ,

ತೇಷಾಂ ಪಾಪಾನಿ ನಶ್ಯಂತಿ ಧನುಷ್ಕೋಟೌ ನಿಮಜ್ಜನಾತ್ ।
ದುರ್ವೃತ್ತೋ ವಾ ಸುವೃತ್ತೋ ವಾ ಯೋ ಧನುಷ್ಕೋಟಿಸೇವಕಃ॥೧೮೩॥
ತಸ್ಯ ಸಂಸಾರವಿಚ್ಛಿತ್ತಿಃ ಪುನರ್ಜನ್ಮ ವಿನಾ ಭವೇತ್ ।
ಸಂಸಾರಸಾಗರಂ ತರ್ತುಂ ಯ ಇಚ್ಛೇನ್ಮುನಿಪುಂಗವಾಃ ॥ ೧೮೪ ॥
ರಾಮಚಂದ್ರಧನುಷ್ಕೋಟಿಂ ಸ ಗಚ್ಛೇದವಿಲಂಬಿತಂ ।
ಸತ್ಯಂ ವಚ್ಮಿ ಹಿತಂ ವಚ್ಮಿ ಸಾರಂ ವಚ್ಮಿ ಹಿತಂ ಪುನಃ ॥ ೧೮೫ ॥
ರಾಮಚಂದ್ರಧನುಷ್ಕೋಟಿಂ ಗಚ್ಛಧ್ವಂ ಮುಕ್ತಿಸಿದ್ಧಯೇ ।
ರಾಮಚಂದ್ರಧನುಷ್ಕೋಟೌ ಕುರ್ಯಾತ್ಸ್ನಾನಂ ವಿಮುಕ್ತಯೇ ॥ ೧೮೬ ॥
ನಾಽಸ್ತ್ಯುಪಾಯಾಂತರಂ ವಿಪ್ರಾ ಭೂಯೋ ಭೂಯೋ ವದಾಮ್ಯಹಂ ।
ರಾಮಚಂದ್ರಧನುಷ್ಕೋಟೌ ಸ್ನಾನಂ ಕುರ್ವಂತಿ ಯೇ ನರಾಃ ॥ ೧೮೭ ॥
ತೇಷಾಮಯತ್ನತಃ ಸಿಧ್ಯೇತ್ಸಂಸಾರಭಯನಾಶನಂ ।
ಸತ್ಯಂ ಜ್ಞಾನಮನಂತಂ ಯತ್ಪೂರ್ಣಂ ಬ್ರಹ್ಮ ಸನಾತನಂ ।
ತತ್ಪ್ರಾಪ್ತಿಃ ಸ್ಯಾದ್ಧನುಷ್ಕೋಟೌ ಮಜ್ಜನಾನ್ನಾಽತ್ರ ಸಂಶಯಃ ॥ ೧೮೮ ॥

---

ಪ್ರತಿವರ್ಷವೂ ತಾಯಿತಂದೆಗಳ ಶ್ರಾದ್ಧವನ್ನು ಮಾಡುವುದಿಲ್ಲವೊ, ಮಹಾಲಯ ಶ್ರಾದ್ಧ, ನಿತ್ಯವಾದ ಅಷ್ಟಕಾಶ್ರಾದ್ಧ, ಇತರ ನೈಮಿತ್ತಿಕಶ್ರಾದ್ಧಗಳನ್ನು ಅತಿ ಲೋಭದಿಂದ ಮಾಡುವುದಿಲ್ಲವೊ, ಚೈತ್ರಮಾಸದ ಪೂರ್ಣಿಮಾದಿನ ಚಿತ್ರಗುಪ್ತನ ಸಂತುಷ್ಟಿಗಾಗಿ ಪಾನಕ, ಬಾಳೆಹಣ್ಣು, ಸಕ್ಕರೆಪಾಯಸ, ಬೆಲ್ಲ, ಮಾವಿನಹಣ್ಣು, ಹಲಸಿನಹಣ್ಣು, ತಾಂಬೂಲ, ಪಾದರಕ್ಷೆ, ಛತ್ರ, ವಸ್ತ್ರ, ಪುಷ್ಪ, ಗಂಧ ಇವುಗಳನ್ನು ಲೋಭದಿಂದ ಬ್ರಾಹ್ಮಣರಿಗೆ ದಾನಮಾಡುವುದಿಲ್ಲವೊ;

೧೮೩–೧೮೮. ಅವರ ಪಾಪಗಳು ಧನುಷ್ಕೋಟಿಸ್ನಾನದಿಂದ ಪರಿಹಾರ ವಾಗುವುವು. ಮಾನವನು ದುರ್ನಡತೆಯುಳ್ಳವನೇ ಆಗಲಿ, ಒಳ್ಳೆಯ ನಡತೆಯುಳ್ಳ ವನೇ ಆಗಲಿ ಧನುಷ್ಕೋಟಿಯನ್ನು ಸೇವಿಸಿದರೆ ಸಂಸಾರ ಬಂಧನವಿಲ್ಲದವನಾಗಿ ಮರಳಿ ಹುಟ್ಟುವುದಿಲ್ಲ. ಎಲೈ ಮುನಿವರ್ಯರೆ! ಸಂಸಾರಸಾಗರವನ್ನು ದಾಟ ಲಿಚ್ಛಿಸುವವರು ಶೀಘ್ರವಾಗಿ ಶ್ರೀ ರಾಮಧನುಷ್ಕೋಟಿಗೆ ತೆರಳಬೇಕು. ಸತ್ಯವೂ, ಹಿತವೂ, ಸಾರವೂ ಆದ ಮಾತನ್ನು ಮತ್ತೆ ಮತ್ತೆ ಹೇಳುವೆನು. ಮುಕ್ತಿಗಾಗಿ ರಾಮಚಂದ್ರಧನುಷ್ಕೋಟಿಗೆ ಹೋಗಿರಿ. ಧನುಷ್ಕೋಟಿಯಲ್ಲಿ ಸ್ನಾನಮಾಡುವು ದನ್ನು ಬಿಟ್ಟರೆ ಮೋಕ್ಷಕ್ಕೆ ಬೇರೆ ಉಪಾಯವಿಲ್ಲ. ಧನುಷ್ಕೋಟಿಯಲ್ಲಿ ಮಿಂದ ಮಾನವರ ಸಂಸಾರ ಭಯವು ಅನಾಯಾಸವಾಗಿ ತೊಲಗುವುದು. ಇಲ್ಲಿ ಸ್ನಾನ ಮಾಡುವುದರಿಂದ ಮಾನವನು ಸತ್ಯಸ್ವರೂಪನೂ, ಜ್ಞಾನರೂಪನೂ, ಅನಂತನೂ, ಪರಿಪೂರ್ಣನೂ, ಅನಾದಿಯೂ ಆದ ಬ್ರಹ್ಮನನ್ನು ಸೇರುವನು.

ಶ್ರೀ ಸೂತ ಉವಾಚ:—

ಏವಂ ನಃ ಕಥಿತಂ ವಿಪ್ರಾಃ ಸೇತುಮಾಹಾತ್ಮ್ಯಮುತ್ತಮಂ ॥ ೧೮೯ ॥
ಮಹಾದುಃಖಪ್ರಶಮನಂ ಮಹಾರೋಗನಿಬರ್ಹಣಂ ।
ದುಸ್ಸ್ವಪ್ನನಾಶನಂ ಪುಣ್ಯಮಪಮೃತ್ಯುನಿವಾರಣಂ ॥ ೧೯೦ ॥
ಮಹಾಶಾಂತಿಕರಂ ಪುಂಸಾಂ ಪಠತಾಂ ಶೃಣ್ವತಾಮಪಿ ।
ಸ್ವರ್ಗಾಽಪವರ್ಗದಂ ಪುಣ್ಯಂ ಸರ್ವತೀರ್ಥಫಲಪ್ರದಂ ॥ ೧೯೧ ॥
ಕೀರ್ತಯೇದ್ಯ ಇದಂ ಪುಣ್ಯಂ ಶೃಣುಯಾದ್ವಾ ಸಮಾಹಿತಃ ।
ಸೋಽಗ್ನಿಷ್ಟೋಮಾದಿ ಯಜ್ಞಾನಾಂ ಫಲಮಾಪ್ನೋತಿ ಪುಷ್ಕಲಂ ॥ ೧೯೨ ॥
ಚತುರ್ಣಾಂ ಸಾಂಗವೇದಾನಾಂ ಶತಾವೃತ್ಯಾ ತು ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಹ್ಯೇತನ್ಮಾಹಾತ್ಮ್ಯ ಕೀರ್ತನಾತ್ ॥ ೧೯೩ ॥
ಅತ್ರೈಕಾಧ್ಯಾಯಪಠನಾಚ್ಛ್ರವಣಾದ್ವಾ ಮುನೀಶ್ವರಾಃ ।
ಅಶ್ವಮೇಧಸ್ಯ ಯಜ್ಞಸ್ಯ ಪ್ರಾಪ್ನೋತ್ಯವಿಕಲಂ ಫಲಂ ॥ ೧೯೪ ॥
ಅಧ್ಯಾಯದ್ವಯಪಾಠೇನ ಶ್ರವಣೇನ ತಥೈವ ಚ ।
ಗೋಮೇಧಾಖ್ಯಸ್ಯ ಯಜ್ಞಸ್ಯ ಫಲಮಾಪ್ನೋತ್ಯನುತ್ತಮಂ ॥ ೧೯೫ ॥
ದಶಾಽಧ್ಯಾಯಾನ್ಪಠೇದ್ಯಸ್ತು ಶೃಣುಯಾದ್ವಾ ಸಭಕ್ತಿಕಂ ।
ಸ್ವರ್ಗಲೋಕಮವಾಪ್ನೋತಿ ಶಕ್ರೇಣ ಸಹ ಮೋದತೇ ॥ ೧೯೬ ॥

---

೧೮೯–೧೯೨. ಶ್ರೀಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರೆ! ಹೀಗೆ ನಿಮಗೆ ಉತ್ತಮವೂ, ಅತಿಶಯ ದುಃಖನಾಶಕವೂ, ಮಹಾರೋಗಪರಿಹಾರಕವೂ, ದುಸ್ಸ್ವಪ್ನ, ಅಪಮೃತ್ಯುಗಳನ್ನು ನಿವಾರಿಸುವುದೂ, ಪುಣ್ಯಕರವೂ, ಹೇಳುವ ಮತ್ತು ಕೇಳುವ ಮಾನವರಿಗೆ ಅತ್ಯಂತ ಶಾಂತಿಯನ್ನೀಯುವುದೂ, ಸ್ವರ್ಗಮೋಕ್ಷಗಳನ್ನೂ, ಸಕಲತೀರ್ಥಫಲಗಳನ್ನೂ ಕೊಡುವುದೂ ಆದ ಸೇತು ಮಾಹಾತ್ಮ್ಯವನ್ನು ಹೇಳಿರುವೆನು. ಈ ಮಾಹಾತ್ಮ್ಯವನ್ನು ಸಮಾಧಾನ ಮನಸ್ಸಿನಿಂದ ಹೇಳುವವನೂ, ಕೇಳುವವನೂ, ಅಗ್ನಿಷ್ಟೋಮಾದಿ ಯಜ್ಞಗಳ ಸಂಪೂರ್ಣಫಲವನ್ನು ಪಡೆಯುವನು.

೧೯೩. ಈ ಮಾಹಾತ್ಮ್ಯವನ್ನು ಹೇಳುವುದರಿಂದ ನಾಲ್ಕುವೇದಗಳನ್ನು ನೂರುಸಾರಿ ಪಾರಾಯಣಮಾಡಿದ ಫಲವು ದೊರೆಯುವುದು.

೧೯೪. ಇಲ್ಲಿರುವ ಒಂದು ಅಧ್ಯಾಯವನ್ನು ಪಠಿಸುವುದರಿಂದಲೂ ಕೇಳುವುದರಿಂದಲೂ ಅಶ್ವಮೇಧಯಾಗದ ಫಲವು ದೊರೆಯುವುದು.

೧೯೫. ಮಾನವನು ಇಲ್ಲಿರುವ ಎರಡು ಅಧ್ಯಾಯಗಳ ಪಠನೆಯಿಂದಾಗಲಿ, ಶ್ರವಣದಿಂದಾಗಲಿ ಗೋಮೇಧಯಾಗದ ಫಲವನ್ನು ಪಡೆಯುವನು.

೧೯೬. ಹತ್ತು ಅಧ್ಯಾಯಗಳನ್ನು ಭಕ್ತಿಯಿಂದ ಪಠಿಸುವುದರಿಂದಾಗಲಿ,

ವಿಂಶತ್ಯಧ್ಯಾಯಪಠನಾಚ್ಛ್ರವಣಾಚ್ಚ ಮುನೀಶ್ವರಾಃ ।
ಬ್ರಹ್ಮಲೋಕಮವಾಪ್ನೋತಿ ಬ್ರಹ್ಮಣಾ ಸಹ ಮೋದತೇ ॥ ೧೯೭ ॥
ತ್ರಿಂಶದಧ್ಯಾಯಪಠನಾಚ್ಛ್ರವಣಾಚ್ಚ ಮುನೀಶ್ವರಾಃ ।
ವಿಷ್ಣುಲೋಕಮವಾಪ್ನೋತಿ ವಿಷ್ಣುನಾ ಸಹ ಮೋದತೇ ॥ ೧೯೮ ॥
ಚತ್ವಾರಿಂಶತ್ತಮಾಽಧ್ಯಾಯಾನ್ಪಠೇದ್ವಾ ಶೃಣುಯಾದಪಿ ।
ರುದ್ರಲೋಕಮವಾಪ್ನೋತಿ ರುದ್ರೇಣ ಸಹ ಮೋದತೇ ॥ ೧೯೯ ॥
ಯಃ ಪಂಚಾಶತ್ತಮಾಽಧ್ಯಾಯಾನ್ಪಠತೇ ಶೃಣುತೇಽಪಿ ವಾ ।
ಸ ಸಾಂಬಂ ಹರಮಾಪ್ನೋತಿ ಶಿವಂ ಚಂದ್ರಾರ್ಧಶೇಖರಂ ॥ ೨೦೦ ॥
ಯಃ ಪಠೇಚ್ಛೃಣುಯಾಚ್ಚೇದಂ ಕೃತ್ಸ್ನಂ ಮಾಹಾತ್ಮ್ಯಮುತ್ತಮಂ ।
ಸ ಸಾಂಬಶಿವಸಾಲೋಕ್ಯಮಾಪ್ನೋತ್ಯೇವ ನ ಸಂಶಯಃ ॥ ೨೦೧ ॥
ಯಃ ಪಠೇಚ್ಛೃಣುಯಾಚ್ಚೇದಂ ದ್ವಿವಾರಂ ಮುನಿಸತ್ತಮಾಃ ।
ಸ ಯಾತಿ ಶಿವಸಾಮೀಪ್ಯಂ ವಿಮಾನವರಸಂಸ್ಥಿತಃ ॥ ೨೦೨ ॥
ಯಸ್ತ್ರಿವಾರಂ ಪಠೇದೇತಚ್ಛೃಣುಯಾದ್ವಾ ಸಮಾಹಿತಃ ।
ಶಿವ ಸಾರೂಪ್ಯಮಾಪ್ನೋತಿ ಶಿವಸ್ಯ ಪ್ರೀತಿಮಾವಹನ್ ॥ ೨೦೩ ॥

---

ಕೇಳುವುದರಿಂದಾಗಲಿ ದೇವಲೋಕವನ್ನು ಸೇರಿ ದೇವೇಂದ್ರನೊಡನೆ ಆನಂದ ಪಡುವನು.

೧೯೭. ಇಪ್ಪತ್ತು ಅಧ್ಯಾಯಗಳನ್ನು ಪಠಿಸುವುದರಿಂದಾಗಲಿ, ಕೇಳುವುದರಿಂದಾಗಲಿ, ಬ್ರಹ್ಮಲೋಕವನ್ನು ಹೊಂದಿ ಬ್ರಹ್ಮನೊಡನೆ ಆನಂದಪಡುವನು.

೧೯೮. ಮೂವತ್ತು ಅಧ್ಯಾಯಗಳನ್ನು ಪಠಿಸುವುದರಿಂದಲೂ ಕೇಳುವುದರಿಂದಲೂ ವಿಷ್ಣುಲೋಕವನ್ನು ಸೇರಿ ವಿಷ್ಣುವಿನೊಡನೆ ಸಂತೋಷಪಡುವನು.

೧೯೯. ನಲವತ್ತು ಅಧ್ಯಾಯಗಳನ್ನು ಪಠಿಸುವವನಾಗಲಿ, ಕೇಳುವವನಾಗಲಿ ರುದ್ರಲೋಕವನ್ನು ಹೊಂದಿ ಶಿವನೊಡನೆ ಆನಂದಪಡುವನು.

೨೦೦. ಐವತ್ತು ಅಧ್ಯಾಯಗಳನ್ನು ಪಠಿಸುವವನಾಗಲಿ, ಕೇಳುವವನಾಗಲಿ ಚಂದ್ರಮೌಳೀಶ್ವರನಾದ ಶಿವನನ್ನು ಸೇರುವನು.

೨೦೧. ಈ ಮಾಹಾತ್ಮ್ಯವನ್ನು ಸಂಪೂರ್ಣವಾಗಿ ಪಠಿಸುವವನಾಗಲಿ, ಕೇಳುವವನಾಗಲಿ ಶಿವಸಾಲೋಕ್ಯವನ್ನು ಹೊಂದುವನು.

೨೦೨. ಇದನ್ನು ಎರಡುಸಾರಿ ಹೇಳುವವನಾಗಲಿ, ಕೇಳುವವನಾಗಲಿ ಉತ್ತಮ ವಿಮಾನವನ್ನೇರಿ ಶಿವಸಾಮೀಪ್ಯವನ್ನು ಸೇರುವನು.

೨೦೩. ಮೂರು ಸಾರಿ ಇದನ್ನು ಹೇಳುವವನಾಗಲಿ, ಕೇಳುವವನಾಗಲಿ ಶಿವನ ಪ್ರೀತಿಗೆ ಪಾತ್ರನಾಗಿ ಅವನ ಸಾರೂಪ್ಯವನ್ನು ಹೊಂದುವನು.

ಚತುರ್ವಾರಂ ಪಠೇದ್ಯಸ್ತು ಶೃಣುಯಾದ್ವೇದಮುತ್ತಮಂ ।
ಸ ಸಾಯುಜ್ಯಮವಾಪ್ನೋತಿ ಶಿವಸ್ಯ ಗಿರಿಜಾಪತೇಃ ॥ ೨೦೪ ॥
ದಿನೇ ದಿನೇ ಪಠೇನ್ಮರ್ತ್ಯಃ ಶ್ಲೋಕಂ ಶ್ಲೋಕಾರ್ಧಮೇವ ವಾ ।
ಪಾದಂ ವಾ ಪಾದಮಾತ್ರಂ ವಾ ಅಕ್ಷರಂ ವರ್ಣಮೇವ ವಾ ॥ ೨೦೫ ॥
ತತ್ತದ್ದಿನಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ।
ಕೃತ್ಸ್ನೇಽಸ್ಮಿನ್ಸೇತುಮಾಹಾತ್ಮ್ಯೇ ಪಠಿತೇಽಪಿ ಶ್ರುತೇಽಪಿ ವಾ ॥ ೨೦೬ ॥
ಶ್ಲೋಕೇಷ್ವತ್ರೈವ ವರ್ತಂತೇ ವರ್ಣಾ ಯಾವಂತ ಏವ ಹಿ ।
ತಾವತ್ಯೋ ಬ್ರಹ್ಮಹತ್ಯಾಶ್ಚ ತಾವನ್ಮದ್ಯನಿಷೇವಣಂ ॥ ೨೦೭ ॥
ತಾವತ್ಸುವರ್ಣಸ್ತೇಯಂ ಚ ತಾವಾನ್ಗುರ್ವಂಗನಾಗಮಃ ।
ತಾವತ್ಸಂಸರ್ಗದೋಷಾಶ್ಚ ನಶ್ಯಂತ್ಯೇವ ಹಿ ತತ್ಕ್ಷಣಾತ್ ॥ ೨೦೮ ॥
ಯಾವತೋಽಸ್ಮಿನ್ಮಹಾಪುಣ್ಯೇ ವರ್ತಂತೇ ವರ್ಣರಾಶಯಃ ।
ತಾವತ್ಕೃತ್ವಶ್ಚತುರ್ವಿಂಶತ್ತೀರ್ಥೇಷು ಸ್ನಾನಜಂ ಫಲಂ ॥ ೨೦೯ ॥
ತಥಾಽನ್ಯೇಷ್ವಪಿ ತೀರ್ಥೇಷು ಸೇತುಮಧ್ಯಗತೇಷು ವೈ ।
ತತ್ಫಲಂ ಸಮವಾಪ್ನೋತಿ ಪಾಠೇನ ಶ್ರವಣೇನ ವಾ ॥ ೨೧೦ ॥
ಯೇನೇದಂ ಲಿಖಿತಂ ಭಕ್ತ್ಯಾ ಸೇತುಮಾಹಾತ್ಮ್ಯಮುತ್ತಮಂ ।
ವಿನಷ್ಟಾಽಜ್ಞಾನ ಸಂತಾನಃ ಶಿವಸಾಯುಜ್ಯಮಾಪ್ನುಯಾತ್ ॥ ೨೧೧ ॥

---

೨೦೪. ನಾಲ್ಕುಸಾರಿ ಉತ್ತಮವಾದ ಈ ಸೇತುಮಾಹಾತ್ಮ್ಯವನ್ನು ಹೇಳುವವನಾಗಲಿ, ಕೇಳುವವನಾಗಲಿ ಶಿವನ ಸಾಯುಜ್ಯವನ್ನು ಪಡೆಯುವನು.

೨೦೫–೨೦೮. ಮಾನವನು ಪ್ರತಿದಿನವೂ ಒಂದು ಶ್ಲೋಕವನ್ನಾಗಲಿ, ಅರ್ಧಶ್ಲೋಕವನ್ನಾಗಲಿ, ಒಂದು ಪಾದವನ್ನಾಗಲಿ, ಪದಮಾತ್ರವನ್ನಾಗಲಿ ಅಕ್ಷರವನ್ನಾಗಲಿ, ವರ್ಣವನ್ನಾಗಲಿ ಪಠಿಸಿದರೆ ಅವನು ಆ ದಿನ ಮಾಡಿದ ಪಾಪವು ನೀಗುವುದು. ಸಂಪೂರ್ಣ ಸೇತುಮಾಹಾತ್ಮ್ಯವನ್ನು ಓದಿದರೆ ಅಥವಾ ಕೇಳಿದರೆ ಅದರಲ್ಲಿರುವ ಶ್ಲೋಕಗಳ ವರ್ಣಗಳಷ್ಟು ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪಗಮನ, ಸಂಪರ್ಕದೋಷ ಇವುಗಳು ಕೂಡಲೆ ನಾಶವಾಗುವುವು.

೨೦೯–೨೧೦. ಈ ಸೇತುಮಾಹಾತ್ಮ್ಯವನ್ನು ಪಠಿಸುವುದರಿಂದ ಅಥವಾ ಕೇಳುವುದರಿಂದ ಇದರಲ್ಲಿರುವ ವರ್ಣಗಳ ಸಂಖ್ಯೆಯಷ್ಟುಸಾರಿ ಸೇತುಮಧ್ಯದಲ್ಲಿರುವ ಇಪ್ಪತ್ತನಾಲ್ಕು ತೀರ್ಥಗಳಲ್ಲಿಯೂ ಇತರ ತೀರ್ಥಗಳಲ್ಲಿಯೂ ಮಿಂದ ಫಲವು ಲಭಿಸುವುದು.

೨೧೧–೨೧೨. ಯಾವನ ಮನೆಯಲ್ಲಿ ಈ ಶುಭಮಾಹಾತ್ಮ್ಯವು ಬರೆಯ

ಯಸ್ಯೇದಂ ವರ್ತತೇ ಗೇಹೇ ಮಾಹಾತ್ಮ್ಯಂ ಲಿಖಿತಂ ಶುಭಂ ।
ಭೂತವೇತಾಲಕಾದಿಭ್ಯೋ ಭೀತಿಸ್ತತ್ರ ನ ವಿದ್ಯತೇ ॥ ೨೧೨ ॥
ವ್ಯಾಧಿಪೀಡಾ ನ ತತ್ರಾಽಸ್ತಿ ನಾಽಸ್ತಿ ಚೋರಭಯಂ ತಥಾ ।
ಶನ್ಯಂಗಾರಕಮುಖ್ಯಾನಾಂ ಗ್ರಹಾಣಾಂ ನಾಽಸ್ತಿ ಪೀಡನಂ ॥ ೨೧೩ ॥
ಯದ್ಗೃಹೇ ವರ್ತತೇ ಪುಣ್ಯಮಿದಂ ಮಾಹಾತ್ಮ್ಯಮುತ್ತಮಂ ।
ರಾಮಸೇತುಂ ವಿಜಾನೀತ ತದ್ಗೃಹಂ ಮುನಿಪುಂಗವಾಃ ॥ ೨೧೪ ॥
ಚತುರ್ವಿಂಶತಿ ತೀರ್ಥಾನಿ ತತ್ರೈವ ನಿವಸಂತಿ ಹಿ ।
ತತ್ರೈವ ವರ್ತತೇ ಪುಣ್ಯೋ ಗಂಧಮಾದನ ಪರ್ವತಃ ॥ ೨೧೫ ॥
ಬ್ರಹ್ಮವಿಷ್ಣುಮಹೇಶಾಶ್ಚ ವರ್ತಂತೇ ತತ್ರ ಸಾದರಂ ।
ಲಿಖಿತ್ವಾ ಸೇತುಮಾಹಾತ್ಮ್ಯಂ ಬ್ರಾಹ್ಮಣಾಯ ನಿವೇದಯೇತ್ ।
ಚತುಃಸಾಗರಪರ್ಯಂತಾ ತೇನ ದತ್ತಾ ವಸುಂಧರಾ ॥ ೨೧೬ ॥

॥ ಸೇತುಮಾಹಾತ್ಮ್ಯದಾನಮಂತ್ರಃ ॥

ಸೇತುಮಾಹಾತ್ಮ್ಯದಾನಸ್ಯ ಕಲಾಂ ನಾಽರ್ಹಂತಿ ಷೋಡಶೀಂ ।
ದಾನಾನ್ಯನ್ಯಾನಿ ಸರ್ವಾಣಿ ಹ್ಯತಃ ಶಾಂತಿಂ ಪ್ರಯಚ್ಛ ಮೇ ।
ಕಿಂ ಪುನರ್ಬಹುನೋಕ್ತೇನ ವಸತ್ಯತ್ರ ಜಗತ್ರಯಂ ॥ ೨೧೭ ॥

---

ಲ್ಪಟ್ಟದೆಯೋ; ಆ ಮನೆಯಲ್ಲಿ ಭೂತವೇತಾಳಾದಿಗಳ ಭಯವಿರುವುದಿಲ್ಲ. ಈ ಸೇತುಮಾಹಾತ್ಮ್ಯವನ್ನು ಭಕ್ತಿಯಿಂದ ಬರೆದವನು ಅಜ್ಞಾನರಹಿತನಾಗಿ ಶಿವಸಾಯುಜ್ಯವನ್ನು ಹೊಂದುವನು.

೨೧೩. ಆ ಮನೆಯಲ್ಲಿ ರೋಗಬಾಧೆಯೂ, ಕಳ್ಳರ ಭಯವೂ, ಶನ್ಯಂಗಾರಕ ಮೊದಲಾದ ಗ್ರಹಗಳ ಪೀಡೆಯೂ ಇರುವುದಿಲ್ಲ.

೨೧೪. ಮುನಿವರ್ಯರೆ! ಪುಣ್ಯಕರವಾದ ಈ ಸೇತುಮಾಹಾತ್ಮ್ಯವಿರುವ ಮನೆಯನ್ನು ರಾಮಸೇತುವೆಯನ್ನಾಗಿ ತಿಳಿಯಿರಿ.

೨೧೫. ಅಲ್ಲಿಯೇ ಇಪ್ಪತ್ತನಾಲ್ಕು ತೀರ್ಥಗಳೂ, ಗಂಧಮಾದನಪರ್ವತವೂ ಇರುವುದು.

೨೧೬. ಬ್ರಹ್ಮವಿಷ್ಣುಮಹೇಶ್ವರರೂ ಅಲ್ಲಿ ನೆಲೆಸಿರುವರು. ಸೇತುಮಾಹಾತ್ಮ್ಯಯನ್ನು ಬರೆದು ಬ್ರಾಹ್ಮಣರಿಗೆ ದಾನಮಾಡಿದರೆ ನಾಲ್ಕು ಸಮುದ್ರಗಳೊಳಗಿರುವ ಭೂಮಿಯನ್ನು ದಾನಮಾಡಿದಂತಾಗುವುದು.

೨೧೭. ಸೇತುಮಾಹಾತ್ಮ್ಯದಾನಮಂತ್ರ:—"ಇತರ ಎಲ್ಲದಾನಗಳೂ ಸೇತು ಮಾಹಾತ್ಮ್ಯದಾನದ ಹದಿನಾರನೆಯ ಒಂದು ಕಲೆಗೂ ಸಾಟಿಯಲ್ಲ. ಆದುದರಿಂದ ನನಗೆ ಶಾಂತಿಯನ್ನು ಕೊಡು." ಹೆಚ್ಚು ಹೇಳಿ ಏನು ಪ್ರಯೋಜನ? ಈ ಮಾಹಾತ್ಮ್ಯದಲ್ಲಿ ಮೂರುಲೋಕಗಳೂ ನೆಲೆಸಿರುವುವು.

ಶ್ರಾವಯೇಚ್ಛ್ರಾದ್ಧಕಾಲೇ ಯೋ ಹ್ಯೇಕಮಧ್ಯಾಯಮತ್ರ ವೈ ।
ನಶ್ಯೇಚ್ಛ್ರಾದ್ಧಸ್ಯ ವೈಕಲ್ಯಂ ಪಿತರೋಽಸ್ಯತಿಹರ್ಷಿತಾಃ ॥ ೨೧೮ ॥
ಯಃ ಪರ್ವಕಾಲೇ ಸಂಪ್ರಾಪ್ತೇ ಬ್ರಾಹ್ಮಣಾಂಛ್ರಾವಯೇದಿದಂ ।
ಅಧ್ಯಾಯಮೇಕಂ ಶ್ಲೋಕಂ ವಾ ಗಾವೋಽಸ್ಯ ನಿರುಪದ್ರವಾಃ ।
ಬಹುಕ್ಷೀರಾಃ ಸವತ್ಸಾಶ್ಚ ಮಹಿಷ್ಯೋಽಸ್ಯ ಭವಂತಿ ಹಿ ॥ ೨೧೯ ॥
ಪಠನೀಯಮಿದಂ ಪುಣ್ಯಂ ಮಠೇ ದೇವಾಲಯೇಽಪಿ ವಾ ।
ನದೀತಟಾಕತೀರೇಷು ಪುಣ್ಯೇ ವಾಽರಣ್ಯಭೂತಲೇ ।
ಶ್ರೋತ್ರಿಯಾಣಾಂ ಗೃಹೇ ವಾಽಪಿ ನೈವಾಽನ್ಯತ್ರತು ಕರ್ಹಿಚಿತ್ ॥ ೨೨೦ ॥
ವಿಷುವಾಯನಕಾಲೇಷು ಪುಣ್ಯೇ ಚ ಹರಿವಾಸರೇ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ಪಠನೀಯಂ ವಿಶೇಷತಃ ॥ ೨೨೧ ॥
ಇದಂ ಹಿ ಪಾಠ್ಯಂ ಶ್ರಾವಣ್ಯಾಂ ಮಾಸಿ ಭಾದ್ರಪದೇ ತಥಾ ।
ಧನುರ್ಮಾಸೇ ಚ ಪಾಠ್ಯಂ ಸ್ಯಾತ್ಪಾಠ್ಯಂ ಚೈವೋತ್ತರಾಯಣೇ ॥ ೨೨೨ ॥
ನಿಯಮೇನೈವ ಮಾಹಾತ್ಮ್ಯಂ ಪಠನೀಯಮಿದಂ ದ್ವಿಜಾಃ ।
ಶ್ರೋತಾರೋ ನಿಯಮೈರ್ಯುಕ್ತಾಃ ಶ್ರಣುಯುಶ್ಚೇದಮುತ್ತಮಂ ॥

---

೨೧೮. ಶ್ರಾದ್ಧಸಮಯದಲ್ಲಿ ಇದರಲ್ಲಿರುವ ಒಂದು ಅಧ್ಯಾಯವನ್ನು ಪಾರಾಯಣಮಾಡಿದರೂ ಶ್ರಾದ್ಧದ ನ್ಯೂನತೆಯು ಪರಿಹಾರವಾಗಿ ಪಿತೃಗಳು ಸಂತೋಷಗೊಳ್ಳುವರು.

೨೧೯. ಮಾನವನು ಪರ್ವಕಾಲದಲ್ಲಿ ಈ ಮಾಹಾತ್ಮ್ಯದ ಒಂದು ಅಧ್ಯಾಯವನ್ನೊ ಅಥವಾ ಒಂದು ಶ್ಲೋಕವನ್ನೊ ಬ್ರಾಹ್ಮಣರ ಮುಖದಿಂದ ಕೇಳಿದರೆ ಅವನ ಗೋವುಗಳೂ ಎಮ್ಮೆಗಳೂ ಯಾವತೊಂದರೆಯಿಲ್ಲದುವೂ, ಬಹಳ ಹಾಲನ್ನು ಕೊಡುವುವೂ, ಕರುಗಳಿಂದ ಸಹಿತವಾದುವೂ ಆಗುವುವು.

೨೨೦. ಈ ಸೇತುಮಾಹಾತ್ಮ್ಯೆಯನ್ನು ಮಠ, ದೇವಾಲಯ, ನದಿ ಕೆರೆಗಳ ದಡ, ಪುಣ್ಯಕರವಾದ ಅರಣ್ಯಪ್ರದೇಶಗಳಲ್ಲಿ ಅಥವಾ ಶೋತ್ರಿಯರ ಮನೆಯಲ್ಲಿ ಪಠಿಸಬೇಕು. ಬೇರೆ ಎಲ್ಲಿಯೂ ಪಠಿಸಬಾರದು.

೨೨೧. ವಿಶೇಷವಾಗಿ ಇದನ್ನು ಮೇಷ, ಕರ್ಕಾಟಕ, ಮಕರಸಂಕ್ರಾಂತಿಗಳಲ್ಲಿಯೂ, ಪುಣ್ಯಕರವಾದ ಹರಿವಾಸರದಲ್ಲಿಯೂ, ಅಷ್ಟಮಿ, ಚತುರ್ದಶೀ ತಿಥಿಗಳಲ್ಲಿಯೂ ಪಠನಮಾಡಬೇಕು.

೨೨೨. ಶ್ರಾವಣ, ಭಾದ್ರಪದ, ಧನುರ್ಮಾಸಗಳಲ್ಲಿಯೂ ಉತ್ತರಾಯಣದಲ್ಲಿಯೂ ಇದನ್ನು ಪಾರಾಯಣಮಾಡಬೇಕು (ಹೇಳಬೇಕು).

೨೨೩. ಎಲೈ ಬ್ರಾಹ್ಮಣರೆ! ಇದನ್ನು ನಿಯಮದಿಂದ ಹೇಳಬೇಕು ಮತ್ತು ನಿಯಮದಿಂದ ಕೇಳಬೇಕು.

ಕೀರ್ತ್ಯಂತೇ ಪುಣ್ಯತೀರ್ಥಾನಿ ಮಾಹಾತ್ಮ್ಯೇಽಸ್ಮಿನ್ಬಹೂನಿ ವೈ ।
ಕೀರ್ತ್ಯಂತೇ ಪುಣ್ಯಶೀಲಾಶ್ಚ ತಥಾ ರಾಜರ್ಷಿಸತ್ತಮಾಃ ॥ ೨೨೪ ॥
ಋಷಯಶ್ಚ ಮಹಾಭಾಗಾಃ ಕೀರ್ತ್ಯಂತೇಽಸ್ಮಿನ್ನನುತ್ತಮೇ ।
ಧರ್ಮಾಽಧರ್ಮೌ ಚ ಕೀರ್ತ್ಯೇತೇ ಪುಣ್ಯೇಽಸ್ಮಿನ್ದ್ವಿಜಪುಂಗವಾಃ ॥ ೨೨೫ ॥
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಕೀರ್ತ್ಯಂತೇಽತ್ರ ತ್ರಿಮೂರ್ತಯಃ ।
ಇದಂ ಪವಿತ್ರಂ ಪಾಪಘ್ನಂ ಶ್ರುತ್ಯರ್ಥೈರುಪಬೃಂಹಿತಂ ॥ ೨೨೬ ॥
ಸಂಮತಂ ಸ್ಮೃತಿಕರ್ತೄಣಾಂ ದ್ವೈಪಾಯನಮುನಿಪ್ರಿಯಂ ।
ಶ್ರೋತವ್ಯಂ ಪಠಿತವ್ಯಂ ಚ ಆತ್ಮನಃ ಶ್ರೇಯ ಇಚ್ಛತಾ ॥ ೨೨೭ ॥
ಶ್ರಾವಕಾಯ ಚ ದಾತವ್ಯಂ ಯತ್ಕಿಂಚಿತ್ಕಾಂಚನಾದಿಕಂ ।
ಸ್ವಸ್ವ ಶಕ್ತ್ಯನುರೋಧೇನ ವಿತ್ತಶಾಠ್ಯಂ ನ ಕಾರಯೇತ್ ॥ ೨೨೮ ॥
ವಸ್ತ್ರಂ ಹಿರಣ್ಯಂ ಧಾನ್ಯಂ ವಾ ಭೂಮಿಂ ಗಾಂಚ ಯಥಾಬಲಂ ।
ದತ್ವಾ ಸಂಭಾವನೀಯೋಽಯಂ ಶ್ರಾವಕಃ ಶ್ರೋತೃಭಿರ್ಜನೈಃ ॥ ೨೨೯ ॥
ಪೂಜಿತೇ ಶ್ರಾವಕೇ ತಸ್ಮಿನ್ಪೂಜಿತಾಃ ಸ್ಯುಸ್ತ್ರಿಮೂರ್ತಯಃ ।
ಜಗತ್ರಯಂ ಪೂಜಿತಂ ಸ್ಯಾತ್ಪೂಜಿತಾಸು ತ್ರಿಮೂರ್ತಿಷು ॥ ೨೩೦ ॥
ಅವತೀರ್ಣೋಮಹೀಂ ಸಾಕ್ಷಾದ್ರಾಮೋ ದಾಶರಥಿರ್ಹರಿಃ ।
ಸಸೀತಾಲಕ್ಷ್ಮಣೋ ನಿತ್ಯಂ ಶ್ರೋತೃಭ್ಯಃ ಶ್ರಾವಕಾಯ ಚ ॥ ೨೩೧ ॥

---

೨೨೪–೨೨೭. ಈ ಮಾಹಾತ್ಮ್ಯದಲ್ಲಿ ಅನೇಕ ಪುಣ್ಯತೀರ್ಥಗಳೂ, ಪುಣ್ಯವಂತರಾದ ರಾಜರ್ಷಿಗಳೂ, ಮಹಾಭಾಗ್ಯವಂತರಾದ ಋಷಿಗಳೂ, ಧರ್ಮಾಧರ್ಮಗಳೂ, ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳೂ ಹೇಳಲ್ಪಟ್ಟದ್ದಾರೆ. ಪವಿತ್ರವೂ, ಪಾಪನಾಶಕವೂ, ವೇದಾರ್ಥಪ್ರತಿಪಾದಕವೂ, ಸ್ಮೃತಿಕಾರರಿಗೆ ಅಭಿಮತವೂ, ವ್ಯಾಸರಿಗೆ ಪ್ರಿಯವೂ ಆದ ಈ ಮಾಹಾತ್ಮ್ಯವನ್ನು ತನಗೆ ಶ್ರೇಯಸ್ಸನ್ನು ಬಯಸುವ ನರನು ಕೇಳಲೇಬೇಕು. ಮತ್ತು ಹೇಳಲೇಬೇಕು.

೨೨೮. ಇದನ್ನು ಹೇಳುವವನಿಗೆ ತನ್ನ ಶಕ್ತ್ಯನುಸಾರ ದ್ರವ್ಯಲೋಭವಿಲ್ಲದೆ ಸುವರ್ಣ ಮೊದಲಾದುವನ್ನು ದಾನಮಾಡಬೇಕು.

೨೨೯. ಕೇಳುವವರು ಇದನ್ನು ಹೇಳುವವನಿಗೆ ವಸ್ತ್ರ, ಸುವರ್ಣ, ಧಾನ್ಯ, ಭೂಮಿ, ಗೋವುಗಳನ್ನಿತ್ತು ಸನ್ಮಾನಿಸಬೇಕು.

೨೩೦. ಹೇಳುವವನನ್ನು ಪೂಜಿಸಿದರೆ ತ್ರಿಮೂರ್ತಿಗಳನ್ನು ಪೂಜಿಸಿದಂತಾಗುವುದು. ತ್ರಿಮೂರ್ತಿಗಳನ್ನು ಪೂಜಿಸಿದರೆ ಮೂರು ಲೋಕಗಳನ್ನೂ ಪೂಜಿಸಿದಂತಾಗುವುದು.

೨೩೧–೨೩೪. ಭೂಮಿಯಲ್ಲಿ ವಿಷ್ಣುವು ದಶರಥನ ಮಗನಾದ ರಾಮನಾಗಿ ಅವತರಿಸಿ ಸೀತಾಲಕ್ಷ್ಮಣರಿಂದ ಕೂಡಿ ಕೇಳುವವರಿಗೂ ಹೇಳುವವರಿಗೂ

ದತ್ವೇಹ ಲೋಕೇ ಭೋಗಾಂಶ್ಚ ಮುಕ್ತಿಂ ಚಾಂತೇ ಪ್ರಯಚ್ಛತಿ ।
ದ್ವೈಪಾಯನಮುಖಾಂಭೋಜಾನ್ನಿಃಸೃತಂ ಶುಭದಂ ಪರಂ ॥ ೨೩೨ ॥
ಇದಂ ವೈ ಸೇತುಮಾಹಾತ್ಮ್ಯಂ ಧರ್ಮರಾಜೋ ಯುಧಿಷ್ಠಿರಃ ।
ಭೀಮಸೇನಾದಿಭಿಃ ಸರ್ವೈರನುಜೈರಪಿ ಸಂವೃತಃ ॥ ೨೩೩ ॥
ನಿಯಮಾಚಾರಸಂಯುಕ್ತಃ ಸಸೈನ್ಯಶ್ಚ ದಿನೇ ದಿನೇ ।
ಶೃಣೋತಿ ಪಠತೋ ಧೌಮ್ಯಮಹರ್ಷೇಃ ಸ್ವಪುರೋಧಸಃ ॥ ೨೩೪ ॥

ಶ್ರೀ ಸೂತ ಉವಾಚ :—

ಭೋಭೋಸ್ತಪೋಧನಾಃ ಸರ್ವೇ ನೈಮಿಷಾರಣ್ಯವಾಸಿನಃ ।
ಮತ್ಸಕಾಶಾದಿದಂ ಗುಹ್ಯಂ ಮಹಾತ್ಮ್ಯಂ ಶ್ರುತಿಸಮ್ಮತಂ ॥ ೨೩೫ ॥
ಶ್ರುತಂ ಭವದ್ಭಿರ್ನಿಯತೈರ್ನಿತ್ಯಂ ಪಠತ ಸಾದರಂ ।
ಪಾಠಯಧ್ವಂ ಸ್ವಶಿಷ್ಯೇಭ್ಯೋ ನಿಯತೇಭ್ಯೋ ನಿರಂತರಂ ॥ ೨೩೬ ॥
ಇತ್ಯುಕ್ತ್ವಾ ತಾನ್ಮುನೀನ್ಸೂತೋ ರೋಮಾಂಚಿತಕಲೇವರಃ ।
ಗುರುಂ ಹೃದಾ ಸ್ಮರನ್ವ್ಯಾಸಂ ನನರ್ತಾಶ್ರೂಣಿ ವರ್ತಯನ್ ॥ ೨೩೭ ॥
ಅತ್ರಾಂತರೇ ಮಹಾವಿದ್ವಾನ್ಪರಾಶರ್ಯೋ ಮಹಾಮುನಿಃ ।
ಆಶು ಪ್ರಾದುರಭೂತ್ತತ್ರ ಶಿಷ್ಯಾನುಗ್ರಹಕಾಂಕ್ಷಯಾ ॥ ೨೩೮ ॥
ತಮಾಗತಂ ವಿಲೋಕ್ಯಾಥ ಮುನಿಂ ಸತ್ಯವತೀಸುತಂ ।
ಸೂತಃ ಸರ್ವೈಶ್ಚ ಸಹಿತೋ ನೈಮಿಷಾರಣ್ಯವಾಸಿಭಿಃ ॥ ೨೩೯ ॥

---

ಈ ಲೋಕದಲ್ಲಿ ಸುಖಭೋಗಗಳನ್ನು ಕೊಟ್ಟು ಪರಲೋಕದಲ್ಲಿ ಮೋಕ್ಷವನ್ನೀಯುವನು. ವೇದವ್ಯಾಸನ ಮುಖಕಮಲದಿಂದ ಹೊರಟ ಶುಭವನ್ನೀಯುವ ಈ ಸೇತುಮಾಹಾತ್ಮ್ಯವನ್ನು ಯುಧಿಷ್ಠಿರನು ಭೀಮನೇ ಮೊದಲಾದ ತಮ್ಮಂದಿರೊಡನೆ ನಿಯಮಾಚಾರಗಳುಳ್ಳವನಾಗಿ ಸೈನ್ಯದೊಡನೆ ಪ್ರತಿದಿನವೂ ಪುರೋಹಿತರಾದ ಧೌಮ್ಯಮಹರ್ಷಿಗಳಿಂದ ಕೇಳಿರುತ್ತಾನೆ.

೨೩೫—೨೩೬. ಶ್ರೀ ಸೂತನು ಹೇಳುತ್ತಾನೆ:— "ನೈಮಿಷಾರಣ್ಯವಾಸಿಗಳಾದ ಎಲ್ಲೈ ಮುನಿಗಳೆ! ನನ್ನಿಂದ ಕೇಳಿದ ರಹಸ್ಯವೂ, ವೇದಕ್ಕೆ ಸಮಾನವೂ ಆದ ಈ ಮಾಹಾತ್ಮ್ಯವನ್ನು ನಿತ್ಯವೂ ಆದರದಿಂದ ಪಠಿಸಿರಿ. ಜಿತೇಂದ್ರಿಯರಾದ ನಿಮ್ಮ ಶಿಷ್ಯರಿಗೆ ಹೇಳಿರಿ."

೨೩೭—೨೩೮. ಸೂತನು ಹೀಗೆಂದು ಹೇಳಿ ರೋಮಾಂಚಗೊಂಡ ಶರೀರವುಳ್ಳವನಾಗಿ ಗುರುಗಳಾದ ವ್ಯಾಸರನ್ನು ಮನಸ್ಸಿನಿಂದ ಸ್ಮರಿಸುತ್ತ ಕಣ್ಣೀರನ್ನು ಸುರಿಸುತ್ತ ಕುಣಿದನು. ಈ ಮಧ್ಯದಲ್ಲಿ ಜ್ಞಾನಿಗಳಾದ ವ್ಯಾಸಮಹರ್ಷಿಗಳು ಕೂಡಲೆ ಶಿಷ್ಯನಿಗೆ ಅನುಗ್ರಹಮಾಡಲಿಚ್ಛೆಯಿಂದ ಆಗಮಿಸಿದರು.

೨೩೯—೨೪೦. ಸೂತನು ಬಂದಿರುವ ಸತ್ಯವತೀತನಯನಾದ ವ್ಯಾಸಮುನಿ

ವ್ಯಾಸಸ್ಯ ಚರಣಾಂಭೋಜೇ ದಂಡವತ್ಪ್ರಣಿಪತ್ಯ ತು ।
ಜಲಮಾನಂದಜಂ ತತ್ರ ನೇತ್ರಾಭ್ಯಾಂ ಪರ್ಯವರ್ತಯತ್ ॥ ೨೪೦ ॥
ಪ್ರಣತಂ ಪ್ರಿಯಶಿಷ್ಯಂ ತಂ ದೋರ್ಭ್ಯಾಮುತ್ಥಾಪ್ಯ ವೈ ಮುನಿಃ ।
ಆಶೀರ್ಭಿರಭಿನಂದ್ಯೈನಮಾಲಿಂಗ್ಯ ಚ ಮುಹುರ್ಮುಹುಃ ॥ ೨೪೧ ॥
ನೈಮಿಷಾರಣ್ಯಮುನಿಭಿರಾನೀತೇ ಪರಮಾಸನೇ ।
ದ್ವೈಪಾಯನೋ ಮಹಾತೇಜಾ ನಿಷಸಾದ ತಪೋಧನಃ ॥ ೨೪೨ ॥
ಮುನಿಷ್ವಪ್ಯುಪವಿಷ್ಟೇಷು ಸೂತೇಽಪಿ ಚ ನಿಜಾಜ್ಞಯಾ ।
ಶೌನಕಾದೀನ್ಮುನೀನ್ಸರ್ವಾನ್ಸಕ್ತೇಃ ಪೌತ್ರೋಽಭ್ಯಭಾಷತ ॥ ೨೪೩ ॥
ಮಯಾಜ್ಞಾತಮಿದಂ ಸರ್ವಂ ನೈಮಿಷಾರಣ್ಯವಾಸಿನಃ ।
ಮಮ ಶಿಷ್ಯೇಣ ಸೂತೇನ ಸೇತುಮಾಹಾತ್ಮ್ಯಮುತ್ತಮಂ ।
ಕಥಿತಂ ಭವತಾಮದ್ಯ ಮಹಾಪಾತಕನಾಶನಂ ॥ ೨೪೪ ॥
ಶ್ರುತೀನಾಂ ಚ ಸ್ಮೃತೀನಾಂ ಚ ಪುರಾಣಾನಾಂ ತಥೈವ ಚ ।
ಶಾಸ್ತ್ರಾಣಾಂ ಚೇತಿಹಾಸಾನಾಮನ್ಯೇಷಾಮಪಿ ಕೃತ್ಸ್ನಶಃ ॥ ೨೪೫ ॥
ಏಷಪರ್ಯವಸನ್ನೋಽರ್ಥೋ ಮಾಹಾತ್ಮ್ಯಂ ಯತ್ತ್ವಿದಂ ಮಹತ್ ।
ಸರ್ವೇಷ್ವಪಿ ಪುರಾಣೇಷು ಇದಂ ಬಹುಮತಂ ಮಮ ॥ ೨೪೬ ॥

---

ಯನ್ನು ಕಂಡು ನೈಮಿಷಾರಣ್ಯವಾಸಿಗಳಾದ ಸಕಲಮುನಿಗಳೊಡನೆ ವ್ಯಾಸನ ಚರಣಕಮಲದಲ್ಲಿ ಸಾಷ್ಟಾಂಗಪ್ರಣಾಮಮಾಡಿ ಕಣ್ಣುಗಳಿಂದ ಆನಂದಬಾಷ್ಪವನ್ನು ಸುರಿಸಿದನು.

೨೪೧–೨೪೨. ವ್ಯಾಸನು ನಮಸ್ಕಾರಮಾಡಿದ ಆ ಪ್ರಿಯಶಿಷ್ಯನನ್ನು ತೋಳುಗಳಿಂದ ಮೇಲಕ್ಕೆಬ್ಬಿಸಿ ಆಶೀರ್ವದಿಸಿ ಬಾರಿಬಾರಿಗೂ ಆಲಿಂಗಿಸಿ ನೈಮಿಷಾರಣ್ಯವಾಸಿಗಳಾದ ಮುನಿಗಳು ತಂದ ಉತ್ತಮಾಸನದಲ್ಲಿ ಕುಳಿತುಕೊಂಡನು.

೨೪೩. ಶಕ್ತಿಯ ಮೊಮ್ಮಗನಾದ ವೇದವ್ಯಾಸನು ತನ್ನ ಅಪ್ಪಣೆಯಂತೆ ಮುನಿಗಳೂ, ಸೂತನೂ ಕುಳಿತುಕೊಳ್ಳಲು ಶೌನಕಾದಿಮುನಿಗಳನ್ನು ಕುರಿತು ಇಂತೆಂದನು.

೨೪೪. "ಎಲೈ ನೈಮಿಷಾರಣ್ಯವಾಸಿಗಳಾದ ಮುನಿಗಳೇ! ನನ್ನ ಶಿಷ್ಯನಾದ ಸೂತನು ನಿಮಗೆ ಮಹಾಪಾತಕವನ್ನು ಪರಿಹರಿಸುವ ಸೇತುಮಾಹಾತ್ಮ್ಯವನ್ನು ಹೇಳಿರುವುದನ್ನು ನಾನು ತಿಳಿದುಕೊಂಡಿರುವೆನು.

೨೪೫–೨೪೬. ಈ ಮಾಹಾತ್ಮ್ಯವು ಶ್ರುತಿ, ಸ್ಮೃತಿ, ಪುರಾಣ, ಶಾಸ್ತ್ರ, ಇತಿಹಾಸಗಳ ಪರಿನಿಷ್ಠಿತವಾದ ಅರ್ಥವಾಗಿರುವುದು. ಸಕಲಪುರಾಣಗಳಲ್ಲಿ ಇದು ನನಗೆ ಗೌರವಾಸ್ಪದವಾದುದು.

ಶೃಣೋತಿ ಧರ್ಮಜೋ ಧೌಮ್ಯಾದಿದಂ ನಿತ್ಯಂ ಮಮಾಜ್ಞಯಾ ।
ಅತೋ ಭವಂತೋಽಪಿ ಸದಾ ಸೇತುಮಾಹಾತ್ಮ್ಯಮುತ್ತಮಂ ॥ ೨೪೭ ॥
ಪಠನ್ತು ಶೃಣ್ವಂತು ತಥಾ ಶಿಷ್ಯಾಣಾಂ ಪಾಠಯಂತು ಚ ।
ತಚ್ಛ್ರುತ್ವಾ ವಚನಂ ತಸ್ಯ ತೇ ಪ್ರಾಹುರ್ಬಾಢಮಿತ್ಯಪಿ ॥ ೨೪೮ ॥
ತತೋ ವ್ಯಾಸೋಽಪಿ ಸೂತೇನ ಶಿಷ್ಯೇಣ ಚ ಸಮನ್ವಿತಃ ।
ಅನುಜ್ಞಾಪ್ಯ ಮುನೀನ್ಸರ್ವಾನ್ಕೈಲಾಸಂ ಪರ್ವತಂ ಯಯೌ ॥ ೨೪೯ ॥
ಋಷಯೋ ನೈಮಿಷಾರಣ್ಯನಿಲಯಾಸ್ತುಷ್ಟಿಮಾಗತಾಃ ।
ಪ್ರತ್ಯಹಂ ಸೇತುಮಾಹಾತ್ಮ್ಯಂ ಶೃಣ್ವಂತಿ ಚ ಪಠಂತಿ ಚ ॥ ೨೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಶ್ರೀ ಸೇತುಮಾಹಾತ್ಮ್ಯ
ಪಠನಶ್ರವಣಫಲವರ್ಣನಂ" ನಾಮ ದ್ವಿಪಂಚಾಶತ್ತಮೋಽಧ್ಯಾಯಃ

ಸೇತುಮಾಹಾತ್ಮ್ಯೇ ಉತ್ತರಾರ್ಧಃ ಸಮಾಪ್ತಃ

---

೨೪೭–೨೪೮. ಧರ್ಮರಾಜನು ನನ್ನ ಅಣತಿಯಿಂದಲೇ ಈ ಮಾಹಾತ್ಮ್ಯವನ್ನು ಧೌಮ್ಯರಿಂದ ಕೇಳಿರುತ್ತಾನೆ. ಆದುದರಿಂದ ನೀವೂ ಯಾವಾಗಲೂ ಈ ಉತ್ತಮ ಸೇತುಮಾಹಾತ್ಮ್ಯವನ್ನು ಪಠಿಸಿರಿ, ಕೇಳಿರಿ, ಹಾಗೆಯೇ ಶಿಷ್ಯರಿಗೆ ಹೇಳಿರಿ" ಎಂದು ವ್ಯಾಸನು ಹೇಳಲು ಆ ಮುನಿಗಳು ಹಾಗೆಯೇ ಆಗಲೆಂದು ಹೇಳಿದರು.

೨೪೯. ಬಳಿಕ ವ್ಯಾಸನು ಶಿಷ್ಯನಾದ ಸೂತನೊಡನೆ ಆ ಮುನಿಗಳೆಲ್ಲರ ಅನುಮತಿಯನ್ನು ಪಡೆದು ಕೈಲಾಸಪರ್ವತಕ್ಕೆ ತೆರಳಿದನು.

೨೫೦. ನೈಮಿಷಾರಣ್ಯವಾಸಿಗಳಾದ ಆ ಮುನಿಗಳೂ ಸಹ ಸಂತುಷ್ಟರಾಗಿ ಪ್ರತಿದಿನವೂ ಸೇತುಮಾಹಾತ್ಮ್ಯವನ್ನು ಕೇಳುತ್ತಾರೆ ಮತ್ತು ಪಠಿಸುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ
"ಸೇತುಮಾಹಾತ್ಮ್ಯ ಪಠನಶ್ರವಣಫಲವರ್ಣನ" ವೆಂಬ
ಐವತ್ತೆರಡನೆಯ ಅಧ್ಯಾಯವು ಮುಗಿದುದು

ಸೇತುಮಾಹಾತ್ಮ್ಯದಲ್ಲಿ ಉತ್ತರಾರ್ಧವು ಮುಗಿದುದು



---

269—47 [illegible] ಕೆಂಟರಾದ